# ವಿಜಯನಗರೋತ್ತರ ಕಾಲದ ಆರ್ಥಿಕತೆ ಮತ್ತು ವಾಣಿಜ್ಯ : ಚಾರಿತ್ರಿಕ ಅಧ್ಯಯನ
## (ಕ್ರಿ.ಶ. 1565-1800)

(ಕನ್ನಡ ವಿಶ್ವವಿದ್ಯಾಲಯ, ಹಂಪಿ ಚರಿತ್ರೆ ವಿಭಾಗಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)

ಸಂಶೋಧಕರು

ನಿರ್ಮಲ ಎಂ.

ಮಾರ್ಗದರ್ಶಕರು

ಡಾ. ವಿರೂಪಾಕ್ಷಿ ಪೂಜಾರಹಳ್ಳಿ

ಪ್ರಾಧ್ಯಾಪಕರು



ಚರಿತ್ರೆ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೨೦

# ವಿಜಯನಗರೋತ್ತರ ಕಾಲದ ಆರ್ಥಿಕತೆ ಮತ್ತು ವಾಣಿಜ್ಯ : ಚಾರಿತ್ರಿಕ ಅಧ್ಯಯನ
## (ಕ್ರಿ.ಶ. ೧೫೬೫-೧೮೦೦)

(ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)


ಸಂಶೋಧಕರು
ನಿರ್ಮಲ ಎಂ.

ಮಾರ್ಗದರ್ಶಕರು
ಡಾ. ವಿರೂಪಾಕ್ಷಿ ಪೂಜಾರಹಳ್ಳಿ
ಪ್ರಾಧ್ಯಾಪಕರು





ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩೨೭೬
೨೦೨೦

# ಮಾರ್ಗದರ್ಶಕರ ದೃಢೀಕರಣ ಪತ್ರ

ನಿರ್ಮಲ ಎಂ., ಇವರು ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **ವಿಜಯನಗರೋತ್ತರ ಕಾಲದ ಆರ್ಥಿಕತೆ ಮತ್ತು ವಾಣಿಜ್ಯ : ಚಾರಿತ್ರಿಕ ಅಧ್ಯಯನ (ಕ್ರಿ.ಶ.೧೫೬೫-೧೮೦೦)** ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ **ಚರಿತ್ರೆ ವಿಭಾಗಕ್ಕೆ** ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

ಡಾ. ವಿರೂಪಾಕ್ಷಿ ಪೂಜಾರಹಳ್ಳಿ
ಪ್ರಾಧ್ಯಾಪಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

ಡಾ.ವಿರೂಪಾಕ್ಷಿ ಪೂಜಾರಹಳ್ಳಿ
ಪ್ರಾಧ್ಯಾಪಕರು, ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – 583 276
ಹೊಸಪೇಟೆ ತಾ. ಬಳ್ಳಾರಿ ಜಿಲ್ಲೆ

ದಿನಾಂಕ: 13/3/2010
ಸ್ಥಳ : ವಿದ್ಯಾರಣ್ಯ

# ಸಂಶೋಧಕರ ಘೋಷಣಾ ಪತ್ರ

**ವಿಜಯನಗರೋತ್ತರ ಕಾಲದ ಆರ್ಥಿಕತೆ ಮತ್ತು ವಾಣಿಜ್ಯ : ಚಾರಿತ್ರಿಕ ಅಧ್ಯಯನ** (ಕ್ರಿ.ಶ.೧೫೬೫–೧೮೦೦) ಎಂಬ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗದ ಪ್ರಾಧ್ಯಾಪಕರಾದ **ಡಾ. ವಿರೂಪಾಕ್ಷಿ ಪೂಜಾರಹಳ್ಳಿ** ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿಯ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ಸಂಶೋಧಕರು
Nirmala
ನಿರ್ಮಲ ಎಂ.
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

ದಿನಾಂಕ: 13.03.2020
ಸ್ಥಳ : ವಿದ್ಯಾರಣ್ಯ

# ವಿಜಯನಗರೋತ್ತರ ಕಾಲದ ಆರ್ಥಿಕತೆ ಮತ್ತು ವಾಣಿಜ್ಯ : ಚಾರಿತ್ರಿಕ ಅಧ್ಯಯನ

(ಕ್ರಿ.ಶ. ೧೫೬೫-೧೮೦೦)

## ಪರಿವಿಡಿ

ಅಧ್ಯಾಯ - ಒಂದು

# ಪ್ರಸ್ತಾವನೆ

೧.೧ ಅಧ್ಯಯನದ ಉದ್ದೇಶ
೧.೨. ಅಧ್ಯಯನದ ವಿಧಾನ
೧.೩. ಅಧ್ಯಯನದ ವ್ಯಾಪ್ತಿ
೧.೪. ಅಧ್ಯಯನದ ಸಮೀಕ್ಷೆ
೧.೫ ಅಧ್ಯಯನದ ಸ್ವರೂಪ

## ಅಧ್ಯಾಯ – ಒಂದು

# ಪ್ರಸ್ತಾವನೆ

ಕರ್ನಾಟಕದ ಆರ್ಥಿಕತೆಯ ಸ್ವರೂಪವು ತನ್ನದೇ ಆದ ಮಹತ್ವವನ್ನು ಹೊಂದಿದೆ. ಕೃಷಿ ಪ್ರಧಾನವಾಗಿ ಗುರುತಿಸಿಕೊಂಡ ಪ್ರಾಚೀನ ಕಾಲದ ಸಮಾಜವು ವಿಜಯನಗರೋತ್ತರ ಕಾಲದಲ್ಲಿ ವಾಣಿಜ್ಯೋದ್ಯಮದ ಮೂಲಕ ಗುರುತಿಸಿಕೊಳ್ಳಲಾರಂಭಿಸಿತು. ಕೃಷಿ ಪ್ರಧಾನವಾದ ಭಾರತವನ್ನು ನಿರಂತರ ಕೃಷಿಯ ಮೂಲಕವೇ ಗುರುತಿಸುವ ಪರಿಕಲ್ಪನೆಯನ್ನು ಹುಟ್ಟು ಹಾಕಿದವರೆ ಯುರೋಪಿಯನ್ನರು. ಯುರೋಪಿಯನ್ನರ ಆಗಮನವು ವಿಜಯನಗರೋತ್ತರ ಕಾಲದ ಸಮಾಜ, ಸಂಸ್ಕೃತಿ, ವರ್ಗ ಮೊದಲಾದವುಗಳ ಮೇಲೆ ಸ್ಥಿತ್ಯಂತರವನ್ನು ಉಂಟು ಮಾಡಿದ ಹಂತವಾಗಿದೆ. ವ್ಯಾಪಾರ–ವಾಣಿಜ್ಯ, ಆರ್ಥಿಕತೆ ಎನ್ನುವುದು ನಿರಂತರ ಬದಲಾವಣೆಯ ಸ್ವರೂಪವನ್ನು ಒಳಗೊಂಡಿರುತ್ತದೆ. ದಕ್ಷಿಣ ಭಾರತದ ವಿಜಯನಗರ ಸಾಮ್ರಾಜ್ಯವು ಕೇಂದ್ರೀಕೃತ ಅರ್ಥವ್ಯವಸ್ಥೆಯಿಂದ ವಿಕೇಂದ್ರೀಕೃತ ಅರ್ಥವ್ಯವಸ್ಥೆಯನ್ನು ರೂಪಿಸಿತ್ತು. ವಿಜಯನಗರದ ಅಧೀನ ಸಂಸ್ಥಾನಗಳನ್ನು ಬೆಳೆಸುವ ಮೂಲಕ ಆನಂತರ ಪ್ರಭುತ್ವದ ಸ್ಥಾಪನೆಗೆ ಮೂಲ ಕಾರಣವಾಯಿತು. ವಿಜಯನಗರ ಕಾಲದ ಆರ್ಥಿಕತೆ ಮತ್ತು ವಿದೇಶಿ ವ್ಯಾಪಾರದ ಸ್ವರೂಪದ ಸಂಬಂಧವನ್ನು ಪೋರ್ಚುಗೀಸರ ಮೂಲ ದಾಖಲೆಗಳಿಂದ ಖಚಿತಪಡಿಸಬಹುದಾಗಿದೆ. ಒಂದು ದೇಶ ಅಥವಾ ರಾಷ್ಟ್ರ ಇನ್ನೊಂದು ದೇಶದೊಂದಿಗೆ ಹೊಂದಿರುವ ಸಂಬಂಧವನ್ನು ಅಳೆಯುವಲ್ಲಿ ಆರ್ಥಿಕತೆಯ ಅಂಶಗಳು ಸಹ ಮಾನದಂಡಗಳಾಗಿರುತ್ತವೆ. ಒಂದು ದೇಶ ಅಥವಾ ರಾಷ್ಟ್ರ ಪ್ರಬಲವಾಗಿದೆಯೋ ಅಥವಾ ದುರ್ಬಲವಾಗಿದೇಯೋ ಎಂದು ಗುರುತಿಸುವುದು ಸಹ ಅಲ್ಲಿನ ಆರ್ಥಿಕ ಅಂಶಗಳಿಂದ. ಆರಂಭದಿಂದಲೂ ಪ್ರಭುತ್ವಗಳು ತಮ್ಮ ಅಸ್ತಿತ್ವಕ್ಕಾಗಿ ಆರ್ಥಿಕ ಅಂಶಗಳಿಗೆ ಬೆಂಬಲವನ್ನು ನೀಡುತ್ತಾ ಬಂದಿರುವುದು ಗಮನಾರ್ಹ ಸಂಗತಿ.

ಆರ್ಥಿಕತೆ ಎನ್ನುವ ಪರಿಕಲ್ಪನೆಯು ಉತ್ಪಾದನೆ, ವಿತರಣೆ ಮತ್ತು ವ್ಯಾಪಾರ ಹಾಗೂ ಬಳಕೆ ಮೂಲಕ ತನ್ನ ಸ್ಥಾನವನ್ನು ಗುರುತಿಸಿಕೊಳ್ಳುತ್ತದೆ. ಪ್ರಸ್ತುತ ಅಧ್ಯಯನದಲ್ಲಿ ಈ ಮೇಲಿನ ಅರ್ಥವನ್ನು ಧ್ವನಿಸುವಂತೆ ಶೀರ್ಷಿಕೆಯನ್ನು ಇಟ್ಟುಕೊಳ್ಳಲಾಗಿದೆ.ಆರ್ಥಿಕ ಸ್ವರೂಪಗಳು ಅಲ್ಲಿನ

ಭೌಗೋಳಿಕತೆ ಮೇಲೆ ಪ್ರಭಾವ ಬೀರುತ್ತವೆ. ವಿಫಲವಾದ ನೈಸರ್ಗಿಕ ಸಂಪನ್ಮೂಲಗಳ ಪ್ರಭಾವ ಕಂಡುಬರುತ್ತದೆ. ಇಲ್ಲಿನ ವೈವಿಧ್ಯಮಯವಾದ ಪರಿಸರದಿಂದ ರಾಜ್ಯದ ಆರ್ಥಿಕತೆಯು ಬೆಳವಣಿಗೆಯನ್ನು ಕಂಡಿದೆ. ಹೊಸದೊಂದು ಅರ್ಥವ್ಯವಸ್ಥೆ ರೂಪಗೊಳ್ಳುತ್ತದೆ. ಆದರೆ ಯಾವುದೇ ಪ್ರದೇಶದ ಆರ್ಥಿಕ ಚರಿತ್ರೆಯಲ್ಲಿ ಅಲ್ಲಿನ ಭೌಗೋಳಿಕಾಂಶಗಳ ಪಾತ್ರವನ್ನು ಕಡೆಗಣಿಸುವಂತಿಲ್ಲ. ವಸಾಹತು ಪೂರ್ವ ಕರ್ನಾಟಕದ ಮಲೆನಾಡು, ಬಯಲುಸೀಮೆ, ಅರೆಮಲೆನಾಡು ಹೀಗೆ ಪ್ರಾಕೃತಿಕ ವೈವಿಧ್ಯತೆಯಿಂದ ಆರ್ಥಿಕತೆ ಮತ್ತು ವಾಣಿಜ್ಯ ಚರಿತ್ರೆಯ ಸ್ವರೂಪಗಳು ಬದಲಾಗುತ್ತವೆ.

ವಿಜಯನಗರೋತ್ತರ ಕಾಲಘಟ್ಟದ ವ್ಯಾಪಾರದ ಸ್ವರೂಪ ವಾಣಿಜ್ಯೋದ್ಯಮದತ್ತ ವರ್ಗಾಯಿಸಲ್ಪಟ್ಟ ಕಾಲವಾಗಿತ್ತು. ಯುರೋಪಿಯನ್ನರು ಭಾರತದ ವಾಣಿಜ್ಯೋದ್ಯಮದತ್ತ ಗಮನನಹರಿಸಿ ಭಾರತದ ಕರಾವಳಿಯನ್ನು ತಮ್ಮ ವಸಾಹತು ಕೇಂದ್ರವನ್ನಾಗಿಸುವ ಪ್ರಕ್ರಿಯೆ ನಿರಂತರವಾಗಿ ನಡೆದು ಭಾರತವು ಸಾಮ್ರಾಜ್ಯಶಾಹಿ ಧೋರಣೆಗೆ ಒಳಪಟ್ಟ ಕಾಲ. ಭಾರತಕ್ಕೆ ಬಂದ ಯುರೋಪಿಯನ್ನರಲ್ಲಿ ಪೋರ್ಚುಗೀಸರು ಮೊದಲಿಗರಾಗಿದ್ದು, ಇವರು ಭಾರತದಲ್ಲಿ ಉತ್ಪನ್ನವಾಗುವ ಸಂಬಾರ ಪದಾರ್ಥಗಳಿಗಾಗಿ ಬಂದರು. ಕೇರಳದ ಕಲ್ಲಿಕೋಟೆಯ ಜಾಮೋರಿನ್‌ನೊಂದಿಗೆ ವ್ಯಾಪಾರ ಸಂಬಂಧ ಬೆಳೆಸಿ ಗೋವಾದ ಮೂಲಕ ಕರ್ನಾಟಕದ ಕರಾವಳಿಯಲ್ಲಿ ತಮ್ಮ ವ್ಯಾಪಾರವನ್ನು ಆರಂಭಿಸಿದರು. ಈ ಮೂಲಕ ನೆಲೆ ಕಂಡುಕೊಂಡ ಪೋರ್ಚುಗೀಸರು ತಮ್ಮ ವಸಾಹತು ಸ್ಥಾಪನೆಯ ಕಡೆ ಹೆಚ್ಚು ಗಮನಹರಿಸುತ್ತಾ ಮುಂದುವರಿದರು. ಇವರ ಆಗಮನದ ಕಾಲದಲ್ಲಿ ಕರ್ನಾಟಕದ ಕರಾವಳಿಯು ಆರ್ಥಿಕ ಸ್ಥಿತ್ಯಂತರಕ್ಕೆ ಒಳಪಟ್ಟಿತ್ತು. ಪೋರ್ಚುಗೀಸರು ಪರಿಚಯಿಸಿದ ವಾಣಿಜ್ಯ ಬೆಳೆಗಳು ಭಾರತವನ್ನು ಕೃಷಿಕ್ಷೇತ್ರದಲ್ಲಿ ಅಭಿವೃದ್ಧಿ ಹೊಂದಮಾಡಿದವು. ಪೋರ್ಚುಗೀಸರು ಕರಿಮೆಣಸು ಮತ್ತು ಅಕ್ಕಿಯ ವ್ಯಾಪಾರದಲ್ಲಿ ಹೆಚ್ಚು ಆಸಕ್ತಿಯನ್ನು ಹೊಂದಿದ್ದ ಕರ್ನಾಟಕದ ಕರಾವಳಿಯ ಸಾಮಂತ ಮನೆತನಗಳಾದ ಕೆಳದಿ, ಗೇರುಸೊಪ್ಪ, ಸಾದ್ವಿ ಮನೆತನಗಳ ಜೊತೆ ಸಂಬಂಧಗಳನ್ನು ಬೆಳೆಸಿದರು ಆ ಮೂಲಕ ತಮ್ಮ ಆರ್ಥಿಕ ಸ್ಥಾನವನ್ನು ಭದ್ರಗೊಳಿಸಿಕೊಂಡರು. ಇದುವರೆಗೂ ವ್ಯಾಪಾರ ವಾಣಿಜ್ಯದಲ್ಲಿ ಗುರುತಿಸಿಕೊಂಡ ಮುಸ್ಲಿಂ ವ್ಯಾಪಾರಿಗಳನ್ನು ಕರಾವಳಿ ಭಾಗದಲ್ಲಿ ಸ್ಥಿತ್ಯಂತರಕ್ಕೆ ಒಳಪಡಿಸಿ ವಾಣಿಜ್ಯೋದ್ಯಮ ಮತ್ತು ಸಂಘರ್ಷವನ್ನು ಉಂಟುಮಾಡಿದರು. ಗೋವಾವನ್ನು ಕೇಂದ್ರಸ್ಥಾನವಾಗಿ ಮಾಡಿಕೊಂಡು ವ್ಯಾಪಾರ ಆರಂಭಿಸಿದ್ದರಿಂದ ವಿಶ್ವದಲ್ಲಿ ಅದೊಂದು ಅಂತರಾಷ್ಟ್ರೀಯ ಪೋರ್ಚುಗೀಸ್ ಮಾರುಕಟ್ಟೆಯ ಕೇಂದ್ರವಾಗಿ ಗುರುತಿಸಿಕೊಂಡಿತ್ತು. ಇದರಿಂದ ಕರಾವಳಿ ಭಾಗವು ನಗರ ಕೇಂದ್ರಿತ ಅರ್ಥವ್ಯವಸ್ಥೆಯಾಗಿ ಅತಿವೇಗದಲ್ಲಿ ಬೆಳವಣಿಗೆಯಾಯಿತು. ಪೋರ್ಚುಗೀಸರು ಗೋವಾದ ಮೂಲಕ ಕರ್ನಾಟಕದ ಕರಾವಳಿಯ ಭಟ್ಕಳ, ಹೊನ್ನಾವರ, ಮಂಗಳೂರು ಮತ್ತು ಬಸ್ರೂರುಗಳಲ್ಲಿ ತಮ್ಮ ವ್ಯಾಪಾರಿ ಚಟುವಟಿಕೆಯನ್ನು ವಿಸ್ತರಿಸಿದರು. ಈ ಬಗೆಯ ಸ್ಥಿತ್ಯಂತರಕ್ಕೆ ಕರಾವಳಿ ಭಾಗವು ಒಳಪಡುವ ಸಮಯದಲ್ಲಿ ಕರ್ನಾಟಕದ ಒಳನಾಡಿನ ವ್ಯಾಪಾರದ ಸ್ವರೂಪವು ಇನ್ನೊಂದು ಬಗೆಯಲ್ಲಿ ಬೆಳೆಯಲಾರಂಭಿಸಿತ್ತು. ಮೈಸೂರು ಒಡೆಯರು ಮತ್ತು ಯಲಹಂಕ ನಾಡಪ್ರಭುಗಳ ನೇತೃತ್ವದಲ್ಲಿ ಮಾರುಕಟ್ಟೆ ಕೇಂದ್ರಿತ ಹೊಸ ಅರ್ಥವ್ಯವಸ್ಥೆಯು ಮರುರೂಪ ಪಡೆಯಿತು. ವಿಜಯನಗರ ಸಾಮ್ರಾಜ್ಯದ ಅವನತಿಯ ನಂತರ ಮಾರುಕಟ್ಟೆ ಕೇಂದ್ರಿತ ವ್ಯಾಪಾರವು ಕ್ಷೀಣಿಸಿದ್ದರಿಂದ ಅದನ್ನು

ಪುನಶ್ಚೇತನಗೊಳಿಸಿದ ಕೀರ್ತಿ ಮೈಸೂರಿನ ಚಿಕ್ಕದೇವರಾಜ ಒಡೆಯರಿಗೆ ಸಲ್ಲುತ್ತದೆ. ಈ ವೇಳೆಗೆ ಪ್ರಾಚೀನ ಕಾಲದಿಂದಲೂ ಗುರುತಿಸಿಕೊಂಡ ವರ್ತಕ ಸಮುದಾಯಗಳು ಸಮಾಜದ ಪ್ರಬಲ ವ್ಯಾಪಾರಿ ಸಂಘಟನೆಗಳಾಗಿ ಗುರುತಿಸಿಕೊಂಡವು. ಹಾಗೂ ಆರ್ಥಿಕವಾಗಿ ಬಲಿಷ್ಠವಾಗಿದ್ದರಿಂದ ಅವರ ಮೂಲಕ ಮಾರುಕಟ್ಟೆ ಕೇಂದ್ರಿತ ಹೊಸ ಅರ್ಥವ್ಯವಸ್ಥೆಯ ರೂಪಪಡೆಯಲು ವರ್ತಕರನ್ನು ಅಧಿಕಾರಿಗಳನ್ನಾಗಿ ನೇಮಿಸಿದರು ಇದರಿಂದ ಆ ಕಾಲಘಟ್ಟದಲ್ಲಿ ಬೆಂಗಳೂರು, ಶ್ರೀರಂಗಪಟ್ಟಣ, ಬಳ್ಳಾರಿ, ಬಿಜಾಪುರ, ಬೀದರ್, ರಾಯಚೂರು, ಹುಬ್ಬಳ್ಳಿ ಮೊದಲಾದ ನಗರಗಳು ಪ್ರಮುಖ ಮಾರುಕಟ್ಟೆಯ ಕೇಂದ್ರಗಳಾಗಿ ಗುರುತಿಸಿಕೊಂಡವು. ವಸಾಹತು ಕಾಲಘಟ್ಟದಲ್ಲಿ ಇವೆಲ್ಲ ನಗರಗಳು ನಂತರ ಬ್ರಿಟಿಶ್ ಆಡಳಿತ ಕೇಂದ್ರಗಳಾಗಿ ನಗರೀಕರಣ ಪ್ರಕ್ರಿಯೆಗೆ ಒಳಪಡುತ್ತವೆ.

ಹೀಗೆ ಕರ್ನಾಟಕದ ಸ್ಥಳೀಯ ಮಾರುಕಟ್ಟೆ ಕೇಂದ್ರಿತ ವ್ಯಾಪಾರವು ಆರಂಭವಾಗಿದ್ದರಿಂದ ಹಲವಾರು ವರ್ತಕ ಸಮುದಾಯಗಳು ಇಲ್ಲಿ ತಮ್ಮ ನೆಲೆ ಕಂಡುಕೊಂಡು ವಸಾಹತು ಮತ್ತು ಇಂದಿಗೂ ಪ್ರಮುಖ ವ್ಯಾಪಾರಿ ಸಮುದಾಯಗಳಾಗಿ ಗುರುತಿಸಿಕೊಂಡಿವೆ. ಸ್ಥಳೀಯ ವ್ಯಾಪಾರವು ಅದು ಪ್ರಭುತ್ವ ಕೇಂದ್ರಿತ ನೆಲೆಯಲ್ಲಿತ್ತು. ವರ್ತಕ ಸಮುದಾಯಗಳ ಮೂಲಕ ಗುರುತಿಸಿಕೊಳ್ಳಲಾರಂಭಿಸಿತು.

ಭಾರತದ ವ್ಯಾಪಾರದಲ್ಲಿ ಪೋರ್ಚುಗೀಸರು ಬಂಡವಾಳ ಕೇಂದ್ರಿತ ಸ್ವರೂಪವನ್ನು ಹುಟ್ಟು ಹಾಕಿದರು. ಅದನ್ನೇ ನಂತರ ಬಂದ ಬ್ರಿಟಿಶರು ಬಂಡವಾಳ ಕೇಂದ್ರಿತ ಬೆಳವಣಿಗೆಯೊಂದಿಗೆ ಸಾಮ್ರಾಜ್ಯಶಾಹಿ ರೂಪದ ಕಡೆ ತಮ್ಮ ವ್ಯಾಪಾರವನ್ನು ಪರಿವರ್ತಿಸತೊಡಗಿದರು. ಈ ಬಂಡವಾಳಶಾಹಿಯ ರೂಪವನ್ನು ಬಳಸಿಕೊಂಡ ಟಿಪ್ಪು ಸುಲ್ತಾನನು ಇಂಗ್ಲಿಶರ, ಫ್ರೆಂಚರ ಮೂಲಕ ವ್ಯಾಪಾರದ ನೀತಿಯನ್ನು ನಿಯಂತ್ರಿಸಲು ಬಂಡವಾಳಶಾಹಿ ಬೆಳೆಸಿ ಬೃಹತ್ ಬಂಡವಾಳ ಕೇಂದ್ರಿತ ಕೈಗಾರಿಕೆಗಳನ್ನು ಸ್ಥಾಪಿಸಿದನು. ಮೈಸೂರು ಪ್ರದೇಶದ ವ್ಯಾಪ್ತಿಯಲ್ಲಿ ವ್ಯಾಪಾರ–ವಾಣಿಜ್ಯದ ಸ್ವರೂಪವನ್ನು ಬದಲಿಸಿದನು. ಕೃಷಿ ಕಾನೂನುಗಳನ್ನು ರೂಪಿಸುವ ಮೂಲಕ ರೈತರು ಸಂಸ್ಥಾನದೊಂದಿಗೆ ಉತ್ತಮ ಸಂಬಂಧವನ್ನು ಹೊಂದುವಂತೆ ಮಾಡಿ ಮಧ್ಯವರ್ತಿ, ಭೂಮಾಲೀಕ ವರ್ಗವನ್ನು ನಿರ್ಮೂಲನೆಗೊಳಿಸಿದನು. ಇದರಿಂದ ಸರ್ಕಾರದ ಜೊತೆ ರೈತ ನೇರ ಸಂಬಂಧವನ್ನು ಹೊಂದುವುದಕ್ಕೆ ಸಹಾಯಕವಾಯಿತು. ಆರಂಭದಿಂದಲೂ ಉತ್ತರ ಕರ್ನಾಟಕ ಭಾಗದಲ್ಲಿರುವ ದೇಸಾಯಿ ಮತ್ತು ದೇಸಗತ್ತಿಗಳ ಅಧಿಕಾರ ಕಿತ್ತೊಗೆದು ಆ ಭೂಮಿ ರೈತರಿಗೆ ದೊರಕುವಂತೆ ಮಾಡಿದನು. ಈ ನಿರಂತರ ಬದಲಾವಣೆಯ ಪ್ರಕ್ರಿಯೆಗಳು ವಿಜಯನಗರೋತ್ತರ ಕಾಲದಲ್ಲಿ ಪ್ರತಿಫಲಿಸಿದವು.

ವಿಜಯನಗರೋತ್ತರ ಕಾಲವು ಅನೇಕ ಪಾಳೆಯಪಟ್ಟುಗಳ ಮೂಲಕ ಅಸ್ತಿತ್ವಕ್ಕೆ ಬಂದ ಕಾಲಘಟ್ಟವಾಗಿದೆ. ಈ ಪಾಳೆಯಪಟ್ಟುಗಳು ವಿಜಯನಗರದ ಆರ್ಥಿಕತೆಯನ್ನು ಮುಂದುವರೆಸುತ್ತ, ಸಂಸ್ಥಾನದ ಸುಭದ್ರತೆಗೆ ಹೊಸ ಆರ್ಥಿಕತೆಯನ್ನು ರೂಪಿಸುತ್ತ, ಕೋಟೆಗಳನ್ನು ಕಟ್ಟಿಕೊಳ್ಳುತ್ತ ಸಂಸ್ಥಾನಗಳ ಕೃಷಿಗೆ ಒಳಪಡದ ಭೂಮಿಯನ್ನು ಕೃಷಿಯೋಗ್ಯ ಭೂಮಿಯನ್ನಾಗಿಸುವ ಮೂಲಕ ಹೆಚ್ಚು ಪ್ರದೇಶ ವಿಸ್ತರಣೆಗೆ ಒಳಪಡುವಂತೆ ಮಾಡಿದರು. ಹಾಗೂ ಅಂದು ಅಸ್ತಿತ್ವದಲ್ಲಿದ್ದ ವಾಣಿಜ್ಯ ಬೆಳೆಗೆ ಪ್ರೋತ್ಸಾಹವನ್ನು ನೀಡಿದರು.

ವಾಣಿಜ್ಯ ಬೆಳೆಗಳಾದ ಹತ್ತಿ ಮತ್ತು ನೀಲಿಯನ್ನು ಪರಿಚಯಿಸುವ ಮೂಲಕ ಬ್ರಿಟಿಶರು ಭಾರತವನ್ನು ವಸಾಹತುವನ್ನಾಗಿ ಮಾಡಿಕೊಂಡು ಕಚ್ಚಾ ವಸ್ತುಗಳನ್ನು ಇಂಗ್ಲೆಂಡಿಗೆ ರಫ್ತು ಮಾಡುತ್ತಾ ಭಾರತವನ್ನು ಒಂದು ಯುರೋಪಿಯನ್ ಮಾರುಕಟ್ಟೆಯನ್ನಾಗಿಸುವ ಪ್ರಕ್ರಿಯೆಗಳು ನಿರಂತರವಾಗಿ ನಡೆದವು. ಭಾರತದಲ್ಲಿ ತೆಂಗಿನ ಬೆಳೆಯು ಒಂದು ವಾಣಿಜ್ಯ ಬೆಳೆಯ ಸ್ವರೂಪವನ್ನು ಪಡೆಯುವ ಘಟ್ಟವಾಗಿದೆ. ಕರ್ನಾಟಕದ ಕೆಳದಿ ನಾಯಕರು ಮತ್ತು ಮೈಸೂರಿನ ಚಿಕ್ಕದೇವರಾಜ ಒಡೆಯರು ಈ ಬೆಳೆಗೆ ವಿಶೇಷ ಪ್ರಾಮುಖ್ಯತೆಯನ್ನು ನೀಡಿರುವುದು ಕಂಡುಬರುತ್ತದೆ. ಅಂದರೆ ಪ್ರಭುತ್ವಗಳು ಸಂಸ್ಥಾನದ ಆದಾಯ ಹೆಚ್ಚಿಸಿಕೊಳ್ಳುವುದಕ್ಕೆ ಅಂದು ಬೇಡಿಕೆಯಲ್ಲಿರುವ ಬೆಳೆಗೆ ಬೆಂಬಲ ಕೊಟ್ಟಿರುವುದು ಕಂಡುಬರುತ್ತದೆ. ಈ ಮೂಲಕ ವಿಜಯನಗರೋತ್ತರ ಕಾಲದ ಆರ್ಥಿಕತೆಯ ವಿವಿಧ ಆಯಾಮಗಳನ್ನು ಗುರುತಿಸಬಹುದು.

ಆರ್ಥಿಕತೆ ಎಂದರೆ ಒಂದು ರಾಷ್ಟ್ರ ಹೊಂದಿರುವ ಭೂಮಿ, ಖನಿಜ ಸಂಪನ್ಮೂಲಗಳು, ಉತ್ಪಾದನೆ, ವಿನಿಮಯ, ವಿತರಣೆ ಹಾಗೂ ಆ ಪ್ರದೇಶದಲ್ಲಿನ ಸರಕುಗಳು ಹಾಗೂ ಅವುಗಳ ಬಳಕೆ ಇವೆಲ್ಲವುಗಳನ್ನೊಳಗೊಂಡ ಒಟ್ಟಾರೆ ವಿನಿಮಯವನ್ನು ಆರ್ಥಿಕತೆ ಎಂದು ಕರೆಯುತ್ತೇವೆ. ಆರ್ಥಿಕ ಚರಿತ್ರೆಯಲ್ಲಿ ಭೂಮಿ, ಶ್ರಮ, ಬಂಡವಾಳ ಮತ್ತು ನಿರ್ವಹಣೆ ಈ ನಾಲ್ಕು ಉತ್ಪಾದನಾ ಮಾಧ್ಯಮಗಳು ಮುಖ್ಯವಾಗಿರುತ್ತವೆ. ವ್ಯಾಪಾರ ಮತ್ತು ವಾಣಿಜ್ಯ ಪರಿಕಲ್ಪನೆಗಳು ಆರ್ಥಿಕ ಚರಿತ್ರೆಯ ಪ್ರಮುಖ ಅಂಗಗಳಾಗಿದ್ದು ವ್ಯಾಪಾರ ಎಂದರೆ ವಿತರಣೆಗೆ ಸಂಬಂಧಿಸಿದ ಆರ್ಥಿಕ ಚಟುವಟಿಕೆಯಾಗಿದೆ. ಬೇಡಿಕೆ ಮತ್ತು ಪೂರೈಕೆಗಳ ನಡುವಣ ಸಂಬಂಧದೊಂದಿಗೆ ಒಂದು ಗೊತ್ತಾದ ಪ್ರದೇಶದಲ್ಲಿ ನಡೆಯುವುದೇ ವ್ಯಾಪಾರವಾಗಿದೆ. ವ್ಯಾಪಾರದ ವಿನಿಮಯ ಕೇಂದ್ರಗಳು ಅವುಗಳ ಸ್ವರೂಪದಲ್ಲಿ ಭಿನ್ನತೆಯನ್ನು ಹೊಂದಿರುತ್ತವೆ. ಸಂತೆ, ಪೇಟೆ ಪಟ್ಟಣ, ಜಾತ್ರೆಗಳು ಮಾರುಕಟ್ಟೆಗಳ ಮೂಲಕ ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಅಂದಿನ ನಗರಕೇಂದ್ರಗಳು ಗುರುತಿಸಿಕೊಳ್ಳುತ್ತವೆ.

ವ್ಯಾಪಾರ ಎಂದರೆ ಸಾಮ್ರಾಜ್ಯದ ಜನರಿಗೆ ಸೇವೆಯನ್ನು ಒದಗಿಸುವ ಒಂದು ಸಂಘವೆಂದು ಕರೆಯಲಾಗಿದೆ. ಇದು ವಿಸ್ತೃತ ಅರ್ಥದಲ್ಲಿ ವಾಣಿಜ್ಯ ಎಂಬ ರೂಪವನ್ನು ಪಡೆದಿದೆ. ಸರಕು ಸೇವೆಗಳನ್ನು ದೊಡ್ಡ ಪ್ರಮಾಣದಲ್ಲಿ ಗುರುತಿಸುವ ಮತ್ತು ಅಂತರಾಷ್ಟ್ರೀಯ ವ್ಯಾಪಾರವನ್ನು ನಾವು ವಾಣಿಜ್ಯವೆಂದು ಪರಿಗಣಿಸಬಹುದಾಗಿದೆ. ಹಾಗಾಗಿ ವಿಜಯನಗರೋತ್ತರ ಕಾಲವು ಈ ಬಗೆಯ ಸ್ಥಿತ್ಯಂತರದಲ್ಲಿ ಗುರುತಿಸಿಕೊಂಡ ಕಾಲ. ವಿಶ್ವ ಮಾರುಕಟ್ಟೆಗೆ ಪರಿಚಿತಗೊಂಡ ಕಾಲ. ಯುರೋಪಿಯನ್ ಕಂಪನಿಗಳು ಭಾರತದ ವ್ಯಾಪಾರ ವಾಣಿಜ್ಯದ ಕಡೆ ಮುಖ ಮಾಡಿ ಭಾರತವು ಒಂದು ವಾಣಿಜ್ಯ ಸಂಸ್ಥೆಯಾಗಿ ರೂಪಗೊಳ್ಳುವ ಪ್ರಕ್ರಿಯೆಗಳನ್ನು ನಿರಂತರವಾಗಿ ನಡೆಸಿದವು. ಭಾರತವನ್ನು ಕಚ್ಚಾ ವಸ್ತುಗಳ ರಫ್ತುಕೇಂದ್ರವನ್ನಾಗಿ ಮಾಡಿಕೊಂಡು ಅವುಗಳನ್ನು ಸಿದ್ಧವಸ್ತುಗಳನ್ನಾಗಿ ಪರಿವರ್ತಿಸಿ ಮಾರಾಟ ಮಾಡುವ ಮಾರುಕಟ್ಟೆಯನ್ನಾಗಿ ರೂಪಿಸಿದರು. ಆದ್ದರಿಂದ ವಿಜಯನಗರೋತ್ತರ ಕಾಲವು ಕೃಷಿ ವಾಣಿಜ್ಯೀಕರಣವಾಗಿಯೇ ಹೆಚ್ಚು ಗುರುತಿಸಿಕೊಂಡ ಕಾಲವಾದ್ದರಿಂದ ವಿಜಯನಗರೋತ್ತರ ಕಾಲದ ಆರ್ಥಿಕ ಮತ್ತು ವಾಣಿಜ್ಯ :ಚಾರಿತ್ರಿಕ ಅಧ್ಯಯನ ಎಂಬ ಶೀರ್ಷಿಕೆಯಡಿಯಲ್ಲಿ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ವಿಜಯನಗರೋತ್ತರ ಕಾಲವು ವಾಣಿಜ್ಯೋದ್ಯಮ ಮತ್ತು ಸಂಘರ್ಷದ ಕಾಲವಾಗಿದ್ದು, ವ್ಯಾಪಾರ ವಾಣಿಜ್ಯದ ಸ್ವರೂಪಗಳಾದ ಸಂತೆ, ಪೇಟೆ-ಪಟ್ಟಣ, ಬಂದರು, ಕಂಪನಿ, ಕೋಟೆಗಳನ್ನೊಳಗೊಂಡ ಆರ್ಥಿಕ ಚರಿತ್ರೆಯನ್ನು ವಿಶ್ಲೇಷಣೆ ಮಾಡಲಾಗಿದೆ.

## ೧.೧. ಅಧ್ಯಯನದ ಉದ್ದೇಶ

ಚರಿತ್ರೆಯ ಗ್ರಹಿಕೆಯ ಸ್ವರೂಪವು ಕಾಲದಿಂದ ಕಾಲಕ್ಕೆ ಸದಾ ಬದಲಾಗುತ್ತಿರುತ್ತವೆ. ಹಾಗಾಗಿ ಚರಿತ್ರೆಯ ರಚನೆಯ ಸ್ವರೂಪಗಳು ಹೊಸ ಗ್ರಹಿಕೆಗಳ ಮೂಲಕ ಗುರುತಿಸಿಕೊಳ್ಳುತ್ತವೆ. ವಿಜಯನಗರೋತ್ತರ ಕಾಲದ ಆರ್ಥಿಕ ಚರಿತ್ರೆಯು ಈ ಬಗೆಯ ಸಂಶೋಧನೆಗಳಿಂದ ಗುರುತಿಸಿಕೊಂಡಿರುವಂತಹದ್ದು. ೧೫೬೫ರ ನಂತರ ದಕ್ಷಿಣ ಭಾರತದ ಚರಿತ್ರೆಯು ಸ್ಥಿತ್ಯಂತರದ ಘಟ್ಟವೆಂದು ಗುರುತಿಸಲಾಗಿದೆ. ವಿಜಯನಗರದ ರಕ್ಕಸಗಿ ತಂಗಡಗಿ ಯುದ್ಧದ ನಂತರ ಸ್ಥಳೀಯ ಸಂಸ್ಥಾನಗಳು ತಮ್ಮ ಆರ್ಥಿಕತೆಯನ್ನು ರೂಪಿಸುವ ಪ್ರಭುತ್ವವನ್ನು ಘಟ್ಟಿಗೊಳ್ಳಿಸಿಕೊಳ್ಳುವ ಹಂತವಾಗಿದೆ. ಈ ಆರ್ಥಿಕ ಚರಿತ್ರೆಯು ಸ್ಥಳೀಯ ಸಂಸ್ಥಾನಗಳ ಹಿನ್ನೆಲೆಯಲ್ಲಿ ಹೇಗೆ ಗುರುತಿಸಿಕೊಂಡ ಬಗೆಯನ್ನು ಕುರಿತು ಈ ಪ್ರಬಂಧದಲ್ಲಿ ವಿಶ್ಲೇಷಿಸುವ ಉದ್ದೇಶವಿದೆ.

* ವಿಜಯನಗರೋತ್ತರ ಕಾಲದಲ್ಲಿ ಗುರುತಿಸಿಕೊಂಡ ಸಾರ್ವಭೌಮ ಮತ್ತು ಸಾಮಂತ ಸಂಬಂಧಗಳು ತಮ್ಮದೇ ರಾಜಕೀಯ, ಆರ್ಥಿಕ ಚರಿತ್ರೆಗಳನ್ನು ರಚಿಸಿದ ಸ್ವರೂಪವನ್ನು ಕುರಿತಂತೆ ವಿಶ್ಲೇಷಣೆಗೆ ಗೊಳಪಡಿಸಲಾಗುತ್ತದೆ.
* ಕೃಷಿ ಉತ್ಪಾದನೆಗಳು ಅಧಿಕಗೊಂಡು ಕೃಷಿಯೇತರ ಚಟುವಟಿಕೆಗಳು ನೆಲೆಗೊಳ್ಳಲಾರಂಭಿಸಿದಾಗ ಬಂಡವಾಳ ಹೂಡಿಕೆಗೆ ಸಾಗುವ ಕರಕುಶಲ ಕಸುಬುಗಳ ಪರಿಯನ್ನು ವಿಜಯನಗರೋತ್ತರ ಮತ್ತು ವಸಾಹತು ಕಾಲಘಟ್ಟದಲ್ಲಿ ಅವುಗಳು ಯಾವ ರೀತಿಯಾದ ಸ್ಥಿತ್ಯಂತರಕ್ಕೆ ಒಳಗಾಗಿವೆ ಎಂಬುದನ್ನು ಚರ್ಚೆಗೊಳಪಡಿಸಲಾಗಿದೆ.
* ವಿಜಯನಗರೋತ್ತರ ಕಾಲವು ವ್ಯಾಪಾರ ವಾಣಿಜ್ಯದಲ್ಲಿ ಮುಖ್ಯವಾಗಿದೆ. ಮಾರುಕಟ್ಟೆ ಕೇಂದ್ರಿತವಾದ ಹೊಸ ಅರ್ಥವಸ್ಥೆಯೊಂದು ಬಂಡವಾಳಕೇಂದ್ರಿತ ಸ್ವರೂಪ ಪಡೆದು ನಂತರ ಸಾಮ್ರಾಜ್ಯಶಾಹಿ ಪರಿಕಲ್ಪನೆಗಳ ಮೂಲಕ ತಮ್ಮ ಸ್ಥಾನವನ್ನು ಗಟ್ಟಿಗೊಳಿಸಿಕೊಂಡು ವಸಾಹತು ನಿಲುವುಗಳಿಗೆ ಒಳಪಟ್ಟ ಪ್ರಕ್ರಿಯೆಗಳನ್ನು ವಿಶ್ಲೇಷಿಸಲಾಗಿದೆ.
* ವಿಜಯನಗರೋತ್ತರ ಕಾಲ ಹೊಸ ವರ್ತಕ ಸಮುದಾಯಗಳು ತಮ್ಮ ಅಸ್ತಿತ್ವ ಕಂಡುಕೊಳ್ಳುವ ಕಾಲವಾಗಿದ್ದು, ಆ ವರ್ತಕ ಸಮುದಾಯಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. ಹಾಗೂ ಪ್ರಾಚೀನ ಕಾಲದಿಂದಲೂ ಗುರುತಿಸಿಕೊಂಡಂತಹ ಈ ವರ್ತಕ ಸಮುದಾಯಗಳು ವಿಜಯನಗರೋತ್ತರ ಕಾಲದಲ್ಲಿ ಸ್ಥಿತ್ಯಂತರಗೊಂಡ ಬಗೆಯನ್ನು ಚರ್ಚೆಗೆ ಒಳಪಡಿಸಲಾಗಿದೆ.
* ಪ್ರಾಚೀನ ಕಾಲದಿಂದ ಕೃಷಿಪ್ರಧಾನ ಸಮಾಜವಾಗಿದ್ದ ಭಾರತವು ಯುರೋಪಿಯನ್ನರ ಆಗಮನದ ಕಾಲಘಟ್ಟದಲ್ಲಿ ಆಹಾರದ ಬೆಳೆಯ ಜೊತೆಗೆ ವಾಣಿಜ್ಯ ಬೆಳೆಗಳ ಮೂಲಕ ಗುರುತಿಸಿಕೊಂಡ ಕಾಲ. ಭಾರತವು ಕೃಷಿಪ್ರಧಾನ ಸಮಾಜವಾಗಿ ನಿರಂತರವಾಗಿ ಗುರುತಿಸಿಕೊಳ್ಳುವ ಸಂದಿಗ್ಧತೆಯನ್ನು ಯುರೋಪಿಯನ್ನರು ರೂಪಿಸಿದರು ಎಂಬ ವಿಚಾರ ಕುರಿತು ವಿವರಿಸಲಾಗಿದೆ.

* ತೆರಿಗೆಯು ಪ್ರಭುತ್ವದ ಆದಾಯದ ಮೂಲಗಳಲ್ಲಿ ಮುಖ್ಯ ಆಗಿದ್ದು, ಪ್ರಸ್ತುತ ಕಾಲಘಟ್ಟದಲ್ಲಿ ಸಂಸ್ಥಾನಗಳ ಅಭಿವೃದ್ಧಿಗೆ ತೆರಿಗೆಯ ಪಾತ್ರವೇನು, ಸಂಸ್ಥಾನಗಳ ತೆರಿಗೆಯ ಸ್ವರೂಪವೇನು ಎಂಬುವುದನ್ನು ವಿಶ್ಲೇಷಿಸುವುದರ ಜೊತೆಗೆ ಯುರೋಪಿಯನ್ನರ ಆಗಮನದಿಂದ ಈ ಸ್ವರೂಪದಲ್ಲಾದ ಬದಲಾವಣೆಗಳನ್ನು ಕುರಿತಂತೆ ವಿವರಿಸಲಾಗಿದೆ.
* ಸಂಸ್ಥಾನಗಳ ಆರ್ಥಿಕ ಚರಿತ್ರೆಯಲ್ಲಿ ಬ್ರಹ್ಮದೇಯ, ದೇವದಾಯ ಮತ್ತು ಮಠಗಳು ಆರ್ಥಿಕ ಕೇಂದ್ರಗಳಾಗಿ ಬೆಳವಣಿಗೆ ಹೊಂದಿದ ಹಂತವನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ.
* ವಿಜಯನಗರೋತ್ತರ ಕಾಲಾವಧಿಯಲ್ಲಿ ವರ್ತಕ ಸಮುದಾಯಗಳು ಮಧ್ಯವರ್ತಿ ಏಜೆಂಟರ್‌ಗಳಾಗಿ, ಭೂಮಾಲೀಕರಾಗಿ ಬೆಳವಣಿಗೆ ಹೊಂದುವ ಸ್ಥಿತ್ಯಂತರವನ್ನು ಕುರಿತಂತೆ ವಿಶ್ಲೇಷಿಸಲಾಗಿದೆ
* ಸಾಗರೋತ್ತರ ವ್ಯಾಪಾರದಲ್ಲಿ ಗುರುತಿಸಿಕೊಂಡ ಯುರೋಪಿಯನ್ ಕಂಪನಿಗಳ ವ್ಯಾಪಾರದ ಸ್ವರೂಪ ಮತ್ತು ಸ್ಥಳೀಯ ನಾಯಕರೊಂದಿಗೆ ಹೊಂದಿದ ಸಂಬಂಧಗಳನ್ನು ಕುರಿತು ವಿಶ್ಲೇಷಿಸಿ ಚರ್ಚಿಸಲಾಗಿದೆ.
* ನಾಗರೀಕತೆಗಳ ಆರಂಭದಿಂದಲೂ ಬೆಳೆದು ಬಂದ ಸಾರಿಗೆ ಸಂಪರ್ಕಗಳು ವಿಜಯನಗರೋತ್ತರ ಕಾಲದಲ್ಲಿ ಅವುಗಳ ಸ್ವರೂಪದಲ್ಲಾದ ಬದಲಾವಣೆಗಳನ್ನು ಗುರುತಿಸಲು ಯತ್ನಿಸಲಾಗಿದೆ. ಸಾರಿಗೆ ಸಾಧನಗಳ ಪಲ್ಲಟನೆಗೆ ಚಾರಿತ್ರಿಕ ಕಾಲವನ್ನು ನಿರೂಪಿಸುವ ಉದ್ದೇಶವಿದೆ.
* ಮೈಸೂರು ಒಡೆಯರಾದ ಚಿಕ್ಕದೇವರಾಜ ಒಡೆಯರು ಹೊಸದೊಂದು ಮಾರುಕಟ್ಟೆ ಕೇಂದ್ರಿತ ಅರ್ಥವ್ಯವಸ್ಥೆಯನ್ನು ರೂಪಿಸಿದ ಹಾಗೂ ನಗರಕೇಂದ್ರಗಳು ಮಾರುಕಟ್ಟೆ ರಚನೆಗೆ ಮೈಸೂರಿನ ಒಡೆಯರು ನೀಡಿದ ಪ್ರಾಮುಖ್ಯತೆಯನ್ನು ಬೆಳಕಿಗೆ ತರಲಾಗಿದೆ.
* ಭೂಮಾಲೀಕತ್ವವು ಆರಂಭದಿಂದಲೂ ಗುರುತಿಸಿಕೊಂಡು ಬಂದಂತೆ ವಿಜಯನಗರೋತ್ತರ ಕಾಲದ ಭೂಮಾಲೀಕ ಮತ್ತು ಕೂಲಿ ಕಾರ್ಮಿಕರ ಸ್ಥಿತಿಯನ್ನು ಆಧುನಿಕ ಕಾಲಘಟ್ಟದವರೆಗೂ ಮುಂದುವರಿದುಕೊಂಡು ಬಂದ ಹಂತವನ್ನು ಕುರಿತು ವಿವರಿಸಲಾಗಿದೆ.
* ಟಿಪ್ಪು ನೇತೃತ್ವದಲ್ಲಿ ಮೈಸೂರು ಸಂಸ್ಥಾನದ ವ್ಯಾಪಾರ-ವಾಣಿಜ್ಯದ ಅಭಿವೃದ್ಧಿಯಲ್ಲಾದ ನೂತನ ಆವಿಷ್ಕಾರಗಳ ಬದಲಾವಣೆಗಳನ್ನು ಗುರುತಿಸಲು ಯತ್ನಿಸಲಾಗಿದೆ.
* ಕ್ರಿ.ಶ. ೧೫೬೫-೧೮೦೦ರ ಅವಧಿಯಲ್ಲಾದ ಆರ್ಥಿಕ ಪಲ್ಲಟ, ನಗರೀಕರಣ ಪ್ರಕ್ರಿಯೆಯಿಂದ ಸಮಾಜದಲ್ಲಾದ ಬದಲಾವಣೆಗಳನ್ನು ಗುರುತಿಸಲು ಪ್ರಯತ್ನಿಸಲಾಗಿದೆ.
* ಸ್ಥಳೀಯ ಆರ್ಥಿಕತೆಯು ವಸಾಹತು ಆರ್ಥಿಕತೆಯ ಮೇಲೆ ಬೀರಿದ ಪ್ರಭಾವವನ್ನು ಕುರಿತಂತೆ ವಿವರಿಸಲಾಗಿದೆ. ಸಂತೆ ಮತ್ತು ಪೇಟೆ-ಪಟ್ಟಣದ ವ್ಯಾಪಾರ ಕೇಂದ್ರಿತ ಬೆಳವಣಿಗೆಯ ಕುರಿತು ವಿಶ್ಲೇಷಿಸಲಾಗಿದೆ.
* ಯುರೋಪಿಯನ್‌ರ ಆಗಮನದಿಂದ ಕರಾವಳಿ ಕರ್ನಾಟಕವು ತಮ್ಮ ಸ್ಥಳೀಯ ಸಂಸ್ಥಾನಗಳ ಜೊತೆ ಹೊಂದಿದ ಆರ್ಥಿಕ ರಾಜಕಾರಣದ ವಿವಿಧ ಆಯಾಮಗಳು ಮಹತ್ವದಿಂದ ಕೂಡಿದ್ದು, ಆ ಬಗ್ಗೆ ಹೊಸ ಸಂಗತಿಗಳನ್ನು ಚರ್ಚೆಗೆ ಒಳಪಡಿಸಿಲಾಗಿದೆ.

* ವಿಜಯನಗರೋತ್ತರ ಕಾಲದ ರೈತಸಂಬಂಧಿ ಪ್ರತಿಭಟನೆಗಳನ್ನು ಕುರಿತಂತೆ ವಿವರಿಸುವ ಉದ್ದೇಶವಿದೆ. ಬ್ರಿಟಿಶರು ೧೮೨೦ರಲ್ಲಿ ಜಾರಿಗೊಳಿಸಿದ ಗೇಣಿಪದ್ಧತಿಯಿಂದ ಕರಾವಳಿ ಭಾಗದಲ್ಲಿ ನಡೆದ ರೈತ ಪ್ರತಿಭಟನೆಗಳನ್ನು ವಿಶ್ಲೇಷಿಸುವ ಉದ್ದೇಶವಿದೆ.
* ವಿಜಯನಗರೋತ್ತರ ಕಾಲದಲ್ಲಿ ನಡೆದ ನಗರೀಕರಣ ಪ್ರಕ್ರಿಯೆಗಳಿಂದ ಪೇಟೆ ಪಟ್ಟಣಗಳಾಗಿ ಗುರುತಿಸಿಕೊಂಡು ಪ್ರಸ್ತುತ ಆಧುನಿಕ ನಗರಕೇಂದ್ರಗಳಾಗಿ ಬೆಳವಣಿಗೆ ಹೊಂದಿದ ಸ್ವರೂಪವನ್ನು ಕುರಿತು ವಿವರಿಸುವ ಉದ್ದೇಶವಿದೆ.

ಒಟ್ಟಾರೆಯಾಗಿ ವಿಜಯನಗರೋತ್ತರ ಕಾಲವು ವ್ಯಾಪಾರ–ವಾಣಿಜ್ಯದಲ್ಲಿಯೇ ಮುಖ್ಯವಾದ ಹಂತವಾಗಿದೆ. ಭಾರತವು ಯುರೋಪಿಯನ್ ಮಾರುಕಟ್ಟೆ ಸ್ವರೂಪವನ್ನು ಹೊಂದುವ ಹಂತವೆಂದೇ ಪರಿಗಣಿಸಬೇಕಾಗುತ್ತದೆ. ವ್ಯಾಪಾರದ ಹಿನ್ನೆಲೆಯಿಂದ ತಕ್ಕಡಿ ಹಿಡಿದು ಬಂದ ಯುರೋಪಿಯನ್‌ರು ಇಲ್ಲಿ ಅಧಿಕಾರಶಾಹಿನ್ನು ಸಲಿಸಾಗಿ ಪಡೆದರು. ಈ ಮೂಲಕ ಭಾರತದ ಸಾಮಾಜಿಕ, ಆರ್ಥಿಕ, ರಾಜಕೀಯ ಸ್ಥಿತ್ಯಂತರವನ್ನು ಉಂಟುಮಾಡಿದರು. ಟಿಪ್ಪುವಿನ ಪತನದ ನಂತರ ವಸಾಹತು ಪ್ರಕ್ರಿಯೆಗೆ ಒಳಪಡುವ ಸಂದರ್ಭದಲ್ಲಿ ಆದಂತಹ ಬೆಳವಣಿಗೆಗಳನ್ನು ಆರ್ಥಿಕ ಹಿನ್ನಲೆಯಲ್ಲಿ ವಿಶ್ಲೇಸಣೆಗೆ ಒಳಪಡಿಸಲಾಗಿದೆ. ಬೃಹತ್ ಕೈಗಾರಿಕೆ, ನಗರಗಳ ಬೆಳವಣಿಗೆ ,ಮಾರುಕಟ್ಟೆ, ನಿರ್ಮಾಣ, ಬಂಡವಾಳ ಹೂಡಿಕೆ ಮೊದಲಾದ ಅಂಶಗಳನ್ನು ಕುರಿತು ವ್ಯಾಪಾರ– ವಾಣಿಜ್ಯ ಎಂಬ ಆಧ್ಯಾಯವೊಂದನ್ನು ಕಟ್ಟಿಕೊಡುವ ಪ್ರಯತ್ನ ಇಲ್ಲಿದೆ. ಆಳುವವರು ಮತ್ತು ಆಳಿಸಿಕೊಳ್ಳುವವರ ನಡುವೆ ಆರ್ಥಿಕ ಮತ್ತು ವಾಣಿಜ್ಯದ ಸ್ವರೂಪವು ಏರು ಪೇರಾದ ಸಂದರ್ಭದಲ್ಲಿ ಶೋಷಿತ ರೈತರು, ಕೂಲಿ ಕಾರ್ಮಿಕರು, ವ್ಯಾಪಾರಿಗಳು ಹೀಗೆ ಒಟ್ಟಾರೆಯಾಗಿ ಟ್ಟಾರೆಯಾಗಿ ಆರ್ಥಿಕವಾಗಿ ಸೃಷ್ಟಿಸಲ್ಪಟ್ಟ ಹೊಸ ಸಮಾಜವೊಂದರ ನಿರ್ಮಾಣ ವಿಜಯನಗರೋತ್ತರ ಕಾಲದಲ್ಲಿ ಆಗುತ್ತದೆ. ಈ ಬಗೆಗಿನ ಅನೇಕ ವ್ಯಾಪಾರ– ವಾಣಿಜ್ಯದ ಆಯಾಮಗಳನ್ನು ಸಂಶೋಧನೆಯ ಮೂಲಕ ಬೆಳಕಿಗೆ ತರುವ ಪ್ರಯತ್ನ ಮಾಡಲಾಗಿದೆ.

### ೧.೨. ಅಧ್ಯಯನದ ವಿಧಾನ

ರಾಜಪ್ರಭುತ್ವ ಕೇಂದ್ರಿತ ಅಧ್ಯಯನಗಳ ಸ್ವರೂಪ ಬದಲಾಗಿ ಆರ್ಥಿಕ ಚರಿತ್ರೆಯ ಪೂರಕಾಂಶಗಳ ಕಡೆ ಹೊಸ ಒಲವುಗಳು ಹುಟ್ಟಿಕೊಳ್ಳುತ್ತವೆ. ಆದ್ದರಿಂದ ಸಮಾಜದಲ್ಲಿ ಆರ್ಥಿಕ ಚರಿತ್ರೆಯನ್ನು ಕುರಿತಂತೆ ಹಲವಾರು ಅಧ್ಯಯನಗಳು ನಡೆಯುತ್ತವೆ. ಹಾಗಾಗಿ ಆರ್ಥಿಕ ಚರಿತ್ರೆಯನ್ನು ಸಮಾಜದ ಒಂದು ಭಾಗವೆಂದು ಪರಿಗಣಿಸಿ ಆರ್ಥಿಕತೆಯ ವಿವಿಧ ಸ್ವರೂಪಗಳನ್ನು ಕುರಿತಂತೆ ಲಭ್ಯವಿರುವ ಆರ್ಥಿಕ ಸಂಗ್ರಹಗಳಿಂದ ಅಧ್ಯಯನ ಮಾಡಲಾಗಿದೆ. ಇಲ್ಲಿ ಆರ್ಥಿಕ ಚರಿತ್ರೆಗೆ ಪೂರಕವಾಗಿ ಪ್ರಾಥಮಿಕ ಮತ್ತು ಆನುಷಂಗಿಕ ಆಕರಗಳನ್ನು ಬಳಸಿಕೊಂಡು ಚಾರಿತ್ರಿಕವಾಗಿ ನಿರೂಪಿಸಲಾಗಿದೆ. ಪ್ರಸ್ತುತ ಕಾಲಘಟ್ಟದ ಶಾಸನಗಳು, ನಾಣ್ಯಗಳು, ಪತ್ರಾಗಾರದ ಪ್ರಕಟಿತ, ಅಪ್ರಕಟಿತ ದಾಖಲೆಗಳು, ಸಾಹಿತ್ಯ ಕೃತಿಗಳು, ಕೈಫಿಯತ್ತು, ಬಖೈರುಗಳು ಯುರೋಪಿಯನ್‌ರ ಬರವಣಿಗೆಗಳ ಗ್ಯಾಸೆಟಿಯರ್‌ಗಳು, ಪ್ರಕಟಿತ ಮತ್ತು ಅಪ್ರಕಟಿತ ಸಂಶೋಧನಾ ಪ್ರಬಂಧಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಅಳವಡಿಸಿಕೊಂಡು ಆಂತರಿಕ ಮತ್ತು ಬಾಹ್ಯ ವಿಮರ್ಶೆಗೆ ಒಳಪಡಿಸಿ ವಸ್ತುನಿಷ್ಠ ನಿರೂಪಣೆ ಮಾಡಲಾಗಿದೆ. ಚರಿತ್ರೆಯ

ತಾತ್ವಿಕತೆ, ವಸ್ತುನಿಷ್ಠತೆ, ವಿಮರ್ಶೆ ಅಂತರ್‌ಶಿಸ್ತು ಮತ್ತು ಬಹುಶಿಸ್ತುಗಳ ಮೂಲಕ ಪಡೆದ ಸಂಗತಿಗಳನ್ನು ಚರಿತ್ರೆಯ ಕಾಲಾನುಕ್ರಮದಲ್ಲಿ ಮಂಡಿಸಲಾಗುವುದು. ಹಾಗೂ ಆಯಾ ಕ್ಷೇತ್ರದಲ್ಲಿ ಹೆಚ್ಚಿನ ಅಧ್ಯಯನ ಮಾಡಿರುವ ವಿದ್ವಾಂಸರನ್ನು ಭೇಟಿಮಾಡಿ ಮಾಹಿತಿಯನ್ನು ಸಂಗ್ರಹಿಸಿ ವಿಶ್ಲೇಷಿಸಲಾಗಿದೆ. ಹಾಗೆಯೇ ಆಯ್ಕೆ ಮಾಡಿಕೊಂಡ ಕಾಲಘಟ್ಟಕ್ಕೆ ಸಂಬಂಧಿಸಿದಂತೆ ಕ್ಷೇತ್ರಕಾರ್ಯ ಕೈಗೊಂಡು ಮಾಹಿತಿ ಸಂಗ್ರಹಿಸಿ ತಾರ್ಕಿಕವಾಗಿ ವಿಶ್ಲೇಷಿಸಲಾಗಿದೆ.

**೧.೩. ಅಧ್ಯಯನದ ವ್ಯಾಪ್ತಿ**

ಕಾಲದ ಮಿತಿಯೊಳಗೆ ಒಂದು ನಿರ್ದಿಷ್ಟ ಚೌಕಟ್ಟನ್ನು ಒಳಪಡಿಸಿಕೊಂಡು **ವಿಜಯನಗರೋತ್ತರ ಕಾಲದ ಆರ್ಥಿಕತೆ ಮತ್ತು ವಾಣಿಜ್ಯ:ಚಾರಿತ್ರಿಕ ಅಧ್ಯಯನ(ಕ್ರಿ.ಶ.೧೫೬೫ ರಿಂದ ೧೮೦೦)** ಎಂಬ ಶೀರ್ಷಿಕೆಯಲ್ಲಿ ೧೫೬೫ ರಿಂದ ಸಾಮಂತ ಸಂಸ್ಥಾನಗಳನ್ನು ಅಧ್ಯಯನಕ್ಕೆ ಒಳಪಡಿಸಿ ಅವರ ಆರ್ಥಿಕ ಚರಿತ್ರೆಯನ್ನು ಕುರಿತಂತೆ ಕ್ರಿ.ಶ. ೧೮೦೦ರವರೆಗೆ ಒಟ್ಟು ೨೩೫ ವರ್ಷಗಳ ಕಾಲಮಾನವನ್ನು ಹೊಂದಿದೆ. ವಿಜಯನಗರೋತ್ತರ ಕಾಲದಲ್ಲಿ ಪ್ರವರ್ಧಮಾನಕ್ಕೆ ಬಂದ ಇಕ್ಕೇರಿ ನಾಯಕರು, ಚಿತ್ರದುರ್ಗ ನಾಯಕರು, ಮೈಸೂರು ಒಡೆಯರು, ಹರಪನಹಳ್ಳಿ ಪಾಳೆಯಗಾರರು, ಬಿಜಾಪುರದ ಸುಲ್ತಾನರು, ದಳವಾಯಿಗಳು, ಹೈದರ್ ಮತ್ತು ಟಿಪ್ಪು ಸುಲ್ತಾನ್ ಮೊದಲಾದ ಮನೆತನಗಳು ಪ್ರಧಾನ ಮನೆತನಗಳಾಗಿ ಗುರುತಿಸಿಕೊಂಡಿವೆ. ಇವರ ಅಧೀನದಲ್ಲಿ ಅನೇಕ ಸಾಮಂತ ಮನೆತನಗಳನ್ನು ಅನೇಕ ಪಾಳೆಯಪಟ್ಟುಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಅವರು ಗುರುತಿಸಿಕೊಂಡ ಆರ್ಥಿಕ ಚರಿತ್ರೆಯ ಜೊತೆ ಚಿಕ್ಕ ಪಾಳೆಯಪಟ್ಟುಗಳನ್ನು ಅಧ್ಯಯನ ಮಾಡಿ ಸಂದರ್ಭಾನುಸಾರವಾಗಿ ಆ ಪ್ರಭುತ್ವಗಳ ಆರ್ಥಿಕ ಚರಿತ್ರೆಯನ್ನು ಪ್ರಸ್ತುತ ಕರ್ನಾಟಕದ ವ್ಯಾಪ್ತಿಯಲ್ಲಿ ವಿವರಿಸಲಾಗಿದೆ. ವಸಾಹತು ಕರ್ನಾಟಕದ ಆರಂಭದ ಚರಿತ್ರೆಯನ್ನು ಆರ್ಥಿಕತೆಯಲ್ಲಿ ಮುಖಾಮುಖಿಯಾದ ಸಂದರ್ಭವನ್ನು ವಿವರಿಸಲಾಗಿದೆ.

**೧.೪. ಅಧ್ಯಯನದ ಸಮೀಕ್ಷೆ**

ವಿಜಯನಗರ ಮತ್ತು ವಿಜಯನಗರೋತ್ತರ ಕಾಲದ ಚರಿತ್ರೆಗೆ ಸಂಬಂಧಿಸಿದಂತೆ ಸಾಮಾಜಿಕ, ರಾಜಕೀಯ ಹಾಗೂ ಆರ್ಥಿಕ ವಿಷಯಗಳಿಗೆ ಸಂಬಂಧಿಸಿದಂತೆ ಅನೇಕ ಚರಿತ್ರೆಕಾರರ ಹಲವಾರು ಕೃತಿಗಳನ್ನು ರಚಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧಕ್ಕೆ ಸಂಬಂಧಿಸಿದಂತೆ ಚಾರಿತ್ರಿಕ ಕಾಲಘಟ್ಟವನ್ನು ಕೇಂದ್ರವಾಗಿರಿಸಿಕೊಂಡು ರಚನೆಯಾದ ಸಾಮಾಜಿಕ ಮತ್ತು ಆರ್ಥಿಕ ವಿಷಯಗಳಿಗೆ ಸಂಬಂಧಿಸಿದ ಲೇಖನಗಳು ಹಾಗೂ ಕೃತಿಗಳನ್ನು ಅನುಲಕ್ಷಿಸಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಲಕ್ಷ್ಮಣ್ ತೆಲಗಾವಿ ಅವರು ಸ್ಥಳೀಯ ಚರಿತ್ರೆಯನ್ನು ತಮ್ಮ ಬರಹಗಳ ಮೂಲಕ ಗುರುತಿಸಿ ವಿಶೇಷವಾಗಿ ಪಾಳೆಯಗಾರರ ಚರಿತ್ರೆ ಅಧ್ಯಯನಕ್ಕೆ ವಿಶೇಷ ಆಸಕ್ತಿಯನ್ನು ಹೊಂದಿದ್ದನ್ನು ಕಾಣಬಹುದು. ಅದರಲ್ಲೂ ಚಿತ್ರದುರ್ಗ, ಸಂತೇಬೆನ್ನೂರು, ಹರತಿ, ಗುಡೇಕೋಟೆ ಪಾಳೆಯಗಾರರ ಕುರಿತು ಅಧ್ಯಯನ ಮಾಡಿ ಅನೇಕ ಗ್ರಂಥಗಳನ್ನು, ಲೇಖನಗಳನ್ನು ಬರೆದಿದ್ದಾರೆ. **'ಚಿತ್ರದುರ್ಗ ಜಿಲ್ಲಾ ಇತಿಹಾಸ ಅಧ್ಯಯನದ ವ್ಯಾಪಕತೆ ಮತ್ತು ಸಾಧ್ಯತೆ'** ಕೃತಿಯಲ್ಲಿ ಚಿತ್ರದುರ್ಗ ಪ್ರದೇಶದ ಪಾಳೆಯಗಾರರ ಅಧ್ಯಯನದ ಮಹತ್ವವನ್ನು, 'ಇತಿಹಾಸಕಾರ ಹೆಚ್.ವಿ.ವೀರನಾಯಕ ಹರತಿ' ಕೃತಿಯಲ್ಲಿ ಹರತಿ

ಪಾಳೆಯಗಾರರ ದೇವಾಲಯಗಳನ್ನು ರಾಜಕೀಯ ಚರಿತ್ರೆಯನ್ನು ವಿಶ್ಲೇಷಿಸಿದ್ದಾರೆ. **'ಚಿತ್ರದುರ್ಗ ಜಿಲ್ಲೆಯಲ್ಲಿ ಪಾಳೆಯಗಾರರ ಆಳ್ವಿಕೆ'** ಲೇಖನದಲ್ಲಿ ಚಿತ್ರದುರ್ಗ, ಸಂತೇಬೆನ್ನೂರು, ಹರತಿ ಪಾಳೆಯಗಾರರ ರಾಜಕೀಯ ಚರಿತ್ರೆ ಹಾಗೂ ಆಡಳಿತ ಪ್ರದೇಶಗಳ ವಿವರಗಳನ್ನು, **'ಕಾಮಗೇತಿ ಅರಸರು; ಕೆಲವು ವಿಚಾರಗಳು'** ಲೇಖನದಲ್ಲಿ ಚಿತ್ರದುರ್ಗ ಪಾಳೆಯಗಾರರು ಕಾಮಗೇತಿ ವಂಶ ರಚಿಸಿಕೊಂಡ ರೀತಿಯನ್ನು, ಜನಪದ ವೀರ ಸಾಹಿತ್ಯ; ಚಾರಿತ್ರಿಕ ವಿವೇಚನೆ ಲೇಖನದಲ್ಲಿ ಚಿತ್ರದುರ್ಗ, ಸಂತೆಬೆನ್ನೂರು, ಹರತಿ ಪಾಳೆಯಗಾರರು ಜಾನಪದ ಸಾಹಿತ್ಯದಲ್ಲಿ ವರ್ಣಿತವಾಗಿರುವುದನ್ನು ಅದರ ಮೂಲಕ ಜನಪದರ ದೃಷ್ಟಿಯಲ್ಲಿ ಅರಸರಾಗಿ, ಯೋಧರಾಗಿ, ಆರಾಧ್ಯ ದೈವವಾಗಿದ್ದರು ಎಂಬ ಸಂಗತಿಯನ್ನು, **'ಚಿತ್ರದುರ್ಗದ ಒನಕೆ ಓಬವ್ವೆಯ ಘಟನೆ : ಚಾರಿತ್ರಿಕ ವಿಮರ್ಶೆ'** ಲೇಖನದಲ್ಲಿ ಪಾಳೆಯಗಾರರ ಕಾಲದಲ್ಲಿ ಕೆಳಜಾತಿಯವರಿಗೂ ಇದ್ದ ಸಾಮಾಜಿಕ ಸ್ಥಾನಮಾನಗಳನ್ನು, ಶ್ರೀ ಬೃಹನ್ಮಠ ಮತ್ತು ಚಿತ್ರದುರ್ಗ ನಾಯಕ ಅರಸರ ಸಂಬಂಧ ಲೇಖನದಲ್ಲಿ ಬೃಹನ್ಮಠದ ಸ್ವಾಮಿಗಳು ಭರಮಪ್ಪ ನಾಯಕನ ಕಾಲದಿಂದ ಚಿತ್ರದುರ್ಗ ಪಾಳೆಯಗಾರರಿಗೆ ರಾಜಗುರುಗಳಾಗಿದ್ದರು ಎಂಬ ಅಂಶವನ್ನು ಕುರಿತು ಚರ್ಚಿಸಲಾಗಿದೆ. ಅದಕ್ಕೂ ಮುನ್ನ ಕೂಡ್ಲೀ ಶೃಂಗೇರಿ ಮಠದ ಗುರುಗಳು ರಾಜಗುರುಗಳಾಗಿದ್ದರು. ಪಾಳೆಯಗಾರರು ಹದಿನೆಂಟನೇ ಶತಮಾನದವರೆಗೆ ವೈಷ್ಣವ ಮತ ನಿಷ್ಠರೂ ಎಂಬ ಅಂಶವನ್ನು, **'ಚಿತ್ರದುರ್ಗ ಕೋಟೆ ಮತ್ತು ಬೆಟ್ಟ ಪರಿಸರದ ಮೂರು ವ್ಯಕ್ತಿ ಶಿಲ್ಪಗಳು'** ಲೇಖನದಲ್ಲಿ ಏಕನಾಥೇಶ್ವರಿ ದೇವತೆ ಪಾಳೆಯಗಾರರ ಕಾಲದಲ್ಲಿ ಪಡೆದ ಧಾರ್ಮಿಕ ಮಹತ್ವ ಮುಂತಾದ ವಿಷಯಗಳನ್ನು ಪ್ರಸ್ತಾಪಿಸಿದ್ದಾರೆ. **'ಎಪ್ಪತ್ತೇಳು ಪಾಳೆಯಗಾರರು'** ಎಂಬ ಕೃತಿಯಲ್ಲಿ ವಿಜಯನಗರೋತ್ತರ ಕಾಲದಲ್ಲಿ ಇದ್ದ ಪಾಳೆಯಗಾರರ ಅಂಕಿ ಸಂಖ್ಯೆಯನ್ನು ಚಾರಿತ್ರಿಕ ದಾಖಲೆಗಳ ಮೂಲಕ ಪ್ರಕಟಿಸುವ ಕಾರ್ಯ ಮಾಡಿದ್ದಾರೆ. ಇಷ್ಟೆಲ್ಲ ಕೆಲಸ ಕಾರ್ಯಗಳು ನಾಯಕರ ಕುರಿತಾಗಿ ಮಾಡಿದ್ದರೂ, ಆರ್ಥಿಕ ಚರಿತ್ರೆಗೆ ಸಂಬಂಧಿಸಿದಂತೆ ಹೆಚ್ಚಿನ ಕೆಲಸ ಕಂಡು ಬಂದಿಲ್ಲ ಎಂಬುದನ್ನು ಗಮನಿಸಬಹುದು.

ಚಟ್ನೀಸ್‌ರವರ **ಕೆಳದಿ ಪಾಲಿಟಿ** ಕೃತಿಯು ಅಧ್ಯಯನಕ್ಕೆ ಪೂರಕವಾದ ಮಹಿತಿಯನ್ನು ಒದಗಿಸಿದ್ದು. ಈ ಕೃತಿಯಲ್ಲಿ ಕೆಳದಿಯ ನಾಯಕರ ರಾಜಕೀಯ, ಆರ್ಥಿಕ ಜೀವನವನ್ನು ಕುರಿತಂತೆ ವಿವರಿಸಿದ್ದಾರೆ. ಕೆಳದಿ ಇತಿಹಾಸದ ಬಗ್ಗೆ ಬೆಳಕು ಚಲ್ಲಿದ ಈ ಗ್ರಂಥವು ಅವರ ರಾಜಕೀಯ ಸ್ವರೂಪ ದಕ್ಷಿಣ ಭಾರತದ ಇತಿಹಾಸದಲ್ಲಿ ಅವರು ಪರಿಚಯಿಸಿದ ಭೂ ಕಂದಾಯದ ಸ್ವರೂಪವನ್ನು ಕುರಿತು ವಿಶ್ಲೇಷಿಸುತ್ತದೆ. ಕೆಳದಿ ಇತಿಹಾಸ ಕುರಿತು ಕೆಳದಿಯ ಗುಂಡಾ ಜೋಯಿಸರು ರಚಿಸಿದ ಕೆಳದಿ ಶಾಸನ ಸಂಪುಟ, ಕೆಳದಿ ಅರಸರ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಹಾಗೂ ಅವರ ಇನ್ನಿತರ ಲೇಖನಗಳನ್ನು ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ.

ಮಾರ್ಕ್ ವಿಲ್ಕ್ಸ್ ಅವರು **'ಹಿಸ್ಟಾರಿಕಲ್ ಸ್ಕೆಚಸ್ ಆಫ್ ದಿ ಸೌತ್ ಇಂಡಿಯಾ ಆ್ಯನ್ ಅಟೆಂಪ್ಟ್ ಟು ಟ್ರೇಸ್ ಆಫ್ ದಿ ಹಿಸ್ಟರಿ ಆಫ್ ಮೈಸೂರು'** ಎಂಬ ಕೃತಿಯಲ್ಲಿ ವಿಜಯನಗರೋತ್ತರ ಕಾಲದಲ್ಲಿ ಕಂಡುಬರುವ ಅನೇಕ ಪಾಳೆಯಗಾರರ ಚರಿತ್ರೆಗೆ ಸಂಬಂಧಿಸಿದಂತೆ ಬರೆದಿದ್ದಾರೆ. ಇದರಲ್ಲಿ 'ಚಿತ್ರದುರ್ಗದ ಪಾಳೆಯಗಾರರು ಸ್ವತಂತ್ರ ರಾಜ್ಯಭಾರ ನಡೆಸುತ್ತಿದ್ದ ಬೇಡ ಬುಡಕಟ್ಟಿನವರಾಗಿದ್ದು

ಅತ್ಯಂತ ಬಲಶಾಲಿಯಾದ **'ಬೇಡರ ಪಡೆ'** ಹೊಂದಿದ್ದರು. ಶಕ್ತಿ ದೇವತೆ ಕಾಳಿಯನ್ನು(ಉಚ್ಚಂಗಮ್ಮ, ಏಕನಾಥೇಶ್ವರಿಗೆ ಕಾಳಿ ಎಂದು ಕರೆದಿದ್ದಾರೆ) ಎಲ್ಲ ಸಮಯದಲ್ಲಿ ಬಹಳ ಭಕ್ತಿಯಿಂದ ಪೂಜೆ ಸಲ್ಲಿಸುತ್ತಿದ್ದರು. ಇವರ ರಾಜ್ಯದ ಪ್ರಾಬಲ್ಯವನ್ನು ಕಂಡು ಸಹಿಸಲಾಗದ ಹೈದರ್ ಆಲಿ ಇವರ ಮೇಲೆ ದಾಳಿ ಮಾಡಿದ, ಮೊದಲಿಗೆ ಒಪ್ಪಂದ ಮಾಡಿಕೊಂಡ ಪಾಳೆಯಗಾರರು ಹೈದರ್‌ಗೆ ಕಪ್ಪ ಕಾಣಿಕೆ ನೀಡಿದರು. ನಂತರ ಈ ಪಾಳೆಯಗಾರರು ಮರಾಠರ ಸ್ನೇಹ ಬೆಳೆಸಿ ಅವರಿಗೆ ಅನೇಕ ಯುದ್ಧಗಳಲ್ಲಿ ಜಯ ಸಾಧಿಸಲು ನೆರವಾದರು. ಇದರಿಂದ ಹೈದರ್ ಆಲಿಯು ಕ್ರಿ.ಶ.೧೭೭೯ರಲ್ಲಿ ಅತ್ಯಂತ ಪ್ರಯಾಸದಿಂದ ಮದಕರಿ ನಾಯಕನನ್ನು ಸೋಲಿಸಿ, ರಾಜನನ್ನು ಅವರ ಪರಿವಾರದವರನ್ನು ಶ್ರೀರಂಗಪಟ್ಟಣದ ಸೆರೆಮನೆಯಲಿಟ್ಟು ಸುಮಾರು ಐದು ಲಕ್ಷ ರೂಪಾಯಿಗಳ ಮೌಲ್ಯದ ವಡವೆ, ವಸ್ತ್ರ, ಆಭರಣ, ಬಂಗಾರ ಮತ್ತು ಹಣವನ್ನು ದೋಚಿದನು. ಇದಾದ ಕೆಲವು ವರ್ಷಗಳಲ್ಲಿ ತನ್ನ ಸೈನ್ಯಕ್ಕೆ ಇಪ್ಪತ್ತು ಸಾವಿರ ಬೇಡರನ್ನು ಸೇರಿಸಿಕೊಂಡು ಅವರದೆ ಆದ ಚೇಲಾ ಪಡೆ ಹೆಸರಿನ ತುಕಡಿಯನ್ನು ರಚಿಸಿದನು. ಇವರ ಈ ವಿಶ್ಲೇಷಣೆ ಚಿತ್ರದುರ್ಗ ಪಾಳೆಯಗಾರರ ಚರಿತ್ರೆಯ ಮೇಲೆ ಬೆಳಕು ಚೆಲ್ಲಿದರು ಕೂಡ ಪಾಳೆಯಗಾರರು ಹಿಂದುಗಳು, ಹೈದರ್ ಆಲಿ ಮುಸ್ಲಿಂ ಸುಲ್ತಾನ ಎಂಬ ದೃಷ್ಟಿಕೋನದಲ್ಲಿ ಇವರು ಚರಿತ್ರೆ ರಚಿಸಿದ್ದಾರೆ. ಈ ರೀತಿಯ ವ್ಯಾಖ್ಯಾನ ಬ್ರಿಟಿಶರು ಹೈದರ್‌ನ ಸೋಲಿಸಿ, ಅವನ ರಾಜ್ಯ ನಾಶಮಾಡಿದ್ದನ್ನು ಸಮರ್ಥಿಸುವ ಉದ್ದೇಶ ಹೊಂದಿದ್ದಂತೆ ಕಾಣುತ್ತದೆ.

ಕುಪ್ಪುಸ್ವಾಮಿ ಜಿ.ಆರ್., ಅವರ **'ಎಕನಾಮಿಕ್ ಹಿಸ್ಟರಿ ಇನ್ ಕರ್ನಾಟಕ,'** ಕ್ರಿ.ಶ.೧೦೦೦ ರಿಂದ ೧೪೦೦ರವರೆಗಿನ ಕರ್ನಾಟಕದ ಆರ್ಥಿಕ ವ್ಯವಸ್ಥೆಯನ್ನು ಕುರಿತು ಸಮಗ್ರವಾಗಿ ಚರ್ಚಿಸಿದ್ದು, ಈ ಕೃತಿಯಲ್ಲಿ ಒಟ್ಟು ಆರು ಅಧ್ಯಾಯಗಳು ಇವೆ. ಎರಡು ಹಾಗೂ ಮೂರನೆಯ ಅಧ್ಯಾಯಗಳಲ್ಲಿ ಗ್ರಾಮೀಣ ಪ್ರದೇಶದ ಆರ್ಥಿಕ ವ್ಯವಸ್ಥೆಯನ್ನು ವಿವರಿಸುತ್ತಾ, ಕೃಷಿ ವಿಧಾನಗಳು, ಭೂಹಿಡುವಳಿ ವ್ಯವಸ್ಥೆ, ಬೆಳೆಗಳು, ನೀರಾವರಿ, ಪಶುಸಂಗೋಪನೆ ಮತ್ತು ಮೀನು ಸಾಕಾಣಿಕೆಯ ಬಗೆಗೆ, ನಾಲ್ಕನೆಯ ಅಧ್ಯಾಯದಲ್ಲಿ ನಗರಗಳ ರಚನೆ, ಕೈಗಾರಿಕೆಗಳು, ವ್ಯಾಪಾರ ಮತ್ತು ವಾಣಿಜ್ಯ, ಹಣಕಾಸು, ಐದನೆಯ ಅಧ್ಯಾಯದಲ್ಲಿ ನಾಣ್ಯ ಚಲಾವಣೆ, ತೂಕ ಮತ್ತು ಅಳತೆ ಮತ್ತು ತೆರಿಗೆ ವ್ಯವಸ್ಥೆ ಬಗೆಗೆ ವಿವರಿಸಿದ್ದಾರೆ. ಈ ಅಧ್ಯಾಯಗಳಲ್ಲಿ ಅಂದು ಅಸ್ತಿತ್ವದಲ್ಲಿದ್ದ ಕೃಷಿಪದ್ಧತಿ, ನೀರಾವರಿ ಬೆಳೆಗಳು ಮತ್ತು ಪಶುಪಾಲನೆ ಇಂದಿಗೂ ಅನುಸರಣೀಯವಾಗಿವೆ ಎಂದು ಹೇಳಿದ್ದಾರೆ. ಪ್ರಮುಖ ಕೈಗಾರಿಕೆಗಳಾದ ಬಳೆ, ಬಟ್ಟೆ, ಲೋಹ, ತೈಲೋದ್ಯಮ, ಸುಗಂಧ, ದ್ರವ್ಯ, ಆಭರಣಗಳ ತಯಾರಿಕೆ ಮತ್ತು ಚಮ್ಮಾರಿಕೆ ಮೊದಲಾದವುಗಳನ್ನು ಗುರುತಿಸಿದ್ದಾರೆ. ಪ್ರಾಚೀನ ಕಾಲದಲ್ಲಿ ಅಸ್ತಿತ್ವದಲ್ಲಿದ್ದ ವ್ಯಾಪಾರ ವಾಹಿವಾಟು ವಿವಿಧ ಬಗೆಯ ತೆರಿಗೆಗಳು ವೈವಿಧ್ಯಮಯವಾದ ತೂಕ ಮತ್ತು ಅಳತೆ ಮಾಪನಗಳ ಉಲ್ಲೇಖಗಳು ಇವೆ. ಹೀಗೆ ಪ್ರಾಚೀನ ಕರ್ನಾಟಕದ ಆರ್ಥಿಕ ವ್ಯವಸ್ಥೆಯನ್ನು ಅರಿಯಲು ಇವರ ಕೃತಿಯು ಪೂರಕವಾದ ಆಧಾರವಾಗಿದೆ. ಈ ಕೃತಿಯನ್ನು ಬಳಸಿಕೊಂಡು ವಿಜಯನಗರೋತ್ತರ ಕಾಲದ ವ್ಯಾಪಾರ ವಾಣಿಜ್ಯ ಚಟುವಟಿಕೆಗಳಿಗೆ ಪೂರಕವಾದ ಆರ್ಥಿಕ ಅಂಶಗಳನ್ನು ವಿವರಿಸಲು ಪ್ರಯತ್ನಿಸಲಾಗಿದೆ.

ಮಾಲತಿ ಕೃಷ್ಣಮೂರ್ತಿ ಅವರ ಕೃತಿಯಾದ **'ಟ್ರೇಡ್ ಆ್ಯಂಡ್ ಕಾಮರ್ಸ್ ಇನ್ ಕಲೋನಿಯಲ್ ಸೌತ್ ಕೆನರಾ ೧೭೯೯-೧೮೬೨'** ವಸಾಹತುಶಾಹಿ ಕಾಲಘಟ್ಟಕ್ಕೆ ಅನ್ವಯಿಸಿದರೂ ಕೂಡ ಕೆಲವೊಂದು ಮಾಹಿತಿಗಳು ಪ್ರಾಚೀನ ಕಾಲದ ಒಳನಾಡಿನ ವ್ಯಾಪಾರ ಪದ್ಧತಿ ನದಿಗಳು, ಭೂಮಾರ್ಗಗಳ ಬಗ್ಗೆ ತಿಳಿಯಲು ಸಹಕಾರಿಯಾಗಿದೆ.

ಮೋತಿ ಚಂದ್ರ ಅವರ **'ಟ್ರೇಡ್ ಆ್ಯಂಡ್ ಟ್ರೇಡ್ಸ್ ರೂಟ್ಸ್ ಇನ್ ಏನ್ಸಿಯಂಟ್ ಇಂಡಿಯಾ'** ಹಿಂದಿ ಭಾಷೆಯಲ್ಲಿ ರಚನೆಯಾದ 'ಸಾರ್ಥವಾಹ' ಗ್ರಂಥದ ಇಂಗ್ಲಿಶ್ ಭಾಷಾಂತರ ಕೃತಿ. ಈ ಕೃತಿ ನಂತರ ಭಾರತೀಯ ಇತರ ಭಾಷೆಗಳಿಗೆ ವಿಶೇಷವಾಗಿ ಕನ್ನಡ ಭಾಷೆಗೂ ಇದೇ ಹೆಸರಿನಲ್ಲಿ ಭಾಷಾಂತರಗೊಂಡಿವೆ. ಈ ಗ್ರಂಥವು ಹದಿಮೂರು ಅಧ್ಯಾಯಗಳನ್ನು ಹೊಂದಿದ್ದು, ಮೊದಲ ಅಧ್ಯಾಯವು ಪ್ರಾಚೀನ ಕಾಲದ ವ್ಯಾಪಾರ ಮಾರ್ಗಗಳನ್ನು ಕುರಿತು ಮಹತ್ವದ ಮಾಹಿತಿಯನ್ನು ಹೊರ ಹಾಕುತ್ತದೆ. ಇದು ಭಾರತದಲ್ಲಿ ಇದ್ದ ಆಂತರಿಕ ವ್ಯಾಪಾರ ಮತ್ತು ಸಾಗರೋತ್ತರ ಮಾರ್ಗಗಳನ್ನು ಕುರಿತು ಮಾಹಿತಿಯನ್ನು ದಾಖಲಿಸುತ್ತದೆ. ಯಾತ್ರಾರ್ಥಿಗಳ ಬಗ್ಗೆ ವ್ಯಾಪಾರಿಗಳ ಬಗ್ಗೆ ಮಾಹಿತಿಯನ್ನು ಒದಗಿಸುತ್ತದೆ. ಮೌರ್ಯ ಯುಗದಲ್ಲಿ ಭಾರತದ ರಾಷ್ಟ್ರೀಯ ಪಥಗಳಲ್ಲಿ ಸಂಚರಿಸಿದ ಪ್ರವಾಸಿಗರ ಮತ್ತು ಅದನ್ನು ಆಕ್ರಮಿಸಿಕೊಂಡ ಜನಾಂಗಗಳ ಬಗೆಗೆ, ಅವರ ದಾಳಿಗಳು, ವ್ಯಾಪಾರಸ್ಥರ ಮಾಹಿತಿಯನ್ನು ಹೊಂದಿದೆ. ಭಾರತವನ್ನು ಸಂಪರ್ಕಿಸುತ್ತಿದ್ದ ವಿದೇಶಿಯ ಸಂಪರ್ಕದ ಜಾಲದ ಮೇಲೆ ನಡೆದ ಕಾಡುಜನಾಂಗದ ದಾಳಿ, ಆ ಮಾರ್ಗಗಳಲ್ಲಿ ಸಂಚರಿಸುತ್ತಿದ್ದ ವರ್ತಕರು ಮತ್ತು ಆ ಕಾಲದ ವ್ಯಾಪಾರದ ಮಾರ್ಗಗಳು ಇತ್ಯಾದಿಗಳ ಬಗೆಗೆ ಮಹತ್ವ ಪೂರ್ಣವಾದ ಮಾಹಿತಿಯನ್ನು ದಾಖಲಿಸುತ್ತಾರೆ.

ಕೆ.ಜಿ.ವಸಂತ ಮಾಧವ ಅವರ **'ವೆಸ್ಟರ್ನ್ ಕರ್ನಾಟಕ ಇಟ್ಸ್ ಅಗ್ರೇರಿಯನ್ ರಿಲೇಷನ್ಸ್ ೧೫೦೦-೧೮೦೦'** ಇದು ನಂತರದ ಅವಧಿಯೊಂದಿಗೆ ವ್ಯವಹರಿಸುತ್ತದೆ ಇವರ ಮತ್ತೊಂದು ಕೃತಿ **'ರಿಲಿಜಿಯನ್ಸ್ ಇನ್ ಕೋಸ್ಟಲ್ ಕರ್ನಾಟಕ'** ಇವೆಲ್ಲಾ ಬಂದರು, ಸಾಗರೋತ್ತರ ವ್ಯಾಪಾರ ಮತ್ತು ಆರ್ಥಿಕತೆಯ ಬಗ್ಗೆ ಮಾಹಿತಿಯನ್ನು ದೊರಕಿಸಿಕೊಡುತ್ತವೆ.

ಬಿ.ಎಸ್.ಶಾಸ್ತ್ರೀ ಅವರ ಕರಾವಳಿ **'ಕರ್ನಾಟಕ ಮತ್ತು ಪೋರ್ಚುಗೀಸ್ ರಿಲೇಷನ್ಸ್ ೧೪೯೮-೧೭೬೩'** ಎಂಬ ಕೃತಿಯು ಈ ಅಧ್ಯಾಯನದಲ್ಲಿ ಮಹತ್ವ ಪೂರ್ಣ ದಾಖಲೆಯಾಗಿದೆ. ಇದು ಪೋರ್ಚುಗೀಸರ ಮಾಹಿತಿ ತಿಳಿಯಲು ಮೂಲ ದಾಖಲೆಯಾಗಿದೆ. ಇವರು ಕರಾವಳಿ ಅರಸರು ಮತ್ತು ಪೋರ್ಚುಗೀಸರೊಂದಿಗಿನ ಸಂಬಂಧದ ಬಗ್ಗೆ ವಿವರಿಸಿದ್ದಾರೆ. ಹೊನ್ನಾವರ, ಭಟ್ಕಳ, ಗಂಗೊಳ್ಳಿ ಬಸ್ರೂರಿನಲ್ಲಿ ಸ್ಥಳೀಯ ವ್ಯಾಪಾರಿ ಸಂಘಗಳ ವಿರೋಧವನ್ನು ಕಾಣಬಹುದು. ಇಲ್ಲಿ ಪೋರ್ಚುಗೀಸರು ಮತ್ತು ಕೆಳದಿ ಅರಸರ ಯುದ್ಧ ಒಪ್ಪಂದ ನೀತಿಯನ್ನು ತಿಳಿಸುತ್ತಾರೆ. ಇವೆಲ್ಲದರ ಮೂಲ ಕಾಳು ಮೆಣಸಿನ ವ್ಯಾಪಾರದ ಏಕಸ್ವಾಮ್ಯದ ಕುರಿತಾಗಿದೆ. ಜೊತೆಗೆ ಬಂದರುಗಳನ್ನು ತಮ್ಮ ನಿಯಂತ್ರಣಕ್ಕೆ ಪಡೆಯಲು ಯುದ್ಧಕ್ಕಿಳಿಯುತ್ತಿದ್ದರು.

ಸಂಜಯ್ ಸುಬ್ರಹ್ಮಣ್ಯಂ ಅವರ **'ದಿ ಪೊಲಿಟಿಕಲ್ ಎಕಾನಮಿ ಆಫ್ ಕಾಮರ್ಸ್ ಸದರನ್ ಇಂಡಿಯಾ ೧೫೦೦-೧೬೫೦'** ಕೃತಿಯು ಪ್ರಸ್ತುತ ಅಧ್ಯಯನಕ್ಕೆ ಪೂರಕವಾಗಿದೆ. ಕರಾವಳಿ

ಬಂದರುಗಳಲ್ಲಿ ಸ್ಥಳೀಯ ವ್ಯಾಪಾರಿಗಳಿಂದ ಮತ್ತು ಸ್ಥಳೀಯ ಜನರಿಂದ ಪೋರ್ಚುಗೀಸರಿಗೆ ಎದುರಾದ ವಿರೋಧಗಳನ್ನು ವಿಶ್ಲೇಷಿಸಿದ್ದಾರೆ. ಕರ್ನಾಟಕ ಕರಾವಳಿಯಲ್ಲಿ ಪೋರ್ಚುಗೀಸರ ಸಂಬಂಧವನ್ನು ಕುರಿತು ವಿಶ್ಲೇಷಿಸುತ್ತ ಬಂದರು ಪ್ರದೇಶಗಳಲ್ಲಿ ವರ್ತಕ ಸಮುದಾಯಗಳ ಮಧ್ಯೆ ನಡೆದ ವಾಣಿಜ್ಯದ ಹಿತಾಸಕ್ತಿಯ ವಿವರವನ್ನು ನೀಡಿದ್ದಾರೆ.

ಅವರ ಮತ್ತೊಂದು ಕೃತಿ **'ಮರ್ಚೆಂಟ್ಸ್, ಮಾರ್ಕೆಟ್ಸ್ ಆ್ಯಂಡ್ ದಿ ಸ್ಟೇಟ್ ಇನ್ ಆರ್ಲಿ ಮಾಡ್ರನ್ ಇಂಡಿಯಾ'** ಎಂಬ ಕೃತಿಯು ಒಂಭತ್ತು ಲೇಖನಗಳ ಸಂಗ್ರಹಣೆಯಾಗಿದೆ. ಪೋರ್ಚುಗೀಸರ ಹಾಗೂ ಈಸ್ಟ್ ಇಂಡಿಯಾ ಕಂಪನಿಗಳ ವ್ಯಾಪಾರ ನೀತಿ, ಹಾಗೂ ೧೭ನೇ ಶತಮಾನದ ಬಟ್ಟೆ ವ್ಯಾಪಾರವು ಕೋರಮಂಡಲ ತೀರದಲ್ಲಿ ಚುರುಕುಗೊಳ್ಳಲು ವರ್ತಕ ಸಮುದಾಯಗಳ ಪಾತ್ರ ೧೬೦೦-೧೭೫೦ರ ಕಾಲಘಟ್ಟವನ್ನು ಕೇಂದ್ರವಾಗಿರಿಸಿಕೊಂಡು ವ್ಯಾಪಾರ ವಾಣಿಜ್ಯ ಕಾರ್ಯಗಳು ಚುರುಕುಗೊಳ್ಳಲು ಸ್ಥಳೀಯ ಹಾಗೂ ವಿದೇಶಿಯ ವರ್ತಕ ಸಮುದಾಯಗಳು ಮತ್ತು ಕಂಪನಿಗಳ ಪಾತ್ರವನ್ನು ಸಮಗ್ರವಾಗಿ ಚರ್ಚಿಸಿದ್ದಾರೆ.

ಇವರ ಇನ್ನೊಂದು ಕೃತಿಯಾದ **ಇಂಪರ್‌ವೈಸಿಂಗ್ ಎಂಪೈರ್, ಪೋರ್ಚುಗೀಸ್ ಟ್ರೇಡ್ ಆ್ಯಂಡ್ ಸೆಟಲ್‌ಮೆಂಟ್ಸ್ ಇನ್ ದಿ ಬಾಯ್ ಆಫ್ ಬೆಂಗಾಳ-೧೫೦೦-೧೭೦೦** ಈ ಕೃತಿಯಲ್ಲಿ ಕೋರಮಂಡಲ ಕರಾವಳಿಯಲ್ಲಿ ೧೬ನೇ ಶತಮಾನದ ಅವರ ವ್ಯಾಪಾರ-ವಾಣಿಜ್ಯ ಕುರಿತು ವಿವರಿಸಿದ್ದಾರೆ. ಒಟ್ಟಾರೆ ಈ ಕೃತಿಯು ಕೋರಮಂಡಲ ಮತ್ತು ಮಾಲಕ್ಕಾವನ್ನು ಕೇಂದ್ರವಾಗಿಟ್ಟು ವ್ಯಾಪಾರ ನಡೆಸಿದ ವಿವರವನ್ನು ನೀಡಿದ್ದಾರೆ.

ಬಿ.ಆರ್.ಹಿರೇಮಠ ಅವರ ಕೃತಿ **'ಶಾಸನಗಳಲ್ಲಿ ಕರ್ನಾಟಕದ ವರ್ತಕರು'** ಕೃತಿಯು ಶಾಸನಗಳ ಮೂಲಕ ಸಿಕ್ಕ ಮಾಹಿತಿಯನ್ನು ಸಂಗ್ರಹಿಸಿ ವರ್ತಕ ಸಮುದಾಯಗಳು ಹಾಗೂ ಉತ್ಪಾದನಾ ವಿನಿಮಯ ವರ್ತಕ ಸಂಘಗಳ ಸಮೂಹ ರಚನೆ ಹಾಗೂ ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿಗೆ ಈ ಸಂಘಗಳ ಪಾತ್ರವನ್ನು ಕುರಿತು ಸಮಗ್ರವಾಗಿ ಚರ್ಚಿಸಿದ್ದಾರೆ. ಇದು ಮಧ್ಯಕಾಲೀನ ಚರಿತ್ರೆಯಲ್ಲಿ ಪ್ರತಿಯೊಬ್ಬ ಸಂಶೋಧಕನು ಗಮನಿಸಲೇಬೇಕಾದ ಕೃತಿಯಾಗಿದೆ.

ಮೀರಾ ಅಬ್ರಹಾಂ ಅವರ **'ಟು ಮಿಡಿವಲ್ ಮರ್ಚೆಂಟ್ಸ್, ಗಿಲ್ಡ್ಸ್ ಇನ್ ಸೌತ್ ಇಂಡಿಯಾ'** ಮತ್ತು ಇ ನಾಗೇಂದ್ರ ರಾವ್ ಲೇಖನಗಳು ಪ್ರಸ್ತುತ ಅಧ್ಯಯನದ ವಿಷಯಕ್ಕೆ ಕೆಲವು ಒಳನೋಟಗಳನ್ನು ನೀಡುತ್ತವೆ. ಇವುಗಳ ಆರ್ಥಿಕ ಸಿದ್ಧಾಂತಗಳ ಸಂರಚನೆ ಹಾಗೂ ಸಾಮಾಜಿಕ ವರ್ಗ ವ್ಯವಸ್ಥೆಯಿಂದಾಗಿ ರೂಪಗೊಂಡ ಬಗೆಗೆ ತಿಳಿಸುವ ಮೇರುಕೃತಿಗಳಾಗಿವೆ.

ಗುರುರಾಜಾಚಾರ್ಯ ಎಸ್. ಅವರು **'ಸಮ್ ಆಸ್ಪೆಕ್ಟ್ಸ್ ಆಫ್ ಎಕನಾಮಿಕ್ ಆ್ಯಂಡ್ ಸೋಶಿಯಲ್ ಲೈಫ್ ಇನ್ ಕರ್ನಾಟಕ'** ಎಂಬ ಕೃತಿಯು ಆರ್ಥಿಕ ವ್ಯವಸ್ಥೆಯನ್ನು ಕುರಿತು ಆರು ಅಧ್ಯಾಯಗಳಲ್ಲಿ ನಿರೂಪಿಸಿದ್ದಾರೆ. ಮೊದಲ ಅಧ್ಯಾಯದಲ್ಲಿ ಮೂಲಾಧಾರಗಳನ್ನು ಎರಡನೆಯ ಅಧ್ಯಾಯದಲ್ಲಿ ಭೂವಿಧಾನಗಳನ್ನು ಮೂರನೆಯ ಅಧ್ಯಾಯದಲ್ಲಿ ಕೃಷಿವ್ಯವಸ್ಥೆ, ನಾಲ್ಕನೆಯ ಅಧ್ಯಾಯದಲ್ಲಿ ಕೈಗಾರಿಕೆ ಬಗ್ಗೆ ವಿವರಿಸಿದ್ದಾರೆ. ಕರ್ನಾಟಕದ ಆಂತರಿಕ ಮತ್ತು ಬಾಹ್ಯ ವ್ಯಾಪಾರಕ್ಕೆ ಸಂಬಂಧಿಸಿದಂತೆ ಆಮದು, ರಫ್ತು, ಶ್ರೇಣಿಗಳು, ವ್ಯಾಪಾರಿ ಮಾರ್ಗಗಳು, ವ್ಯಾಪಾರದ ವಸ್ತುಗಳು, ವ್ಯಾಪಾರಿ ಕೇಂದ್ರಗಳು ಪ್ರಮುಖ ರೇವುಪಟ್ಟಣಗಳು ಮುಂತಾದ ಅಂಶಗಳ ಬಗ್ಗೆ ವಿವರಿಸಿದ್ದಾರೆ.

ಇವರ ಆರ್ಥಿಕ ವ್ಯವಸ್ಥೆಯ ಕೊನೆಯ ಅಧ್ಯಾಯದಲ್ಲಿ ಹಣಕಾಸಿನ ಮೂಲಗಳಾದ ವಿವಿಧ ಬಗೆಯ ತೆರಿಗೆಗಳು, ತೆರಿಗೆ ನಿಯಮಗಳು, ತೆರಿಗೆ ವಂಚಕರಿಗೆ ಶಿಕ್ಷೆ ಮುಂತಾದ ಅಂಶಗಳನ್ನು ವಿವರಿಸಿದ್ದಾರೆ. ಅವರೆ ತಮ್ಮ ಕೃತಿಯಲ್ಲಿ ತೆರಿಗೆಗಳ ಬಗ್ಗೆ ಶಾಸನಗಳಲ್ಲಿ ಸಾಕಷ್ಟು ಮಾಹಿತಿ ಲಭ್ಯವಾಗಿದ್ದರೂ ಅವುಗಳಲ್ಲಿ ಬಳಸಲಾಗಿರುವ ಪದಗಳನ್ನು ಗ್ರಹಿಸಿಕೊಳ್ಳುವುದು ಕಷ್ಟಕರವಾದದ್ದು. ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಈ ಕೃತಿಯು ಪ್ರಸ್ತುತ. ಸಂಶೋಧನೆಯ ಆರ್ಥಿಕ ಪರಿಮಿತಿಯಲ್ಲಿ ಸಂದರ್ಭಕ್ಕೆ ಅನುಸಾರವಾಗಿ ವಿಜಯನಗರೋತ್ತರ ಕಾಲದ ಆರ್ಥಿಕ ಪಲ್ಲಟಗಳಿಗೆ ಬಳಸಿಕೊಳ್ಳಲಾಗಿದೆ.

ಭಾರತದ ಚರಿತ್ರೆಯಲ್ಲಿ ಹೊಸ ಶೈಲಿಯಲ್ಲಿ ಚರಿತ್ರೆಯನ್ನು ನಿರೂಪಿಸುವ ಮೇರು ಕೃತಿಗಳ ಪಟ್ಟಿಯಲ್ಲಿ ಕಂಡುಬರುವ ಕೃತಿ ಎಂದರೆ **'ಮೇಕಿಂಗ್ ಹಿಸ್ಟರಿ'- ಹಿಸ್ಟರಿ ಕರ್ನಾಟಕಾಸ್ ಪೀಪಲ್ಸ್ ಆ್ಯಂಡ್ ದೇರ್ ಪಾಸ್ಟ್** ಈ ಕೃತಿಯು ಎರಡು ಸಂಪುಟಗಳಲ್ಲಿ ೧೯೯೮ರಲ್ಲಿ ಪ್ರಕಟಿಸಿದ ಕೀರ್ತಿ ಸಾಕೇತ್ ರಾಜನ್ (ಸಾಕಿ) ಅವರಿಗೆ ಸಲ್ಲುತ್ತದೆ. ಸಮಗ್ರ ಪ್ರಾಚೀನ ಮತ್ತು ಮಧ್ಯಕಾಲೀನ ಚರಿತ್ರೆಯನ್ನು ಒಳಗೊಂಡಿದೆ. ೧೮೦೦-೧೮೫೭ರವರೆಗೆ ಒಳಗೊಂಡ ಉಳಿಗಮಾನ್ಯ ವ್ಯವಸ್ಥೆ ಹಾಗೂ ಕಂಪನಿ ಆಡಳಿತಕ್ಕೆ ಸ್ಥಳೀಯ ಪ್ರಭುತ್ವಗಳು ಒಳಗಾದ ಬಗೆಯನ್ನು ಸಮಗ್ರವಾಗಿ ವಿವರಿಸಿದ್ದಾರೆ. ಮೊದಲ ಸಂಪುಟವು ಎಂಟು ಅಧ್ಯಾಯಗಳನ್ನು ಒಳಗೊಂಡಿದ್ದು, ಪ್ರಾಚೀನ ಕಾಲದಲ್ಲಿ ರಚನೆಯಾಗಿದ್ದ ವ್ಯಾಪಾರ ಮಾರ್ಗಗಳು ಹಾಗೂ ಗುಲಾಮಗಿರಿ, ಪೋರ್ಚುಗೀಸರು ಕರಾವಳಿ ತೀರದಲ್ಲಿ ತಮ್ಮ ಆಧಿಪತ್ಯವನ್ನು ವಿಸ್ತರಿಸಿದ ಚಾರಿತ್ರಿಕ ಅಂಶಗಳನ್ನು ವಿವರಿಸುತ್ತಾ ಸ್ಥಳೀಯ ಕನ್ನಡ ಪ್ರದೇಶಗಳಲ್ಲಿ ರಚನೆಗೊಂಡ ಮಾರುಕಟ್ಟೆ ವಿಸ್ತರಣಾ ಸಿದ್ಧಾಂತಗಳನ್ನು ವಿವರಿಸಲಾಗಿದೆ. ಎರಡನೆ ಸಂಪುಟವು ವಸಾಹತು ಕಾಲಘಟ್ಟವನ್ನು ಕುರಿತ ಮಾಹಿತಿಯನ್ನು ಒದಗಿಸುತ್ತದೆ. ಮಧ್ಯಕಾಲೀನ ಆರ್ಥಿಕ ಅಭಿವೃದ್ಧಿಗೆ ಪೂರಕವಾದ ಕೃಷಿ ಹಾಗೂ ಕೈಗಾರಿಕಾ ವಲಯವನ್ನು ತಳಸ್ಪರ್ಶಿಯಾಗಿ ಪರಿಚಯಿಸುವ ಕಾರ್ಯವನ್ನು ಈ ಎರಡು ಸಂಪುಟಗಳಲ್ಲಿ ವಿವರಿಸಲಾಗಿದೆ.

ಕ್ರಿ.ಶ.೧೮೦೦ರ ಕಾಲಘಟ್ಟದ ಸಾಮಾಜಿಕ ಮತ್ತು ಆರ್ಥಿಕ ಚರಿತ್ರೆಯನ್ನು ಬರೆಯಲು ಆಧಾರವಾಗಿ ದೊರೆಯಬಹುದಾದ ಕೃತಿ ಎಂದರೆ ಫ್ರಾನ್ಸಿಸ್ ಬುಕಾನನ್ ಅವರ **'ಎ ಜರ್ನಿ ಫ್ರಮ್ ಮದ್ರಾಸ್ ಥ್ರೂ ದಿ ಕಂಟ್ರಿಸ್ ಆಫ್ ಮೈಸೂರ್, ಕೆನರಾ ಆ್ಯಂಡ್ ಮಲಬಾರ್'** ಎಂಬ ೩ ಸಂಪುಟಗಳಲ್ಲಿ ಕರ್ನಾಟಕ ಚರಿತ್ರೆಯನ್ನು ಒಳಗೊಂಡಿದೆ. ಕರ್ನಾಟಕದ ಬುಡಕಟ್ಟು ಜನಾಂಗಗಳ ಹಾಗೂ ಶ್ರೀಮಂತ ವರ್ತಕ ಸಮುದಾಯಗಳನ್ನು ವ್ಯಾಪಾರದ ಕೇಂದ್ರ ಹಾಗೂ ವ್ಯಾಪಾರಿ ಮಾರ್ಗಗಳನ್ನು ಗುರುತಿಸಿದ್ದಾರೆ. ಭೌಗೋಳಿಕವಾಗಿ ವಿಭಿನ್ನ ಲಕ್ಷಣಗಳಲ್ಲಿ ಸುತ್ತಾಡಿ ಮಾಡಿದ ವರದಿಯಂತೆ ಇದ್ದ ಈ ಕೃತಿಯು ಅಲ್ಲಿಯ ಕೃಷಿ ಹಾಗೂ ವ್ಯಾಪಾರಕ್ಕೆ ಪೂರಕವಾದ ಮಾರುಕಟ್ಟೆ ವ್ಯವಸ್ಥೆಯ ಬಗ್ಗೆ ಉತ್ಪಾದನೆಯಲ್ಲಿ ನಿರತವಾಗಿದ್ದ ಜಾತಿವಾರು ಸಮುದಾಯಗಳನ್ನು ವಿವರಿಸಿದ್ದಾರೆ. ಆದಾಯದ ಮೂಲ ಹೆಚ್ಚಳಕ್ಕೆ ಕಾರಣವಾಗಿದ್ದ ಕೈಗಾರಿಕೆಗಳ ಸ್ವರೂಪ ಕುರಿತು ವಿವರಿಸಿದ ಪ್ರಮುಖ ಕೃತಿ ಇದಾಗಿದೆ. ಇಲ್ಲಿ ಕರ್ನಾಟಕ ವಸಾಹತು ಆದ ಸಂದರ್ಭದ ಮಾಹಿತಿಯನ್ನು ನೀಡಲು ಉಪಯುಕ್ತ ಕೃತಿಯಾಗಿದೆ.

ವಿಜಯನಗರೋತ್ತರ ಕಾಲಘಟ್ಟದ ವ್ಯಾಪಾರ-ವಾಣಿಜ್ಯ ಕುರಿತಂತೆ ಹಲವಾರು ಪಿಎಚ್.ಡಿ ಪ್ರಬಂಧಗಳು ಬಂದಿವೆ. ಕೃಷ್ಣಪ್ಪ ಕೊಂಚಾಡಿ ಅವರು **ಕರಾವಳಿ ಕರ್ನಾಟಕದಲ್ಲಿ ವಾಣಿಜ್ಯೋದ್ಯಮ ಮತ್ತು ಸಂಘರ್ಷ** ಎಂಬ ಮಹಾಪ್ರಬಂಧದಲ್ಲಿ ಏಳು ಅಧ್ಯಾಯಗಳಲ್ಲಿ ವಿವರಿಸಿದ್ದಾರೆ. ಆರಂಭದಲ್ಲಿ ಕರ್ನಾಟಕ ಮತ್ತು ಮೆಡಿಟರೇನಿಯನ್ ದೇಶಗಳ ನಡುವಿನ ಸಂಬಂಧದಿಂದ ವಸಾಹತು ಕರ್ನಾಟಕದ ದುಡಿಯುವ ವರ್ಗಗಳವರೆಗೂ ವಿವರಿಸಲಾಗಿದೆ. ಪೋರ್ಚುಗೀಸರು ಮತ್ತು ಇಂಗ್ಲಿಶರು ಕರಾವಳಿ ವ್ಯಾಪಾರದಲ್ಲಿ ಸ್ಥಳೀಯ ಜನರನ್ನು ಪ್ರತಿರೋಧಿಸುತ್ತ ಹಲವಾರು ಬಂದರು ಪಟ್ಟಣಗಳನ್ನು ನಾಶಗೊಳಿಸಿ ವ್ಯಾಪಾರದಲ್ಲಿ ಏಕಸ್ವಾಮ್ಯ ಹೊಂದಿದ ವಿವಿಧ ಹಂತಗಳನ್ನು ಕುರಿತು ವಿವರಿಸಿದ್ದಾರೆ. ಟಿಪ್ಪು ಹೈದರ್ ಕರಾವಳಿ ಕರ್ನಾಟಕವನ್ನು ವಶಪಡಿಸಿಕೊಂಡು ಗನ್‌ಪಾರ್ ಪೇಪ್ಪರ್ ನಿಯಮ ರೂಪಿಸಿದ ಬಗೆಯನ್ನು ಕುರಿತು ವಿವರಿಸಿದ್ದಾರೆ.

ಮಹಾದೇವಮ್ಮ ಪಿ. ಅವರು ತಮ್ಮ **ಮೈಸೂರು ರಾಜ್ಯದ ವ್ಯಾಪಾರ ಮತ್ತು ವಾಣಿಜ್ಯದ ಅಭಿವೃದ್ಧಿಗೆ ಹೈದರ್ ಆಲಿ ಮತ್ತು ಟಿಪ್ಪು ಸುಲ್ತಾನರ ಕೊಡುಗೆ** ಎಂಬ ಮಹಾಪ್ರಬಂಧದಲ್ಲಿ ಎಂಟು ಅಧ್ಯಾಯಗಳಾಗಿ ವಿಂಗಡಿಸಿದ್ದಾರೆ. ಮೈಸೂರು ರಾಜ್ಯದ ಆರ್ಥಿಕ ಉತ್ಪಾದನೆಗಳು ಕೃಷಿ ಆಧಾರಿತ ಕೈಗಾರಿಕೆಗಳು ಹೇಗೆ ಪೂರಕವಾಗಿವೆ ಎಂಬುದನ್ನು ವಿವರಿಸುತ್ತಾ ಅಂದಿನ ವ್ಯಾಪಾರಿ ಮಾರ್ಗಗಳು, ಪಟ್ಟಣಗಳು ವ್ಯಾಪಾರ ಕುರಿತ ಹೈದರ್ ಟಿಪ್ಪುಸುಲ್ತಾನನ ಧೋರಣೆಗಳನ್ನು ಕುರಿತು ವಿವರಿಸಿದ್ದಾರೆ. ಈ ಕಾಲಘಟ್ಟವು ಬಂಡವಾಳಕೇಂದ್ರಿತ ಅರ್ಥವ್ಯವಸ್ಥೆಯ ಉಗಮದ ಕಾಲವೆಂದು ವಿವರಿಸಿದ್ದಾರೆ.

ಅರುಣ್ ಎಚ್.ಟಿ ಅವರ **ಕೆಳದಿ ನಾಯಕರ ಕಾಲದ ತೆರಿಗೆ ಪದ್ಧತಿ** ಎಂಬ ಮಹಾ ಪ್ರಬಂಧದಲ್ಲಿ ಆರು ಆಧ್ಯಾಯಗಳಿವೆ. ಪ್ರತಿಯೊಂದು ಅಧ್ಯಾಯವು ಅಧ್ಯಯನಕ್ಕೆ ಪೂರಕ ಮಾಹಿತಿಯನ್ನು ನೀಡುತ್ತದೆ. ಭೂಕಂದಾಯದ ವಿಧಗಳು, ಭೂಕಂದಾಯವನ್ನು ಸಂಗ್ರಹಿಸುವ ವಿಧಾನಗಳನ್ನು ಕುರಿತು ವಿವರಿಸಿದ್ದಾರೆ. ಕೃಷಿ ಮೂಲದ ತೆರಿಗೆಗಳು ಕೃಷಿಯೇತರತೆರಿಗೆಗಳು, ಕೆಳದಿ ನಾಯಕರು ಯುರೋಪಿಯನ್ನರೊಂದಿಗೆ ಹೊಂದಿದ ಸಂಬಂಧವನ್ನು ಕುರಿತು ಈ ಪ್ರಬಂಧದಲ್ಲಿದೆ. ಒಟ್ಟಾರೆವಿಜಯನಗರೋತ್ತರ ಕಾಲದ ತೆರಿಗೆಯ ಸ್ವರೂಪವನ್ನು ತಿಳಿಯಲು ಈ ಪ್ರಬಂಧವು ಉಪಯುಕ್ತವಾಗಿದೆ.ವಿಜಯನಗರೋತ್ತರ ಕಾಲದ ಆರ್ಥಿಕತೆ ಮತ್ತು ವಾಣಿಜ್ಯವನ್ನು ಕುರಿತಂತೆ ಹಲವಾರು ಕೃತಿಗಳು ಪ್ರಕಟವಾಗಿವೆ. ಆ ಎಲ್ಲ ಕೃತಿಗಳನ್ನು ಅಧ್ಯಯನದಲ್ಲಿ ಬಳಸಿಕೊಂಡು ವಿಜಯನಗರೋತ್ತರ ಕಾಲದ ಆರ್ಥಿಕತೆ ಮತ್ತು ವಾಣಿಜ್ಯವನ್ನು ಕುರಿತ ಮಾಹಿತಿಯನ್ನು ಬೆಳಕಿಗೆ ತರುವ ಪ್ರಯತ್ನ ಮಾಡಲಾಗಿದೆ.

**೧.೫. ಅಧ್ಯಯನದ ಸ್ವರೂಪ**

ಪ್ರಸ್ತುತ ಅಧ್ಯಯನದ ಸ್ವರೂಪವು ವಿಜಯನಗರೋತ್ತರ ಕಾಲದ ಆರ್ಥಿಕತೆ ಮತ್ತು ವಾಣಿಜ್ಯ ಚಾರಿತ್ರಿಕ ಅಧ್ಯಯನ ಎಂಬ ವಿಷಯವನ್ನು ಕುರಿತದ್ದಾಗಿದೆ. ವಿಜಯನಗರೋತ್ತರ ಕಾಲದ ದಕ್ಷಿಣ ಭಾರತದ ಆರ್ಥಿಕತೆಯು ಹೇಗೆ ಗುರುತಿಸಿಕೊಂಡಿದೆ ಎಂದು ತಿಳಿಯುವ ಸ್ವರೂಪದ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವನ್ನು ಏಳು ಅಧ್ಯಾಯಗಳನ್ನಾಗಿ ವಿಂಗಡಿಸಿಕೊಳ್ಳಲಾಗಿದೆ. ಮೊದಲನೆಯ ಅಧ್ಯಾಯವು ವಿಷಯಕ್ಕೆ ಪೂರಕವಾದ ಪ್ರಸ್ತಾವನೆಯ ಅಧ್ಯಾಯವಾಗಿದ್ದು ಇದರಲ್ಲಿ ಅಧ್ಯಯನದ ಉದ್ದೇಶಗಳು,

ಅಧ್ಯಯನದ ವಿಧಾನ, ಅಧ್ಯಯನಗಳ ಸಮೀಕ್ಷೆ ಮತ್ತು ಸ್ವರೂಪವನ್ನು ಕುರಿತಂತೆ ವಿವರಿಸಲಾಗಿದೆ. ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಪೂರಕ ಮಾಹಿತಿಯನ್ನು ತಿಳಿಸುವ ಅಧ್ಯಾಯವಾಗಿದೆ.

ಎರಡನೆಯ ಅಧ್ಯಾಯವು ರಾಜಕೀಯ ಸ್ಥಿತ್ಯಂತರಗಳನ್ನು ಕುರಿತಾದ ಅಧ್ಯಾಯವಾಗಿದೆ. ೧೫೬೫ರ ನಂತರ ದಕ್ಷಿಣ ಭಾರತದ ಚರಿತ್ರೆಯಲ್ಲಿ ಪ್ರಸ್ತುತ ಕರ್ನಾಟಕದ ಗಡಿಯ ಹಿನ್ನಲೆಯಲ್ಲಿ ವಿಜಯನಗರದ ಸಾಮಂತ ಪ್ರಭುತ್ವಗಳು ಅಮರ ಮಾಗಣಿಯನ್ನು ಪಡೆದು ವಿಜಯನಗರೋತ್ತರ ಕಾಲದಲ್ಲಿ ಆರ್ಥಿಕತೆ ಮತ್ತು ರಾಜಕೀಯದಲ್ಲಿ ಹೇಗೆ ಪ್ರತಿಬಿಂಬಿತವಾಗಿದ್ದಾರೆ. ಕೃಷಿಯ ವಿಸ್ತರಣೆಯನ್ನು ಕೈಗೊಳ್ಳುತ್ತ ಸಂಸ್ಥಾನದ ಸುಭದ್ರತೆಗೆ ಹೇಗೆ ಆರ್ಥಿಕತೆಯನ್ನು ರೂಪಿಸಿದರು. ಭೂಹಿಡುವಳಿದಾರರಾಗಿ ಗುರುತಿಸಿಕೊಂಡು ನಂತರ ಆರ್ಥಿಕ ಸ್ವರೂಪದಲ್ಲಿ ಬದಲಾಣೆಯೊಂದಿಗೆ ರಾಜಕೀಯವಾಗಿ ತಮ್ಮ ಸ್ಥಾನವನ್ನು ಹೇಗೆ ಗುರುತಿಸಿಕೊಂಡಿದ್ದಾರೆ ಎಂಬುದನ್ನು ವಿಶ್ಲೇಷಿಸಲಾಗಿದೆ.

ಮೂರನೆಯ ಅಧ್ಯಾಯವು ವಿಜಯನಗರಪೂರ್ವ ಮತ್ತು ವಿಜಯನಗರ ಕಾಲದ ಆರ್ಥಿಕತೆ ಹಾಗೂ ವ್ಯಾಪಾರ ವಾಣಿಜ್ಯವನ್ನು ಕುರಿತಂತೆ ವಿವರಿಸಲಾಗಿದೆ. ಇಲ್ಲಿ ಪ್ರಮುಖವಾಗಿ ಪ್ರಾಗೈತಿಹಾಸಿಕ ಕಾಲದಿಂದಲೂ ಕರ್ನಾಟಕದ ಆರ್ಥಿಕತೆಯ ಉಗಮ ಮತ್ತು ವಿಕಾಸದ ಬಗ್ಗೆ ಗುರುತಿಸುವ ಪ್ರಯತ್ನವಾಗಿದೆ. ಪ್ರಾಗೈತಿಹಾಸಿಕ ಕಾಲದಿಂದ ಹೊಯ್ಸಳರ ಆಳ್ವಿಕೆಯವರೆಗಿನ ಆರ್ಥಿಕತೆಯು ವಿವಿಧ ಹಂತಗಳಲ್ಲಿ ಪ್ರಭುತ್ವಕೇಂದ್ರಿತ ಅಧ್ಯಯನಗಳಲ್ಲಿ ಹೇಗೆ ಗುರುತಿಸಿಕೊಂಡಿದೆ ಎಂಬುದನ್ನು ವಿಶ್ಲೇಷಿಸಲಾಗಿದೆ. ಹೊಯ್ಸಳರ ಆಳ್ವಿಕೆಯ ವೇಳೆಗೆ ಕರ್ನಾಟಕದಲ್ಲಿ ಜೈನ ಮತ್ತು ಮಲೆಯಾಳಿ ವರ್ತಕ ಸಮುದಾಯಗಳು ಪ್ರಮುಖವಾಗಿ ಗುರುತಿಸಿಕೊಂಡಿದ್ದು, ಈ ಕಾಲಘಟ್ಟವು ನಗರಕೇಂದ್ರಗಳ ಬೆಳವಣಿಗೆಯು ಒಂದು ಪ್ರಮುಖ ಹಂತವೆಂಬ ವಿಚಾರವನ್ನು ಕುರಿತು ಚರ್ಚಿಸಲಾಗಿದೆ. ವಿಜಯನಗರ ಕಾಲದ ಆರ್ಥಿಕತೆ ಎನ್ನುವ ಇನ್ನೊಂದು ಉಪವಿಭಾಗದಲ್ಲಿ ದಕ್ಷಿಣ ಭಾರತದ ಇತಿಹಾಸದಲ್ಲಿ ಗುರುತಿಸಿಕೊಂಡ ಆರ್ಥಿಕತೆಯ ಸ್ವರೂಪವನ್ನು ಹಂಪಿಯನ್ನು ಕೇಂದ್ರವನ್ನಾಗಿ ಆಳ್ವಿಕೆ ಮಾಡಿದ ವಿಜಯನಗರ ಕಾಲದ ಅರಸರು ಅಂದಿನ ಕೃಷಿ, ವ್ಯಾಪಾರ–ವಾಣಿಜ್ಯಕ್ಕೆ ಹೇಗೆ ಪ್ರೋತ್ಸಾಹವನ್ನು ನೀಡಿದರು ಎಂಬುದನ್ನು ಕುರಿತು ಚರ್ಚಿಸಲಾಗಿದೆ. ಯುರೋಪಿಯನ್ನರು ಕರ್ನಾಟಕದ ಕರಾವಳಿಯಲ್ಲಿ ತಮ್ಮ ಅಸ್ತಿತ್ವ ಕಂಡುಕೊಳ್ಳಲು ಮತ್ತು ಪೋರ್ಚುಗೀಸರ ವ್ಯಾಪಾರ ವಾಣಿಜ್ಯದ ವೃದ್ಧಿಗೆ ವಿಜಯನಗರದ ಜೊತೆ ಸಂಬಂಧ ಹೊಂದಿರುವುದೇ ಮುಖ್ಯ ಕಾರಣವಾಗಿದೆ. ವಿಜಯನಗರದ ವ್ಯಾಪಾರವು ೧೫೯೦ರವರೆಗೂ ಮಲಬಾರ್ ಕರಾವಳಿಯಲ್ಲಿ ತಮಿಳು ನಾಯಕಮನೆತನಗಳಾದ ಜಿಂಜಿ, ಮಧುರೈ, ತಂಜಾವೂರು ಮೊದಲಾದ ಸಂಸ್ಥಾನಗಳ ಜೊತೆ ದೇವಪಟ್ಟಣದಿಂದ ಪೋರ್ಚುಗೀಸರು ಮತ್ತು ಡಚ್ಚರೊಂದಿಗೆ ಮಾಡಿಕೊಂಡ ಒಪ್ಪಂದಗಳಲ್ಲಿ ನಾವು ವಿಜಯನಗರದ ಸಾಮಂತಾಧಿಕಾರಿಗಳು ಎಂದು ಉಲ್ಲೇಖಿಸಿರುವುದು ಕಂಡುಬರುತ್ತದೆ. ೧೫೬೫ರ ನಂತರ ವಿಜಯನಗರ ಕೇಂದ್ರದಿಂದ ಮಾರುಕಟ್ಟೆ ಕೇಂದ್ರಿತವ್ಯಾಪಾರ ಕ್ಷೀಣಿಸಿದ್ದು ಸಂಜಯ್ ಸುಬ್ರಮಣ್ಯಂ ಅವರ ಕೃತಿಯಲ್ಲಿ ವಿಜಯನಗರದೊಂದಿಗೆ ಹೊಂದಿದ ಭಟ್ಕಳದ ಮೂಲಕ ಇರುವ ರಸ್ತೆ ಮಾರ್ಗ ವಿಜಯನಗರೋತ್ತರ ಕಾಲದಲ್ಲಿ ಬದಲಾಯಿತ್ತೆಂದು ತಿಳಿಸಿದ್ದಾರೆ.

ನಾಲ್ಕನೆಯ ಅಧ್ಯಾಯವು ವಿಜಯನಗರೋತ್ತರ ಕಾಲದ ಆರ್ಥಿಕತೆಯ ವಿವಿಧ ಸ್ವರೂಪಗಳನ್ನು ಕುರಿತಂತೆ ವಿವರಿಸಲಾಗಿದೆ. ಈ ಕಾಲಘಟ್ಟವು ಪ್ರಮುಖವಾಗಿ ಕೃಷಿಯ ವಿಸ್ತರಣೆಯ ಕಾಲಘಟ್ಟವೆಂದು ಪರಿಗಣಿಸಲಾಗಿದೆ. ಪೋರ್ಚುಗೀಸರು ಪರಿಚಯಿಸಿದ ವಾಣಿಜ್ಯ ಬೆಳೆಗಳ ಮೂಲಕ ಕೃಷಿಗೆ ಪೂರಕ ಭೂಮಾಲೀಕ ಮತ್ತು ಕೃಷಿಕರ ಸಂಬಂಧಗಳು ಈ ಕಾಲಘಟ್ಟದಲ್ಲಿ ಹೇಗೆ ಗುರುತಿಸಿಕೊಂಡಿವೆ ಎಂದು ವಿವರಿಸಲಾಗಿದೆ. ಬಯಲು ಸೀಮೆಯಲ್ಲಿ ಕೆರೆ ಬಾವಿಗಳ ನಿರ್ಮಾಣದ ಮೂಲಕ ನೀರಾವರಿಗೆ ಅಲ್ಲಿನ ಪ್ರಭುತ್ವಗಳು ಅವಕಾಶ ನೀಡುತ್ತಿದ್ದವು. ಈ ಕಾಲಘಟ್ಟದ ಆರ್ಥಿಕತೆಯಲ್ಲಿ ಬ್ರಹ್ಮದೇಯ ಮತ್ತು ದೇವದೇಯಗಳು ಮಠಗಳು ಹೇಗೆ ಗುರುತಿಸಿಕೊಂಡವೆಂಬ ವಿಚಾರವನ್ನು ಕುರಿತು ಚರ್ಚಿಸಲಾಗಿದೆ. ವಿಜಯನಗರ ಕಾಲದ ತೆರಿಗೆಯ ಸ್ವರೂಪವು ವಿಜಯನಗರೋತ್ತರ ಕಾಲದಲ್ಲಿ ಹೇಗೆ ಬದಲಾಯಿತೆಂದು ತಿಳಿಸಲಾಗಿದೆ. ಶಿವಪ್ಪನಾಯಕ ಜಾರಿಗೆ ತಂದ ಕಂದಾಯದ ಸ್ವರೂಪ ಮೊದಲಾದ ವಿಷಯಗಳನ್ನು ಕುರಿತು ಚರ್ಚಿಸಲಾಗಿದೆ. ಟಿಪ್ಪು ರೂಪಿದ ಕೃಷಿನೀತಿಯನ್ನು ಕುರಿತಂತೆ ವಿವರಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ವಿಜಯನಗರೋತ್ತರ ಕಾಲದ ವ್ಯಾಪಾರ-ವಾಣಿಜ್ಯವನ್ನು ಕುರಿತಂತೆ ವಿಶ್ಲೇಷಿಸಲಾಗಿದೆ. ಸಂತೆ ಮತ್ತು ಮಾರುಕಟ್ಟೆಗಳು ವ್ಯಾಪಾರ ವಾಣಿಜ್ಯದಲ್ಲಿ ಹೇಗೆ ಗುರುತಿಸಿಕೊಂಡಿವೆ. ಅವುಗಳ ನಿರ್ವಹಣೆಗೆ ಪ್ರಭುತ್ವಗಳು ನಿರ್ವಹಿಸುವ ಕಾರ್ಯ ಯಾವುದು ಮೊದಲಾದ ಅಂಶಗಳನ್ನು ಕುರಿತು ವಿವರಿಸಲಾಗಿದೆ. ವರ್ತಕರು ಈ ಕಾಲಘಟ್ಟದಲ್ಲಿ ಪ್ರಮುಖರಾಗಿದ್ದು, ವರ್ತಕರ ಅಭಿವೃದ್ಧಿಯ ಮೂಲಕ ಪ್ರಭುತ್ವದ ಅಸ್ತಿತ್ವ ಸಾಧ್ಯ ಎಂದು ತಿಳಿದ ಚಿಕ್ಕದೇವರಾಜ ಒಡೆಯರು ವ್ಯಾಪಾರ ವಾಣಿಜ್ಯದಲ್ಲಿ ರೂಪಿಸಿದ ನೀತಿಯನ್ನು ಕುರಿತಂತೆ ವಿವರಿಸಲಾಗಿದೆ. ಈ ಕಾಲಘಟ್ಟದಲ್ಲಿ ಸ್ಥಳೀಯ ವ್ಯಾಪಾರವು ತನ್ನ ಮಾರುಕಟ್ಟೆಕೇಂದ್ರಿತ ಸ್ವರೂಪ ಪಡೆದರೆ ಭಾರತದ ಕರಾವಳಿಯು ವಿದೇಶಿಯ ವ್ಯಾಪಾರದಲ್ಲಿ ಗುರುತಿಸಿಕೊಂಡಿದೆ. ಭಾರತವು ಕೃಷಿಯ ವಾಣಿಜ್ಯೀಕರಣದಿಂದಾಗಿ ವಿಶ್ವ ಮಾರುಕಟ್ಟೆಗೆ ಪರಿಚಿತವಾದ ಕಾಲವೆಂದು ಪರಿಗಣಿಸಲಾಗಿದೆ. ಪೋರ್ಚುಗೀಸರು, ಡಚ್ಚರು, ಇಂಗ್ಲಿಶರು ಮತ್ತು ಫ್ರೆಂಚರು ಕರ್ನಾಟಕದ ಕರಾವಳಿಯಲ್ಲಿ ವಿದೇಶಿಯ ವ್ಯಾಪಾರದಲ್ಲಿ ಅಕ್ಕಿ, ಕರಿಮೆಣಸು, ಸಂಬಾರ ಪದಾರ್ಥಗಳು, ಹತ್ತಿ, ಅರಣ್ಯ ಉತ್ಪನ್ನಗಳು ಮೊದಲಾದದವುಗಳು ವ್ಯಾಪಾರದಲ್ಲಿ ಹೇಗೆ ಗುರುತಿಸಿಕೊಂಡವು ಎಂದು ವಿಶ್ಲೇಷಿಸಲಾಗಿದೆ. ವ್ಯಾಪಾರದ ಹಿನ್ನೆಲೆಯಿಂದ ಬಂದ ಯುರೋಪಿಯನ್ನರು ಕರಾವಳಿ ಕರ್ನಾಟುಕದ ಸ್ಥಳೀಯ ಸಂಸ್ಥಾನಗಳ ರಾಜಕೀಯ ಅತಂತ್ರವನ್ನು ಬಳಸಿಕೊಂಡು ವ್ಯಾಪಾರದಲ್ಲಿ ನೆಲೆ ಕಂಡುಕೊಂಡರು. ವ್ಯಾಪಾರದಲ್ಲಿ ಇದುವರೆಗೂ ಗುರುತಿಸಿಕೊಂಡ ಅರಬ್ ಪರ್ಷಿಯನ್ನರು ವ್ಯಾಪಾರಿ ಸಮುದಾಯಗಳು ಹೇಗೆ ಸ್ಥಿತ್ಯಂತರಗೊಂಡವು ಎಂದು ವಿವರಿಸಲಾಗಿದೆ. ಕರ್ನಾಟಕದ ವ್ಯಾಪಾರದ ಬದಲಾವಣೆಯ ಸ್ವರೂಪದ ಪರಿಣಾಮವಾಗಿ ಅಂತರರಾಜ್ಯ ವರ್ತಕ ಸಮುದಾಯಗಳು ಹೇಗೆ ಗುರುತಿಸಿಕೊಂಡಿವೆ ಎಂದು ಚರ್ಚಿಸಲಾಗಿದೆ. ಮುಸ್ಲಿಂ ವ್ಯಾಪಾರಿ ಸಮುದಾಯಗಳು ವಿದೇಶಿಯ ವ್ಯಾಪಾರದಲ್ಲಿ ತಮ್ಮ ಸ್ಥಿರತೆ ಕಳೆದುಕೊಳ್ಳುವ ಪರಿ ಮೊದಲಾದ ಅಂಶಗಳನ್ನು ಕುರಿತಂತೆ ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಸಾರಿಗೆ ಸಂಪರ್ಕಗಳು ಅಂದಿನ ವ್ಯಾಪಾರದ ಅಭಿವೃದ್ಧಿಗೆ ಪೂರಕವಾಗಿವೆ ಎಂಬುದನ್ನು ಚರ್ಚಿಸಲಾಗಿದೆ. ಆರ್ಥಿಕತೆಯ ಪ್ರಮುಖ ಅಂಗಗಳಾದ ತೂಕ ಮತ್ತು ಅಳತೆಗಳ ವಿಧಾನವನ್ನು ಕುರಿತಂತೆ ವಿವರಿಸಲಾಗಿದೆ. ತೂಕ ಮತ್ತು

ಅಳತೆಗಳು ಪ್ರಾದೇಶಿಕ ವೈವಿಧ್ಯತೆಯಿಂದ ಕೂಡಿದ್ದು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಹೇಗೆ ಭಿನ್ನವಾಗಿವೆ ಎಂಬುದನ್ನು ಕುರಿತು ವಿಶ್ಲೇಷಿಸಲಾಗಿದೆ. ನಾಣ್ಯಗಳು ಅಂದಿನ ಪ್ರಭುತ್ವದ ಆರ್ಥಿಕತೆಯನ್ನು ತಿಳಿಸುತ್ತವೆ ಎಂಬ ವಿಷಯವನ್ನು ವಿವರಿಸಲಾಗಿದೆ.

ಆರನೆಯ ಅಧ್ಯಾಯದಲ್ಲಿ ವಿಜಯನಗರೋತ್ತರ ಕಾಲದ ಸ್ಥಳೀಯ ನಾಯಕರು ಮತ್ತು ಯುರೋಪಿಯನ್ ಕಂಪನಿಯೊಂದಿಗಿನ ಆರ್ಥಿಕ ಸಂಬಂಧಗಳನ್ನು ಕುರಿತಂತೆ ಚರ್ಚಿಸಲಾಗಿದೆ. ಈ ಕಾಲಘಟ್ಟದಲ್ಲಿ ಬಂಡವಾಳಶಾಹಿಯು ಸಾಮ್ರಾಜ್ಯಶಾಹಿ ಪರಿಕಲ್ಪನೆಯ ಮೂಲಕ ಸ್ಥಳೀಯ ಸಂಸ್ಥಾನಗಳ ಸಂಘರ್ಷದ ಕಾಲವಾಗಿದೆ. ಈ ಕಾಲದಲ್ಲಿ ಭಾಷೆ, ಸಂಸ್ಕೃತಿ, ತಿಕ್ಕಾಟ ಅಸ್ತಿತ್ವದ ಯಜಮಾನಿಕೆಯನ್ನು ಗುರುತಿಸುವ ಕಾಲವಾಗಿತ್ತು. ಪೋರ್ಚುಗೀಸರು, ಡಚ್ಚರು, ಬ್ರಿಟಿಶ್, ಫ್ರೆಂಚ್ ಕಂಪನಿಗಳ ಮೂಲಕ ಕರ್ನಾಟಕದ ಕರಾವಳಿಯಲ್ಲಿ ತಮ್ಮ ಅಸ್ತಿತ್ವ ಕಂಡುಕೊಂಡ ಕಾಲವಾಗಿತ್ತು. ಸ್ಥಳೀಯ ನಾಯಕರು ಅಕ್ಕಿ, ಕರಿಮೆಣಸು, ಸಂಬಾರ ಪದಾರ್ಥಗಳು, ತಂಬಾಕು, ಹತ್ತಿ ಮೊದಲಾದ ಉತ್ಪನ್ನಗಳಿಗೆ ಯುರೋಪಿನಲ್ಲಿ ಬಾರಿ ಬೇಡಿಕೆ ಇದ್ದು ಈ ವಸ್ತುಗಳನ್ನು ಕರ್ನಾಟಕದ ಕರಾವಳಿಯ ಮೂಲಕ ಸಾಗಿಸುತ್ತಿದ್ದರಿಂದ ಹಾಗೂ ಆ ವೇಳೆಯಲ್ಲಿ ವ್ಯಾಪಾರ ಸ್ಥಳೀಯ ಪ್ರಭುತ್ವಗಳ ಅಧೀನದಲ್ಲಿದ್ದರಿಂದ ಸ್ಥಳೀಯ ಸಂಸ್ಥಾನಗಳೊಂದಿಗೆ ಆರ್ಥಿಕತೆಯ ಸಂಬಂಧಗಳನ್ನು ಹೊಂದುತ್ತಿದ್ದರು. ಕೆಳದಿಯ ನಾಯಕರು, ಮೈಸೂರು ಒಡೆಯರು, ಬಿಜಾಪುರದ ಸುಲ್ತಾನರು, ಚಿತ್ರದುರ್ಗದ ನಾಯಕರು ಸೋಂದೆ ಮನೆತನ, ಸಾದ್ವಿ ಮನೆತನ ಹೀಗೆ ವ್ಯಾಪಾರ-ವಾಣಿಜ್ಯವನ್ನು ಕುರಿತಂತೆ ಆರ್ಥಿಕ ಸಂಬಂಧಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. ಕೆಳದಿಯ ನಾಯಕರು ಪೋರ್ಚುಗೀಸರೊಂದಿಗೆ ಕೆಲವು ವೇಳೆ ಆರ್ಥಿಕ ಸಂಬಂಧವನ್ನು ಉತ್ತಮ ರೀತಿಯಲ್ಲಿ ಹೊಂದಿದ್ದರೆ ಇನ್ನು ಕೆಲವು ವೇಳೆ ಅವರ ಸಂಬಂಧಗಳು ಅಷ್ಟಾಗಿರುತ್ತಿರಲಿಲ್ಲ. ಕೆಳದಿಯ ಚನ್ನಮ್ಮಾಜಿ ಅರಬ್ಬರೊಂದಿಗೆ ವ್ಯಾಪಾರಿ ಸಂಬಂಧವನ್ನು ಹೊಂದಿದ್ದರು. ಆದರೆ ನಂತರ ಬಂದ ನಾಯಕರು ಅವರ ಸಂಬಂಧ ಮುಂದುವರಿಸದೇ ಪೋರ್ಚುಗೀಸರೊಂದಿಗೆ ಸಂಬಂಧವನ್ನು ಹೊಂದಿದ್ದರು. ನಂತರ ಬಂದ ಫ್ರೆಂಚರು ಕೆಳದಿ ಮತ್ತು ಮೈಸೂರು ಸಂಬಂಧಗಳು ಆರ್ಥಿಕತೆಯಲ್ಲಿ ಹೇಗೆ ಗುರುತಿಸಿಕೊಂಡಿವೆ ಎಂಬುದನ್ನು ವಿವರಿಸಲಾಗಿದೆ. ಕರ್ನಾಟಕ ಕರಾವಳಿಯಲ್ಲಿ ಡಚ್ಚರ ವ್ಯಾಪಾರವು ಅಷ್ಟಾಗಿ ಗುರುತಿಸಿಕೊಂಡಿಲ್ಲ. ಮಲಬಾರ್ ಕರಾವಳಿಯಲ್ಲಿ ಅವರ ವ್ಯಾಪಾರ ಸೀಮಿತವಾಗಿದೆ. ಮೈಸೂರು ಸಂಸ್ಥಾನದಲ್ಲಿ ಟಿಪ್ಪು ಆಳ್ವಿಕೆಗೆ ಬಂದ ಇಂಗ್ಲಿಶರಿಗೂ ಟಿಪ್ಪು ಸುಲ್ತಾನನ ಸಂಬಂಧಗಳು ಆರ್ಥಿಕತೆಯಲ್ಲಿ ಅಷ್ಟಾಗಿಲ್ಲದ ಕಾರಣ ಟಿಪ್ಪು ಮತ್ತು ಇಂಗ್ಲಿಶರಿಗೂ ಯುದ್ಧ ಸಂಬಂಧದ ಸ್ವರೂಪ ಬದಲಾಯಿತು. ಈ ಮೂಲಕವಾಗಿ ಸ್ಥಳೀಯ ಮನೆತನ ಮತ್ತು ನಾಯಕರ ಸಂಬಂಧ ಕುರಿತು ವಿವರಿಸಲಾಗಿದೆ.

ಕೊನೆಯ ಅಧ್ಯಾಯವು ಸಮಾರೋಪವಾಗಿದ್ದು ಇಲ್ಲಿ ಅಧ್ಯಯನದ ಫಲಿತಗಳನ್ನು ವಿವರಿಸಲಾಗಿದೆ. ಪ್ರಸ್ತುತ ಸಂಶೋಧನೆಯ ಮಿತಿಗಳನ್ನೊಳಗೊಂಡ ಅಧ್ಯಯನ ಸಮಾರೋಪವನ್ನು ವಿವರಿಸಲಾಗಿದೆ. ವಸಾಹತು ಕಾಲಘಟ್ಟದಲ್ಲಿ ನಂತರದ ಚರಿತ್ರೆಯ ಬದಲಾವಣೆಯ ಸ್ವರೂಪವನ್ನು ಗ್ರಹಿಸಬಹುದಾಗಿದೆ. ಅನುಬಂಧದಲ್ಲಿ ನಕಾಶೆಗಳು, ಛಾಯಾಚಿತ್ರಗಳು, ತೂಕ ಅಳತೆ ಮಾಪನಗಳ ಪಟ್ಟಿ ಮತ್ತು ಸಂಕ್ಷೇಪಗಳನ್ನು ಕೊಡಲಾಗಿದೆ.

## ಅಧ್ಯಾಯ – ಎರಡು

# ವಿಜಯನಗರೋತ್ತರ ಕಾಲದ ರಾಜಕೀಯ ಸ್ಥಿತ್ಯಂತರಗಳು

ದಕ್ಷಿಣ ಭಾರತದ ಚರಿತ್ರೆಯಲ್ಲಿ ವಿಜಯನಗರಪೂರ್ವದ ಘಟನೆಗಳು ಕುತೂಹಲ ಮೂಡಿಸುತ್ತವೆ. ಹಲವು ರಾಜಮನೆತನಗಳು ಚಿಕ್ಕಪುಟ್ಟ ಪ್ರದೇಶಗಳ ಮೇಲೆ ತಮ್ಮ ಒಡೆತನವನ್ನು ಸ್ಥಾಪಿಸಿಕೊಂಡಿದ್ದರು. ಒಂದು ಮನೆತನದವರು ಮತ್ತೊಂದು ಮನೆತನದವರ ಮೇಲೆ ಯುದ್ಧ ಮಾಡಿ ತಮ್ಮ ಅಧಿಕಾರ ಸ್ಥಾಪಿಸಿ ಕಪ್ಪ ಕಾಣಿಕೆಗಳನ್ನು ಪಡೆದುಕೊಳ್ಳುತ್ತಿದ್ದರು. ಇಲ್ಲಿ ಪ್ರಭುತ್ವವು ತಮ್ಮ ಅಸ್ತಿತ್ವಕ್ಕಾಗಿ ಹೋರಾಟ ಏಕ ಪ್ರಭುತ್ವವಾಗಿ ರೂಪಗೊಳ್ಳುತ್ತಿತ್ತು. ಅವರು ಕಪ್ಪ ಕಾಣಿಕೆಗಳನ್ನು ಕೊಡುತ್ತಾ ಚಿಕ್ಕ ಸಾಮಂತ ಪ್ರಭುತ್ವಗಳು, ಮಂಡಲೇಶ್ವರರು, ಮಹಾಮಂಡಲೇಶ್ವರರು ಎನಿಸಿಕೊಳ್ಳುತ್ತಿದ್ದರು. ಹೀಗೆ ನಿರಂತರವಾಗಿ ರಾಜಕೀಯ ಬದಲಾವಣೆಗಳಾಗುತ್ತಿದ್ದಾಗ ಅಲ್ಲಾವುದ್ದೀನ್ ಖಿಲ್ಜಿ ದಕ್ಷಿಣ ಭಾರತದ ಮೇಲೆ ದಾಳಿ ಮಾಡಿದನು. ಆಗ ದಕ್ಷಿಣ ಭಾರತದಲ್ಲಿ ನಾಲ್ಕು ಸಾಮ್ರಾಜ್ಯಗಳು ಪ್ರಬಲವಾಗಿದ್ದವು: ಓರಂಗಲ್ಲಿನ ಕಾಕತೀಯ ರಾಜ್ಯ, ದೇವಗಿರಿಯ ಯಾದವ ರಾಜ್ಯ, ದ್ವಾರಸಮುದ್ರದ ಹೊಯ್ಸಳ ರಾಜ್ಯ ಮತ್ತು ಮಧುರೆಯ ಪಾಂಡ್ಯ ರಾಜ್ಯ.

ಅಲ್ಲಾವುದ್ದೀನ್‌ನ ದಂಡನಾಯಕ ಮಲ್ಲಿಕಾಫರ್ ದೇವಗಿರಿಯ ದಂಡಯಾತ್ರೆಯನ್ನು ಮಾಡಿದ್ದು, ಈ ರಾಜ್ಯಗಳು ಪರಸ್ಪರ ಹೊಡೆದಾಟದಲ್ಲಿ ಜನಸಾಮಾನ್ಯರ ಆರ್ಥಿಕ ಚಟುವಟಿಕೆಗೆ ಅಡ್ಡಿಯಾಗಲಿಲ್ಲ. ದೇವಗಿರಿಯು ಸಂಪದ್ಭರಿತವಾಗಿದ್ದು, ಪ್ರತಿಯೊಂದು ಮನೆಯಲ್ಲಿಯೂ ಬೆಳ್ಳಿ, ಬಂಗಾರ, ವಜ್ರಗಳು ತುಂಬಿ ತುಳುಕುತ್ತಿದ್ದವು. ಎಲ್ಲಾ ಕಡೆಯಲ್ಲಿಯೂ ರೇಷ್ಮೆ ಬಟ್ಟೆಗಳು ಭಾರೀ ಪ್ರಮಾಣದಲ್ಲಿ ದೊರೆಯುತ್ತಿದ್ದವು. "ದೇವಗಿರಿಯನ್ನು ಬಿಟ್ಟರೆ ಇನ್ನೆಲ್ಲಿಯೂ ಇಷ್ಟು ವಿಧವಿಧವಾದ ಬಟ್ಟೆಗಳು ಸಿಕ್ಕುತ್ತಿರಲಿಲ್ಲ"(ದೀಕ್ಷಿತ್ ೧೯೯೧: ೬). ಈ ಕಾರಣಕ್ಕಾಗಿಯೇ ದೆಹಲಿಯ ಸುಲ್ತಾನರಿಗೆ ದಕ್ಷಿಣ ರಾಜ್ಯಗಳ ಸಂಪತ್ತಿನ ಮೇಲಿನ ಆಸೆಯಿಂದ ದಾಳಿ ಮಾಡಿ ಇಲ್ಲಿನ ಸಂಪತ್ತೆಲ್ಲವನ್ನು ದೋಚಿದರು. ಆ ಕಾಲದಲ್ಲಿ ಹಿಂದೂಧರ್ಮ ರಕ್ಷಣೆಗೆ ಸ್ಥಾಪನೆಯಾದ ವಿಜಯನಗರ ಸಾಮ್ರಾಜ್ಯವು ವಿಶ್ವದ ಚರಿತ್ರೆಯಲ್ಲಿಯೇ ಪ್ರಾಮುಖ್ಯತೆಯನ್ನು ಗಳಿಸಿಕೊಂಡಿತ್ತು.

ಸಮಾಜದ ಅರ್ಥವ್ಯವಸ್ಥೆ ಮತ್ತು ಸಂಸ್ಕೃತಿಗಳು ಯಾವುದೇ ಕಾಲದ ಮತ್ತು ದೇಶದಲ್ಲಿ ರಾಜಕಾರಣವು ಉಂಟುಮಾಡಬಹುದಾದ ನಿರಂತರ ಪರಿವರ್ತನೆಗೆ ಒಳಗಾಗುತ್ತವೆ. ಭಾರತ ಶ್ರೀಮಂತ ಹಾಗೂ ಭವ್ಯವಾದ ಚರಿತ್ರೆಯನ್ನು ಹೊಂದಿದೆ. ಚರಿತ್ರೆಯುದ್ದಕ್ಕೂ ರಾಜ್ಯನೀತಿಯು ನಿರಂತರ ಬದಲಾವಣೆಗೆ ಒಳಪಟ್ಟಿತ್ತು. ಅನೇಕ ರಾಜವಂಶಗಳ ಉದಯ ಮತ್ತು ಅಸ್ತಮಯಗಳು ಅಧಿಕಾರಕ್ಕಾಗಿ ನಿರಂತರ ಹೋರಾಟಗಳು ನಡೆದವು. ಪದೇ ಪದೇ ರಾಜ್ಯಗಳ ಗಡಿಗಳನ್ನು ಬದಲಾಯಿಸಿ ಬರೆಯುತ್ತಿದ್ದದ್ದು, ವಿವಿಧ ಜನಾಂಗಗಳು, ಧರ್ಮಗಳು, ಆಸಕ್ತಿಗಳು ಮತ್ತು ವಿಚಾರಗಳು ಇವೆಲ್ಲ ಸೇರಿ ಭಾರತದ ರಾಜಕೀಯ ಚರಿತ್ರೆ ರೂಪಿತವಾಗಿದೆ.

ವಿಜಯನಗರ ಸೈನ್ಯಾಡಳಿತದಲ್ಲಿ ಸೈನಿಕ ಸೇವೆಗೆ ನೇಮಿಸಿಕೊಂಡ ಅಮರನಾಯಕರೇ ಪಾಳೆಯಗಾರರು. ಇವರ ಆಳ್ವಿಕೆಗೆ ಒಳಪಟ್ಟ ಪ್ರದೇಶವನ್ನೇ ಪಾಳೆಯಪಟ್ಟು ಎಂದು ಕರೆಯುತ್ತಿದ್ದರು. ಮಧುಗಿರಿ ನಾಯಕ ರಾಜ್ಯದ ವಿಶ್ವನಾಥ ತನ್ನ ರಾಜ್ಯವನ್ನು ೭೨ ಪೊಲ್ಲಂಗಳಾಗಿ ವಿಂಗಡಿಸಿ ಪ್ರತಿಯೊಂದು ಪೊಲ್ಲಂಗೂ ಒಬ್ಬೊಬ್ಬ ಅಧಿಕಾರಿಯನ್ನು ನೇಮಿಸಿದನು. ಈ ಅಧಿಕಾರಿಯನ್ನು ಪೊಲ್ಲೈಯಗಾರ ಎಂದು ಕರೆಯುತ್ತಿದ್ದರು. ಕಾರಣ ಈ ಅಧಿಕಾರಿಯ ಅಧೀನದಲ್ಲಿದ್ದ ಭೂಪ್ರದೇಶವನ್ನು ಪೊಲ್ಲಂ ಎಂದು ಹೆಸರಿಸಿದ್ದ ಕಾರಣ ಅವನಿಗೆ ಈ ಹೆಸರು ಬಂದಿರಬಹುದು. ಈ ಪ್ರಕ್ರಿಯೆಯೇ ಮುಂದೆ ಭೂಹಿಡುವಳಿಯ ರೂಪ ಪಡೆಯಿತು.

ಪಾಳೆಯಪಟ್ಟು, ಪಾಳೆಯಗಾರ ಎಂಬ ಪದಗಳು ಪಾಳೆ, ಪಾಳ್ಯ, ಪಾಳೆವು ಎಂಬ ಪದಗಳಿಂದ ಬಂದದ್ದಾಗಿದೆ. ಇಲ್ಲಿನ ವೈಶಿಷ್ಟವೆಂದರೆ ಪಾಳೇಯಪಟ್ಟುವಿನ ಮುಖಂಡರನ್ನು ನಾಯಕರೆಂದು ಕರೆಯುತ್ತಿದ್ದರು(ಯೋಗೀಶ್ವರಪ್ಪ ೨೦೧೮: ೩).

ವಿಜಯನಗರ ಸಾಮ್ರಾಜ್ಯಾವಧಿಯಲ್ಲಿ ಪಾಳೆಯಗಾರರು ರಾಜ್ಯದ ಕೇಂದ್ರಬಿಂದುವಾಗಿದ್ದರು. ಅವರು ಸಾರ್ವಭೌಮರು ಮತ್ತು ಜನತೆಯ ಮಧ್ಯವರ್ತಿಗಳಾಗಿ ಸಾಮ್ರಾಜ್ಯದ ಜನರ ಜೀವನವನ್ನು ಕುರಿತಂತೆ ಪ್ರಭುತ್ವಕ್ಕೆ ತಿಳಿಸಿ ಸೂಕ್ತ ಪರಿಹಾರಗಳನ್ನು ಕೊಡಿಸುತ್ತಿದ್ದರು. ವಿಜಯನಗರ ಕಾಲಾವಧಿಯಲ್ಲಿ ಪ್ರಮುಖವಾಗಿ ಎರಡು ಹಂತದ ಪಾಳೆಯಗಾರರು ಇದ್ದರು. ಕೃಷಿಕ ವರ್ಗ, ಸೈನಿಕ ವರ್ಗ ಇವರು ರಾಜ್ಯದ ಅರ್ಥವ್ಯವಸ್ಥೆಯ ಬೆನ್ನೆಲುಬಾಗಿದ್ದವರು. ಕೃಷಿಕರು ಭೂಮಿಯನ್ನು ಬೇಸಾಯ ಮಾಡಿ ಆಹಾರವನ್ನು ಬೆಳೆದು ಸರಕಾರಕ್ಕೆ ತೆರಿಗೆಯನ್ನು ಪಾವತಿ ಮಾಡುತ್ತಿದ್ದರು. ಆದ್ದರಿಂದ ಈ ಎರಡು ವರ್ಗಗಳ ಬೆಂಬಲವನ್ನು ಸರ್ಕಾರವು ಅವಲಂಬಿಸಿತ್ತು. ಮುಂದೆ ಪಾಳೆಯಗಾರರಾಗಿ ಬೆಳೆದ ಅಮರನಾಯಕರು ವಿಜಯನಗರ ರಾಜ್ಯಾಡಳಿತದಲ್ಲಿ ಮುಖ್ಯ ಸೈನ್ಯಾಡಳಿತಾಧಿಕಾರಿಗಳಾಗಿ ಕಾಣಿಸಿಕೊಂಡರು(ಷೇಕ್ ಅಲಿ ೨೦೧೭: ೮೬). ವಿಜಯನಗರ ಅವನತಿಯ ನಂತರ ನಿರಂತರ ಸಾರ್ವಭೌಮ ಸಾಮಂತರ ಸಂಬಂಧಗಳಿಂದ ಪ್ರಭುತ್ವದ ಅಧೀನ ಸಂಸ್ಥಾನಗಳು ಸಾರ್ವಭೌಮ ಸಂಸ್ಥಾನಗಳಾದವು.

ವಿಜಯನಗರದ ಅವಧಿಯಲ್ಲಿ ಪಾಳೆಯಗಾರರು ಅಲ್ಲಿರುವ ವರ್ತಕರ ಜೊತೆ ಅನ್ಯೋನ್ಯ ಸಂಬಂಧವಿಟ್ಟುಕೊಂಡಿದ್ದರು. ಉದಾಹರಣೆಗೆ ಅಚ್ಯುತರಾಯನ ಕಾಲಾವಧಿಯಲ್ಲಿ ರಾಜ್ಯದ ಹೆದ್ದಾರಿಯಲ್ಲಿ

ಸಂಚರಿಸುತ್ತಿದ್ದ ಯಾತ್ರಿಕರು, ವರ್ತಕರು, ಮೊದಲಾದವರನ್ನು ರಕ್ಷಿಸುತ್ತಿದ್ದರು. ಅವರೆಂದರೆ ಕಾವಲುಗಾರರು, ತಳವಾರರು ಇವರು ಗ್ರಾಮೀಣ ಆಯಗಾರರಲ್ಲಿ ಒಬ್ಬರು. ಬೇಡಪಡೆ, ಮೀಸಲುಪಡೆಗಳಿದ್ದವು. ಮೀಸಲು ತಳವಾರರು ಎಂದರೆ ಹಂಪೆಯಲ್ಲಿ ನೆಲೆಸಿರುವವರು ಪ್ರಸ್ತುತವಾಗಿಯೂ ಈ ಮನೆತನದವರನ್ನು ಗುರುತಿಸಬಹುದಾಗಿದೆ. ಪಾಳೆಯಗಾರರು ಸಮಾಜದಲ್ಲಿರುವ ಸಾಮಾಜಿಕ ಪಿಡುಗನ್ನು ನಿವಾರಿಸುವ ಆಶಯವನ್ನು ಈಡೇರಿಸಲು ಪಾಳೆಯಗಾರಶಾಹಿ ಪ್ರಯತ್ನಿಸುತ್ತಿದ್ದುದು ಈ ವ್ಯವಸ್ಥೆಯ ಮುಖ್ಯ ಲಕ್ಷಣವೆಂದು ಲಕ್ಷ್ಮಣ್ ತೆಲಗಾವಿ ಅವರು ಅಭಿಪ್ರಾಯ ಪಡುತ್ತಾರೆ. ಇವರು ಸಾಮಾನ್ಯ ಜನರ ಜೀವನದಲ್ಲಿ ಭಾಗಿಗಳಾಗಿದ್ದರು.

ಮಧ್ಯಕಾಲೀನ ಭಾರತದ ಚರಿತ್ರೆಯಲ್ಲಿ ವಿಜಯನಗರ ಮತ್ತು ವಿಜಯನಗರೋತ್ತರ ಕಾಲಾವಧಿಯು ಆರ್ಥಿಕ ಸಂದಿಗ್ಧತೆಯ ಕಾಲವಾಗಿದ್ದು, ಭಾರತದ ಚರಿತ್ರೆಯಲ್ಲಿ ಹಲವಾರು ಹೊಸ ಬೆಳವಣಿಗೆಗಳಿಗೆ ಸಾಕ್ಷಿಯಾಗಿದೆ. ೧೩೩೬ರಲ್ಲಿ ಸ್ಥಾಪನೆಯಾದ ವಿಜಯನಗರ ಸಾಮ್ರಾಜ್ಯವು ೧೫೬೫ರ ರಕ್ಕಸಗಿ ತಂಗಡಗಿ ಯುದ್ಧದ ನಂತರ ಹಲವಾರು ಸ್ಥಿತ್ಯಂತರಗಳಿಗೆ ಒಳಗಾದ ಕಾಲ. ಈ ವೇಳೆಯಲ್ಲಿ ರಾಜ್ಯ ನಿರ್ಮಾಣ ಪ್ರಕ್ರಿಯೆಯನ್ನು ರಾಜಕೇಂದ್ರಿತವಾಗಿ ಬಿಂಬಿಸಿದ ಕಾಲದ ತದನಂತರ ಸ್ಥಳೀಯತೆಯನ್ನು ಪ್ರತಿಬಿಂಬಿಸುವಂತಹ ಪಾಳೆಯಪಟ್ಟುಗಳು ಅಭಿವೃದ್ಧಿಯನ್ನು ಹೊಂದಿ ಸ್ವತಂತ್ರ್ಯವನ್ನು ಘೋಷಿಸಿಕೊಂಡು ಪ್ರವರ್ಧಮಾನಕ್ಕೆ ಬಂದು ತಮ್ಮದೇ ಆಡಳಿತ ವ್ಯವಸ್ಥೆಗಳನ್ನು ಹುಟ್ಟುಹಾಕಿದವು. ಈ ಮೂಲಕ ವಿಜಯನಗರ ಕಾಲದ ಪ್ರಭುತ್ವಕೇಂದ್ರಿತ ರಾಜ್ಯ ನಿರ್ಮಾಣ ಪ್ರಕ್ರಿಯೆ ಮತ್ತು ಅಲ್ಲಿನ ಆರ್ಥಿಕ ವಹಿವಾಟುಗಳು ಬದಲಾವಣೆಗೆ ಒಳಪಟ್ಟು ಪಾಳೆಯಪಟ್ಟುಗಳ ಮೂಲಕ ಸ್ಥಳೀಯತೆಯನ್ನು ಗುರುತಿಸುವ ಮನೆತನಗಳು ಅಸ್ತಿತ್ವಕ್ಕೆ ಬಂದವು.

ವಿಜಯನಗರ, ವಿಜಯನಗರೋತ್ತರ ದಕ್ಷಿಣ ಭಾರತದ ರಾಜ್ಯ ರಚನೆಯನ್ನು ಕುರಿತು ಹಲವಾರು ವಿದ್ವಾಂಸರು ಚರ್ಚಿಸಿದ್ದಾರೆ. ಬರ್ಟನ್ ಸ್ಟೈನ್, ನೀಲಕಂಠಶಾಸ್ತ್ರಿ, ನೊಬುರು ಕರಾಶಿಮ ಅವರ ವಾದ ಪ್ರತಿವಾದಗಳ ಮಧ್ಯೆ ಚೋಳರ ಏಕೀಕೃತ ವ್ಯವಸ್ಥೆ, ಸ್ಟೈನ್ ಅವರ ವಿಘಟಿತ ರಾಜ್ಯ ಸಿದ್ಧಾಂತದ ಹಿನ್ನೆಲೆಯಲ್ಲಿ ವಿವರಿಸಿದ್ದಾರೆ. ಕೇಂದ್ರೀಕೃತ ಮತ್ತು ವಿಕೇಂದ್ರಿಕೃತ ವ್ಯವಸ್ಥೆಯ ಬಗ್ಗೆ ವಿದ್ವಾಂಸರು ತಮ್ಮ ನಿಲುವುಗಳನ್ನು ಸ್ಪಷ್ಟಪಡಿಸಿದ್ದಾರೆ.

ವಿಜಯನಗರೋತ್ತರ ಕಾಲಾವಧಿಯಲ್ಲಿ ನಾಯಕರಾಗಿ ಗುರುತಿಸಿಕೊಂಡವರು ಪಾಳೆಯಗಾರರು. ಈ ಪಾಳೆಯ ಪದದ ಅರ್ಥ ಎಂದರೆ ದಂಡು, ಸೈನ್ಯ, ಶಿಬಿರ, ಎಂದು ಕರೆಯುತ್ತಾರೆ(ವಸು ೨೦೦೧: XIV). ಶಾಸನಗಳಲ್ಲಿ ಪಾಳೆಯಗಾರರು ಎಂಬ ಪದ ಹೆಚ್ಚಾಗಿ ಬಳಕೆಯಾಗದಿದ್ದರೂ ಜನಸಾಮಾನ್ಯರು ಪಾಳೆಯಗಾರರೆಂದು ಹೆಚ್ಚು ಸಂಬೋಧಿಸುತ್ತಿದ್ದರು. ಈ ಪಾಳೆಯಗಾರರನ್ನು ನಾಯಕರು, ಅಮರನಾಯಕರು, ನಾಡಪ್ರಭುಗಳು, ಸಾಮಂತರು, ಅರಸರು, ಒಡೆಯರು ಎಂದು ಹಲವಾರು ಹೆಸರುಗಳಿಂದ ಕರೆಯುತ್ತಿದ್ದರು. ನಾಯಕರನ್ನು ಅಮರನಾಯಕರು ಎನ್ನುವ ಬದಲು ಪಾಳೆಯಗಾರರೆಂದು ಸಹ ಕರೆಯಲಾಗುತ್ತದೆ. ಮಧ್ಯಕಾಲೀನ ಕರ್ನಾಟಕದ ಚರಿತ್ರೆಯನ್ನು ಅವಲೋಕಿಸಿದಾಗ ಈ ಪಾಳೆಯಗಾರರು ವಿಜಯನಗರದ ಅರಸರಿಂದ ಭೂಹಿಡುವಳಿಯನ್ನು

ಪಡೆದು ಹಳ್ಳಿ, ಗ್ರಾಮಗಳನ್ನು ನಿರ್ಮಿಸಿ ಕೃಷಿಯೋಗ್ಯ ಭೂಮಿಯನ್ನಾಗಿ ಪರಿವರ್ತಿಸುತ್ತಿದ್ದಾರೆ. ಮಧ್ಯಕಾಲೀನ ಕರ್ನಾಟಕದಲ್ಲಿ ಹೆಚ್ಚಿನ ಕೆರೆ ಬಾವಿಗಳನ್ನು ತೋಡಿಸಿ ನೀರಾವರಿ ಭೂಮಿಯನ್ನಾಗಿಸಿದರು. ಹೀಗೆ ಗ್ರಾಮಗಳು ನಗರಕೇಂದ್ರಗಳಾಗಿ ಬೆಳವಣಿಗೆ ಹೊಂದುವಲ್ಲಿ ಪಾಳೆಯಗಾರರ ಪಾತ್ರವನ್ನು ಮರೆಯುವಂತಿಲ್ಲ. ಮೈಸೂರು, ಚನ್ನರಾಯಪಟ್ಟಣ, ಚಿತ್ರದುರ್ಗ, ಗುಬ್ಬಿ, ಬೆಂಗಳೂರು, ಸಾಗರ, ಮೊದಲಾದ ನಗರಗಳು ರಾಜಕೀಯ, ಆರ್ಥಿಕ, ಧಾರ್ಮಿಕ ಕೇಂದ್ರಗಳಾಗಿ ಪಾಳೆಯಗಾರರ ಕಾಲದಲ್ಲಿಯೇ ಗುರುತಿಸಿಕೊಂಡಿರುವುದು ಕಂಡುಬರುತ್ತದೆ.

ವಿಜಯನಗರ ಅರಸರು ಸಾಮ್ರಾಜ್ಯದ ರಕ್ಷಣೆಗೆ ಅನೇಕ ಅಧಿಕಾರಿಗಳನ್ನು ನೇಮಿಸುತ್ತಿದ್ದರು. ಅವರಲ್ಲಿ ಅಮರನಾಯಕರು ಒಬ್ಬರಾಗಿದ್ದು, ನಿರ್ದಿಷ್ಟ ಪ್ರದೇಶದ ಭೂಮಿಯನ್ನು ಮಾಗಣಿಯಾಗಿ ಪಡೆದು ಸಾಮಂತರಾಗಿ ಆಳ್ವಿಕೆ ಮಾಡುತ್ತಿದ್ದರು. ಈ ಸಾಮಂತ ಮನೆತನಗಳೆಂದರೆ ಕೆಳದಿ, ಚಿತ್ರದುರ್ಗ, ಮೈಸೂರು, ಯಲಹಂಕ, ಮಧುಗಿರಿ ಮೊದಲಾದ ಪಾಳೆಯಪಟ್ಟುಗಳು ಉಗಮವಾಗಿ ಸಾಮಂತರಾಗಿ ಸಾರ್ವಭೌಮರ ಅಧೀನದಲ್ಲಿ ಆಳ್ವಿಕೆ ಮಾಡಿದರು. ಈ ಪಾಳೆಯಗಾರ ಪದ್ಧತಿಯು ವಿಜಯನಗರ ಕಾಲದಲ್ಲಿ ಬೆಳವಣಿಗೆ ಹೊಂದಿದ್ದು, ವಿಜಯನಗರದ ಆರಂಭಿಕ ಅರಸುಮನೆತನದವರ ಕಾಲದಲ್ಲಿ ಪ್ರವರ್ಧಮಾನಕ್ಕೆ ಬಂದು, ವಿಜಯನಗರದ ತುಳು ಅರಸ ಕೃಷ್ಣದೇವರಾಯನ ಕಾಲದಿಂದ ಹೆಚ್ಚು ಬೆಳವಣಿಗೆಯನ್ನು ಹೊಂದಿ ಅರವೀಡು ಮನೆತನದ ಅವನತಿಯವರೆಗೂ ಅಸ್ತಿತ್ವದಲ್ಲಿತ್ತು. ಅರವೀಡು ಮನೆತನದ ಕಾಲದ ವೇಳೆಗೆ ಸಾಮಂತ ಮನೆತನಗಳು ಸಾರ್ವಭೌಮ ಸಂಸ್ಥಾನಗಳಾಗಿ ಅಭಿವೃದ್ಧಿ ಹೊಂದಿದವು. ಈ ಮೂಲಕವಾಗಿ ಆನೆಗುಂದಿ ಸಂಸ್ಥಾನದ ಆಳ್ವಿಕೆ ಕೊನೆಗೊಂಡು ಸ್ವತಂತ್ರ ಸಂಸ್ಥಾನಗಳಾಗಿ ಮಧ್ಯಕಾಲೀನ ಕರ್ನಾಟಕ ಚರಿತ್ರೆಯಲ್ಲಿ ಗುರುತಿಸಿಕೊಂಡಿದ್ದಾರೆ.

ವಿಜಯನಗರ ಕಾಲದಲ್ಲಿ ಅಮರ ಮಾಗಣಿದಾರರಾಗಿ ಗುರುತಿಸಿಕೊಂಡ ಇವರು ವಿಜಯನಗರೋತ್ತರ ಕಾಲದಲ್ಲಿ ಅಮರನಾಯಕರಾಗಿ, ಪಾಳೆಯಗಾರರಾಗಿ ಹಲವಾರು ಹೆಸರುಗಳಿಂದ ಕಾಣಿಸಿಕೊಳ್ಳುತ್ತಾರೆ. ವಿಜಯನಗರ ಪೂರ್ವಕಾಲದಲ್ಲಿ, ರಾಷ್ಟ್ರಕೂಟ, ಹೊಯ್ಸಳರ ಕಾಲದಲ್ಲಿ ಅಮರನಾಯಕತನ ಪದ್ಧತಿ ಆರಂಭವಾಗಿ ವಿಜಯನಗರ ಕಾಲದಲ್ಲಿ ಬಲಿಷ್ಠವಾಯಿತು. ಈ ಅಮರ ನಾಯಕರು ಸ್ಥಳೀಯವಾಗಿಯೇ ದೊರೆಯುವ ಪ್ರಾಕೃತಿಕ ವಸ್ತುಗಳಿಂದ ಕೋಟೆಗಳನ್ನು ಕಟ್ಟಿ ಆಳ್ವಿಕೆ ಮಾಡಲಾರಂಭಿಸಿದರು. ಇವರು ತಮ್ಮದೇಯಾದ ಸೈನ್ಯ ಬಲವನ್ನು ಹೊಂದಿದ್ದು, ರಾಜಪ್ರಭುತ್ವಕ್ಕೆ ಅವಶ್ಯವಿದ್ದಾಗ ಸೈನ್ಯವನ್ನು ರವಾನಿಸಿ ಮೆಚ್ಚುಗೆಯನ್ನು ಪಡೆದು ಭೂಮಿಯನ್ನು ಅಮರ ಮಾಗಣಿಯಾಗಿ ಪಡೆಯುತ್ತಿದ್ದರು. ಹೀಗೆ ಪಡೆದ ಅಮರ ಭೂಮಿಯಿಂದಲೇ ಬಲಿಷ್ಠರಾಗಿ ಜನಪದರಿಗೆ ಹತ್ತಿರವಿರುವ ಸ್ಥಳೀಯ ಚರಿತ್ರೆಯನ್ನು ರೂಪಿಸಲು ಸಹಾಯಕವಾಯಿತು. ಇವರು ಸಾರ್ವಭೌಮರಾದ ನಂತರ ತಮ್ಮದೇ ನಾಣ್ಯವ್ಯವಸ್ಥೆ ಮತ್ತು ಟಂಕಸಾಲೆಯನ್ನು ಸ್ಥಾಪಿಸಿಕೊಂಡಿದ್ದರು. ಇದಕ್ಕೆ ಪೂರಕವಾಗಿ ಚಿತ್ರದುರ್ಗದ ಕೋಟೆ ಪರಿಸರದಲ್ಲಿ ಟಂಕಸಾಲೆ ಇದ್ದು ಅಕ್ಕಸಾಲಿಗರೇ ಟಂಕಸಾಲೆಯ ನಾಣ್ಯ ಟಂಕಿಸುವ ಅಧಿಕಾರ ಹೊಂದಿದ್ದರೆಂದು ಲಕ್ಷ್ಮಣ್ ತೆಲಗಾವಿಯವರು ಹೇಳುತ್ತಾರೆ. ಕೆಳದಿ ನಾಯಕರು ಮತ್ತು ಹರಪನಹಳ್ಳಿ ಪಾಳೆಯಗಾರರು ಪ್ರತ್ಯೇಕವಾದ ಟಂಕಸಾಲೆ ಹೊಂದಿದ್ದರು. ೧೫೬೬ರ

ರಕ್ಕಸಗಿ ತಂಗಡಗಿ ಯುದ್ಧದ ನಂತರ ಅರವೀಡು ಮನೆತನದ ಅರಸರು ಅಮರನಾಯಕತನ ಪದ್ಧತಿಯನ್ನು ವಂಶಪರಂಪರೆಗೆ ಅನುಗುಣವಾಗಿ ಮುಂದುವರೆಸಿದರು. ಇವರೇ ಮುಂದೆ ಸಾರ್ವಭೌಮ ಸಂಸ್ಥಾನಗಳಾಗಿ ಬೆಳವಣಿಗೆ ಹೊಂದುವ ಮೂಲಕ ಗುರುತಿಸಿಕೊಂಡಿದ್ದಾರೆ. ಇದೇ ವೇಳೆಯಲ್ಲಿ ಸ್ಥಳೀಯ ಪ್ರಭುತ್ವಗಳು ರಾಜ್ಯ ನಿರ್ಮಾಣ ಪ್ರಕ್ರಿಯೆಯ ಜೊತೆ ಜೊತೆಯಲ್ಲಿಯೇ ಯುರೋಪಿಯನ್ ಕಂಪನಿಗಳು ಭಾರತದ ವ್ಯಾಪಾರದ ಪೈಪೋಟಿಯಿಂದ ಭಾರತದಲ್ಲಿ ತಮ್ಮ ನೆಲೆಗಳನ್ನು ಸ್ಥಾಪಿಸಲಾರಂಭಿಸಿದರು. ಈ ಮೂಲಕ ವಿಜಯನಗರೋತ್ತರ ಕಾಲದಲ್ಲಿ ವ್ಯಾಪಾರಿ ಕಂಪನಿಗಳು ಭಾರತದ ರಾಜಕೀಯ ಆರ್ಥಿಕ ಸ್ಥಿತ್ಯಂತರಗಳಿಗೆ ಒಳಗಾಗುವ ಸಂದಿಗ್ಧತೆಯ ಕಾಲವಾಗಿದೆ. ಎಂದರೆ ತಪ್ಪಾಗಲಾರದು.

ವಿಜಯನಗರ ರಕ್ಷಣಾ ಕಾರ್ಯದಲ್ಲಿ ತಳವಾರಿಕೆ ವ್ಯವಸ್ಥೆಯು ಪರಿಣಾಮಕಾರಿಯಾಗಿದ್ದು, ಇವರು ಆಧುನಿಕ ಪೊಲೀಸ್ ವ್ಯವಸ್ಥೆಯ ಕಾರ್ಯವನ್ನು ನಿರ್ವಹಿಸುತ್ತಿದ್ದರು. ಇಮ್ಮಡಿ ದೇವರಾಯನ ಕಾಲದಿಂದ ಆರಂಭಿಸಿ ಕೃಷ್ಣದೇವರಾಯನ ಕಾಲದವರೆಗೂ ಮುಂದುವರಿದುಕೊಂಡು ಬಂದ ಈ ಪೊಲೀಸ್ ವ್ಯವಸ್ಥೆಯು ಕೃಷ್ಣದೇವರಾಯನ ಕಾಲದಲ್ಲಿ ಇನ್ನಷ್ಟು ಬಿಗಿಗೊಂಡಿತು. ರಾಜಧಾನಿಯನ್ನು ಪಾಳೆಯ ಅಥವಾ ಪುರವಿಭಾಗಗಳಾಗಿ ಪರಿವರ್ತಿಸಲಾಗಿತ್ತು. ಸ್ವಯಂ ಕೃಷ್ಣದೇವರಾಯನೇ ಇಂತಹ ಪಾಳೆಯಗಳನ್ನು ಸೃಷ್ಟಿಸಿದ್ದನೆನ್ನಲಾಗುತ್ತಿದೆ. ಈ ರೀತಿಯಾದ ತಳವಾರಿಕೆ ವೃತ್ತಿಯಿಂದ ಪಾಳೆಯಗಾರ ವೃತ್ತಿಯು ಉಗಮವಾಗಿದೆ(ತೆಲಗಾವಿ ೨೦೧೬: ೫).

ಶರ್ಮಾ ಆರ್.ಎಸ್. ಅವರು ಊಳಿಗಮಾನ್ಯ ವ್ಯವಸ್ಥೆಯನ್ನು ವಿಕೇಂದ್ರೀಕೃತ ಆಡಳಿತ ವ್ಯವಸ್ಥೆಯನ್ನಾಗಿ ಹಾಗೂ ಸ್ಥಳೀಯ ನೆಲೆಗಳು ಗಟ್ಟಿಗೊಂಡು ಕೇಂದ್ರವು ನಿಧಾನವಾಗಿ ತನ್ನ ರಾಜಕೀಯ ಸಾರ್ವಭೌಮತ್ವವನ್ನು ಕಳೆದುಕೊಳ್ಳುವ ಪ್ರಕ್ರಿಯೆಯನ್ನು ಅವರು ನೋಡಿ ಕೇಂದ್ರೀಕೃತ ರಾಜ್ಯವ್ಯವಸ್ಥೆ ವಿಘಟನೆಗೊಳ್ಳುತ್ತದೆನ್ನುವುದು ಇವರ ವಾದವಾಗಿದ್ದು, ಇವರ ವಾದಕ್ಕೆ ಪ್ರತಿಯಾಗಿ ಬರ್ಟನ್ ಸ್ಟೈನ್ ಅವರ ಸೆಗ್‌ಮೆಂಟರಿ ಸ್ಟೇಟ್ ಸಿದ್ಧಾಂತವನ್ನು ವಿಶ್ಲೇಷಿಸುತ್ತಾರೆ. ಇವರು ಸೆಗ್‌ಮೆಂಟರಿ ಸ್ಟೇಟ್ ಪರಿಕಲ್ಪನೆಯು ಚೋಳಕೇಂದ್ರಿತವಾಗಿದ್ದು, ಕರ್ನಾಟಕದ ಸಂದರ್ಭಕ್ಕೂ ಅದನ್ನು ವಿಶ್ಲೇಷಿಸಿದರು. ಹಳ್ಳಿಗಳು ಸ್ವತಂತ್ರ ಜೀವನ ನಡೆಸುತ್ತಿದ್ದವು. ಕೇಂದ್ರಪ್ರಭುತ್ವವು ಇವುಗಳ ಮೇಲೆ ನಿಯಂತ್ರಣ ಹೊಂದಿರಲಿಲ್ಲ. ನಿಯಂತ್ರಣ ಹೊಂದುವಷ್ಟೂ ಅದು ಸಮರ್ಥವಾಗಿರಲಿಲ್ಲ. ಈ ಅಮರನಾಯಕ ಪದ್ಧತಿಯ ಮೂಲಕ ಸಾರ್ವಭೌಮ ಮತ್ತು ಸಾಮಂತ ಸಂಬಂಧಗಳು ಗಟ್ಟಿಗೊಂಡವು. ಆದರೆ ವಿಜಯನಗರವು ನಿಧಾನವಾಗಿ ಕುಸಿಯಲಾರಂಭಿಸಿದಾಗ ನಾಯಕ ಪ್ರಭುತ್ವ ರೂಪುಗೊಳ್ಳಲಾರಂಭಿಸಿತು(ಸೋಸಲೆ ೨೦೧೦: ೭).

ರಾಜಕೀಯ ಸಮೀಕರಣವು ನಿರಂತರ ಬದಲಾವಣೆಗೆ ಒಳಗಾಗಿರುವುದನ್ನು ಐದು ಬಗೆಯ ಸ್ಥಿತ್ಯಂತರಗಳನ್ನಾಗಿ ಗುರುತಿಸಿದ್ದಾರೆ.

೧. ಸ್ವತಂತ್ರ ಅರಸು ಮನೆತನಗಳು ಅಸ್ತಿತ್ವಕ್ಕೆ ಬರುವುದು.

೨. ಸ್ವತಂತ್ರ ಅರಸು ಮನೆತನಗಳು ಸಾಮಂತ ಅರಸು ಮನೆತನಗಳಾಗಿ ಪರಿವರ್ತನೆ ಹೊಂದುವುದು.

೩. ಸಾಮಂತ ಅರಸು ಮನೆತನಗಳು ಸ್ವತಂತ್ರ ಅರಸು ಮನೆತನಗಳಾಗಿ ಪರಿವರ್ತನೆ ಹೊಂದುವುದು.
೪. ಅರಸು ಮನೆತನಗಳು ಪತನದ ಬಳಿಕ ತಮ್ಮ ವಂಶಜರ ಮೂಲಕ ನಾಮ ಮಾತ್ರ ಅಸ್ತಿತ್ವವನ್ನು ಉಳಿಸಿಕೊಂಡು ಪ್ರಜಾಪ್ರಭುತ್ವ ವ್ಯವಸ್ಥೆಯವರೆಗೂ ಮುಂದುವರೆಯುವುದು.
೫.ರಾಜಕೀಯ ಪರಿಸರದಿಂದ ಸಂಪೂರ್ಣವಾಗಿ ಕಣ್ಮರೆಯಾಗುವುದು(ಸೋಸಲೆ೨೦೧೦:೧೦). ನಿಡುಗಲ್ಲು ಮತ್ತು ಮತ್ತೋಡು, ಜರಿಮಲೆ

ಚರಿತ್ರೆಯು ನಿರಂತರ ಬದಲಾವಣೆಗೆ ಒಳಗಾಗುವಂತದ್ದು, ಈ ರಾಜ್ಯ ವ್ಯವಸ್ಥೆಯ ಪ್ರಕ್ರಿಯೆಯಲ್ಲಿ ಸಾರ್ವಭೌಮ ಸಾಮಂತನಾಗುವ, ಸಾಮಂತ ಸಾರ್ವಭೌಮನಾಗುವ ಪ್ರಕ್ರಿಯೆಗಳು ನಡೆಯುತ್ತಿದ್ದವು. ಈ ಪ್ರಕ್ರಿಯೆ ಕೇವಲ ರಾಜಕೀಯ ಕೇಂದ್ರಿತ ಮಾತ್ರವಾಗಿರದೇ ಆ ಕಾಲಘಟ್ಟದ ಸಾಮಾಜಿಕ ಹಾಗೂ ಆರ್ಥಿಕ ಪಲ್ಲಟಗಳು ಪ್ರಭುತ್ವದಲ್ಲಿ ನಡೆದವು. ಹೀಗೆ ವಿಜಯನಗರೋತ್ತರ ಕಾಲಾವಧಿಯು ರಾಜಕೀಯ ಸ್ಥಿತ್ಯಂತರ ಜೊತೆ ಜೊತೆಯಲ್ಲಿ ಸಮಾಜದ ಸಾಮಾಜಿಕ ಪರಿವರ್ತನೆಗೆ ಒಳಗಾದ ಕಾಲಘಟ್ಟವಾಗಿದೆ. ಅಲ್ಲಿ ಹೊಸದೊಂದು ಸಾಮಾಜಿಕ, ಆರ್ಥಿಕ ಪರಿಸ್ಥಿತಿ ರೂಪ ಪಡೆಯಲಾರಂಭಿಸಿತು.

ವಿಜಯನಗರೋತ್ತರ ಕಾಲಾವಧಿಯು ಅನೇಕ ಸ್ಥಿತ್ಯಂತರಗಳಿಗೆ ಒಳಗಾದ ಕಾಲವಾಗಿದೆ. ಪ್ರಾಚೀನ ಕಾಲದಿಂದ ನಿರಂತರ ಬದಲಾವಣೆಗಳಿಗೆ ಒಳಗಾಗುತ್ತಲೇ ಇತ್ತು. ಪ್ರಸ್ತುತ ಕಾಲಘಟ್ಟದಲ್ಲಿ ಯೂರೋಪಿಯನ್ನರು ಭಾರತಕ್ಕೆ ವ್ಯಾಪಾರದ ಹಿನ್ನೆಲೆಯಿಂದ ಇಲ್ಲಿ ನೆಲೆ ನಿಲ್ಲುವುದಕ್ಕೆ ಆರಂಭಿಸಿದರು. ಇದೇ ಕಾಲಘಟ್ಟದಲ್ಲಿ ಭಾರತದಲ್ಲಿ ಕರ್ನಾಟಕ ಪ್ರದೇಶದ ನೆಲೆಯಾದ ವಿಜಯನಗರ ಸಾಮ್ರಾಜ್ಯ ಕಳೆಗುಂದುತ್ತಾ ಪಾಳೆಯಗಾರರು ರಾಜಕೀಯ ಸ್ಥಿತ್ಯಂತರಕ್ಕೆ ಒಳಗಾದರು. ಸ್ಥಳೀಯ ಆರ್ಥಿಕತೆ ಮತ್ತು ರಾಜಕಾರಣದ ಮೇಲೆ ತಮ್ಮ ನಿಯಂತ್ರಣ ಸಾಧಿಸುವಷ್ಟರ ಮಟ್ಟಿಗೆ ಬೆಳವಣಿಗೆಯಾದರು. ಸ್ಥಳೀಯವಾಗಿ ರೂಪಗೊಂಡ ಪ್ರಭುತ್ವ ಹಾಗೂ ವ್ಯಾಪಾರದ ಮೂಲಕ ನೆಲೆ ಕಂಡುಕೊಂಡ ವಿದೇಶಿ ಪ್ರಭುತ್ವ ಕರ್ನಾಟಕದ ಭೂಪ್ರದೇಶಗಳ ಮೇಲೆ ನಿಯಂತ್ರಣ ಸಾಧಿಸುವ ಸಲುವಾಗಿ ಪರಸ್ಪರ ಒಪ್ಪಂದ ಮಾಡಿಕೊಂಡು, ಒಪ್ಪಂದಗಳು ವಿಫಲವಾದಾಗ ಹೋರಾಡುತ್ತಲೇ ತಮ್ಮ ನೆಲೆಯನ್ನು ಗಟ್ಟಿಗೊಳಿಸಿಕೊಳ್ಳಲಾರಂಭಿಸಿದರು. ಈ ಮೂಲಕ ವಿಜಯನಗರೋತ್ತರ ಕಾಲವು ಯುದ್ಧ ಮತ್ತು ಒಪ್ಪಂದಗಳ ಮೂಲಕ ಚರಿತ್ರೆಯ ಪುನಾರಾವರ್ತನೆಯಾಗುತ್ತಿತ್ತು. ಸ್ಥಳೀಯ ಪಾಳೆಯಪಟ್ಟುಗಳು ರಾಜಕೀಯ ಅಸ್ಥಿರತೆಯನ್ನು ಬಳಸಿಕೊಂಡು ಯೂರೋಪಿಯನ್ ಪ್ರಭುತ್ವವು ಭಾರತದಲ್ಲಿ ತಮ್ಮ ಸ್ಥಾನವನ್ನು ಗಟ್ಟಿಗೊಳಿಸಿಕೊಂಡಿತು. ಕರಾವಳಿಯ ಕೆಳದಿ ರಾಜ್ಯದ ಜೊತೆ ಒಪ್ಪಂದಗಳನ್ನು ಮಾಡಿಕೊಳ್ಳುವ ಮೂಲಕ ನೆಲೆ ಕಂಡುಕೊಂಡರು.

ಕರ್ನಾಟಕವು ಯೂರೋಪಿಯನ್ನರ ವ್ಯಾಪಾರ ಮತ್ತು ಸಾಮ್ರಾಜ್ಯ ವಿಸ್ತರಣಾ ಧೋರಣೆಗೆ ಮೀಸಲಾಯಿತು. ಹೀಗೆ ಕರ್ನಾಟಕವು ಹೊಸ ಬಗೆಯ ಅನುಭವಗಳಿಗೆ ಒಳಗಾಗುತ್ತಲೇ ಪ್ರತಿರೋಧದ ಧ್ವನಿಗಳನ್ನು ಗಟ್ಟಿಗೊಳಿಸುತ್ತಾ ಹೋಯಿತು. ಸ್ಥಳೀಯ ರಾಜಪ್ರಭುತ್ವದಿಂದ ವಿದೇಶಿಯ ವಸಾಹತು ಪ್ರಭುತ್ವಕ್ಕೆ ಕರ್ನಾಟಕವು ಒಳಗೊಂಡಿತು. ಪೋರ್ಚುಗೀಸರು, ಡಚ್ಚರು, ಇಂಗ್ಲಿಶರು ಮತ್ತು ಫ್ರೆಂಚರು ಭಾರತಕ್ಕೆ ವ್ಯಾಪಾರಕ್ಕೆ ಬಂದು ಪರಸ್ಪರ ವ್ಯಾಪಾರದಲ್ಲಿ ನೆಲೆ ಕಂಡುಕೊಳ್ಳುವುದಕ್ಕಾಗಿ ಹೋರಾಡಿದರು. ಈ ವೇಳೆ ಸ್ಥಳೀಯ ಪ್ರಭುತ್ವಗಳ ಬೆಂಬಲ ಮತ್ತು ಹೋರಾಟಗಳ ಮಧ್ಯದಲ್ಲಿಯೇ

ಕರ್ನಾಟಕವನ್ನೊಳಗೊಂಡಂತೆ ವಸಾಹತುಕೇಂದ್ರವನ್ನಾಗಿ ನಿರ್ಮಿಸಿಕೊಂಡರು. ಹೀಗೆ ಕರ್ನಾಟಕವು ಒಂದು ವಸಾಹತುಕೇಂದ್ರವಾಗಿ ಬೆಳವಣಿಗೆಯಾಯಿತು. ಈ ಮೂಲಕ ಕರ್ನಾಟಕ ಅನ್ಯ ಧರ್ಮ ಸಂಸ್ಕೃತಿ–ಸಂಪ್ರದಾಯಗಳು ಮತ್ತು ಆಡಳಿತವನ್ನೊಳಗೊಂಡು ಹೊಸ ಬಗೆಯ ಸ್ಥಿತ್ಯಂತರದಲ್ಲಿ ಗುರುತಿಸಿಕೊಂಡಿತು.

ವಿಜಯನಗರ ಅರಸರ ಆಳ್ವಿಕೆಯ ವೇಳೆಯಲ್ಲಿ ಸೇನೆಯ ಕಾರ್ಯ ನಿರ್ವಹಿಸುವಂತಹ ಪಾಳೆಯಗಾರರಿಗೆ ಸಂಬಳಕ್ಕೆ ಪ್ರತಿಯಾಗಿ ಭೂಹಿಡುವಳಿಗಳನ್ನು ದಾನವಾಗಿ ನೀಡುತ್ತಿದ್ದರು. ರಾಜನಿಂದ ಭೂಮಿಯನ್ನು ದಾನವಾಗಿ ಸ್ವೀಕರಿಸಿದ ನಾಯಕನು ಅದಕ್ಕೆ ಪ್ರತಿಯಾಗಿ ರಾಜನಿಗಾಗಿ ಸೈನಿಕ ಸೇವೆಯನ್ನು ಸಲ್ಲಿಸಬೇಕಾಗಿತ್ತು. ತಮ್ಮ ಪ್ರದೇಶದ ಕಂದಾಯದ ನಿರ್ವಹಣೆಯ ಜವಾಬ್ದಾರಿಯನ್ನು ಹೊತ್ತು ಕೃಷಿ ಉತ್ಪನ್ನದ ಮೇಲೆ ಕಂದಾಯವನ್ನು ವಿಧಿಸುವ ವಸೂಲಿ ಮಾಡುವ ಹಾಗೂ ನಿರ್ದಿಷ್ಟ ಮೊತ್ತದ ಹಣವನ್ನು ವಿಜಯನಗರದ ಅರಸರಿಗೆ ಸಲ್ಲಿಸುವ ಜವಾಬ್ದಾರಿಯನ್ನು ಹೊರಬೇಕಿತ್ತು. ಅಮರನಾಯಕ ಪದ್ಧತಿಯ ರಾಜಕೀಯ ಸಾರವು ಭೂಮಿಯ ತಳಹದಿಯ ಮೇಲೆ ಪ್ರಾದೇಶಿಕ ಆಡಳಿತವನ್ನು ರೂಪಿಸಿದರೆ ಅದರ ಆರ್ಥಿಕಾಂಶವು ರೈತರು ಉತ್ಪಾದಿಸುವ ಕೃಷಿ ಸಂಪತ್ತಿನ ಮೇಲೆ ಆಧರಿಸಿ ನಿಂತಿತ್ತು. ಕೃಷಿ ಚಟುವಟಿಕೆಗಳು ವಿಸ್ತರಿಸಿದಂತೆ ಪ್ರಾದೇಶಿಕ ಮಟ್ಟದಲ್ಲಿ ರೈತರಿಂದ ಕಂದಾಯ ವಸೂಲಿ ಮಾಡುವ ಪಾಳೆಯಗಾರರು ಆರ್ಥಿಕವಾಗಿ ಬಲಾಢ್ಯರಾಗುತ್ತಿದ್ದರು. ವಿಜಯನಗರದ ಅರಸರಿಗೆ ವಾರ್ಷಿಕ ಪೊಗದಿಯನ್ನು ಸಲ್ಲಿಸುತ್ತ ವಿಜಯನಗರ ಸಾಮ್ರಾಜ್ಯದ ಸಂಪತ್ತಿನ ಕ್ರೋಡೀಕರಣಕ್ಕೆ ಕಾರಣರಾದರು(ಸರಿತ:೨೦೧೯:೨೭).

ಮಧ್ಯಕಾಲೀನ ಕರ್ನಾಟಕವು ರಾಜಕೀಯವಾಗಿ ವಿಜಯನಗರ ಹಾಗೂ ಬಹಮನಿ ರಾಜ್ಯದ ಅಸ್ತಿತ್ವ, ಈ ಎರಡೂ ಸಾಮ್ರಾಜ್ಯಗಳ ಪರಸ್ಪರ ಘರ್ಷಣೆಯಿಂದ ಹೊಸದೊಂದು ವರ್ಗವಾಗಿ ಪಾಳೆಯಗಾರರು ಪ್ರಾಬಲ್ಯ ಹೊಂದಿದರು. ಪೋರ್ಚುಗೀಸರು, ಡಚ್ಚರು, ಇಂಗ್ಲಿಶರು ಮತ್ತು ಫ್ರೆಂಚರ ಆಗಮನ, ಮರಾಠರ ಹಾಗೂ ಮೊಗಲರ ಚಟುವಟಿಕೆಗಳು, ಹೈದರನ ಪ್ರಯತ್ನದಿಂದ ಕರ್ನಾಟಕ ಬಹುಪಾಲು ಪಾಳೆಯಗಾರರ ವಿಸರ್ಜನೆ ಹಾಗೂ ಒಂದು ರೀತಿಯಲ್ಲಿ ಬಹುಪಾಲು ಕರ್ನಾಟಕದ ರಾಜಕೀಯ ಐಕ್ಯ ಸಾಧನೆ ಮತ್ತು ಈ ಅವಧಿಯ ಕೊನೆಗೆ ಇಡೀ ಕರ್ನಾಟಕದಲ್ಲಿ ಬ್ರಿಟಿಶರ ಆಧಿಪತ್ಯದ ಸ್ಥಾಪನೆ, ಇವು ಈ ಅವಧಿಯ ಮುಖ್ಯ ರಾಜಕೀಯ ಘಟನೆಗಳು. ಇಸ್ಲಾಂ ಹಾಗೂ ಕ್ರೈಸ್ತಧರ್ಮಗಳ ಪ್ರಸಾರ, ಪಾಶ್ಚಾತ್ಯ ವ್ಯಾಪಾರ ಹಾಗೂ ಸಂಪರ್ಕಗಳಿಂದ ಆದ ಆರ್ಥಿಕ ಹಾಗೂ ಸಾಂಸ್ಕೃತಿಕ ಬದಲಾವಣೆಗಳು ಹಾಗೂ ಕಲೆ, ಆರ್ಥಿಕತೆ, ಸಂಸ್ಕೃತಿಯ ಕ್ಷೇತ್ರದಲ್ಲಿ ಆದ ಅನೇಕ ಸ್ಥಿತ್ಯಂತರಗಳು ವಿಜಯನಗರೋತ್ತರ ಕಾಲದಲ್ಲಿ ಕಂಡುಬರುತ್ತದೆ.

ವಿಜಯನಗರವು ೧೫೬೫ರ ನಂತರ ತನ್ನ ರಾಜಕೀಯ ಸ್ಥಾನವನ್ನು ಮುಂದುವರಿಸಿದೆ. ರಕ್ಕಸಗಿ ತಂಗಡಗಿ ಯುದ್ಧದಲ್ಲಿ ಸೋತ ವಿಜಯನಗರವು ಸಾಮಂತರನ್ನು ನಿಯಂತ್ರಿಸುವ ಕಾರ್ಯವನ್ನು ಮುಂದುವರಿಸಿರುವುದು ಕಂಡುಬರುತ್ತದೆ. ವಿಜಯನಗರದ ಈ ಯುದ್ಧದಲ್ಲಿ ಉತ್ತಮ ಸೇವೆ ಸಲ್ಲಿಸಿದ ಸಂತೆಬೇನ್ನೂರು ನಾಯಕರಿಗೆ ಅಮರ ಮಾಗಣಿಯನ್ನು ನೀಡಿ ತಮ್ಮ ಸಾಮಂತ ಸ್ಥಾನ ಮುಂದುವರಿಸಬೇಕು ತಿಳಿಸಿದ ವಿಚಾರ ಕೈಫಿಯತ್ತುಗಳಿಂದ ತಿಳಿಯುತ್ತದೆ(ನಾಡಿಗ್ ೨೦೧೪:೧).

ಪ್ರಭುತ್ವ ತನ್ನ ರಾಜಕೀಯ ಸ್ಥಾನವನ್ನು ಮುಂದುವರಿಸಿ ಪುನಃ ಯುದ್ಧಕ್ಕೆ ಸೈನ್ಯ ಕಟ್ಟುವ ಪರಿಯನ್ನು ಈ ಮೂಲಕ ಗ್ರಹಿಸಬಹುದಾಗಿದೆ. ಯುದ್ಧದಲ್ಲಿ ಸೋತು ರಾಜಧಾನಿಯನ್ನು ಆನೆಗುಂದಿಗೆ ವರ್ಗಾಯಿಸಿ ಆಳ್ವಿಕೆ ಮಾಡಿದರು. ಈ ಮೂಲಕ ತಮ್ಮ ರಾಜಕೀಯ ಸ್ಥಾನ ಉಳಿಸಿಕೊಂಡಿದ್ದರು. ಗೆದ್ದರೆ ರಾಜ್ಯ ಸತ್ತರೆ ಸ್ವರ್ಗ ಎಂಬ ನೀತಿಯಿಂದ ವೀರರು ಹೋರಾಡಿದರು. ಕಷ್ಟ ಪಟ್ಟರೆ ಸುಖ; ದುಡಿಮೆಯೇ ಸಂಪತ್ತು ಎಂಬ ನಂಬಿಕೆ ಇತ್ತು. ಎಲ್ಲ ಪ್ರಜೆಗಳು ಸಮಾನವಾಗಿರಲಿಲ್ಲ.

ವಿಜಯನಗರದ ತಮಿಳುನಾಡಿನ ನಾಯಕ ಮನೆತನಗಳನ್ನು ತಮ್ಮ ಸ್ಥಾನಗಳನ್ನು ೧೫೬೫ರ ನಂತರವೂ ಮುಂದುವರಿಸಿರುವುದು ವಿಜಯನಗರೋತ್ತರ ಕಾಲದಲ್ಲಿಯೂ ಕಂಡುಬರುತ್ತದೆ. ಮದುರೈ, ಜಿಂಜಿ, ಚಂದ್ರಗಿರಿ, ತಂಜಾವೂರು ಮೊದಲಾದ ಮನೆತನಗಳು ವಿಜಯನಗರಕ್ಕೆ ಸಾಮಂತರಾಗಿದ್ದು ವಿಜಯನಗರ ೧೫೬೫ರ ಯುದ್ಧದಲ್ಲಿ ಸೋತರೂ ತನ್ನ ಸ್ಥಾನ ಮುಂದುವರೆಯಿತೆಂಬ ಅಂಶ ತಿಳಿಯುತ್ತದೆ. ಹಾಗೆಯೇ ಈ ನಾಯಕ ಮನೆತನಗಳ ಮೂಲಕ ನಡೆಯುವ ವ್ಯಾಪಾರ ವಾಣಿಜ್ಯದ ಸ್ಥಳಗಳನ್ನು ಮತ್ತು ಕರಾವಳಿ ಪ್ರದೇಶದ ವ್ಯಾಪಾರವನ್ನು ೧೬೫೦ರವರೆಗೂ ವಿಜಯನಗರದ ಅರಸರ ನಿಯಂತ್ರಣದಲ್ಲಿ ಮುಂದುವರಿದಿರುವುದು ಸ್ಪಷ್ಟ. ಇಲ್ಲಿ ಗಮನಿಸಬೇಕಾಗಿರುವ ಅಂಶವೆಂದರೆ ವಿಜಯನಗರದ ಅವನತಿಯ ನಂತರ ಕರ್ನಾಟಕದ ಎಲ್ಲ ಮನೆತನಗಳು ಸಾರ್ವಭೌಮರಾದರೆ ತಮಿಳನಾಡಿನ ನಾಯಕ ಮನೆತನಗಳು ತಮ್ಮ ನಿಷ್ಠೆಯನ್ನು ಮುಂದುವರಿಸಿರುವುದು ಕಂಡುಬರುತ್ತದೆ.

ವಿಜಯನಗರೋತ್ತರ ಕಾಲವು ರಾಜಕೀಯ ಆರ್ಥಿಕ ಹಿನ್ನೆಲೆಯಲ್ಲಿ ಮಹತ್ವವನ್ನು ಪಡೆದ ಕಾಲವೆಂದು ಪರಿಗಣಿಸಲಾಗಿದೆ. ಈ ಸಾಮಂತ ಪ್ರಭುತ್ವಗಳನ್ನು ತಮ್ಮ ಸ್ಥಾನವನ್ನು ಗಟ್ಟಿಗೊಳಿಸಲು ಹೊಸದೊಂದು ಆರ್ಥಿಕತೆಯನ್ನು ರೂಪಿಸಿದರು. ಸಂಸ್ಥಾನಗಳ ಆರ್ಥಿಕತೆಯನ್ನು ಭದ್ರವಾಗಿಸಲು ಕೃಷಿಗೆ ಪ್ರೋತ್ಸಾಹ ಮಾಡಿ ಕೃಷಿ ಭೂಮಿಯನ್ನು ವಿಸ್ತರಿಸುವ ಪ್ರಕ್ರಿಯೆಗಳು ಆರಂಭವಾದವು. ಆರ್ಥಿಕವಾಗಿ ತಮ್ಮ ಸ್ಥಾನ ಮುಂದುವರಿಯಬೇಕಾದರೆ ಕೃಷಿಗೆ ಪ್ರೋತ್ಸಾಹ ನೀಡಬೇಕೆಂದು ತನ್ನ ಪೂರ್ವಪ್ರಭುತ್ವಗಳ ನಿಯಮ ಪಾಲಿಸಿ ಕೃಷಿ ಭೂಮಿಯನ್ನು ವಿಸ್ತರಿಸಿ ಕೃಷಿಗೆ ಪ್ರೋತ್ಸಾಹ ನೀಡಿದರು. ಇದರಿಂದ ಕೃಷಿ ಭೂಮಿ ವಿಸ್ತರಣೆಯಾಗಿ ಹೊಸದೊಂದು ಆರ್ಥಿಕತೆ ಉಗಮವಾಗಿತ್ತು. ಇದಕ್ಕೆ ಪೂರಕವಾಗಿ ಅವರ ಶಾಸನಗಳಲ್ಲಿ ಉಲ್ಲೇಖಿತ ಕಡಾರಂಬ, ನೀರಾರಾಂಬ, ಹಳ್ಳಿ, ಅಗ್ರಹಾರ, ಪುರ ಎಂಬ ಪದಗಳು ಹೆಚ್ಚು ಉಲ್ಲೇಖವಾಗಿರುವುದೇ ಇದಕ್ಕೆ ಸಾಕ್ಷಿಯಾಗಿದೆ.

ಯೂರೋಪಿಯನ್ನರು ಭಾರತಕ್ಕೆ ಆಗಮಿಸಿದ ಕಾಲವಾದ್ದರಿಂದ ಇಲ್ಲಿ ಹೊಸದೊಂದು ರಾಜಕೀಯ ಆರ್ಥಿಕ ಸ್ಥಿತ್ಯಂತರಗಳು ಕಂಡುಬರಲಾರಂಭಿಸಿದವು. ಇವರು ಸ್ಥಳೀಯ ಸಂಸ್ಥಾನಗಳ ರಾಜಕೀಯ ಅರಾಜಕತೆಯನ್ನು ಬಳಸಿಕೊಂಡು ತಮ್ಮ ಸ್ಥಾನವನ್ನು ಗಟ್ಟಿಗೊಳಿಸಿಕೊಳ್ಳುತ್ತಾ ಸ್ಥಳೀಯ ಅರಸರಿಂದಲೇ ಭೂಮಿ ಪಡೆದು ಕರ್ನಾಟಕದ ಕರಾವಳಿಯಲ್ಲಿ ನೆಲೆಯೂರಿದ್ದರಿಂದ ಅವರು ಪರಿಚಯಿಸಿದ ಹೊಸ ಕೃಷಿ ವಿಧಾನಗಳು ಕರ್ನಾಟಕದಾದ್ಯಂತ ಅಳವಡಿಸಿಕೊಳ್ಳಲಾಗಿ ಹೆಚ್ಚು ವಾಣಿಜ್ಯ ಬೆಳೆಗಳನ್ನು ಬೆಳೆದರು. ಈ ಮೂಲಕ ಕೃಷಿ ಭೂಮಿ ವಿಸ್ತರಣೆಯಾಗಿ ವ್ಯಾಪಾರ-ವಾಣಿಜ್ಯವು ಅಭಿವೃದ್ಧಿಯನ್ನು ಕಂಡುಕೊಂಡಿತ್ತು. ಈ ಬೆಳವಣಿಗೆಯು ಮುಂದೆ ವಸಾಹತು ಪರಿಕಲ್ಪನೆಯ ರೂಪ ಪಡೆದು ಭಾರತವನ್ನು ಬಳಗೊಂಡಂತೆ ಕರ್ನಾಟಕ ವಸಾಹತುವಾಯಿತು.

ಬಹುಮುಖ್ಯವಾಗಿ ಭಾರತದ ಚರಿತ್ರೆಯನ್ನು ಅಧ್ಯಯನ ಮಾಡುವಂತಹ ಸಂದರ್ಭದಲ್ಲಿ ಕೆಲವು ಮುಖ್ಯ ಸಮಸ್ಯೆಗಳು ಕಾಡುತ್ತವೆ. ಅವುಗಳೆಂದರೆ ವಿಜಯನಗರ ದಕ್ಷಿಣ ಭಾರತವನ್ನು ಪ್ರತಿನಿಧಿಸಿದ ಸಾಮ್ರಾಜ್ಯವಾಗಿ ಗುರುತಿಸಿಕೊಂಡಿದ್ದು, ಉತ್ತರದಲ್ಲಿ ಮೊಗಲರ ಪ್ರತಿನಿಧೀಕರಣವಿದೆ. ನಂತರ ವಿಜಯನಗರ ಸಾಮ್ರಾಜ್ಯದ ಅಧೀನದಲ್ಲಿದ್ದ ಪಾಳೆಯಪಟ್ಟುಗಳು ಅಥವಾ ಅಮರನಾಯಕರು ಕ್ರಿ.ಶ.೧೫೬೫ರಲ್ಲಿ ನಡೆದ ರಕ್ಕಸಗಿ-ತಂಗಡಗಿ ನಿರ್ಣಾಯಕ ಯುದ್ಧದಲ್ಲಿ ಭಾಗವಹಿಸಿ ಆ ಸಿಂಹಾಸನದ ಪರವಾಗಿ ಹೋರಾಡಿದವರು ೭೨ ವಂಶದ ನಾಯಕರು/ಅನುಯಾಯಿಗಳೆಂದು ತಿಳಿಸಲಾಗಿದ್ದು, ಆ ಸಂಸ್ಥಾನಿಕರ ಹೆಸರುಗಳನ್ನು ನೀಡಲಾಗಿದೆ.

| | | | |
|---|---|---|---|
| ಆನೆಗೊಂದಿ | ಕಡಪ | ಚನ್ನಪಟ್ಟಣ | ಚಿತ್ರದುರ್ಗ |
| ಕಿತ್ತೂರು | ಕಂಪಲಿ | ರತ್ನಗಿರಿ | ತಲಚೇರಿ |
| ಮಲೇದುರ್ಗ | ನಿಡುಗಲ್ಲು | ತಂಜಾವೂರು | ಕನಕಗಿರಿ |
| ಶಿರಾ | ಸುರಪುರ | ಗುಡಿಗುಂಟ | ಬಳ್ಳಾರಿ |
| ಹಾಗಲವಾಡಿ | ಲೇಪಾಕ್ಷಿ | ಸ್ವಾದಿ | ಮಂಗಳೂರು |
| ಮದುರೆ | ಮೊಳಕಾಲ್ಮೂರು | ಬಸವಾಪಟ್ಟಣ | ಆದವಾನಿ |
| ರಾಯದುರ್ಗ | ಬೇಲೂರು | ಚಂದ್ರಗಿರಿ | ಪೆನುಗೊಂಡ |
| ಬಾದಾಮಿ | ಚಿಕ್ಕನಾಯಕನಹಳ್ಳಿ | ಮದಮಸೂರ | ದೊರೆಮತಿ |
| ಗುಡಿಬಂಡೆ | ಗುಬ್ಬಿ | ಮುದಿಮಡಗು | ತಲಕಾಡು |
| ದೊಡ್ಡೇರಿ | ಇಕ್ಕೇರಿ | ಜರಿಮಲೆ | ಕೊಲ್ಲಾಪುರ |
| ಚಂದಾವರ | ಗುಡೇಕೋಟೆ | ರಾಯಚೂರು | ನನ್ನಿವಾಳ |
| ಗೋನೂರು | ಹದಿನಾಡು | ಬಿದನೂರು | ಕಾರುಗನಹಳ್ಳಿ |
| ಯಳಂದೂರು | ಮಂಡೀಕೋಟೆ | ಹರತಿಕೋಟೆ | ನಂದಿಯಾಳ |
| ಬಂಕಾಪುರ | ಐಮಂಗಲ | ಹುಳಿಯಾರು | ಶಿವರ |
| ತರೀಕೆರೆ | ಕಾರಟಗಿ | ದೇವನಹಳ್ಳಿ | ಹರಪನಹಳ್ಳಿ |
| ಕರಜಗಿ | ಪುರವರ | ಹೊಸಕೋಟೆ | ಮುಟ್ಟಿ |
| ಮಿಡಿಗೇಶಿ | ಕುಂದಾಪುರ | ಉಚ್ಚಂಗಿದುರ್ಗ | ಗುತ್ತಿ |
| ಬಾಗೂರು | ಮತ್ತೋಡು | ಬೆಳಗುತ್ತಿ | ಕಂಗುಂದಿ |
| ನಾಯಕನಹಟ್ಟಿ | ಸುಗಟೂರು | ಆನೇಕಲ್ಲು | ಹಿರಿಯೂರು |
| ಮಾಸ್ತಿ | ಚಿಕ್ಕಬಳ್ಳಾಪುರ | ಕುಪ್ಪಂ | ಅಜ್ಜಂಪುರ |
| ಮಾಗಡಿ | ಕೆಂಚನಗುಡ್ಡ | ಬೆಳವಡಿ | ಬಾಗಲೂರು |
| ಗುಮ್ಮನಾಯಕನಪಾಳ್ಯ | ರಾಮನಗರ(ರಾಮಗಿರಿ) | ಕುಣಿಗಲ್ಲು | |
| ಗುಡಿಬಂಡೆ | ಗುಬ್ಬಿ | ಮುದಿಮಡಗು | |

(ತೆಲಗಾವಿ,೨೦೧೦:೧೩,೧೪).

ವಿಜಯನಗರೋತ್ತರ ಕಾಲದಲ್ಲಿ ೭೨ ಪಾಳೆಯಪಟ್ಟುಗಳಲ್ಲದೆ. ಹೈದರಾಬಾದ್ ಪತ್ರಾಗಾರ ಇಲಾಖೆಯ ಬ್ರಿಟಿಶ್ ದಾಖಲೆಯಲ್ಲಿ ೮೦ ಪಾಳೆಯ ಪಟ್ಟುಗಳ ಉಲ್ಲೇಖವಿದೆ ಎಂದು ಡಾ.ವಿರೂಪಾಕ್ಷಿ ಪೂಜಾರಹಳ್ಳಿ ಅವರು ಅಭಿಪ್ರಾಯ ಪಡುತ್ತಾರೆ.

ವಿಜಯನಗರೋತ್ತರ ಕಾಲದಲ್ಲಿ ಅನೇಕ ಪಾಳೆಯಪಟ್ಟುಗಳು ಕಂಡುಬರುತ್ತವೆ. ಆದರೆ ನಂತರ ಕೆಳದಿ, ಚಿತ್ರದುರ್ಗ, ಮೈಸೂರು, ಬಿಜಾಪುರದ ಚರಿತ್ರೆ ಕುರಿತು ಹೆಚ್ಚು ಅಧ್ಯಯನಗಳಾಗಿ ಗುರುತಿಸಿಕೊಂಡಿವೆ. ಜಾತಿಯ ರಾಜಕಾರಣವೂ ಕಂಡುಬರುತ್ತದೆ. ವಿಜಯನಗರೋತ್ತರ ಕಾಲದಲ್ಲಿ ವೀರಶೈವ ಧರ್ಮವು ಹೆಚ್ಚು ಪ್ರಚಾರಕ್ಕೆ ಬಂದಿತು. ಮೈಸೂರು ಮತ್ತು ಕೆಳದಿ ಮನೆತನಗಳು ವೀರಶೈವ ಮತಕ್ಕೆ ಬೆಂಬಲ ನೀಡಿದ್ದರಿಂದ ಹೆಚ್ಚಾಗಿ ಗುರುತಿಸಿಕೊಂಡವು.

ವಿಜಯನಗರ ಅಥವಾ ಕರ್ನಾಟಕ ಸಿಂಹಾಸನಕ್ಕೆ ಸಾಮಂತರಾಗಿದ್ದುಕೊಂಡು ತಮ್ಮ ತಮ್ಮ ಪ್ರಾಂತ್ಯಗಳಲ್ಲಿ ಆಳ್ವಿಕೆ ನಡೆಸಿದವರು ಹಾಗೂ ಕ್ರಿ.ಶ.೧೫೬೫ರಲ್ಲಿ ನಡೆದ ತಾಳಿಕೋಟೆ ಯುದ್ಧದ ನಂತರ ಅನೇಕ ಪಾಳೆಯಗಾರರು ಅರಸರಾಗಿ ತಮ್ಮ ತಮ್ಮ ಪ್ರದೇಶಗಳಲ್ಲಿ ಸಂಸ್ಥಾನ ಅಥವಾ ಆಡಳಿತ ಕೇಂದ್ರಗಳಲ್ಲಿ ತಮ್ಮದೇ ಆದ ಪ್ರಾದೇಶಿಕ ಚರಿತ್ರೆ ರೂಪಿಸುವ ಹಂತ ಹೊಂದಿದ್ದು, ತಮ್ಮದೇ ನೀತಿಗಳನ್ನು ರೂಪಿಸಿರುವುದು ಚರಿತ್ರೆಯಲ್ಲಿವೆ.

ವಿಜಯನಗರ ಕೈಕೆಳಗಿದ್ದು ಮುಂದೆ ಒಂದು ರೀತಿಯಲ್ಲಿ ಸ್ವತಂತ್ರರಾದ ಪಾಳೆಯಗಾರರ ಪಟ್ಟಿ ತಯಾರಿಸುವಿಕೆ, ಅವರ ಅಧಿಕಾರ ವ್ಯಾಪ್ತಿ, ಇವುಗಳ ವಿವರಗಳನ್ನೊಳಗೊಂಡ ಒಂದು ನಕಾಶೆಯ ರಚನೆ ಮಾಡಲು ಅವಕಾಶವಿದೆ. ಈಗ ಕೆಲವೊಂದು ಹಿರಿಕಿರಿಯ ಪಾಳೆಯಗಾರರ ಬಗ್ಗೆ ಬಿಡಿಬಿಡಿಯಾಗಿ ಅಧ್ಯಯನ ಸಾಗಿದೆ. ಆದರೆ ಈ ಬಗ್ಗೆ ಒಂದು ಸಮಗ್ರ ಅಧ್ಯಯನ ಆಗಬೇಕು. ಅವರ ಆಡಳಿತ ಕ್ರಮ, ಅದರಲ್ಲಿ ಬೇರೆ ಬೇರೆ ಪಾಳೆಯಗಾರರು ಜಾರಿಗೆ ತಂದಿರಬಹುದಾದ ಸುಧಾರಣೆಗಳು ಅಧ್ಯಯನ ಯೋಗ್ಯವಾಗಿವೆ. ಇದು ಒಂದು ಸಂಕಲಿತ ಅಧ್ಯಯನ ಆಗಬೇಕು. ಅವರ ಕಾಲದಲ್ಲಿ ರಚನೆಯಾದ ಕಲಾತ್ಮಕ ದೇವಾಲಯ; ಸೌಧಗಳು ಅವರು ಪ್ರೋತ್ಸಾಹಿಸಿದ ಕವಿಗಳು, ವಿದ್ವಾಂಸರು ಮುಂತಾದ ಸಂಗತಿಗಳ ಜೊತೆ ಅವರ ಪರಸ್ಪರ ರಾಜಕೀಯ ಹಾಗೂ ಆರ್ಥಿಕ ಸಂಬಂಧಗಳ ಚಿತ್ರವೂ ಇಲ್ಲಿ ಮೂಡಿ ಬರಬೇಕು. ಕೆಳದಿ, ಮೈಸೂರು, ನಿಜಾಮರ ಅರಸರ ಬಗ್ಗೆ ಅಧ್ಯಯನ ನಡೆದಂತೆ ಇಂಥ ೧೫೦ಕ್ಕೂ ಸಣ್ಣಪುಟ್ಟ ಪಾಳೆಯಗಾರರಾದರೂ ವಿಜಯನಗರೋತ್ತರ ಕಾಲದಲ್ಲಿ ಇದ್ದು ಇವರಲ್ಲಿ ಕೆಲವರು ಮುಂದೆ ವಿಜಾಪುರಕ್ಕೆ ಅಧೀನರಾದರು, ಹೈದರಾಲಿಯ ಕಾಲದವರೆಗೂ ಇವರ ಪ್ರಾಬಲ್ಯ ಮುಂದುವರಿಯಿತು(ಕಾಮತ್ ೧೯೯೮:೨೫೫). ಇದರಿಂದ ರಾಜಕೀಯ ಚರಿತ್ರೆಯಲ್ಲಿ ಸ್ಥಾನ ಪಡೆದ ವಿಜಯನಗರೋತ್ತರ ಕಾಲವು ಆರ್ಥಿಕವಾಗಿ ಈ ಕಾಲದಲ್ಲಿ ಗುರುತಿಸಿಕೊಳ್ಳಲಾರಂಬಿಸಿ ದಾಗ ಹೊಸದೊಂದು ಆರ್ಥಿಕ ಸ್ವರೂಪ ಸಂತೆ ಮತ್ತು ಮಾರುಕಟ್ಟೆಕೇಂದ್ರಿತ ವ್ಯಾಪಾರ ವಾಣಿಜ್ಯ ಸ್ವರೂಪ ಪಡೆದು ವಿಶ್ವಕ್ಕೆ ಭಾರತದ ಮಾರುಕಟ್ಟೆಯನ್ನು ತೆರೆದ ಕಾಲವಾಗಿದೆ. ಆದ್ದರಿಂದ ಸ್ಥಳೀಯಕೇಂದ್ರಿತ ವ್ಯಾಪಾರವು ಹೊಸದೊಂದು ಅರ್ಥವ್ಯವಸ್ಥೆಯನ್ನು ಕಂಡುಕೊಂಡ ಕಾಲವೆಂದೇ ಗಮನಿಸಬೇಕಾಗುತ್ತದೆ. ಗತ ಮತ್ತು ವರ್ತಮಾನದ ಘಟನೆಗಳು ರಾಜಕೀಯ ಹೊಸ ಆಯಾಮಗಳಿಗೆ ಹೊಸ ಸನ್ನಿವೇಶಗಳನ್ನು ಸೃಷ್ಟಿಸಿತ್ತು. ಅದೇ ಆರ್ಥಿಕ ವಾಣಿಜ್ಯ ವ್ಯವಸ್ಥೆ.

ವಿಜಯನಗರ ಸಾಮ್ರಾಜ್ಯ ಪತನವಾದರೂ ಪೆನುಗೊಂಡೆಯಿಂದ ಆಡಳಿತ ನಡೆಸುತ್ತಿದ್ದ ಇದೇ ಮನೆತನದ ರಾಜರು ಕರ್ನಾಟಕದ ದಕ್ಷಿಣ ಭಾಗದ ಬಹುತೇಕ ಭಾಗಗಳ ಮೇಲೆ ಪರಂಪರಾಗತವಾಗಿ ಬಂದಿದ್ದಂತಹ ರಾಜಕೀಯ ಹಿಡಿತವನ್ನು ಹೊಂದಿದ್ದರು. ಆದರೂ ಪೆನುಗೊಂಡೆಯಿಂದ ಈ ಎಲ್ಲ ಭಾಗವನ್ನು ಶಿಸ್ತುಬದ್ಧವಾಗಿ ಸುಪರ್ದಿನಲ್ಲಿಟ್ಟುಕೊಳ್ಳುವುದು ಕಷ್ಟಸಾಧ್ಯದ ಕೆಲಸವಾಗಿತ್ತು. ಪೆನುಗೊಂಡೆಯಿಂದ ಆಳುತ್ತಿದ್ದ ವೆಂಕಟ, ಶ್ರೀರಂಗರು ಸಾಕಷ್ಟು ದಕ್ಷರಾಗಿದ್ದರೂ ಕೂಡ ಅವರ ಪೂರ್ವಜರಿಗಿದ್ದ ರಾಜಕೀಯ ವೈಶಾಲ್ಯತೆ ಇವರಿಗಿರಲಿಲ್ಲ. ಪ್ರಾಯಶಃ ಅವರ ಪರವಾಗಿ ಈ ಭಾಗದಲ್ಲಿ ಆಳ್ವಿಕೆ ಮಾಡುತ್ತಿದ್ದ ದಳಪತಿಗಳು ಹಾಗೂ ಅಮರನಾಯಕರು ಕ್ರಮೇಣವಾಗಿ ಕ್ಷೀಣರಾಗುತ್ತಿದ್ದರು(ಬಸವರಾಜು,೧೯೮೪:೨೭).

ಇಂತಹ ಸಂದರ್ಭದಲ್ಲಿಯೇ ಚಿತ್ರದುರ್ಗದ ನಾಯಕರು, ಕೆಳದಿ ನಾಯಕರು, ಮೈಸೂರು ಅರಸರು ಸ್ವತಂತ್ರ ರಾಜಕೀಯ ವ್ಯವಸ್ಥೆಗೆ ಅಡಿಪಾಯ ಹಾಕಿದರು. ಇವರಿಗೆ ಸಮಕಾಲೀನವಾಗಿ ಶ್ರೀರಂಗಪಟ್ಟಣದಲ್ಲಿ ರಾಜ ಒಡೆಯರು, ಮೈಸೂರು ರಾಜಮನೆತನದ ಅಸ್ತಿಭಾರ ಹಾಕಿದ್ದರು. ಇತ್ತ ಮಲೆನಾಡು ಪ್ರದೇಶದ ಕೆಳದಿಯ ರಾಜಮನೆತನ ಸೋದೆಯ ಅರಸರು ಕರಾವಳಿ ಹಾಗೂ ಘಟ್ಟ ಪ್ರದೇಶಗಳ ಮೇಲೆ ಹಿಡಿತ ಸಾಧಿಸಿದ್ದರು. ಬಯಲುಸೀಮೆಯಾದ ಉತ್ತರ ಕರ್ನಾಟಕದ ಸುರಪುರದಲ್ಲಿ ನಾಯಕ ಮನೆತನ ಸ್ಥಾಪನೆಯಾಗಿತ್ತು. ಬಿಜಾಪುರ, ಗೋಲ್ಕಂಡ, ಬೀದರ್‌ಗಳಲ್ಲಿ ಆದಿಲ್‌ಶಾಹಿ, ಕುತುಬ್ ಶಾಹಿ, ಅಹಮದ್ ನಗರದ ನಿಜಾಮ್‌ಶಾಹಿ ಹಾಗೂ ಬರೀದ್‌ಶಾಹಿಗಳು ಆಳ್ವಿಕೆ ನಡೆಸುತ್ತಿದ್ದರು. ಅತ್ತ ದೆಹಲಿಯಲ್ಲಿ ಮೊಗಲ್ ಸಾಮ್ರಾಟ ಅಕ್ಬರನ ಮಗ ಜಹಾಂಗೀರ ಮತ್ತು ಅವನ ಮಗನಾದ ಷಹಜಹಾನ್ ಆಳ್ವಿಕೆ ನಡೆಸುತ್ತಿದ್ದರು. ಗಟ್ಟಿಯಾಗಿ ನೆಲೆಯೂರಿ ತಮ್ಮ ವಸಾಹತುವನ್ನು ಸ್ಥಾಪಿಸಿದ್ದರು. ಅಲ್ಲದೆ ಇಂಗ್ಲೆಂಡಿನ ಈಸ್ಟ್ ಇಂಡಿಯನ್ ಟ್ರೇಡಿಂಗ್ ಕಂಪನಿಯ ಹೆಸರಿನಲ್ಲಿ ಭಾರತವನ್ನು ಪ್ರವೇಶಿಸಿದ್ದು ಬ್ರಿಟಿಶರು ಕ್ರಮೇಣವಾಗಿ ಆರ್ಥಿಕವಾಗಿ ಮತ್ತು ರಾಜಕೀಯವಾಗಿ ತಮ್ಮ ನೆಲೆಯನ್ನು ಗಟ್ಟಿಗೊಳಿಸಿಕೊಳ್ಳುತ್ತಿದ್ದರು(ಮಂಜಣ್ಣ,೨೦೧೦:೨೨,೨೩).

ಬಹುಮುಖ್ಯವಾಗಿ ಭಾರತದೊಂದಿಗೆ ವ್ಯಾಪಾರವು ಐರೋಪ್ಯ ವರ್ತಕರಿಗೆ ಒಂದು ಮುಖ್ಯವಾದ, ಜಟಿಲವಾದ ಕಾರ್ಯವಾಗಿದ್ದಿತು. ಸಾಮಾನ್ಯವಾಗಿ ಈ ವ್ಯಾಪಾರಗಾರರು ಸ್ಥಾಪಿಸಿದ ಕಂಪನಿಗಳಿಗೆ ಅವರವರ ಸರಕಾರಗಳ ಬೆಂಬಲವಿದ್ದಿತು. ಮೂಲತಃ ಈ ಪೈಪೋಟಿಯು ಈ ಬಿಡಿ ಕಂಪನಿಗಳ ನಡುವೆಯಲ್ಲ ಆದರೆ ಅವುಗಳ ಸರಕಾರಗಳ ನಡುವೆ ಇದ್ದಿತು. ಭಾರತಕ್ಕೆ ಬಂದ ಪೋರ್ಚುಗೀಸ್ ಸಾಹಸ ತಂಡಗಳಿಗೆ ಪೋರ್ಚುಗೀಸ್ ದೊರೆಯೇ ಸಾಧನ ಸಜ್ಜು ಒದಗಿಸಿದ್ದ, ಹಣಕಾಸು ನೀಡಿದ್ದ(ಅಂತೋನವ&ಕತೋವ್‌ಸ್ಕಿ,೧೯೮೮:೧೫).

ಡಚ್ಚರೂ ಬ್ರಿಟಿಶರೂ ಸ್ಥಾಪಿಸಿದ್ದ ಕಂಪನಿಗಳಿಗೆ ಅವುಗಳ ಸರಕಾರಗಳು ಸನ್ನದುಗಳನ್ನು ನೀಡಿದ್ದವು. ಉದಾಹರಣೆಗೆ, ಹದಿನೇಳನೆಯ ಶತಮಾನದ ಆರಂಭಿಕ ಕಾಲದಲ್ಲಿ ಸ್ಥಾಪಿತವಾದ ಬ್ರಿಟಿಶ್ ಈಸ್ಟ್ ಇಂಡಿಯಾ ಕಂಪನಿಗೆ ಬ್ರಿಟಿಶ್ ಸರಕಾರವು ಕ್ರಮೇಣ ಹೆಚ್ಚು ಹೆಚ್ಚು ಹಕ್ಕುಗಳನ್ನು ನೀಡಿತು. ಬ್ರಿಟಿಶ್ ಸರಕಾರ ಅನುಮೋದಿಸಿದ ಅನೇಕ ಸನ್ನದುಗಳು ಬ್ರಿಟನ್ನಿನಲ್ಲಿ ಈ ಕಂಪನಿಯ

ಸ್ಥಾನವನ್ನು ಭದ್ರಪಡಿಸುವುದರಲ್ಲಿ ಪ್ರಮುಖ ಘಟನೆಗಳಾಗಿದ್ದವು. ೧೬೫೭ರ ಕ್ರಾಮ್‌ವೆಲ್ ಸನ್ನದು ಈಸ್ಟ್ ಇಂಡಿಯಾ ಕಂಪನಿಗೆ ಯುದ್ಧ ಘೋಷಿಸುವ ಹಾಗೂ ಶಾಂತಿ ಒಪ್ಪಂದ ಮಾಡಿಕೊಳ್ಳುವ ಹಕ್ಕು ನೀಡಿದ ೧೬೬೧ರ ಸನ್ನದು, ನಾಣ್ಯಗಳನ್ನು ಟಂಕಿಸುವ, ಕೋರ್ಟ್ ಮಾರ್ಷಲ್ ನಡೆಸುವ, ತನ್ನ ಸ್ವಂತ ಸೈನ್ಯವನ್ನೂ, ನೌಕಾದಳವನ್ನೂ ಇರಿಸಿಕೊಳ್ಳುವ ಹಕ್ಕನ್ನು ಕಂಪನಿಗೆ ನೀಡಿದ ೧೬೮೬ ಸನ್ನದು, ಇವುಗಳಲ್ಲಿ ಮುಖ್ಯವಾದವು. ೧೬೯೮ರಲ್ಲಿ ಖಾಸಗಿ ವರ್ತಕರ ವೃಂದವೊಂದು ಮತ್ತೊಂದು ಈಸ್ಟ್ ಇಂಡಿಯಾ ಕಂಪನಿಯನ್ನು ಸ್ಥಾಪಿಸಿತು. ಈ ಎರಡು ಕಂಪನಿಗಳೂ ೧೭೦೨ರಲ್ಲಿ ಮಿಲನಗೊಂಡಾಗ ಈ ಕ್ರಮಕ್ಕೆ ಬ್ರಿಟಿಶ್ ಪಾರ್ಲಿಮೆಂಟು ೧೭೦೮ರಲ್ಲಿ ಒಂದು ಶಾಸನದ ಮೂಲಕ ಅಧಿಕೃತ ಮನ್ನಣೆ ನೀಡಿತು. ಅಂದಿನಿಂದಾಚೆಗೆ ಭಾರತದಲ್ಲಿ ಈ ಕಂಪನಿಯ ಚಟುವಟಿಗಳು ಶೀಘ್ರಗತಿಯಲ್ಲಿ ಬೆಳೆದವು(ಸ್ಟೋಕ್‌ಡಾಲೆ&ಪಿಕಾಡ್ಲೆ, ೧೮೦೨ :೭೩).

ಇಂತಹ ಸಂದಿಗ್ಧ ಸನ್ನಿವೇಶದಲ್ಲಿ ಪಾಳೆಯಗಾರರು ತಮ್ಮ ಅಸ್ತಿತ್ವವನ್ನು ಕಂಡುಕೊಂಡ ಕಾಲವಾಗಿದೆ. ಒಟ್ಟಾರೆಯಾಗಿ ಆ ಕಾಲದ ರಾಜಕೀಯ ಚಟುವಟಿಕೆಗಳ ಪಕ್ಷಿನೋಟವನ್ನು ನೋಡಿದಾಗ ಪ್ರತಿಯೊಂದು ರಾಜಮನೆತನವು ರಾಜಕೀಯ ಅಸ್ತಿತ್ವ ಮತ್ತು ರಾಜಕೀಯ ಲಾಭ ಪಡೆದುಕೊಳ್ಳುವ ಭರಾಟೆಯಲ್ಲಿ ತೊಡಗಿದ್ದವು. ಇಂತಹ ಸನ್ನಿವೇಶ ಪರಾಂಪರಾಗತವಾಗಿ ನಾಡಿನ ಹಾಗೂ ಜನರ ಸೇವೆಯನ್ನು ಮಾಡಿಕೊಂಡು ಬಂದಿದ್ದಂತಹ ಮನೆತನಗಳಿಗೆ ಮೊದಲ ಆದ್ಯತೆಯನ್ನು ನೀಡಿದಂತೆ ಕಾಣುತ್ತದೆ. ಏಕಾಏಕಿ ಒಂದು ಮನೆತನ ಸ್ವಯಂ ಭೂಲಿಂಗದಂತೆ ಉದ್ಭವವಾಗುವುದಿಲ್ಲ. ಆ ಮನೆತನದ ವೀರ, ಶೂರರ ವರ್ಚಸ್ಸು, ಕಠಿಣ ಪರಿಶ್ರಮ, ಜನಜಾಗೃತಿ, ಜನಸಮುದಾಯ ಹಾಗೂ ದೈನಂದಿನ ಸಾಮಾಜಿಕ, ಆರ್ಥಿಕ ಹಾಗೂ ಧಾರ್ಮಿಕ ಸಮಸ್ಯೆಗಳನ್ನು ಪರಿಹರಿಸುವ ಜಾಣ್ಮೆ ಇವೆಲ್ಲವುಗಳು ಒಂದು ಮನೆತನಕ್ಕೆ ರಾಜಕೀಯ ಅಗ್ರಪಂಕ್ತಿಯ ಸ್ಥಾನವನ್ನು ಕಲ್ಪಿಸುವಲ್ಲಿ ಸಹಾಯ ಮಾಡುತ್ತವೆ.

ಚಿತ್ರದುರ್ಗ ನಾಯಕರು, ಕೆಳದಿ ನಾಯಕರು, ಮೈಸೂರು ಅರಸರು, ಕಳಲೆ ಮನೆತನ, ಯಲಹಂಕ ನಾಡಪ್ರಭುಗಳ ಬಗ್ಗೆ ಕೆಲಸ ಮಾಡಿದ ವಿದ್ವಾಂಸರು ಅವರ ಉಗಮವನ್ನು ಕುರಿತಂತೆ ವಿವಿಧ ಚರ್ಚೆಗಳನ್ನು ಮಾಡಿದ್ದಾರೆ. ಸರ್ವೇಸಾಮಾನ್ಯವಾಗಿ ಬೇರೆ ಮನೆತನಗಳ ಉಗಮವನ್ನು ಪೌರಾಣಿಕ ಹಿನ್ನೆಲೆಗೆ ಹೋಲಿಸುವ ಹಾಗೆ ಇಲ್ಲಿಯೂ ಕೂಡ ಈ ನಾಯಕರುಗಳ ಮನೆತನದ ಉಗಮವನ್ನು ಪೌರಾಣಿಕ ಹಿನ್ನೆಲೆಯಿಂದಲೇ ಸೂಚಿಸಿದ್ದಾರೆ(ಶ್ರೀನಿವಾಸ&ತೆಲಗಾವಿ, ೧೯೫೫:೧,೧೪). ಅಲ್ಲದೆ ಮೊಟ್ಟಮೊದಲ ರಾಜನ ಬಗ್ಗೆ ನಂತರದ ದಾಖಲೆಗಳು ಇದ್ದರೂ ಕೂಡ ಒಂದು ತೆರನಾದ ಕಥಾನಕ ವಿವರಣೆಗಳೇ ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುತ್ತವೆ. ಈ ವಿವರಣೆಗಳ ಸತ್ಯಾಸತ್ಯತೆಯನ್ನು ತಿಳಿಯಲು ಸೂಕ್ಷ್ಮ ಅಧ್ಯಯನದ ಅವಶ್ಯಕತೆ ಇದೆ.

ಚಿತ್ರದುರ್ಗ ನಾಯಕರ ಆರ್ಥಿಕ ನೀತಿಯನ್ನು ಪರಿಶೀಲಿಸಿದಾಗ ನಾಯಕರು ಆಳಿದ ಚಿತ್ರದುರ್ಗ ಜಿಲ್ಲೆಯ ಹೆಚ್ಚಿನ ಪ್ರದೇಶ ಭೌಗೋಳಿಕವಾಗಿ ಬಯಲುಸೀಮೆ ಸಮತೋಲನವನ್ನು ಪಡೆದುಕೊಂಡಿತ್ತು. ಪ್ರಾಕೃತಿಕ ಸಂಪನ್ಮೂಲಗಳಾದ ಹವಾಗುಣ, ಖನಿಜ, ಜಲಸಂಪತ್ತು, ಕಾಡು, ಹೊರಗಿನಿಂದ ಜನರನ್ನು

ವಲಸೆ ಬರುವಂತೆ ಆಹ್ವಾನಿಸುವಷ್ಟು ಸಮೃದ್ಧವಾಗಿತ್ತು. ಮಿಶ್ರ ಬೇಸಾಯ ವಾಣಿಜ್ಯ ಬೆಳೆಗಳು, ಖುಷ್ಕಿ ಬೆಳೆಗಳು, ಕೃಷಿವ್ಯವಸ್ಥೆಯನ್ನು ವೈವಿಧ್ಯಮಯಗೊಳಿಸಲಾಗಿತ್ತು. ಬುಡಕಟ್ಟು ವೃತ್ತಿಗಳಾದ ಪಶುಪಾಲನೆ, ಕುರಿ ಸಾಕಣೆ, ಹೈನುಗಾರಿಕೆ, ಆರ್ಥಿಕ ವ್ಯವಸ್ಥೆಯನ್ನು ಸಮೃದ್ಧಗೊಳಿಸಿದ್ದವು. ಇಂತಹ ಆರ್ಥಿಕ ಸಮತೋಲನದ ಪರಿಣಾಮವಾಗಿ ಸಂಸ್ಥಾನ ಆರ್ಥಿಕವಾಗಿ ಅಭಿವೃದ್ಧಿ ಹೊಂದಿತ್ತು. ಚಿತ್ರದುರ್ಗದ ನಾಯಕರು ವಿಜಯನಗರ ಅರಸರ ಮಾರ್ಗದಲ್ಲಿಯೇ ಮುನ್ನಡೆದು ಸ್ಥಳೀಯ ಬುಡಕಟ್ಟು ಸಂಸ್ಕೃತಿಯ ಆರ್ಥಿಕ ವ್ಯವಸ್ಥೆಯ ಪರಂಪರೆಯನ್ನು ಉಳಿಸಿಕೊಂಡು ಬಂದಿದ್ದರು.

ಕೆಳದಿ ನಾಯಕರ ಆರ್ಥಿಕ ನೀತಿಯನ್ನು ಪರಿಶೀಲಿಸಿದಾಗ ನಾಯಕರು ಆಳಿದ ಕೆಳದಿ, ಇಕ್ಕೇರಿ, ಶಿವಮೊಗ್ಗ ಜಿಲ್ಲೆಯ ಹೆಚ್ಚಿನ ಪ್ರದೇಶ ಭೌಗೋಳಿಕವಾಗಿ ಮಲೆನಾಡು ಪ್ರದೇಶವಾಗಿ ಸಮತೋಲನವನ್ನು ಪಡೆದುಕೊಂಡಿತ್ತು. ಕರಾವಳಿ ಕರ್ನಾಟಕ ತೋಟದ ಮತ್ತು ಗದ್ದೆ ಬೆಳೆಗೆ ಪ್ರಸಿದ್ಧವಾಗಿದ್ದು. ಸಂಜಯ್ ಸುಬ್ರಮಣ್ಯಂ ಅವರು ಯಾವುದೇ ಒಂದು ಪ್ರದೇಶ ಬೆಳೆಗೆ ಯಾವ ರೀತಿ ಪೂರಕವಾಗಿರುತ್ತದೆ ಎಂಬ ಅಂಶವನ್ನು ವಿವರಿಸುತ್ತಾ, ಬಸ್ರೂರು ಅಕ್ಕಿ ಬೆಳೆಗೆ ಅಲ್ಲಿನ ಪರಿಸರ ಹೇಗೆ ಸಹಾಯಕವಾಗಿದೆ ಎಂದು ವಿವರಿಸುತ್ತಾರೆ. ಚಿತ್ರದುರ್ಗ ಪಾಳೆಯಗಾರರ ಬಯಲುಸೀಮೆಯಂತೆಯೇ ವಿವಿಧ ಖನಿಜಸಂಪತ್ತು, ಕೃಷಿಸಂಪತ್ತು ಸಮೃದ್ಧವಾಗಿತ್ತು. ಕೆಳದಿಯ ನಾಯಕರು ವಿಜಯನಗರ ಅರಸರ ಮಾರ್ಗದಲ್ಲಿಯೇ ಮುನ್ನಡೆದು ಸ್ಥಳೀಯ ಮಲೆನಾಡ ಸಂಸ್ಕೃತಿಯ ಆರ್ಥಿಕ ವ್ಯವಸ್ಥೆಯ ಪರಂಪರೆಯನ್ನು ಉಳಿಸಿಕೊಂಡು ಬಂದಿದ್ದರು

ಮೈಸೂರು ಸಂಸ್ಥಾನವು ಆರ್ಥಿಕವಾಗಿ ಸಮೃದ್ಧಿಯಾಗಿತ್ತು. ರಾಜ ಒಡೆಯರು, ಚಿಕ್ಕದೇವರಾಜ ಒಡೆಯರ ಆಳ್ವಿಕೆಯ ವೇಳೆ ಈ ಪ್ರದೇಶವು ಆರ್ಥಿಕವಾಗಿ ಪ್ರಬಲವಾಗಿತ್ತು. ಮಲೆನಾಡ ಪ್ರದೇಶ ಮತ್ತು ಕಾವೇರಿ ನದಿಯು ಇಲ್ಲಿ ಹರಿಯುತ್ತಿರುವುದರಿಂದ ಇಲ್ಲಿನ ಹವಾಗುಣ ಖನಿಜಸಂಪತ್ತು ಬಲಿಷ್ಠವಾಗಿತ್ತು. ನೀರಾವರಿ ಬೆಳೆಗಳಿಗೆ ಇಲ್ಲಿ ಹೆಚ್ಚಿನ ಬೆಂಬಲ ದೊರೆತ್ತಿದ್ದರಿಂದ ಈ ಸಂಸ್ಥಾನ ಪ್ರಬಲವಾಗಿ ವಸಾಹತು ಪ್ರದೇಶವಾಗಲು ಕಾರಣವಾಯಿತು. ಹೈದರ್ ಮತ್ತು ಟಿಪ್ಪು ಕಾಲದ ವೇಳೆಗೆ ಈ ಪ್ರದೇಶದಲ್ಲಿ ವ್ಯಾಪಾರ ವಾಣಿಜ್ಯಕ್ಕೆ ಅಪಾರ ಬೆಂಬಲ ದೊರೆಯಿತು. ಇಲ್ಲಿ ವಿಶೇಷವಾಗಿ ರೇಷ್ಮೆ ಬೆಳೆಗೆ ಅಪಾರ ಬೆಂಬಲ ನೀಡಿದ್ದರು(ಮಹಾದೇವಮ್ಮ,೨೦೦೮:೧೨೦).

ಪಾಳೆಯಗಾರರ ಆಳ್ವಿಕೆಯ ಕಾಲದಲ್ಲಿ ಕೆರೆಗಳು ನೀರಿನ ಮೂಲಗಳಾಗಿದ್ದವು. ಪ್ರತಿಯೊಂದು ಸಂಸ್ಥಾನ ಮತ್ತು ರಾಜಮನೆತನಗಳು ಕೆರೆ ನೀರಾವರಿಗೆ ಪ್ರೋತ್ಸಾಹವನ್ನು ನೀಡಿದ್ದರು. ಮಲೆನಾಡು ಸಮೃದ್ಧವಾದ ಪ್ರದೇಶವಾದ್ದರಿಂದ ಅಲ್ಲಿ ಅಷ್ಟೊಂದು ಕೆರೆ ನಿರ್ಮಾಣ ಪ್ರಕ್ರಿಯೆ ಕಂಡುಬರುವುದಿಲ್ಲ. ಕರ್ನಾಟಕದ ಎಲ್ಲ ಮನೆತನಗಳು ಹೆಚ್ಚು ಹೆಚ್ಚು ಕೆರೆ ನಿರ್ಮಾಣ ಕಾರ್ಯ ಕೈಗೊಂಡಿದ್ದರು. ಮೈಸೂರು. ಯಲಹಂಕ, ಕನಕಗಿರಿ, ಸುರಪುರ, ಮಧುಗಿರಿ, ಹಂಡೆಮನೆತನ, ಹಾಗಲವಾಡಿ, ಸಂತೆಬೆನ್ನೂರು, ಚಿತ್ರದುರ್ಗ ನಾಯಕರು ಹೀಗೆ ವಿಜಯನಗರೋತ್ತರ ಎಲ್ಲ ಸಾಮಂತ ಮನೆತನಗಳು ಸ್ಥಳೀಯ ಪ್ರದೇಶದ ಕೃಷಿ ಚಟುವಟಿಕೆ ಹಾಗೂ ನೀರಾವರಿಗೆ ಪ್ರೇರಣೆ ನೀಡಲು ಅನೇಕ ಲೋಕೋಪಯೋಗಿ ಕಾರ್ಯಗಳಿಗೆ ಗಮನ ಕೊಟ್ಟಿದ್ದರು. ಚಿತ್ರದುರ್ಗದ ಪಾಳೆಯಗಾರ ಬಿಚ್ಚುಗತ್ತಿ

ಭರಮಪ್ಪ ನಾಯಕ ಸುಮಾರು ೨೮ ಕೆರೆಗಳ ನಿರ್ಮಾಣ ಮತ್ತು ಜೀರ್ಣೋದ್ಧಾರ ಕಾರ್ಯಗಳನ್ನು ನಡೆಸಿದ್ದಾನೆ. ಕೆರೆಯ ಕಾಲುವೆ ನೀರಾವರಿ ಮೂಲಕ ಕೃಷಿ ಉತ್ಪಾದನೆಯನ್ನು ಹೆಚ್ಚಳ ಮಾಡಿ ಮಾರುಕಟ್ಟೆಯಲ್ಲಿ ಲಾಭ ಪಡೆಯುವ ಹಾಗೂ ಕಂದಾಯದ ಮೂಲಕ ತಮ್ಮ ಆಡಳಿತ ಪ್ರದೇಶದ ಅಭಿವೃದ್ಧಿ ಮಾಡುವುದಾಗಿತ್ತು. ಬಹು ಮುಖ್ಯವಾಗಿ ಚಿತ್ರದುರ್ಗ ಪ್ರದೇಶ ನಾಯಕರ ಕಾಲದ ಮುಖ್ಯ ವ್ಯಾಪಾರಿ ಕೇಂದ್ರವಾಗಿದ್ದ ಕಾರಣ ವ್ಯಾಪಾರಸ್ಥರನ್ನು ತನ್ನತ್ತ ಸೆಳೆಯುವ ಉದ್ದೇಶವನ್ನು ಹೊಂದಿದ್ದರು. ಮೊಳಕಾಲ್ಮೂರು ತಾಲ್ಲೂಕು ಮರಡಿ(ರೈಸ್, ೧೯೦೩:ಮೊಳಕಾಲ್ಮೂರು,ಶಾ-೪) ಅಕ್ಕಪಕ್ಕದಲ್ಲಿರುವ ಎರಡು ಶಾಸನಗಳು ಸ್ಥಳೀಯ ಜನ ತಮ್ಮ ಅಧಿಕಾರಿಗಳು ಮಾಡುತ್ತಿದ್ದ ಅನ್ಯಾಯದ ಹಣ ವಸೂಲು ಮಾಡಿಕೊಂಡ ಬಗ್ಗೆ ಮನವಿಯನ್ನು ಒಳಗೊಂಡಿದೆ. ಆ ಗ್ರಾಮಗಳ ನಿವಾಸಿಗಳಿಗೆ ಅನ್ಯಾಯದ ತೆರಿಗೆಗಳಿಂದ ವಿನಾಯಿತಿ ನೀಡುವಂತೆಯೂ ಆ ಮೊದಲೇ ವಸೂಲಿ ಮಾಡಿದ್ದ ಅನ್ಯಾಯದ ತೆರಿಗೆ ಹಣವನ್ನು ಕೆರೆ, ದೇವಾಲಯ ಮುಂತಾದ ಸಾರ್ವಜನಿಕ ಕಾರ್ಯಗಳ ದುರಸ್ತಿಗಾಗಿ ಬಳಸಿಕೊಳ್ಳುವಂತೆಯೂ ರಾಜ ಆದೇಶ ಹೊರಡಿಸಿರುವುದರಲ್ಲಿ ಗಮನಿಸಬೇಕಾದ ಅಂಶವೆಂದರೆ, ಆ ವ್ಯವಹಾರಗಳನ್ನು ಸರಿಪಡಿಸಿ, ಅಕ್ರಮಗಳಿಂದ ಬಂದ ಆದಾಯದಿಂದ ರಚನಾತ್ಮಕ ಸಾರ್ವಜನಿಕ ಕಾರ್ಯಗಳು ಅನುಷ್ಠಾನಗೊಳಿಸಿದ್ದ ನಾಯಕರ ಜನಪರ ಆದೇಶವನ್ನು ಸ್ಮರಿಸಬಹುದು.

ಕ್ರಿ.ಶ.೧೫೭೩ರ ಶಾಸನ((ರೈಸ್,೧೯೦೩:ಮೊಳಕಾಲ್ಮೂರು,ಶಾ-೨೫). ಸಿದ್ದಯ್ಯನ ಕೋಟೆ ಪಶ್ಚಿಮಕ್ಕೆ ಇರುವ ಕೆರೆಯು ಬಹಳ ಕಾಲದಿಂದಲೂ ಒಡೆದುಹೋಗಿದ್ದು, ದುರಸ್ಥಿಯಾಗದಿರುವ ಕಾರಣ, ಆ ಗ್ರಾಮದ ಗೌಡ, ಶಾನುಭೋಗ ಮತ್ತು ಇತರೆ ಗ್ರಾಮಸ್ಥರು ಮಹಾನಾಯಕಾಚಾರ್ಯ ಪದ್ದಣ್ಣ ನಾಯಕನಿಗೆ, ಆ ಕೆರೆಯ ತೂಬಿನ ಕೆಳಗಿನ ಜಮೀನುಗಳನ್ನು ನೀಡುವುದಾದಲ್ಲಿ ನಾವು ಕೆರೆಯನ್ನು ದುರಸ್ತಿಗೊಳಿಸುತ್ತೇವೆ ಎಂದು ಮನವಿ ಸಲ್ಲಿಸುತ್ತಾರೆ. ಇದರಿಂದಾಗಿ ಸ್ಥಳೀಯ ಜನರಿಗೆ ಸೂಕ್ತ ರಿಯಾಯಿತಿ, ಪ್ರೋತ್ಸಾಹ ಮತ್ತು ಉತ್ತೇಜನಕಾರಿ ಕಾರ್ಯಗಳನ್ನು ವಿಸ್ತರಿಸಿದಲ್ಲಿ ಅವರ ದುರಸ್ಥಿ ಮತ್ತು ನಿರ್ವಹಣೆ ಕಾಮಗಾರಿಗಳನ್ನು ನಿರ್ವಹಿಸಿಕೊಳ್ಳುವವರಾಗಿದ್ದರು ಎಂಬುದು ಸ್ಪಷ್ಟಗೊಂಡಿದೆ.

ಕ್ರಿ.ಶ.೧೮೬೨ರ ಬಲ್ಲಾಳಸಮುದ್ರದ ಶಾಸನ(ರೈಸ್, ೧೯೦೩:ಹೊಳಲ್ಕೆರೆ,ಶಾ-೧೨೬), ಕೆರೆಯ ಕೋಡಿಯ ದುರಸ್ತಿಗಾಗಿ ಕೊಡುಗೆಯನ್ನು ವೀರಣ್ಣಗೌಡ, ರಾಮಯ್ಯ ಮತ್ತು ಮಹಾಂತಯ್ಯನಿಗೆ, ಬೆಜವಲಾರಿ-೪, ಖಾ-೪೧/೨ ಮತ್ತು ತರಿ-೧/೨ ಭಾಗದ ಕೊಡುಗೆಯನ್ನು ಜಹಗೀರ್‌ದಾರ್ ಅಬ್ದುಲ್ ಸಾಹೇಬ್, ಮುಜುಂದಾರ್ ವೆಂಕಟರಾಯ, ಹಮಲ್ದಾರ್ ಮಿರ್ಜಾಖಾನ್ ಹಾಗೂ ಬಡವ ಮಾದಿಗ ವೆಂಕಟಗಿರಿಯಪ್ಪನವರ ಪರವಾಗಿ ಕೆರೆಯ ಕೋಡಿಯನ್ನು ದುರಸ್ತಿಪಡಿಸಿದುದಕ್ಕಾಗಿ ನೀಡಿರುವುದನ್ನು ಉಲ್ಲೇಖಿಸಿದೆ. ಮುಖ್ಯವಾಗಿ ಕೆರೆಯ ಹಿಂದಿನ ಫಲವತ್ತಾದ ಭೂಮಿ ಮೇಲ್ವರ್ಗದ ಜನರ ಆಸ್ತಿಯಾಗಿರುತ್ತದೆ ಎಂಬುದು ಈಗಾಗಲೇ ಚರಿತ್ರೆಯಲ್ಲಿ ನೋಡಿದ್ದೇವೆ. ಆದರೆ ಮಾದಿಗ ಸಮುದಾಯದ ವೆಂಕಟಗಿರಿಯಪ್ಪ ಎಂಬುವವರ ಹೆಸರು ಶಾಸನದಲ್ಲಿ ಉಲ್ಲೇಖವಿದ್ದು. ಇವರು ಸಹ ಕೆರೆ ಹಿಂದೆ ಫಲವತ್ತಾದ ಭೂಮಿಯನ್ನು ಹೊಂದಿದ್ದರು. ಅವರಿಗೆ ಸಮಾಜದಲ್ಲಿ ಸ್ಥಾನಮಾನ ಕಲ್ಪಿಸುವ ಕಾರ್ಯ ನಾಯಕರ ಅವಧಿಯಲ್ಲಿತ್ತು ಎನ್ನಬಹುದು.

ಕೃಷಿಯ ಜೊತೆಗೆ ಕೃಷಿಯ ಉಪಕಸುಬುಗಳಿಗೆ ಅನುಗುಣವಾಗಿ ಪರಿಸರ ಹಾಗೂ ಕಚ್ಚಾ ವಸ್ತುಗಳು ಲಭ್ಯವಿದ್ದವು. ಇಂತಹ ಕಸುಬುಗಳಲ್ಲಿ ಪ್ರಮುಖವಾಗಿ ಹತ್ತಿಬಟ್ಟೆ ಮತ್ತು ಉಣ್ಣೆಬಟ್ಟೆಗಳ ತಯಾರಿಕೆ ಹಾಗೂ ಬಿಳಿ ಮತ್ತು ವಿವಿಧ ಬಣ್ಣಗಳುಳ್ಳ ಒರಟಾದ ಹತ್ತಿ ಬಟ್ಟೆಯನ್ನು ದೇವಾಂಗ ಮತ್ತು ಹೊಲೆಯರು ಎಂಬ ಜಾತಿಯ ಜನರು ಈ ಪ್ರದೇಶದಲ್ಲಿ ತಯಾರಿಸುತ್ತಿದ್ದರು(ಬುಕಾನನ್ (೩).೨೦೧೦: ೩೩). ಕೋಲಾರ, ಬಳ್ಳಾರಿ, ಬೆಂಗಳೂರು, ಮೈಸೂರು, ಬಟ್ಟೆ ಕೈಗಾರಿಕೆಗೆ ಪ್ರಸಿದ್ಧಿಯನ್ನು ಪಡೆದಿತ್ತು. ವಿಜಯನಗರೋತ್ತರ ಕಾಲದಲ್ಲಿ ಬಟ್ಟೆ ಕೈಗಾರಿಕೆಯು ಬೃಹತ್ ಪ್ರಮಾಣದಲ್ಲಿ ಬೆಳವಣಿಗೆಯಾಗಿರುವುದು ಕಂಡುಬರುತ್ತದೆ. ಯುರೋಪಿನಲ್ಲಿ ಭಾರತೀಯ ಬಟ್ಟೆಗಳಿಗೆ ಅಪಾರ ಬೇಡಿಕೆ ಇದ್ದು, ಕರ್ನಾಟಕದಿಂದ ಹತ್ತಿ ಮತ್ತು ಉಣ್ಣೆಯ ಬಟ್ಟೆಗಳು ರಫ್ತಾಗುವ ರೀತಿಯಲ್ಲಿ ಬಟ್ಟೆ ಕೈಗಾರಿಕೆಯು ಗುರುತಿಸಿಕೊಂಡ ಹಂತವೆಂದು ಹೇಳಬಹುದು.

ಬುಡಕಟ್ಟು ಸಮುದಾಯವಾದ ಗೊಲ್ಲ, ನಾಯಕರು ಪಶುಪಾಲನೆ, ಕುರಿ ಸಾಕಾಣಿಕೆಯಿಂದ ಹೈನುಗಾರಿಕೆಗೆ ಉತ್ತೇಜನ ನೀಡುತ್ತಿದ್ದರು. ಇಲ್ಲಿಯ ಭೂಮಿ ಕುರಿ ಸಾಕಾಣಿಕೆಗೆ ತುಂಬ ಅನುಕೂಲವಾಗಿತ್ತು. ಈ ಕುರಿಯ ಉಣ್ಣೆಯಿಂದ ಕಂಬಳಿ ತಯಾರಿಸುತ್ತಿದ್ದರು. ಬಹುತೇಕ ಮನೆಯ ಹೆಣ್ಣು ಮಕ್ಕಳು ಕಂಬಳಿ ನೇಯ್ದು ಕುಟುಂಬದ ಜವಾಬ್ದಾರಿ ನಡೆಸುತ್ತಿದ್ದರು. ಹೊಸದುರ್ಗ, ಕೋಲಾರ, ರಾಣೆಬೆನ್ನೂರು, ಹರಪನಹಳ್ಳಿ ಹಾಗೂ ಮೊಳಕಾಲ್ಮೂರು, ಕಂಬಳಿ ನೇಯ್ಗೆಯಲ್ಲಿ ತುಂಬಾ ಹೆಸರು ಮಾಡಿದ ಪ್ರದೇಶಗಳಾಗಿದ್ದು ಇಲ್ಲಿ ನೇಯ್ದ ಕಂಬಳಿಗಳನ್ನು ಮದ್ರಾಸ್ ಮತ್ತು ಮುಂಬೈ ಭಾಗಗಳಿಗೆ ಸರಬರಾಜು ಮಾಡುತ್ತಿದ್ದರು. ವಿಜಯನಗರೋತ್ತರ ಕಾಲದಲ್ಲಿ ವ್ಯಾಪಾರ ವಾಣಿಜ್ಯದಲ್ಲಿ ಆದ ಮಹತ್ವದ ಬದಲಾವಣೆ ಎಂದರೆ ಬಟ್ಟೆ ಕೈಗಾರಿಕೆ ಇಲ್ಲಿ ಮಹತ್ವದ ಬದಲಾವಣೆಯಾಗಿ ವಿಶ್ವಕ್ಕೆ ಭಾರತದ ಮಾರುಕಟ್ಟೆಯು ಪರಿಚಿತವಾಗಿ ಇಂಗ್ಲೆಂಡ್ ಭಾರತದ ಬಟ್ಟೆಯ ಮಯವಾಗಿತ್ತು ಎಂದರೆ ತಪ್ಪಾಗಲಾರದು. ಭಾರತದ ಬಟ್ಟೆಗಳು ಇಂಗ್ಲೆಂಡ್ ಕೈಗಾರಿಕೆಗಳನ್ನು ನಾಶ ಮಾಡುವ ಹಂತವನ್ನೇ ತಲುಪಿತ್ತು. ಇದಕ್ಕೆ ಪೂರಕವಾಗಿ ೧೬೮೦ರಲ್ಲಿ ಇಂಗ್ಲೆಂಡ್ ನೇಕಾರರು ಇಂಗ್ಲೆಂಡ್‌ನ ಈಸ್ಟ್ ಇಂಡಿಯಾ ಹೌಸ್ ಮೇಲೆ ದಾಳಿ ಮಾಡಿದ್ದೆ ಇದಕ್ಕೆ ಉದಾಹರಣೆ ತೆಗೆದುಕೊಳ್ಳಬಹುದು.

ವಿಜಯನಗರೋತ್ತರ ಕಾಲದಲ್ಲಿ ಪಂಚಕಾರುಕ ವೃತ್ತಿಯ ಪಂಚಾಳರ ಮೂಲಕ ಕೃಷಿಗೆ ಪೂರಕವಾದ ಕಸುಬುಗಳ ವರ್ಗಗಳು ಉಗಮವಾದವು. ಇವರು ವಿಜಯನಗರ ಕಾಲದಲ್ಲಿ ಕಡಿಮೆ ಸಂಖ್ಯೆಯಲ್ಲಿ ಗುರುತಿಸಿಕೊಂಡು ವಿಜಯನಗರೋತ್ತರ ಸಾಮಂತ ಪ್ರಭುತ್ವಗಳಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ. ಅಂದರೆ ಇಲ್ಲಿ ಧರ್ಮ ಸಂಘರ್ಷಗಳು ಈ ವೃತ್ತಿ ಉಗಮವನ್ನು ಗಮನಿಸಬಹುದು. ವಿಜಯನಗರೋತ್ತರ ಕಾಲದಲ್ಲಿ ಯಲಹಂಕ, ಮೈಸೂರು, ಚಿತ್ರದುರ್ಗ ಮತ್ತು ಕೆಳದಿಯ ನಾಯಕರ ಕಾಲದಲ್ಲಿ ಇವರ ಉಲ್ಲೇಖಗಳು ಕಂಡುಬರುತ್ತವೆ. ಕೆಳದಿಯ ಶಿವಪ್ಪ ನಾಯಕ ಈ ಕುಶಲಕರ್ಮಿಗಳನ್ನು ಸಂಸ್ಥಾನಕ್ಕೆ ಕರೆಸಿ ಭೂಮಿ ನೀಡಿ ಅವರು ನೆಲೆಸಲು ಪ್ರತ್ಯೇಕವಾದ ಕೇರಿ ನಿರ್ಮಿಸಿದ್ದನೆಂದು ಕೆಳದಿ ನೃಪವಿಜಯದಲ್ಲಿ ಉಲ್ಲೇಖವಿದೆ. ವಿಜಯನಗರೋತ್ತರ ಕಾಲವು ಸಂಘರ್ಷಗಳ ಕಾಲವಾಗಿದ್ದು ಯುದ್ಧೋಪಕರಣಗಳನ್ನು ತಯಾರಿಸಲು ಈ ಸಮುದಾಯಗಳನ್ನು ಬೆಂಬಲಿಸಿರುವ ಸಾಧ್ಯತೆಗಳಿವೆ.

ವಿಜಯನಗರೋತ್ತರ ಕಾಲದಲ್ಲಿ ಕಂಡುಬಂದ ಮತ್ತೊಂದು ರಾಜಕೀಯ ಆರ್ಥಿಕ ಬದಲಾವಣೆಯನ್ನು ಮಠಗಳ ಮೂಲಕ ರಾಜಕೀಯ ಆರ್ಥಿಕ ಚರಿತ್ರೆಯನ್ನು ನೋಡುವ ಗ್ರಹಿಕೆಯನ್ನು ಕುರಿತಂತೆ ಬರ್ಟನ್ ಸ್ಟೈನ್ ಹೇಳುತ್ತಾರೆ. ಈ ಅಂಶವು ವಿಜಯನಗರೋತ್ತರ ಕಾಲದಲ್ಲಿ ಮಠಗಳ ಗಟ್ಟಿಗೊಳ್ಳಲಾರಂಬಿಸುತ್ತದೆ. ಮಠಗಳು ಆರ್ಥಿಕ ಕೇಂದ್ರಗಳಾಗಿ ವ್ಯಾಪಾರ ವಾಣಿಜ್ಯದಲ್ಲಿ ಗುರುತಿಸಿಕೊಳ್ಳುತ್ತವೆ. ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ವರ್ತಕರು ಬರುತ್ತಿದ್ದರು. ಅವರು ನೆಲೆಸುವ ಸ್ಥಳಗಳು ಮಠಗಳಾಗಿದ್ದು ಅಲ್ಲಿ ವ್ಯಾಪಾರ ವಿನಿಮಯ ನಡೆದು ವಾಣಿಜ್ಯ ಕೇಂದ್ರಗಳಾಗಿ ನಿರ್ಮಾಣವಾಗುತ್ತಿದ್ದವು. ಅಲ್ಲಿ ಮಾರುಕಟ್ಟೆಕೇಂದ್ರಿತ ಹೊಸ ವಿಧಾನಕ್ಕೆ ದಾರಿಯಾಯಿತು. ಈ ಕಾಲದಲ್ಲಿ ಮಠಗಳು ಆ ಮಾರುಕಟ್ಟೆಯ ನಿರ್ವಹಣೆಗೆ ಸಹಾಯಕವಾಗಿ ಕಾರ್ಯ ನಿರ್ವಹಿಸುತ್ತಿದ್ದವು. ಇದರಿಂದ ಅವು ಆರ್ಥಿಕ ಕೇಂದ್ರಗಳಾಗಿ ಬೆಳೆದು ಪ್ರಭುತ್ವವನ್ನು ನಿಯಂತ್ರಿಸುತ್ತಿದ್ದವು. ಮಠಗಳು ರಾಜಕೀಯವಾಗಿ ಬಲಿಷ್ಠವಾಗತೊಡಗಿದ್ದವು ಮತ್ತು ಭೂಹಿಡುವಳಿಗಳನ್ನು ಪಡೆದು ಆರ್ಥಿಕವಾಗಿ ಬಲಿಷ್ಠವಾಗುವ ಪ್ರಕ್ರಿಯೆ ವಿಜಯನಗರೋತ್ತರ ಕಾಲದ ಎಲ್ಲ ಪ್ರಭುತ್ವಗಳಲ್ಲಿ ಗಮನಿಸಬಹುದು. ಒಂದು ಅರ್ಥದಲ್ಲಿ ವೀರಶೈವ ಮಠಗಳ ಪರಂಪರೆ ಈ ಕಾಲದಲ್ಲಿ ಮುಂದುವರಿದಿದೆ. ಕೆಳದಿಯ ನಾಯಕರ ಕಾಲದಲ್ಲಿ ೬೭ ಮಠಗಳು ನಿರ್ಮಾಣವಾಗಿ ಸಂತೆಬೆನ್ನೂರು ನಾಯಕರ ಕಾಲದಲ್ಲಿ ೧೬ ಮಠಗಳು ನಿರ್ಮಾಣವಾದವು. ಚಿತ್ರದುರ್ಗ ನಾಯಕರ ಕಾಲದಲ್ಲಿ ಪ್ರಸ್ತುತ ಇರುವ ಮುರುಘಾಮಠವು ಆರ್ಥಿಕವಾಗಿ ಸಂಪತ್ತಿನ ಕೇಂದ್ರೀಕರಣವನ್ನು ಹೊಂದಿದೆ. ಪ್ರಸ್ತುತ ಶಿಕ್ಷಣ ಕೇಂದ್ರಗಳನ್ನು ಸ್ಥಾಪಿಸಿ ಶೈಕ್ಷಣಿಕ ಕಾರ್ಯ ನಿರ್ವಹಿಸುತ್ತಿದೆ.

ವಿಜಯನಗರೋತ್ತರ ಕಾಲದ ಕಂಡುಬರುವ ರಾಜಕೀಯ ಆರ್ಥಿಕ ಸ್ಥಿತ್ಯಂತರವೆಂದರೆ ವರ್ತಕ ಸಮುದಾಯಗಳ ಸ್ಥಿತ್ಯಂತರವೆಂದೇ ಹೇಳಬಹುದು. ವಿಜಯನಗರ ಕಾಲದಲ್ಲಿ ಕಂಡು ಬಂದ ವ್ಯಾಪಾರ ವಾಣಿಜ್ಯದಲ್ಲಿ ಗುರುತಿಸಿಕೊಂಡ ಮುಸ್ಲಿಂ ಸಮುದಾಯದ ವ್ಯಾಪಾರವು ಕ್ಷೀಣಿಸಿ ಹೊಸ ಹೊಸ ವರ್ತಕ ಸಮುದಾಯಗಳು ಹುಟ್ಟು ಕಂಡುಕೊಂಡ ಕಾಲವಾಗಿದೆ. ಇಲ್ಲಿ ವರ್ತಕರ ವ್ಯಾಪಾರ ವಾಣಿಜ್ಯದ ಸ್ವರೂಪವೇ ಹೊಸಹುಟ್ಟು ಪಡೆದು ವಿಜಯನಗರದ ಅವನತಿಯನ್ನು ಕಂಡ ನಂತರ ಬಿಜಾಪುರದ ಆದಿಲ್‌ಶಾಹಿ ಸಂಸ್ಥಾನಗಳ ಮೂಲಕ ವ್ಯಾಪಾರ ವಾಣಿಜ್ಯವು ಗುರುತಿಸಿಕೊಂಡ ಹಂತವೆಂದು ಪರಿಗಣಿಸಬಹುದು. ಒಟ್ಟಾರೆಯಾಗಿ ವಿಜಯನಗರೋತ್ತರ ಕಾಲವು ರಾಜಕೀಯ ಆರ್ಥಿಕ ಸನ್ನಿವೇಶಗಳನ್ನು ಸ್ಥಿತ್ಯಂತರವನ್ನು ಇಲ್ಲಿ ಗಮನಿಸಬಹುದು. ಒಂದು ಕಡೆ ಸ್ಥಳೀಯ ಪ್ರಭುತ್ವಗಳು ನೆಲೆ ಕಂಡುಕೊಳ್ಳುವ ಹೋರಾಟದಲ್ಲಿ ನಿರತರಾದರೆ ಇನ್ನೊಂದು ಕಡೆ ಯೂರೋಪಿಯನ್ನರು ಭಾರತದ ವ್ಯಾಪಾರ ವಾಣಿಜ್ಯದಲ್ಲಿ ಅಸ್ತಿತ್ವಕ್ಕಾಗಿ ಸ್ಥಳೀಯ ಸಂಸ್ಥಾನಗಳೊಂದಿಗೆ ಕೈಜೋಡಿಸಿ ಅಧಿಕಾರ ಪಡೆಯುವ ಎರಡು ಪ್ರಕ್ರಿಯೆಗಳು ನಡೆಯುತ್ತಿದ್ದವು. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಭಾರತಕ್ಕೆ ಯುರೋಪ್ ಕೇಂದ್ರಿತ ಹೊಸ ಆರ್ಥವ್ಯವಸ್ಥೆ ಕಂಡುಬಂದ ಹಂತವೆಂದೇ ಹೇಳಬಹುದು. ಈ ಹಂತದಲ್ಲಿ ಭಾರತದ ಸಂಸ್ಕೃತಿ ಆಚಾರ-ವಿಚಾರ, ಸಮಾಜ, ಆರ್ಥಿಕತೆ ಮತ್ತು ರಾಜಕೀಯದ ಮೇಲೆ ಹೊಸ ಬದಲಾವಣೆಗಳನ್ನು ಹುಟ್ಟು ಹಾಕಿದ ಕಾಲವೆಂದು ಪರಿಗಣಿಸಬೇಕಾಗುತ್ತದೆ.

ಇಲ್ಲಿ ಪೋರ್ಚುಗೀಸರು ಭಾರತಕ್ಕೆ ಬಂದಾಗ ಭಾರತದಲ್ಲಿ ಹೊಸದೊಂದು ಅರ್ಥವ್ಯವಸ್ಥೆ ಹುಟ್ಟಿಕೊಂಡು ಹಲವಾರು ವಾಣಿಜ್ಯ ಬೆಳೆಗಳನ್ನು ಬೆಳೆಯಲಾರಂಭಿಸಿದರು. ಇದರಿಂದ ಭಾರತವು ಕೃಷಿ ಉತ್ಪನ್ನ ಬೆಳೆಯನ್ನೇ ಹೆಚ್ಚಾಗಿ ಬೆಳೆಯುತ್ತಿದ್ದ ಈ ಹಂತದಲ್ಲಿ ವಾಣಿಜ್ಯ ಬೆಳೆಗಳಿಗೆ ಸ್ಥಿತ್ಯಂತರವನ್ನು ಕಂಡುಕೊಂಡ ಕಾಲವೆಂದೇ ಪರಿಗಣಿಸಬೇಕಾಗುತ್ತದೆ. ಹಾಗಾಗಿ ವಿಜಯನಗರೋತ್ತರ ಕಾಲವು ರಾಜಕೀಯ, ಆರ್ಥಿಕತೆಯನ್ನು ಒಟ್ಟಿಗೆ ಸ್ಥಿತ್ಯಂತರಗೊಳಿಸಿದ ಕಾಲವೆಂದೇ ಪರಿಗಣಿಸಬೇಕಾಗುತ್ತದೆ. ಸ್ಥಳೀಯತೆಯನ್ನು ಪ್ರತಿನಿಧಿಸುವ ಮನೆತನಗಳು ಸ್ಥಾನ ಗಟ್ಟಿಗೊಳಿಸುವ ಪ್ರಕ್ರಿಯೆಯನ್ನು ಒಂದು ಕಡೆ ನಡೆಸಿದರೆ ಇನ್ನೊಂದು ಕಡೆ ಯುರೋಪಿಯನ್ ಕಂಪನಿಗಳು ರಾಜಕೀಯ, ಆರ್ಥಿಕ ಸ್ಥಾನವನ್ನು ನಿಯಂತ್ರಿಸಲು ಪ್ರಯತ್ನಿಸಿದ ಕಾಲವಾಗಿದೆ.

## ಅಧ್ಯಾಯ - ಮೂರು

# ಆರ್ಥಿಕತೆಯ ಉಗಮ ಮತ್ತು ವಿಕಾಸ

೩.೧ ವಿಜಯನಗರಪೂರ್ವ ಆರ್ಥಿಕತೆ ಮತ್ತು ವಾಣಿಜ್ಯ

೩.೨ ವಿಜಯನಗರಕಾಲೀನ ಆರ್ಥಿಕತೆ ಮತ್ತು ವಾಣಿಜ್ಯ

## ಅಧ್ಯಾಯ – ಮೂರು

# ಆರ್ಥಿಕತೆಯ ಉಗಮ ಮತ್ತು ವಿಕಾಸ

ಅಲೆಮಾರಿಯಾದ ಮಾನವ ಒಂದು ಕಡೆ ನೆಲೆ ನಿಂತಾಗ ಕೃಷಿಯು ಉಗಮವಾಗಿದ್ದು, ಕೃಷಿಯು ಮಾನವ ಜೀವನಕ್ಕೆ ಅವಶ್ಯವಾಗಿದೆ. ನಗರಕ್ರಾಂತಿಗೆ ದೊಡ್ಡಮಟ್ಟದ ವ್ಯವಸಾಯ ಉತ್ಪಾದನೆ ಅಗತ್ಯವಾಗಿದ್ದು, ಕೃಷಿಗೆ ಪೂರಕವಾದ ನೇಗಿಲು ಪರಿಚಯದಿಂದ ಕೃಷಿ ಅಭಿವೃದ್ಧಿಯಾಗಿದೆ. ಚರಿತ್ರೆಯ ಸ್ವರೂಪವು ಸದಾ ಬದಲಾಗುವಂತದ್ದು, ಪ್ರಾಚೀನ ಕಾಲದಿಂದಲೂ ಅರಸು ಮನೆತನಗಳ ಪ್ರಾಬಲ್ಯದವರೆಗೂ ಆರ್ಥಿಕತೆಯ ಭಾಗವಾದ ಕೃಷಿಗೆ ವಿಶೇಷ ಪ್ರೋತ್ಸಾಹ ನೀಡಿರುವುದನ್ನು ಗಮನಿಸಬಹುದು. ಈ ಹಿನ್ನೆಲೆಯಲ್ಲಿ ಕೃಷಿಯ ಪ್ರೋತ್ಸಾಹದಿಂದ ಸಾಮ್ರಾಜ್ಯಕ್ಕೆ ಹೆಚ್ಚಿನ ಆದಾಯ ಬರುತ್ತಿತ್ತು. ಕೃಷಿಗೆ ಹೆಚ್ಚು ಹೆಚ್ಚು ಪ್ರೋತ್ಸಾಹ ದೊರೆತಿದ್ದ ವಿಚಾರವನ್ನು ಅಂದಿನ ಶಾಸನಗಳು ಉಲ್ಲೇಖಿಸುತ್ತವೆ. ಆರಂಭದಿಂದಲೂ ಅರಸುಮನೆತನಗಳ ಹಿನ್ನೆಲೆಯಿಂದಲೇ ಚರಿತ್ರೆ ರಚಿಸುವ ಪ್ರಯತ್ನ ನಡೆದಿದೆ. ಆದರೆ ಕೆಳಸ್ತರದ ಅಧ್ಯಯನದ ಅವಶ್ಯಕತೆಯಿಂದ ಕರ್ನಾಟಕದ ಅರಸು ಮನೆತನಗಳ ಚರಿತ್ರೆಯ ಅಂಶವೆಂದು ಇತ್ತೀಚೆಗೆ ಪರಿಗಣಿಸಿ, ಅದು ಸಾಮಾಜಿಕ ಜೀವನದ ಅವಿಭಾಜ್ಯ ಅಂಗವೆಂದು ಗುರುತಿಸಲಾಗುತ್ತಿದೆ.

ಮಾರ್ಕ್ಸ್‌ವಾದಿ ಚರಿತ್ರೆಯು ಸಮಾಜ, ಸಂಸ್ಕೃತಿ, ಸಾಹಿತ್ಯ, ಅರ್ಥವ್ಯವಸ್ಥೆ ಹಾಗೂ ಸಂಸ್ಕೃತಿಗಳು ಉತ್ಪಾದನಾ ವ್ಯವಸ್ಥೆಯಲ್ಲಿನ ವಿವಿಧ ಶಕ್ತಿಗಳು ಮತ್ತು ಅವುಗಳ ನಡುವಿನ ಸಂಬಂಧಗಳನ್ನು ಅವಿಭಾಜ್ಯ ಅಂಗಗಳೆಂದು ಹೇಳುತ್ತದೆ.

**೩.೧. ವಿಜಯನಗರಪೂರ್ವ ಆರ್ಥಿಕತೆ ಮತ್ತು ವಾಣಿಜ್ಯ**

ಮೌರ್ಯರ ಕಾಲದಲ್ಲಿ ಆರ್ಥಿಕತೆ ಬೆಳವಣಿಗೆಯಾಗಿರುವುದನ್ನು ಗಮನಿಸಬಹುದಾಗಿದೆ. ಕೃಷಿಗೆ ವಿಶೇಷವಾದ ಪ್ರಾಮುಖ್ಯತೆಯನ್ನು ನೀಡಿದ್ದರು ಎಂಬುದಕ್ಕೆ ಅಶೋಕನ ಶಾಸನಗಳು, ಮೆಗಾಸ್ತನೀಸ್‌ನ ಬರವಣಿಗೆಗಳು, ಕೌಟಿಲ್ಯನ ಅರ್ಥಶಾಸ್ತ್ರ ಮುಂತಾದವುಗಳು ಇದರ ಬಗ್ಗೆ ಮಾಹಿತಿ ನೀಡುತ್ತವೆ. ಮೌರ್ಯರ ಕಾಲದ ಅರ್ಥವ್ಯವಸ್ಥೆಯನ್ನು ಅರ್ಥೈಸಿಕೊಳ್ಳುವ ನಿಟ್ಟಿನಲ್ಲಿ ಆ ಕಾಲದ ಭೂಹಿಡುವಳಿಯ

ರೂಪುರೇಷೆಗಳನ್ನು ಮುಖ್ಯ ಆಧಾರವನ್ನಾಗಿಸಿಕೊಳ್ಳಬಹುದು. ಅಂದು ಭೂಭಾಗದ ಹೆಚ್ಚಿನ ಪಾಲು ಅರಣ್ಯಗಳದ್ದೇ ಆಗಿತ್ತು. ಮತ್ತು ಅರಣ್ಯ ವಾಸಿಗಳು ರಾಜನ ಅಧಿಕಾರಕ್ಕೆ ಸವಾಲೊಡ್ಡುತ್ತಿದ್ದರ ಬಗ್ಗೆಯೂ ಅಶೋಕನ ೧೩ನೆಯ ಶಿಲಾಶಾಸನ ಹೇಳುತ್ತದೆ(ರಮೇಶ್,೨೦೧೪:೧೨೪).

ಮೌರ್ಯರ ಕಾಲಾವಧಿಯ ವೇಳೆಗೆ ಹೆಚ್ಚು ಹೆಚ್ಚು ಭೂಪ್ರದೇಶಗಳನ್ನು ಕೃಷಿ ಭೂಮಿಗಳನ್ನಾಗಿ ಪರಿವರ್ತಿಸಲಾಗಿತ್ತು. ಭೂಕಂದಾಯವು ಸರ್ಕಾರಿ ಆದಾಯದ ಮೂಲವೆಂದು ಈ ಕಾಲಘಟ್ಟದಲ್ಲಿಯೇ ಗುರುತಿಸಿರಬಹುದು. ಹಳ್ಳಿಗಳಲ್ಲಿನ ಗ್ರಾಮೀಣ ಆರ್ಥಿಕತೆಯನ್ನು ಕುರಿತು ಹೇಳುತ್ತಾ ಪ್ರಾಣಿಗಳನ್ನು ಸಾಕುವ ಜನರ ಚಿಕ್ಕ ಚಿಕ್ಕ ಗುಂಪುಗಳಿದ್ದು, ಇವುಗಳ ಆಧಾರದ ಮೇಲೆ ಕೃಷಿ ಆರ್ಥಿಕ ತೆರಿಗೆಯನ್ನು ಏರಿಸುತ್ತಿದ್ದರೆಂದು ಕೌಟಿಲ್ಯನು ಹೇಳಿದ್ದಾನೆ.

ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಪ್ರಭುತ್ವದ ಆರ್ಥಿಕ ಕಾರ್ಯ ಚಟುವಟಿಕೆಗಳನ್ನು ನಿಯಂತ್ರಿಸುವ ಸಲುವಾಗಿ ೨೭ ಮಂದಿ ಅಧ್ಯಕ್ಷರೆಂಬ ಮೇಲಧಿಕಾರಿಗಳಿದ್ದರು. ಅವರು ಕೃಷಿ, ವ್ಯಾಪಾರ ಹಾಗೂ ವಾಣಿಜ್ಯ, ತೂಕ, ಅಳತೆಗಳು, ನೂಲುಗಾರಿಕೆ, ನೇಯ್ಗೆ, ಗಣಿಗಾರಿಕೆ ಮುಂತಾದ ಕೈಗಾರಿಕೆಗಳನ್ನು ಹಿಡಿತದಲ್ಲಿಟ್ಟುಕೊಂಡು ನಿಯಂತ್ರಿಸುತ್ತಿದ್ದರು(ಶರ್ಮಾ,೨೦೧೨:೧೪೧). ಅರಣ್ಯದ ಪ್ರಮುಖ ಉತ್ಪನ್ನಗಳಾದ ದೊಡ್ಡ ದೊಡ್ಡ ಮರಗಳನ್ನು ಕಡಿದು ಕಟ್ಟಡಗಳ ನಿರ್ಮಾಣಕ್ಕೆ ಗಾಡಿಗಳು, ರಥಗಳು, ನೇಗಿಲುಗಳು ಮುಂತಾದ ಪರಿಕರಗಳ ತಯಾರಿಕೆಗೆ ಬಳಸುತ್ತಿದ್ದರು. ಜನವಸತಿಗಳಿರುವ ಪ್ರಾಂತ್ಯಗಳಿಂದ ಅವುಗಳಿಗೆ ಹೆಚ್ಚಿನ ಬೇಡಿಕೆಯಿತ್ತು. ದಂತಗಳ ಮೂಲಗಳಾದ ಆನೆಗಳು ಕಾಡಿನ ಅತಿ ಮುಖ್ಯ ಆರ್ಥಿಕ ಉತ್ಪನ್ನಗಳೆಂದೇ ಪರಿಗಣಿತವಾಗಿತ್ತು(ರಮೇಶ್,೨೦೧೪:೧೨೫).

ಮೌರ್ಯರ ಕಾಲದಲ್ಲಿ ಆರ್ಥಿಕ ಸಂಪನ್ಮೂಲಗಳನ್ನು ಹೆಚ್ಚಿಸಿಕೊಳ್ಳುವುದಕ್ಕೆ ಕಾಡನ್ನು ಕಡಿಯುವುದಕ್ಕೆ ಪ್ರಭುತ್ವವೇ ಕುಮ್ಮಕ್ಕು ನೀಡುತ್ತಿತ್ತೆಂದು ಕೌಟಿಲ್ಯನ ಅರ್ಥಶಾಸ್ತ್ರ ತಿಳಿಸುತ್ತದೆ(ರಮೇಶ್,೨೦೧೪:೧೨೬). ಹೊಸ ಜನಪದಗಳ ನಿರ್ಮಾಣಕ್ಕಾಗಿ ೧೦೦ರಿಂದ ೫೦೦ರಷ್ಟು ಜನಸಂಖ್ಯೆ ಇರುವುದನ್ನು ನಿರ್ಧರಿಸಿದ್ದರು. ಆ ಜನಪದಗಳಲ್ಲಿ ಶೂದ್ರ ಕೃಷಿಕ ಸಮುದಾಯಗಳು ನೆಲೆಸಿದ್ದವು. ಇವರಿಗೆ ಕೃಷಿ ಕೆಲಸ ನಿರ್ವಹಿಸುವುದಕ್ಕಾಗಿ ಬೀಜ, ಉಳುಮೆ ಮಾಡಲು ಪಶುಗಳು ಮತ್ತು ಹಣದ ರೂಪದ ಸಾಲ ಸೌಲಭ್ಯಗಳನ್ನು ಒದಗಿಸಲಾಗಿತ್ತು. ಕೃಷಿಯ ಜೊತೆಗೆ ಕೃಷಿಗೆ ಪೂರಕವಾದ ಎತ್ತುಗಳು ಮತ್ತು ನೇಗಿಲಗಳ ಬಳಕೆ ಇದ್ದು, ಕಮ್ಮಾರ ಮತ್ತು ಬಡಗಿಗಳೆಂದು ಗುರುತಿಸಿಕೊಂಡ ಕುಶಲಕರ್ಮಿಗಳು ಕೃಷಿ ಕೆಲಸದಲ್ಲಿ ಉಪಯುಕ್ತ ಉಪಕರಣಗಳನ್ನು ತಯಾರಿಸಿ ಕೃಷಿಗೆ ಸಹಾಯಕವಾಗುತ್ತಿದ್ದರು. ಈ ಪರಿಕಲ್ಪನೆಯು ಗ್ರಾಮೀಣ ಸಮಾಜದ ಆಯಗಾರಿಕೆ ಲಕ್ಷಣಗಳನ್ನು ತೋರ್ಪಡಿಸುತ್ತದೆ.

ಮೌರ್ಯರ ಕಾಲದ ವೇಳೆಗೆ ನೀರಾವರಿಯು ಅಭಿವೃದ್ಧಿಯಾಗಿದ್ದು, ಬಾವಿಯಿಂದ ನೀರನ್ನೆತ್ತಿ ಹೊಲಗಳಿಗೆ ಹರಿಸುವ ಕಪಿಲೆಬಾನೆ ಈ ಕಾಲಘಟ್ಟದಲ್ಲಿತ್ತೆಂದು ಗುರುತಿಸಲಾಗಿದೆ. ಮೌರ್ಯರ ಕಾಲಾವಧಿಯಲ್ಲಿ ಅಧಿಕಾರಿಗಳೇ ನೀರಾವರಿ ಸೌಲಭ್ಯಗಳನ್ನು ಒದಗಿಸಲು ಕಾಲುವೆಗಳನ್ನು, ಕೆರೆಗಳನ್ನು ಅಗೆಸುತ್ತಿದ್ದರು. ಆದರೆ ಈ ಕಾಲುವೆಗಳಲ್ಲಿ ಹರಿಯುವ ನೀರು ತುಂಬಾ ಹೆಚ್ಚಿನ ಪ್ರದೇಶಕ್ಕೆ ದೊರೆಯುತ್ತಿರಲಿಲ್ಲ(ರಮೇಶ್,೨೦೧೪:೧೨೭). ಅಕ್ಕಿ, ರಾಗಿ, ಎಳ್ಳು, ಉದಾರಕ, ತೊಗರೆ, ಉರೆಟ್,

ಸನ್‌ವಾಲ್, ಕುಸುಬೆ, ಹುರುಳಿ, ಬಾರ್ಲಿ, ಸಾಸಿವೆ ಇವು ಈ ಕಾಲದ ಪ್ರಮುಖ ಬೆಳೆಗಳಾಗಿದ್ದವು. ಭಾರತದಲ್ಲಿ ಭತ್ತವನ್ನು ನಾಟಿ ಮಾಡುತ್ತಿದ್ದರೆಂದು ತಿಳಿಸಲಾಗಿದೆ(ರಮೇಶ್,೨೦೧೪:೧೨೮). ತೋಟಗಾರಿಕೆಯು ಆ ಕಾಲದ ಪ್ರಮುಖ ಕೃಷಿ ಚಟುವಟಿಕೆಯಾಗಿತ್ತು. ಔಷಧೀಯ ಗಿಡಗಳನ್ನು ಮತ್ತು ಇತರ ಹಣ್ಣುಗಳ ಗಿಡಗಳನ್ನು ಬೆಳೆಸಬೇಕೆಂದು ಈ ಕೃತಿಯಲ್ಲಿ ಸೂಚಿಸಲಾಗಿದೆ.

ಕೃಷಿವ್ಯವಸ್ಥೆಗೆ ಪೂರಕವೆಂಬಂತೆ ರಾಣಿಯರು ಕೃಷಿಗೆ ಪ್ರೋತ್ಸಾಹಿಸಿರುವುದನ್ನು ಅಶೋಕನ ೭ನೆಯ ಸ್ತಂಭಶಾಸನದಲ್ಲಿ ಉಲ್ಲೇಖವಿದೆ. ಅಶೋಕನ ೨ನೆಯ ರಾಣಿಯು ದಾನ ಮಾಡಿದ್ದ ಮಾವಿನ ತೋಟಗಳನ್ನು ಕುರಿತು ಈ ಶಾಸನ ಹೇಳುತ್ತದೆ. ಅಶೋಕನ ಎರಡನೇ ಶಿಲಾ ಶಾಸನ ತಿಳಿಸುತ್ತದೆ. ಕೌಟಿಲ್ಯನ ಅರ್ಥಶಾಸ್ತ್ರ ಕೃತಿಯು ತಿಳಿಸುವಂತೆ ಕೃಷಿಯಲ್ಲಿ ಗುಲಾಮರು, ಕಾರ್ಮಿಕರು ಬೇಸಾಯ ಮಾಡುತ್ತಿದ್ದರು. ತಮ್ಮ ಮೇಲೆ ದಂಡವನ್ನು ಕೊಡಲು ಸಾಧ್ಯವಿಲ್ಲದವರು ಹೊಲಗಳಲ್ಲಿ ದುಡಿಯುತ್ತಿದ್ದರು. ಕೃಷಿ ಅಧಿಕಾರಿಯನ್ನು ಸೀತಾಧ್ಯಕ್ಷನೆಂದು ಕರೆಯುತ್ತಿದ್ದರು. ಈ ಅಧಿಕಾರಿಯು ಬೇಸಾಯ ಮಾಡುವವರಿಗೆ ಬೇಕಾಗಿದ್ದ ಕೃಷಿ ಸಲಕರಣೆಗಳು ಮತ್ತು ಎತ್ತುಗಳನ್ನು ಒದಗಿಸುತ್ತಿದ್ದನು. ಕಾರ್ಮಿಕರು ತಿಂಗಳಿಗೆ ಒಂದುವರೆ ಪಣಗಳ ವೇತನವನ್ನು ಪಡೆಯುತ್ತಿದ್ದರು(ರಮೇಶ್,೨೦೧೪:೧೩೧). ಕೃಷಿ ವ್ಯವಸ್ಥೆಯಲ್ಲಿ ಗುಲಾಮರಾಗಿ ದುಡಿಯುವ ಪ್ರವೃತ್ತಿಯು ಪ್ರಭುತ್ವಕೇಂದ್ರಿತ ಅಧ್ಯಯನದಲ್ಲಿ ಬಿಟ್ಟಿಸೇವೆಯ ಸ್ವರೂಪವನ್ನು ಹೊಂದಿದೆ. ರಾಜನು ಕೆಲವರಿಗೆ ಭೂಮಿಯನ್ನು ದಾನವನ್ನಾಗಿ ನೀಡುತ್ತಿದ್ದು, ಅದರ ಮೇಲಿನ ತೆರಿಗೆಯನ್ನು ಕಟ್ಟಬೇಕಾಗಿರಲಿಲ್ಲ. ತೆರಿಗೆರಹಿತವಾದ ಬ್ರಹ್ಮದೇಯವಿತ್ತು. ದಾನವಾಗಿ ಪಡೆಯುತ್ತಿದ್ದ ಕೃಷಿ ಭೂಮಿಯು ಪಡೆದವನ ಆಸ್ತಿಯಾಗುತ್ತಿತ್ತು. ಅವನು ಬಂಜರುಭೂಮಿಯನ್ನು ಅಭಿವೃದ್ಧಿಪಡಿಸಿ ರಾಜನ ಭೂಮಿಯ ರೀತಿಯಲ್ಲಿ ಅಲ್ಲಿಯೂ ಕೃಷಿಯನ್ನು ಕೈಗೊಳ್ಳಬಹುದಿತ್ತು. ಎಂದು ಅರ್ಥಶಾಸ್ತ್ರ ಕೃತಿ ತಿಳಿಸುತ್ತದೆ.

ಮೌರ್ಯ ಕಾಲದ ಆರ್ಥಿಕತೆಯಲ್ಲಿ ಗುರುತಿಸುವ ಒಂದು ಬದಲಾವಣೆಯ ಅಂಶವೆಂದರೆ ಗ್ರಾಮೀಣ ಆರ್ಥಿಕತೆ ಕೃಷಿಗೂ ಗ್ರಾಮೀಣ ಆರ್ಥಿಕತೆಗೂ ಪರಸ್ಪರ ಸಂಬಂಧ ಬೆಳೆದು ಕಾಡನ್ನು ಕಡಿದು ಭೂಮಿಯನ್ನು ಕೃಷಿ ಯೋಗ್ಯವನ್ನಾಗಿಸಿದ್ದರಿಂದ ಕಾಡಿನ ಹೊರಗೆ ಮತ್ತು ಒಳಗೆ ಅದರ ಅಂಚಿನಲ್ಲಿ ಬೆಳೆಗಳನ್ನು ಬೆಳೆಯುತ್ತಿದ್ದರು. ಕೃಷಿಗೆ ಪೂರಕವಾಗಿ ಪಶುಸಂಗೋಪನೆಯು ಅಭಿವೃದ್ಧಿಯಾಗಿದ್ದರಿಂದ ಕುರಿ, ಆಕಳು ಮುಂತಾದ ಪ್ರಾಣಿಗಳ ಸಾಕಾಣಿಕೆಗಾಗಿ ಗೋಮಾಳಗಳು ಉಗಮವಾದವು. ಇದನ್ನು ಗ್ರಾಮೀಣ ಆರ್ಥಿಕತೆಯ ಒಂದಂಶವೆಂದು ಪರಿಗಣಿಸಬಹುದಾಗಿದೆ.

ಮೌರ್ಯರ ಕಾಲದಲ್ಲಿ ಕೃಷಿ ಉತ್ಪನ್ನಗಳ ಜೊತೆಗೆ ಕೃಷಿಯೇತರ ಉತ್ಪನ್ನಗಳ ಬಳಕೆಯನ್ನು ಈ ಕಾಲದಲ್ಲಿ ಗುರುತಿಸಬಹುದಾಗಿದೆ. ಮೌರ್ಯರ ಕಾಲದಲ್ಲಿ ಕುಂಬಾರಿಕೆಯು ಕೃಷಿಯೇತರ ಉತ್ಪನ್ನವಾಗಿತ್ತು. ಕುಂಬಾರಿಕೆಯನ್ನು ಹೊರತುಪಡಿಸಿದರೆ ಬೇರೆ ಯಾವುದೇ ಕೃಷಿಯೇತರ ಉತ್ಪನ್ನಗಳು ಅಷ್ಟಾಗಿ ಕಂಡುಬರುವುದಿಲ್ಲ. ನೇಯ್ಗೆಯು ಅಷ್ಟಾಗಿ ಪರಿಚಯವಿಲ್ಲದಿದ್ದರೂ ವಸ್ತುಗಳ ತಯಾರಿಕೆಗೆ ಇದನ್ನು ಬಳಸಲಾಗುತ್ತಿತ್ತು. ಕೌಟಿಲ್ಯನ ಅರ್ಥಶಾಸ್ತ್ರ ಕೃತಿಯಲ್ಲಿ ಉಣ್ಣೆ, ಮರದ ತೊಗಟೆ, ಹತ್ತಿ, ರೇಷ್ಮೆ, ಸೆಣಬು ಮತ್ತು ಅಗಸಿ ಕುರಿತಂತೆ ಉಲ್ಲೇಖಿಸಲಾಗಿದೆ. ಇಲ್ಲಿ ಗಮನಿಸಬೇಕಾದ ಮುಖ್ಯ

ಸಂಗತಿಯೆಂದರೆ ಸಿಂಧೂ ನಾಗರಿಕತೆಯ ವೇಳೆಗೆ ಪರಿಚಯವಾದ ಹತ್ತಿಯು ಮೌರ್ಯರ ಕಾಲದ ವೇಳೆಗೆ ಉಳುಮೆಯ ವಿಧಾನದಲ್ಲಿ ಹೆಚ್ಚಾಗಬಹುದಿತ್ತು. ಆದರೆ ಪ್ರಕೃತಿ ವಿಕೋಪ ಇನ್ನಿತರ ಕಾರಣಗಳಿಂದ ಈ ಬೆಳೆಯು ಹೆಚ್ಚು ಅಭಿವೃದ್ಧಿಯಾಗಲು ಸಾಧ್ಯವಾಗಿಲ್ಲದಿರಬಹುದು.

ಗ್ರಾಮ-ನಗರಗಳು ಪ್ರಮುಖ ಕೃಷಿ ಉತ್ಪಾದನಾ ಕೇಂದ್ರಗಳಾಗಿದ್ದವು. ನಗರಗಳಲ್ಲಿ ವಾಸಿಸುತ್ತಿದ್ದವರು ಆಹಾರಕ್ಕಾಗಿ ಗ್ರಾಮೀಣ ಪ್ರದೇಶಗಳಲ್ಲಿನ ಕೃಷಿ ಉತ್ಪಾದನೆಗಳನ್ನು ಆಧರಿಸಿದ್ದು, ಅದೇ ಅಂದಿನ ವ್ಯಾಪಾರ-ವಾಣಿಜ್ಯದ ಮುಖ್ಯ ಭಾಗವಾಗಿತ್ತು. ಕರ್ನಾಟಕದಲ್ಲಿ ಮೌರ್ಯರ ಕಾಲದ ವೇಳೆಗೆ ಕಬ್ಬಿಣದ ಆಯುಧಗಳು ಹಲವೆಡೆಗಳಲ್ಲಿ ದೊರೆತಿವೆಯಾದರೂ ಅವು ಬೃಹತ್ ಶಿಲಾ ಸಮಾಧಿಗಳಿಂದಾಗಿಯೇ ಪ್ರಸಿದ್ಧವಾಗಿರುವ ಜನರ ಕೊಡುಗೆ ಎಂದು ಆರ್.ಎಸ್. ಶರ್ಮಾ ಅವರು ಪ್ರಸ್ತಾಪಿಸಿದ್ದಾರೆ. ಉಕ್ಕು ತಯಾರಿಕೆಯು ಮೌರ್ಯರ ಕಾಲದಲ್ಲಿ ಬೆಳವಣಿಗೆಯಾಗಿತ್ತು ಎಂಬುದನ್ನು ಕೌಟಿಲ್ಯನ ಅರ್ಥಶಾಸ್ತ್ರ ಕೃತಿಯಲ್ಲಿ ಗಮನಿಸಬಹುದಾಗಿದೆ. ಮೌರ್ಯರ ಕಾಲದಲ್ಲಿ ಸಾರಿಗೆ ಸಂಪರ್ಕಗಳು ಅಭಿವೃದ್ಧಿಯಾಗಿದ್ದವು. ಭೂ ಹಾಗೂ ಜಲಮಾರ್ಗಗಳ ಮೂಲಕ ವ್ಯಾಪಾರ-ವ್ಯವಹಾರ ನಡೆಯುತ್ತಿತ್ತು. ಪಾಟಲಿಪುತ್ರದಿಂದ ಗಂಗಾನದಿಯಲ್ಲಿ ೧,೧೧೦ ಕಿ.ಮೀ.ಗಳು ಕ್ರಮಿಸಿ ಬಂಗಾಳಕೊಲ್ಲಿಯನ್ನು ಸೇರುತ್ತಿದ್ದ ಜಲಮಾರ್ಗವಿತ್ತೆಂದು ತಿಳಿದುಬರುತ್ತದೆ. ಸಾಮಾನ್ಯ ಭೂಮಾರ್ಗಗಳ ಜೊತೆಗೆ ರಾಜಮಾರ್ಗಗಳಿದ್ದವು. ರಾಜಧಾನಿಯಾದ ಪಾಟಲಿಪುತ್ರದಿಂದ ಪಶ್ಚಿಮದ ಗಡಿ ಪ್ರದೇಶಗಳ ನಡುವೆ ೧೮೫೦ ಕಿ.ಮೀ.ಗಳಷ್ಟು ಉದ್ದದ ರಾಜಮಾರ್ಗವಿತ್ತು. ಗಂಗಾ ಮೈದಾನದಲ್ಲಿ ಸಾಗುವ ಈ ಹೆದ್ದಾರಿಯಲ್ಲಿ ಅಶೋಕನ ಶಾಸನಗಳು ಪ್ರಹ್ಲಾದಪುರ, ಸಾರಾನಾಥ, ಅಲಹಾಬಾದ್, ಕೌಶಾಂಬಿ, ಸಂಕಿಸ, ಮೀರತ್ ಮತ್ತು ತೋಪ್ರಾಗಳಲ್ಲಿ ಸ್ಥಾಪಿತವಾಗಿದ್ದವು ಎಂದು ಹೇಳಬಹುದು(ಪಾಟೀಲ್,೧೯೯೬: ೪೮). ಮೌರ್ಯರ ಕಾಲದಲ್ಲಿ ಕಾಡುಗಳನ್ನು ಕಡಿಯುವುದಕ್ಕೆ, ವ್ಯಾಪಾರ ನಡೆಸುವುದಕ್ಕೆ ಸ್ಥಳ ಕುದುರೆ ಗಾಡಿಗಳನ್ನು ಜಲಮಾರ್ಗಗಳನ್ನು ನೌಕೆಗಳಿಂದ ಪ್ರವೇಶಿಸಲರ್ಹವಾದ ಕ್ರಯವಿಕ್ರಯಗಳನ್ನು ನಡೆಸಲಿಕ್ಕೆ ಯೋಗ್ಯವೂ ಎನಿಸಿದ ಪಟ್ಟಣಗಳನ್ನು ನಿರ್ಮಿಸಬೇಕೆಂದು ಕೌಟಿಲ್ಯನ ಅರ್ಥಶಾಸ್ತ್ರ ಕೃತಿಯಲ್ಲಿ ತಿಳಿಸಲಾಗಿದೆ.

ಮೌರ್ಯರ ಕಾಲಾವಧಿಯಲ್ಲಿ ವ್ಯಾಪಾರ-ವಾಣಿಜ್ಯದ ಕುಶಲ ಕೆಲಸದಲ್ಲಿ ಮಹಿಳೆಯರು ತೊಡಗಿಸಿಕೊಂಡಿರುವುದನ್ನು ಗಮನಿಸಬಹುದು. ಅವರಿಗೆ ಯಾವುದೇ ರೀತಿಯ ತೊಂದರೆಯಾಗದಂತೆ ನೂಲುವುದು, ಕತ್ತರಿಸುವುದು, ಹೊಲೆಯುವುದು, ನೇಯುವುದು ಮೊದಲಾದ ಕೆಲಸದಲ್ಲಿ ತೊಡಗಿಸಿಕೊಂಡಿದ್ದರು. ಮಹಿಳೆಯು ಕೂಲಿ ತೆಗೆದುಕೊಂಡು ಕೆಲಸವನ್ನು ನಿರ್ವಹಿಸುತ್ತಿದ್ದಳು. ಒಂದು ವೇಳೆ ಕೂಲಿ ತೆಗೆದುಕೊಂಡು ಕೆಲಸ ನಿರ್ವಹಿಸದಿದ್ದರೆ ಅಂತವರಿಗೆ ಅಂಗುಷ್ಟವನ್ನು ಕತ್ತರಿಸಬೇಕು ಎಂದು ಕೌಟಿಲ್ಯನ ಅರ್ಥಶಾಸ್ತ್ರ ಕೃತಿಯು ತಿಳಿಸುತ್ತದೆ(ಸಚ್ಚಿದಾನಂದಾ,೨೦೧೦: ೧೮೦). ಮೌರ್ಯರ ಕಾಲದಲ್ಲಿ ಬಟ್ಟೆ ನೇಯುವ ಕೆಲಸದಲ್ಲಿ ಗುರುತಿಸಿಕೊಂಡ ಮಹಿಳೆ ಪ್ರಭುತ್ವದ ಪ್ರತಿಯೊಂದು ಅರಸುಮನೆತನಗಳ ಕಾಲದಲ್ಲಿಯೂ ಮುಂದುವರಿದಳು. ಆದರೆ ವಸಾಹತು ಕರ್ನಾಟಕದ ಆಳ್ವಿಕೆಯ ವೇಳೆಗೆ ಅವಳು ತಮ್ಮ ವೃತ್ತಿ ಪಲ್ಲಟಗೊಂಡಿರುವುದನ್ನು ಗುರುತಿಸಬಹುದು.

ಸಾಮ್ರಾಜ್ಯಗಳ ಆರ್ಥಿಕ ವ್ಯವಸ್ಥೆಯನ್ನು ಗಮನಿಸುವಂತಹ ಸಂದರ್ಭದಲ್ಲಿ ವೇಶ್ಯಾವೃತ್ತಿಯು ಪ್ರಾಚೀನ ಕಾಲದಿಂದಲೂ ಅಸ್ತಿತ್ವದಲ್ಲಿದ್ದು ಮೌರ್ಯರ ಕಾಲದಲ್ಲಿ ವೇಶ್ಯೆಯರನ್ನು ಗಣಿಕೆಯರೆಂದು ಕರೆಯುತ್ತಿದ್ದರು. ಒಂದು ವೇಳೆ ವೇಶ್ಯೆಯರು ಸತ್ತರೆ ಅವರ ಆಸ್ತಿಯು ಅವರ ಮಕ್ಕಳಿಗೆ ಇಲ್ಲವೇ ತಂಗಿಗೆ ಹೋಗುತ್ತಿತ್ತು. ಒಂದು ವೇಳೆ ಅವಳಿಗೆ ಯಾರೂ ಇಲ್ಲದಿದ್ದಾಗ ರಾಜನೇ ಅವಳ ಆಸ್ತಿಯ ಒಡೆಯನಾಗುತ್ತಿದ್ದ(ಸಚ್ಚಿದಾನಂದಾ,೨೦೧೦:೧೮೨). ಇದರಿಂದ ರಾಜ್ಯಕ್ಕೆ ಹೆಚ್ಚಿನ ಆದಾಯ ಸಂದಾಯವಾಗುತ್ತಿತ್ತು. ಈ ಪರಿಕಲ್ಪನೆಯು ವಿಜಯನಗರ ಆಳ್ವಿಕೆಯ ಕಾಲದಲ್ಲಿ ಹೆಚ್ಚಾಗಿ ಗುರುತಿಸಿಕೊಂಡಿರುವುದು ಕಂಡುಬರುತ್ತದೆ. ಮೌರ್ಯರ ಕಾಲವು ವ್ಯಾಪಾರ-ವಾಣಿಜ್ಯದಲ್ಲಿ ಮತ್ತು ಕೃಷಿಯ ವಿಸ್ತರಣೆಯಲ್ಲಿ ಪ್ರಮುಖ ಸ್ಥಾನವನ್ನು ಪಡೆದಿತ್ತು. ಮೌರ್ಯರ ಕಾಲದಲ್ಲಿ ಸಾರಿಗೆ ಸಂಪರ್ಕಗಳು ಅಭಿವೃದ್ಧಿಯಾಗಿ ಸಾಮ್ರಾಜ್ಯಗಳ ಅಭಿವೃದ್ಧಿಯಲ್ಲಿ ಧರ್ಮದ ಪ್ರಗತಿಯ ಜೊತೆ ಆರ್ಥಿಕ ಪ್ರಗತಿಯು ಸಾಗಿರುವುದನ್ನು ಅವರ ಕಾಲದ ದಾಖಲೆಗಳಿಂದ ಗಮನಿಸಬಹುದಾಗಿದೆ.

ಮೌರ್ಯ ಸಾಮ್ರಾಜ್ಯದಂತೆ ಶಾತವಾಹನರ ಸಾಮ್ರಾಜ್ಯವು ವ್ಯಾಪಾರ-ವಾಣಿಜ್ಯದಲ್ಲಿ ಪ್ರಮುಖ ಸ್ಥಾನವನ್ನು ಪಡೆದಿದೆ. ಶಾತವಾಹನರ ವ್ಯಾಪಾರ, ವಾಣಿಜ್ಯ ಕುರಿತಂತೆ ಮಾಹಿತಿಯು ಅಂದಿನ ಸಾಹಿತ್ಯ ಕೃತಿಗಳು, ಪೆರಿಫಿಕ್ ಆಫ್ ಎರಿತ್ರಿಯಾನ್‌ಸಿ ಮುಂತಾದ ದಾಖಲೆಗಳಿಂದ ತಿಳಿಯಬಹುದು. ಕರ್ನಾಟಕದಲ್ಲಿ ಶಾತವಾಹನರ ಆಳ್ವಿಕೆಯನ್ನು ಕುರಿತ ಮಾಹಿತಿಯು ಚಂದ್ರವಳ್ಳಿ, ಯಶವಂತಪುರ, ಬೆಂಗಳೂರಿನ ಎಚ್.ಎ.ಎಲ್. ವಿಮಾನ ನಿಲ್ದಾಣದ ಹತ್ತಿರ, ವಡಗಾಂವ್, ಮಾಧವಪುರ, ಅಕ್ಕಿಆಲೂರು ಮೊದಲಾದ ಕಡೆಗಳಲ್ಲಿ ಶಾತವಾಹನರ ನಾಣ್ಯಗಳು ದೊರೆತಿವೆ(ಷೇಕ್‌ಅಲಿ,೨೦೧೭:೪೧೭). ಗುಲ್ಬರ್ಗಾದ ಸನ್ನತಿಯಲ್ಲಿ ಶಾತವಾಹನರ ನಾಣ್ಯದ ಅಧ್ಯಯನ ಮುಂದುವರಿಯಬೇಕಾಗಿದೆ. ಸನ್ನತಿಯು ಶಾತವಾಹನರ ಆಳ್ವಿಕೆಗೆ ಒಳಪಟ್ಟಿದ್ದು, ಶಾತವಾಹನರ ಆರ್ಥಿಕ ಚರಿತ್ರೆ ಕುರಿತ ನಾಣ್ಯಗಳು ಅಲ್ಲಿ ದೊರೆಯುತ್ತವೆ.

ಶಾತವಾಹನರು ವಿದೇಶಗಳೊಂದಿಗೆ ವ್ಯಾಪಾರ ಸಂಬಂಧವನ್ನು ಹೊಂದಿದ್ದರೆಂದು ವಶಿಷ್ಠ ಪುತ್ರ ಪುಳುಮಾಯಿಯ ನಾಣ್ಯಗಳಲ್ಲಿ ಮಾಹಿತಿ ದೊರೆಯುತ್ತದೆ. ಇವನ ನಾಣ್ಯಗಳಲ್ಲಿ ಸಮುದ್ರದ ವ್ಯಾಪಾರದ ಹಡಗಿನ ಚಿಹ್ನೆಯನ್ನು ಗಮನಿಸಬಹುದು. ಗುಲ್ಬರ್ಗಾ ಜಿಲ್ಲೆಯ ಸನ್ನತಿಯಲ್ಲಿ ದೊರೆತ ಶಾತವಾಹನರ ನಾಣ್ಯಗಳ ಅಧ್ಯಯನವು ಮುಂದುವರಿಯಬೇಕಾಗಿದೆ. ಈ ಸ್ಥಳದಲ್ಲಿ ದೊರೆತ ಸಿರಿ ಶಾತವಾಹನ ಸೀಸದ ನಾಣ್ಯಗಳ ಮೇಲೆ ಕಮಾನಿನ ಆಕಾರದಲ್ಲಿ ತೋರಿಸಲಾದ ಬೆಟ್ಟದ ಚಿಹ್ನೆ ಇದೆ. ಮೌರ್ಯರು ಮತ್ತು ಶಾತವಾಹನರ ನಾಣ್ಯಗಳ ಮೇಲಿರುವ ಒಂದೇ ರೀತಿಯ ಚಿತ್ರಗಳು ಸಾಮ್ಯತೆ ಇರುವುದನ್ನು ಗಮನಿಸಬಹುದಾಗಿದೆ.

ಪ್ರಾಚೀನ ಭಾರತದ ಕುಲಕಸುಬುಗಳು ಹಾಗೂ ವ್ಯಾಪಾರ ಶ್ರೇಣಿಗಳು ವ್ಯವಸ್ಥಿತವಾಗಿದ್ದವು ಇತಿಹಾಸದಲ್ಲಿ ಶಕರು, ಕುಶಾನರು, ಶಾತವಾಹನರು ಹಾಗೂ ಮೊದಲ ತಮಿಳು ರಾಜ್ಯಗಳ ಕಾಲವು ಉಚ್ಛ್ರಾಯ ಕಾಲವಾಗಿದೆ. ಮೌರ್ಯರೋತ್ತರ ಕಾಲಾವಧಿಯಲ್ಲಿ ಕಸುಬುಗಾರರ ವೃತ್ತಿ ಸಂಘಗಳು ಅಥವಾ ಶ್ರೇಣಿಗಳಲ್ಲಿ ವ್ಯವಸ್ಥಿತವಾಗಿದ್ದವು. ಬೌದ್ಧ ಮತಾವಲಂಬಿಗಳಿಗೆ ವಸ್ತ್ರಗಳು ಮತ್ತು ಮತ್ತಿತರ ಅಗತ್ಯ ವಸ್ತುಗಳನ್ನು ಒದಗಿಸುವ ಸಲುವಾಗಿ ಕುಂಬಾರರು, ಗಾಣಿಗರು ಹಾಗೂ ನೇಕಾರರ ವೃತ್ತಿ ಶ್ರೇಣಿಗಳಲ್ಲಿ ಹಣವನ್ನು ಠೇವಣಿ ಇಡುತ್ತಿದ್ದರು(ಶರ್ಮಾ,೨೦೧೨:೧೮೮).

ಶಾತವಾಹನರ ಕಾಲದಲ್ಲಿ ಬೌದ್ಧಾಲಯಗಳು ರಚನೆಗೊಂಡು ಇವುಗಳನ್ನು ಆದಷ್ಟು ಅಂದಿನ ವ್ಯಾಪಾರಿಗಳ ಮಾರ್ಗದಲ್ಲಿ ಇರುವಂತೆ ನಿರ್ಮಿಸಲಾಗುತ್ತಿತ್ತು. ಪಶ್ಚಿಮಘಟ್ಟಗಳಲ್ಲಿನ ಬೌದ್ಧ ನೆಲೆಗಳೆಲ್ಲ ಪ್ರಾಚೀನ ವ್ಯಾಪಾರ ಮಾರ್ಗಗಳ ಪಕ್ಕದಲ್ಲಿಯೇ ಅಥವಾ ಅವುಗಳ ಸಮೀಪದಲ್ಲಿಯೇ ಇವೆ. ಇದರಿಂದ ವ್ಯಾಪಾರಿಗಳಿಗೆ ಧಾರ್ಮಿಕ ಮನೋಭಾವ ಬೆಳೆಯುವ ಜೊತೆಗೆ ಸಂಘಕ್ಕೆ ಆರ್ಥಿಕ ಸಹಾಯವೂ ದೊರೆಯುತ್ತಿತ್ತು. ವ್ಯಾಪಾರಿ ಮಾರ್ಗಗಳು ಮತ್ತು ಬೌದ್ಧಾಲಯಗಳಿರುವ ಸ್ಥಳಗಳು ಆ ಕಾಲದ ಪ್ರಮುಖ ಧಾರ್ಮಿಕ ನೆಲೆಗಳಾಗಿದ್ದವು. ಈ ನೆಲೆಗಳು ನಂತರದ ಕಾಲದಲ್ಲಿ ರಾಜಕೀಯ, ಆರ್ಥಿಕ ನೆಲೆಗಳಾಗಿ ಮುಂದುವರಿದಿವೆ.

ಶಾತವಾಹನರ ಕಾಲದಲ್ಲಿ ಕುಲಕಸುಬುಗಳು, ವಾಣಿಜ್ಯ ಹಾಗೂ ಹಣದ ಪ್ರಸರಣ ಇವುಗಳಿಂದ ಹಲವಾರು ಪ್ರದೇಶಗಳು ನಗರಗಳಾಗಿ ಬೆಳೆದವು. ಶಾತವಾಹನರ ಕಾಲಾವಧಿಯಲ್ಲಿ ಉತ್ತರ ಭಾರತದ ಪ್ರದೇಶಗಳಾದ ವೈಶಾಲಿ, ಪಾಟಲಿಪುತ್ರ, ವಾರಣಾಸಿ, ಕೌಶಾಂಬಿ, ಶ್ರಾವಸ್ತಿ, ಹಸ್ತಿನಾಪುರ, ಮಥುರಾ, ಇಂದ್ರಪ್ರಸ್ತ ಈ ನಗರಗಳು ಆ ಕಾಲದಲ್ಲಿ ಅಭಿವೃದ್ಧಿ ಹೊಂದಿದವು.

ಶಾತವಾಹನರು ಕರ್ನಾಟಕದ ಚಿತ್ರದುರ್ಗ ಜಿಲ್ಲೆಯ ಚಂದ್ರವಳ್ಳಿಯ ಪ್ರದೇಶದಲ್ಲಿ ಆಳ್ವಿಕೆ ನಡೆಸಿದ್ದಾರೆಂಬುದನ್ನು ಚಂದ್ರವಳ್ಳಿ ಉತ್ಖನನದಿಂದ ತಿಳಿಯಬಹುದಾಗಿದೆ. ಶಾತವಾಹನರ ನಾಣ್ಯ ಚಂದ್ರವಳ್ಳಿ ನಿವೇಶನದ ಮೇಲಿನ ಪದರದಲ್ಲಿ ಕಂಡುಬಂದಿದ್ದು, ಕೆಳಪದರಿನಲ್ಲಿ ರೋಮನ್ ದೊರೆ ಡೇರಿಯಸನ ನಾಣ್ಯ, ಮದಾರಥಿಗಳ ನಾಣ್ಯ ದೊರೆತಿದ್ದ ೨ನೆಯ ಪದರಿನಲ್ಲಿ ವಶಿಷ್ಠ ಪುತ್ರ ಶ್ರೀ ಪುಳುಮಾವಿಯ ಪೊಟಿನ್ ನಾಣ್ಯವು ದೊರೆಯಿತು(ತೆಲಗಾವಿ,೨೦೧೯:೮೯). ಇವರ ಆಳ್ವಿಕೆಯನ್ನು ಕುರಿತಂತೆ ಕರ್ನಾಟಕದ ಸನ್ನತಿ, ಬನವಾಸಿ, ಬ್ರಹ್ಮಗಿರಿ, ಚಂದ್ರವಳ್ಳಿ, ಅಳ್ಳೂರು, ಸಂಗನಕಲ್ಲು, ವಡಗಾಂವ್, ಮಾಧವಪುರ, ಟಿ. ನರಸಿಪುರ ಮೊದಲಾದ ಕನ್ನಡ ಪ್ರದೇಶಗಳು ಶಾತವಾಹನರ ಆಳ್ವಿಕೆಗೆ ಒಳಪಟ್ಟಿದ್ದವು ಎಂಬುದನ್ನು ತಿಳಿಸುತ್ತವೆ. ಇವು ಅವರ ಆಡಳಿತ ಕೇಂದ್ರಗಳಾಗಿದ್ದವು. ಇವು ಆ ಕಾಲದ ನಗರಕೇಂದ್ರಗಳಾಗಿ ಕಾರ್ಯ ನಿರ್ವಹಿಸುತ್ತಿದ್ದವು. ಶಾತವಾಹನರ ಕಾಲವು ಕುಲಕಸುಬುಗಳ ಕೇಂದ್ರಸ್ಥಾನವಾಗಿದ್ದವು. ಸ್ತ್ರೀ-ಪುರುಷರಿಬ್ಬರ ಶಿಲ್ಪಗಳು ದೊರೆತಿದ್ದು, ಕೈ-ಕಾಲುಗಳಿಗೆ ಕಡಗಗಳು, ಸ್ತ್ರೀಯರ ಅಂಕುಶ, ದೂಕುಲ ನಿವಸನ ಪಟ, ವಡ, ಸಾಲುವೆ, ಸಿಚೆಯ ಹೆಸರಿನ ಬಟ್ಟೆ ತಯಾರಿಕೆಯ ಕೇಂದ್ರವಾಗಿರುವುದನ್ನು ಈ ಕಾಲದಲ್ಲಿ ಗಮನಿಸಬಹುದು.

ಇಟ್ಟಗೆಯನ್ನು ಬಳಸಿ ಕಟ್ಟಿದ ನಗರಗಳಲ್ಲಿನ ಅಗಲವಾದ ರಸ್ತೆಗಳು ಅಂಡಾಕೃತಿಯಲ್ಲಿ ಕಾಣಿಸುತ್ತವೆ. ಅಗಲವಾದ ರಸ್ತೆಗಳು, ಅಲ್ಲಲ್ಲಿ ಅಡ್ಡವಾಗಿ ಬರುವ ಸಮಾನಾಂತರ ಕಾಲು ದಾರಿಗಳು ಇದ್ದದ್ದು ಕಂಡುಬರುತ್ತವೆ. ಮಾರ್ಗಗಳ ಇಕ್ಕಡೆಗಳಲ್ಲಿಯೂ ಇಟ್ಟಿಗೆಯಿಂದ ನಿರ್ಮಿಸಲಾದ ಕಟ್ಟಡಗಳಿದ್ದವು. ಈ ರಸ್ತೆಗಳ ಪಕ್ಕದಲ್ಲಿಯೇ ಬಾವಿಗಳು, ಕೆರೆಗಳು ಇರುತ್ತಿದ್ದವು. ಈ ಯೋಜನೆಯನ್ನು ಗಮನಿಸಿದರೆ ಈ ಕಾಲದ ನಗರ ಯೋಜನೆಯು ಸಿಂಧೂ ನಾಗರೀಕತೆಯನ್ನು ಹೋಲುತ್ತಿತ್ತೆಂದು ಹೇಳಬಹುದಾಗಿದೆ(ಷೇಕ್ ಅಲಿ,(೧)೨೦೧೭:೩೭೯).

ಶಾತವಾಹನರ ಕಾಲದಲ್ಲಿಯೇ ಸಂತೆಯ ಪರಿಕಲ್ಪನೆ ಬೆಳೆದು ಬಂದಿದ್ದು ಆ ಕಾಲಘಟ್ಟದಿಂದ ವ್ಯಾಪಾರದ ಅಭಿವೃದ್ಧಿಯಾಗಿರುವುದು ಸ್ಪಷ್ಟವಾಗುತ್ತದೆ. ಸಂತೆಗಳು ವ್ಯಾಪಾರ-ವಾಣಿಜ್ಯದ ಕೇಂದ್ರಗಳಾಗಿದ್ದು, ಸ್ಥಳೀಯ ಮಟ್ಟದಲ್ಲಿ ಇವು ವಾಣಿಜ್ಯ ಚಟುವಟಿಕೆಯ ಕೇಂದ್ರವಾಗಿ ವಾರದ ಸಂತೆಯಂತೆ ಪ್ರತಿವಾರವೂ ನಡೆಯುತ್ತಿತ್ತು. ವಡಗಾಂವ್, ಮಾಧವಪುರ ಒಂದು ಭಾಗದಲ್ಲಿ ಹೆಚ್ಚಾಗಿ ವ್ಯಾಪಾರಸ್ಥರೇ ಇದ್ದಂತೆ ಕಾಣುತ್ತದೆ(ಷೇಕ್ ಅಲಿ,೨೦೧೭:೩೭೯).

ಶಾತವಾಹನರ ವ್ಯಾಪಾರ ವಾಣಿಜ್ಯ ಸ್ಥಳೀಯ ಹಂತದಲ್ಲಿ ಸಂತೆಯಲ್ಲಿ ವ್ಯಾಪಾರ ಮಾಡುತ್ತಿದ್ದರು. ಮಹಿಳೆಯು ಬೌದ್ಧಾಲಯಗಳನ್ನು ನಿರ್ಮಿಸಿ ಭೌದ್ಧ ವ್ಯಾಪಾರಿಗಳು ಆ ಪ್ರದೇಶದಲ್ಲಿ ತಂಗಲು ಅವಕಾಶ ಮಾಡಿಕೊಡುತ್ತಿದ್ದರು. ವ್ಯಾಪಾರ ಮತ್ತು ಕೃಷಿಗೆ ಪ್ರಜಾಕೋಟಿಯ ಮುಖ್ಯ ಜೀವಗಳಾಗಿದ್ದವು. ಅಂದಿನ ಶಾಸನಗಳಲ್ಲಿ ಹಲವಾರು ವೃತ್ತಿಗಳ ಉಲ್ಲೇಖವಿದೆ. ಧನಿಕ(ದಾನ್ಯ ವ್ಯಾಪಾರಿ), ಮಾಲೆಕಾರ(ಮಾಲೆ ಮಾಡುವವ), ಕೋಲಿಕ(ನೇಕಾರ), ತಿಲಪಿಸಕ(ಗುಣಿಕ), ಕಮಾರ(ಕಮ್ಮಾರ), ಗಂಧಿಕ(ಸುಗಂಧ ದ್ರವ್ಯಕಾರ) ಹೀಗೆ ಮೊದಲಾದ ವೃತ್ತಿಸೂಚಕ ಪದಗಳು ಅಲ್ಲಿನ ಶಾಸನ ದಾಖಲೆಗಳಿಂದ ತಿಳಿಯುತ್ತದೆ(ದೀಕ್ಷಿತ್,೧೯೯೫:೧೧೯). ಶಾತವಾಹನರು ಕರ್ನಾಟಕದ ಪ್ರದೇಶಗಳನ್ನು ಆಳ್ವಿಕೆಗೊಳಪಡಿಸಿಕೊಂಡಿದ್ದಾಗ ರುಜ್ಜಕರೆಂಬ ಅಧಿಕಾರಿಗಳು ಭೂಮಿಯನ್ನು ಅಳತೆ ಮಾಡಿ ಕಂದಾಯವನ್ನು ನಿರ್ಣಯಿಸುವುದು ಕರ್ತವ್ಯವಾಗಿತ್ತು. ಈ ಅಧಿಕಾರಿ ಮೌರ್ಯರ ಕಾಲದಲ್ಲಿಯೇ ಇದ್ದು, ಆ ವೃತ್ತಿ ಮುಂದುವರೆದಿರುವುದು ಕಂಡುಬರುತ್ತದೆ.

ಶಾತವಾಹನರ ಕಾಲದಲ್ಲಿ ಕೃಷಿಯ ವಿಸ್ತರಣೆಯ ಜೊತೆಗೆ ಮೌರ್ಯರೋತ್ತರ ಕಾಲದಲ್ಲಿ ಕರಕುಶಲ ಕಸುಬುಗಳು ಬೆಳವಣಿಗೆ ಹೊಂದುವುದರ ಜೊತೆಗೆ ವ್ಯಾಪಾರವೂ ಅಭಿವೃದ್ಧಿಯಾಗಿದೆ. ಶಾತವಾಹನರು ಹೆಚ್ಚಿನದಾಗಿ ಸಾಗರೋತ್ತರ ವ್ಯಾಪಾರದಲ್ಲಿ ಗುರುತಿಸಿಕೊಂಡಿದ್ದು, ಹಲವಾರು ವ್ಯಾಪಾರಿ ಸಮುದಾಯಗಳು ವ್ಯಾಪಾರ ನಡೆಸುತ್ತಾ ತಮ್ಮ ಒಳತಿಗಾಗಿ ಸಂಘಗಳನ್ನು ನಿರ್ಮಿಸಿಕೊಂಡಿದ್ದರು. ಹಾಗೆಯೇ ಕರ್ನಾಟಕದಲ್ಲಿಯೂ ಇವರ ಕಾಲದಲ್ಲಿ ಹಲವಾರು ನಗರಗಳು ಉಗಮವಾಗಿರುವುದನ್ನು ಗಮನಿಸಬಹುದಾಗಿದೆ.

ಶಾತವಾಹನರ ನಂತರ ಕರ್ನಾಟಕವನ್ನಾಳಿದ ರಾಜಮನೆತನವೆಂದರೆ ಕದಂಬರು. ಕ್ರಿ.ಶ. ೪ನೆಯ ಶತಮಾನದಲ್ಲಿ ಉತ್ತರ ಮತ್ತು ದಕ್ಷಿಣ ಕರ್ನಾಟಕದಲ್ಲಿ ಪ್ರತ್ಯೇಕ ಹಾಗೂ ಸ್ವತಂತ್ರವಾದ ರಾಜ್ಯವನ್ನು ಸ್ಥಾಪಿಸಿದವರೇ ಇವರು. ಶಾತವಾಹನರ ಕಾಲದಲ್ಲಿದ್ದಂತಹ ವ್ಯಾಪಾರ-ವಾಣಿಜ್ಯವನ್ನು ಕದಂಬರ ಕಾಲದಲ್ಲಿಯೂ ಮುಂದುವರಿದಿರುತ್ತದೆ. ಕದಂಬರು ಮೂಲತಃ ವೈದಿಕ ಮತಾವಲಂಬಿಗಳಾಗಿದ್ದು, ಭೂರಕ್ಷಣೆಗಾಗಿ ಕ್ಷಾತ್ರವೃತ್ತಿಯನ್ನು ಕೈಗೊಂಡರೆಂದು ತಿಳಿದುಬರುತ್ತದೆ. ಉತ್ತರ ಕನ್ನಡ, ದಕ್ಷಿಣ ಕನ್ನಡ, ಬೆಳಗಾವಿ, ಧಾರವಾಡ, ಹಾವೇರಿ, ಶಿವಮೊಗ್ಗ, ಚಿತ್ರದುರ್ಗ ಜಿಲ್ಲೆಗಳ ಭಾಗಗಳನ್ನೊಳಗೊಂಡ ಭೌಗೋಳಿಕ ಪ್ರದೇಶದ ರಾಜರಾಗಿದ್ದರು.

ಕದಂಬರ ಕಾಲದಲ್ಲಿ ತಾಳಗುಂದ, ಚಂದ್ರವಳ್ಳಿ, ಬ್ರಹ್ಮಗಿರಿ, ಹಲಸಿ, ಉಚ್ಚಂಗಿ, ಗುಡ್ನಾಪುರ ಮೊದಲಾದ ನಗರಗಳು ವೈಭವಯುತವಾಗಿ ಬೆಳೆದ ನಗರಗಳಾಗಿದ್ದವು. ಇವರ ಕಾಲದ ಒಂದು

ಮುಖ್ಯ ಬೆಳವಣಿಗೆಯೆಂದರೆ ನಾಣ್ಯಗಳಲ್ಲಿ ಆದ ಬೆಳವಣಿಗೆ. ಪದ್ಮಟಂಕಗಳೆಂದು ಕರೆಯುವ ಚಿನ್ನದ ನಾಣ್ಯವು ಈ ಕಾಲದಲ್ಲಿ ಚಲಾವಣೆಗೆ ಬಂದಿದೆ. ಈ ನಾಣ್ಯವು ಮುಂದಿನ ಪ್ರಭುತ್ವಗಳಾದ ಸೇವುಣರು ಮತ್ತು ಕಲ್ಯಾಣ ಚಾಲುಕ್ಯರ ಕಾಲದಲ್ಲಿಯೂ ಟಂಕಿತವಾಗಿರುವುದು ಕಂಡುಬರುತ್ತದೆ. ಕದಂಬರ ರಾಜಧಾನಿಯಾದ ಬನವಾಸಿಯು ಆ ಕಾಲದ ಪ್ರಮುಖ ಧಾರ್ಮಿಕ ಕೇಂದ್ರವಾಗಿ ಬೌದ್ಧ ನೆಲೆಯಾಗಿ ಆರ್ಥಿಕ ಚಟುವಟಿಕೆಗಳ ಕೇಂದ್ರವಾಗಿಯೂ ಮುಂದುವರಿದಿದೆ.

ಕದಂಬರ ಸಮಾಜ ಕೃಷಿಪ್ರಧಾನವಾಗಿದ್ದರೂ ಶ್ರೀಮಂತ ವ್ಯಾಪಾರಿಗಳು ಮತ್ತು ಕೈಗಾರಿಕಾ ಸಮಾಜವನ್ನು ಹೊಂದಿತ್ತು. ಈ ವೇಳೆಯಲ್ಲಿ ಅಭಿವೃದ್ಧಿ ಹೊಂದುತ್ತಿರುವ ವ್ಯಾಪಾರಿ ಸಮುದಾಯವನ್ನು ಶಾಸನೋಕ್ತವಾಗಿ ಉಲ್ಲೇಖಿಸಬಹುದಾಗಿದೆ. ಈ ಕಾಲದಲ್ಲಿ ಚಿನ್ನ, ಬೆಳ್ಳಿ, ಹತ್ತಿ ಬಟ್ಟೆ, ಮೆಣಸು, ಹಣ್ಣುಗಳ ಉತ್ಪಾದನೆಯು ನಡೆಯುತ್ತಿತ್ತು. ಪಶ್ಚಿಮ ಕರಾವಳಿಯ ಮೂಲಕ ವ್ಯಾಪಾರ ವಹಿವಾಟು ನಡೆಯುತ್ತಿತ್ತು. ಇದರಿಂದ ಕದಂಬರ ಕಾಲದಲ್ಲಿ ವ್ಯಾಪಾರ–ವಾಣಿಜ್ಯವು ವ್ಯವಸ್ಥಿತವಾಗಿ ನಡೆಯುತ್ತಿತ್ತೆಂದು ತಿಳಿಯಬಹುದಾಗಿದೆ.

ಕದಂಬರು ಕೃಷಿಪ್ರಧಾನ ಸಮಾಜವನ್ನು ಅಭಿವೃದ್ಧಿಪಡಿಸಿದರು. ಇವರು ಸಮಾಜದ ಆರ್ಥಿಕ ವ್ಯವಸ್ಥೆಯನ್ನು ಅಭಿವೃದ್ಧಿಪಡಿಸಲು ಸರ್ಕಾರದ ವತಿಯಿಂದ ಕೃಷಿಯೋಗ್ಯವಲ್ಲದ ಭೂಮಿಯನ್ನು ಕೃಷಿಯೋಗ್ಯ ಭೂಮಿಯನ್ನಾಗಿ ಪರಿವರ್ತಿಸಿದರು. ಶಾತವಾಹನರ ಕಾಲದ ವ್ಯಾಪಾರ–ವಾಣಿಜ್ಯವನ್ನು ಕದಂಬರ ಕಾಲಕ್ಕೆ ಹೋಲಿಸಿ ನೋಡಿದರೆ ವರ್ತಕ ಸಂಘ, ವಿದೇಶಿ ವ್ಯಾಪಾರ ಹೆಚ್ಚಿನದಾಗಿ ನಡೆಯುತ್ತಿತ್ತು. ಆದರೆ ಕದಂಬರ ಕಾಲದ ವೇಳೆಗೆ ವ್ಯಾಪಾರ–ವಾಣಿಜ್ಯದಲ್ಲಿ ಕುಂಠಿತ ಉಂಟಾಗಿ ದಕ್ಷಿಣ ಪ್ರದೇಶದಲ್ಲಿ ವ್ಯಾಪಾರ ಇಳಿಮುಖವಾಗಲಾರಂಭಿಸಿತು. ಶಾತವಾಹನರು ಹೆಚ್ಚಿನದಾಗಿ ನಾಣ್ಯಗಳನ್ನು ಟಂಕಿಸಿದರೆ ಕದಂಬರು ದೊಡ್ಡ ಪ್ರಮಾಣದಲ್ಲಿ ನಾಣ್ಯಗಳನ್ನು ಟಂಕಿಸಲಿಲ್ಲ. ಇದು ಕದಂಬರಿಗೂ ಮತ್ತು ಶಾತವಾಹನರಿಗೂ ಇರುವ ಮುಖ್ಯ ವ್ಯತ್ಯಾಸವಾಗಿರುವುದು ಕಂಡುಬರುತ್ತದೆ.

ಕೃಷಿ ವ್ಯವಸಾಯ ಹೆಚ್ಚು ವೃದ್ಧಿಯಾಗುತ್ತಾ ಹೋಯಿತು. ಶಾಸನಗಳಲ್ಲಿ ಉಲ್ಲೇಖಿತ ಗ್ರಾಮಗಳ ಹೆಸರುಗಳನ್ನು ಗಮನಿಸಿದರೆ ಪಲ್ಲಿಪಟ್ಟಿ, ಕೇಟವೆಂದು ಅಂತ್ಯವಾಗುವ ಗ್ರಾಮನಾಮಗಳು ಸಾಕಷ್ಟಿವೆ. ಪಲ್ಲಿಕೇಟಗಳು ಅರಣ್ಯವಾಸಿ ಜನವಸತಿಗಳೆಂದು ಅರ್ಥವಾಗುತ್ತದೆ. ಹಟ್ಟಿ ಸಾಮಾನ್ಯವಾಗಿ ದನಗಾಯಿಗಳ ವಸತಿ. ಈಗಾಗಲೇ ಹೇಳಿದಂತೆ ಸಹಲಾಟವಿ ಎಂಬುದು ಅಡವಿಯನ್ನು ಬಯಲುಮಾಡಿ ಕೃಷಿ ಯೋಗ್ಯವಾಗಿಸಿದ್ದು ಎಂಬರ್ಥ ಬರುತ್ತದೆ. ಇವನ್ನೆಲ್ಲ ಗಮನಿಸಿದರೆ ಇಂತಹ ಪ್ರದೇಶದಲ್ಲಿ ಹೆಚ್ಚು ಹೆಚ್ಚು ಭೂಮಿಯನ್ನು ಅಭಿವೃದ್ಧಿಪಡಿಸಲಾಯಿತೆಂದು ಹೇಳಬೇಕಾಗುತ್ತದೆ. ಕೃಷಿ ಅಭಿವೃದ್ಧಿಯ ಜೊತೆಗೆ ನೀರಾವರಿಗೆ ಕೆರೆಗಳನ್ನು ನಿರ್ಮಿಸಿದ ಉಲ್ಲೇಖ ದೊರೆಯುತ್ತದೆ. ಭೂಮಿಯನ್ನು ಅಳತೆ ಮಾಡಲು ನಿವರ್ತನ ಎಂಬ ಮಾನ ಬಳಕೆಯಾಗುತ್ತಿತ್ತೆಂದು ಶಾಸನಗಳಿಂದ ತಿಳಿಯುತ್ತದೆ (ಪೂಜಾರಹಳ್ಳಿ೨೦೧೬:೮೦).

ಕದಂಬರ ಕಾಲದಲ್ಲಿ ಬ್ರಾಹ್ಮಣರಿಗೆ ದೊರೆತ ಬ್ರಹ್ಮದೇಯಗಳು ವಿವಿಧ ರೀತಿಯ ತೆರಿಗೆಗಳಿಂದಲೂ, ರಾಜನ ಹಿಡಿತದಿಂದಲೂ ಮುಕ್ತವಾಗಿದ್ದವು. ರಾಜನಿಗೆ ಸಲ್ಲಬೇಕಾಗಿದ್ದ ಕರವಿಷ್ಟೆ ಇತ್ಯಾದಿಗಳು

ಗ್ರಾಮದ ಚಟುವಟಿಕೆ ನೋಡಿಕೊಳ್ಳುತ್ತಿದ್ದ ಬ್ರಾಹ್ಮಣರಿಗೆ ವರ್ಗಾಂತರವಾಗುತ್ತಿದ್ದವು. ಈ ಮೂಲಕ ಗ್ರಾಮಗಳ ವ್ಯಾಪಾರ, ವ್ಯವಹಾರಗಳು ಸಂಪೂರ್ಣವಾಗಿ ಬ್ರಾಹ್ಮಣತ್ವದ ಪರಿಕಲ್ಪನೆಗಳು ಬೆಳೆದು ಬ್ರಹ್ಮದೇಯಗಳು ಉಗಮವಾಗಿರುವುದನ್ನು ಗಮನಿಸಬಹುದಾಗಿದೆ. ಗ್ರಾಮಗಳಲ್ಲಿನ ಸಂಪೂರ್ಣ ವ್ಯಾಪಾರ, ವಾಣಿಜ್ಯ ಚಟುವಟಿಕೆಗಳು ಗ್ರಾಮಜೀವನದ ಆರ್ಥಿಕಾಭಿವೃದ್ಧಿಯ ಪೂರಕ ಅಂಶಗಳು ಈ ಅಂಶಗಳೇ ನಗರಜೀವನ ಬೆಳವಣಿಗೆಯಾಗಲು ಸ್ಫೂರ್ತಿಯಾಯಿತೆಂದು ಹೇಳಬಹುದು. ಕದಂಬರ ಕಾಲದಲ್ಲಿ ವ್ಯಾಪಾರ-ವಾಣಿಜ್ಯದಲ್ಲಿ ಅಷ್ಟು ಪ್ರಗತಿ ಸಾಧಿಸದಿದ್ದರೂ ಹುಲ್ಲುಗಾವಲು ಸಾಮಾನ್ಯವಾಗಿ ಕೃಷಿ ಭೂಮಿಯ ಒಂದು ಭಾಗವೇ ಆಗಿತ್ತು. ದನಗಳನ್ನು ಮೇಯಿಸುವ ಉದ್ದೇಶದಿಂದ ಸಾಗುವಳಿ ಮಾಡದೇ ಹಾಗೆಯೇ ಬಿಡಲಾಗುತ್ತಿತ್ತು. ಪ್ರತಿ ಗ್ರಾಮ ಅಥವಾ ಪಟ್ಟಣವು ಸ್ಥಳೀಯ ದನಗಳಿಗಾಗಿ ತನ್ನದೇ ಸಾಮಾನ್ಯ ಮೇವಿನ ಭೂಮಿ ಇರುತ್ತಿತ್ತು. ಬಹುಶಃ ಈ ಮೇವಿನ ಹೊಲಗಳು ಗ್ರಾಮಸಭೆಯ ಅಥವಾ ರಾಜನ ನಿಯಂತ್ರಣದಲ್ಲಿರುತ್ತಿದ್ದವು.

೧೧೬೫ರ ಭಟ್ಟಕಂಪ ದಾಖಲೆಯು ತಿಳಿಸುವಂತೆ ಬರ್ಮ್ಮಗುಂಡನು ಮಾವಳ್ಳಿ ಸಮೀಪದ ಹಳ್ಳಿಯಾದ ಬಳ್ಳೆಯಕೋಳ ಎಂಬಲ್ಲಿ ಒಂದು ಶಿವಮಂದಿರವನ್ನು ಕಟ್ಟಿಸಿದನು. ಮಾವಳ್ಳಿಯ ಮೂವರು ಮುಖ್ಯಸ್ಥರಿಂದ ಕೃಷಿ ಭೂಮಿಯ ತುಂಡೊಂದನ್ನು ಮತ್ತು ಬಂಜರುಭೂಮಿಯನ್ನು ಖರೀದಿಸಿ ಅದನ್ನು ದಾನ ಮಾಡಿದನು. ನಂತರ ದೇವಾಲಯದ ಮುಂದಿನ ಬಾವಿಯ ನಿರ್ವಹಣೆಗಾಗಿ ಭತ್ತವನ್ನು ನೀಡಲಾಯಿತು. ಸರ್ಕಾರಕ್ಕೆ ಭೂಮಿಯ ಕೆಲ ಭಾಗವು ಅಗತ್ಯಬಿದ್ದರೂ ಸಹ ತಕ್ಷಣ ಅದನ್ನು ವಶಪಡಿಸಿಕೊಳ್ಳುತ್ತಿರಲಿಲ್ಲ. ಬದಲಿಗೆ ಅದರ ಮಾಲೀಕನಿಂದ ಕೊಂಡುಕೊಳ್ಳಲಾಗುತ್ತಿತ್ತು. ಇವರ ಬೆಳೆಗಳು ಜೋಳ, ಗೋದಿ, ರಾಗಿ, ರವೆಯಾಗಿದ್ದಿರಬಹುದು. ಈ ಕಾಲದಲ್ಲಿ ಉಳುಮೆ ಮಾಡುತ್ತಿದ್ದ ಮುಖ್ಯ ಬೆಳೆಗಳೆಂದರೆ ತೊಗರೆ, ಹುರುಳಿ, ಎಳ್ಳು, ಉದ್ದು ಮತ್ತು ಹೆಸರು. ಇಲ್ಲಿ ಬೆಳೆಯಲಾಗುತ್ತಿದ್ದ ಅನೇಕ ಎಣ್ಣೆ ಬೀಜಗಳೆಂದರೆ ಹೊಂಗೆ, ಹರಳು ಮತ್ತು ಎಳ್ಳುಗಳಾಗಿದ್ದವು.

ಕದಂಬರ ಕಾಲದಲ್ಲಿ ಮುಖ್ಯವಾಗಿ ವರ್ತಕರು ವರ್ತಕ ಸಂಘಗಳನ್ನು ಕುರಿತಂತೆ ವಿವರಿಸಬಹುದು. ಅಯ್ಯಾವೊಳೆ ೫೦೦ ಎಂದು ಸಂಘಗಳು ಗುರು-೩೨ರೊಂದಿದ್ದು ಮುಮ್ಮುರಿದಂಡರು, ಗವರರು, ಗಾತ್ರಿಗರು, ಬೀರ, ಬೀರವನಿಯರು, ಸೆಟ್ಟಿಯರು, ಸೆಟುಗುಟ್ಟರು, ವೇಲೇಕರರು, ಮತ್ತು ವೀರನಂಜುರರೆಂಬ ಪಂಗಡಗಳನ್ನು ಕಾಣುತ್ತೇವೆ(ಪೂಜಾರಹಳ್ಳಿ,೨೦೧೬:೮೭). ಈ ಪಂಗಡಗಳು ಕದಂಬರ ಕಾಲದಲ್ಲಿ ವ್ಯಾಪಾರ-ವಾಣಿಜ್ಯದಲ್ಲಿ ಗುರುತಿಸಿಕೊಂಡಿರುವುದನ್ನು ಗುರುತಿಸಬಹುದು.

ಕರ್ನಾಟಕದಲ್ಲಿ ಕದಂಬರು ನೌಕೆಗಳನ್ನು ಕಟ್ಟಿ ಸಮುದ್ರ ವ್ಯಾಪಾರ ಮತ್ತು ಪ್ರಯಾಣವನ್ನು ಪ್ರೋತ್ಸಾಹಿಸಿದರು. ಕರ್ನಾಟಕದಲ್ಲಿ ಬಳ್ಳಿಗಾವಿಯ ವರ್ತಕರು ಸೌರಾಷ್ಟ್ರ, ಮಗಧ, ಪಾಂಡ್ಯ, ಚೇರ, ಚೋಳ ಮತ್ತಿತರ ದೇಶಗಳೊಂದಿಗೆ ವಾಣಿಜ್ಯ ಸಂಬಂಧಗಳನ್ನಿಟ್ಟುಕೊಂಡಿದ್ದರು(ಕೃಷ್ಣ ೧೯೭೦: ೮೮೪-೮೮೫). ಸಂತೆಗಳು ಮತ್ತೊಂದು ಆರ್ಥಿಕ ಚಟುವಟಿಕೆ ನಡೆಯುವ ಕೇಂದ್ರವಾಗಿ ಬೆಳೆಯುತ್ತಿದ್ದವು. ಸಂತೆಯಾಗಿ ರೂಪುಗೊಳ್ಳುವ ಗ್ರಾಮವು ಒಂದು ಪಟ್ಟಣವಾಗಿ ಕೊನೆಗೊಳ್ಳುತ್ತಿತ್ತು. ಅಂತಹ ಪಟ್ಟಣಗಳು ಸೂಡಿ, ಪುಲಿಗೆರೆ ಮೊದಲಾದ ಸನ್ನದುಗಳನ್ನು ಪಡೆಯುತ್ತಿದ್ದವು. ಹೀಗೆ ಒಂದು ಸಂತೆ ಮತ್ತು ಒಂದು ಸನ್ನದು ಗ್ರಾಮದಿಂದ ಪಟ್ಟಣವನ್ನು ಬೇರ್ಪಡಿಸುತ್ತಿತ್ತು.

ಕದಂಬರ ಕಾಲದಲ್ಲಿ ನಿತ್ಯದ ಕರ, ಕಂದಾಯ ಸುಂಕ, ಉಪ್ಪಿನ ತೆರಿಗೆ, ಬೀರಪಣ ಇವು ರಾಜ್ಯದ ಬೊಕ್ಕಸಕ್ಕೆ ಸೇರುವ ತೆರಿಗೆಗಳಾಗಿದ್ದವು. ಗಾಣಿಗರು ಹೇರೆತ್ತು, ಹೇಸರುಗತ್ತೆಗಳನ್ನಿಟ್ಟುಕೊಂಡು ವೀಳ್ಯದೆಲೆಯ ವ್ಯಾಪಾರ ಮಾಡುತ್ತಿದ್ದರು. ಕಮ್ಮಾರ, ಅಕ್ಕಸಾಲಿ, ಬಡಗಿ, ಕುಂಬಾರರು ಮುಂತಾದವರು ವೃತ್ತಿ ಕರಗಳನ್ನು ಸಲ್ಲಿಸಬೇಕಾಗಿತ್ತು(ಪೂಜಾರಹಳ್ಳಿ,೨೦೧೬: ೮೭).

ಕದಂಬರ ಕಾಲದಲ್ಲಿ ವಿವಿಧ ರೀತಿಯ ತೆರಿಗೆಗಳನ್ನು ವಿವರಿಸುತ್ತಿದ್ದರು. ವಡ್ಡ-ರಾವುತಿ ಸುಂಕವು ನೌಕೆಗಳ ಸರಕುಗಳ ಮೇಲಿನ ತೆರಿಗೆ ಇರಬಹುದು. ಬಿಲ್ ಕೊಡೆಯು ಪ್ರಾಣಿಗಳಿಂದ ಸಾಗಿಸಲಾಗುತ್ತಿದ್ದ ಹೊರೆಗಳ ಮೇಲೆ ಇರಬಹುದಾದ ಸುಂಕವಾಗಿದೆ. ಕೆಲವೊಮ್ಮೆ ತೆರಿಗೆ ವಿಧಿಸುವಂತಹ ಸಂದರ್ಭದಲ್ಲಿ ಕದಂಬರು ವಿನಾಯಿತಿಯನ್ನು ನೀಡಿದ ವಿವರಗಳು ಕೆಲವೊಮ್ಮೆ ಅಲ್ಲಿನ ಶಾಸನಗಳಲ್ಲಿ ದೊರೆಯುತ್ತವೆ. ಒಂದು ಕಟ್ಟೆಯ ಕಲ್ಲಿನಿಂದ ಮುಚ್ಚಲ್ಪಟ್ಟ ಭೂಮಿ, ತುಂಡುಭೂಮಿ, ನೀರಿನ ಕೆಳಗಣ ಭೂಮಿ ಮತ್ತಿತರವು ತೆರಿಗೆಗಳಿಂದ ವಿನಾಯಿತಿ ಪಡೆದಿದ್ದವು. ಒಟ್ಟಾರೆಯಾಗಿ ಕದಂಬರ ಕಾಲವು ಕೃಷಿ ವ್ಯಾಪಾರ-ವಾಣಿಜ್ಯ ಕ್ಷೇತ್ರದಲ್ಲಿ ಅಭಿವೃದ್ಧಿ ಹೊಂದಿ ವ್ಯಾಪಾರ ಗ್ರಾಮಮಟ್ಟದಿಂದ ನಗರ ಸ್ವರೂಪದಲ್ಲಿ ಬೆಳವಣಿಗೆಯಾಗಿರುವುದನ್ನು ಇಲ್ಲಿ ಪ್ರಮುಖವಾಗಿ ಗುರುತಿಸಬಹುದಾಗಿದೆ.

ಕದಂಬರ ನಂತರ ಕರ್ನಾಟಕದಲ್ಲಿ ಆಳ್ವಿಕೆ ಮಾಡಿದವರು ಗಂಗರು. ಗಂಗರು ಗಂಗವಾಡಿ ೯೬,೦೦೦ ವಿಭಾಗಿಸಿಕೊಂಡು ತಮ್ಮ ಸಾಮ್ರಾಜ್ಯವನ್ನು ಸಾಮಂತರು, ದಂಡನಾಯಕರು, ನಾಯಕರು ಎಂಬುದಾಗಿ ವಿಭಾಗಿಸಿ ಕರ್ನಾಟಕದ ಕೆಲವು ಭಾಗಗಳಲ್ಲಿ ಆರ್ಥಿಕತೆಯಲ್ಲಿ ತೊಡಗಿಸಿಕೊಂಡರು. ಗಂಗರ ಕಾಲಾವಧಿ ಧಾರ್ಮಿಕ ಹಿನ್ನೆಲೆಯಲ್ಲಿ ಪ್ರಾಮುಖ್ಯತೆ ಪಡೆದಿದ್ದು, ಆರ್ಥಿಕ ಪ್ರಬಲತೆಯ ಕೇಂದ್ರವಾಗಿಯೂ ಗಂಗರು ಬೆಳೆದಿರುವುದನ್ನು ಗುರುತಿಸಬಹುದಾಗಿದೆ.

ಗಂಗರು ತಲಕಾಡನ್ನು ರಾಜಧಾನಿಯಾಗಿ ಮಾಡಿಕೊಂಡಿದ್ದರು. ಇವರ ಪಟ್ಟಣದೊಳಗೆ ಅರಮನೆಗಳು, ಶ್ರೀಮಂತರ ನಿವಾಸಗಳು, ವ್ಯಾಪಾರಸ್ಥರ ಮನೆಗಳು, ಮಳಿಗೆಗಳು, ಮಾರುಕಟ್ಟೆಗಳು ಕಂಡುಬರುತ್ತವೆ. ಗಂಗರ ಕಾಲದಲ್ಲಿ ತಲಕಾಡು ಪ್ರದೇಶವು ಈ ರೀತಿಯಾದ ವಸತಿ ಪ್ರದೇಶವನ್ನು ಹೊಂದಿರುವುದು ಕಂಡುಬರುತ್ತದೆ. ಗಂಗರು ವಿಸ್ತಾರವಾದ ಸಾಮ್ರಾಜ್ಯವನ್ನು ಹೊಂದಿದ್ದರು. ಬೆಂಗಳೂರು, ಕೋಲಾರ, ಮಂಡ್ಯ, ಮೈಸೂರು ಜಿಲ್ಲೆಗಳು ಗಂಗರ ಆಳ್ವಿಕೆಗೆ ಒಳಪಟ್ಟಿದ್ದವು. ಗಂಗ ಸಮಾಜವು ಕೃಷಿಕರಾಗಿ, ಲೋಹಗರಾಗಿ, ಕಲ್ಕುಟಿಗರಾಗಿ, ಚರ್ಮಕಾರರಾಗಿ, ದ್ವಿಜ ವರ್ಗಗಳ ಸೇವಕರಾಗಿ ಮೊದಲಾದ ಕರ್ತವ್ಯಗಳನ್ನು ನಿರ್ವಹಿಸುತ್ತಿದ್ದಿರಬೇಕು. ಉಳ್ಳವರ ಹಾಗೂ ಉಚ್ಚ ವರ್ಗದವರ ಊಳಿಗಕ್ಕೆ ಶೂದ್ರರು ಬಲಿಯಾಗಿದ್ದರು(ದೊಡ್ಡಮನಿ,೨೦೦೨:೧೨೫).

ತಲಕಾಡಿನಲ್ಲಿ ಪ್ರಾಚೀನ ಅಗೆವು ಕಟ್ಟು ಕಟ್ಟಿದ್ದ ಅವಶೇಷಗಳನ್ನು ಇಂದಿಗೂ ನೋಡಬಹುದಾಗಿದೆ ಎಂದು ವಿರೂಪಾಕ್ಷಿ ಪೂಜಾರಹಳ್ಳಿ ಅವರು ವಿವರಿಸಿದ್ದಾರೆ. ಕಲಿಂಗ ನಗರದ ಕೆರೆ ಮತ್ತು ಕಲಿಂಗ ಪಟ್ಟಣವನ್ನು ನಿರ್ಮಿಸಿದ ಉಲ್ಲೇಖವಿದೆ. ಈ ಕಾಲದ ಬಯ್ಯಪ್ಪ ಪೆರ್ಮಾಡಿಯು ನಾಣ್ಯ ಟಂಕಿಸುತ್ತಾನೆ. ಇವನ ಸ್ಮರಣೆಗಾಗಿ ರಾಣಿ ಚಿಕ್ಕಬ್ಬೆ ಕೆರೆಯ ಹಿಂದಿರುವ ಬದರಿಮರದ ದೇವಸ್ಥಾನಕ್ಕೆ ದಾನ ಮಾಡಿದ್ದು ಸ್ಮರಣೀಯವಾಗಿದೆ. ಕದಂಬರ ನಂತರ ಸಾಮ್ರಾಜ್ಯ ಸ್ಥಾಪಿಸಿದ ಗಂಗರ ಸಾಮ್ರಾಜ್ಯದಲ್ಲಿ

ವಿಸ್ತಾರವಾದ ಕೃಷಿ ನೀರಾವರಿ ಪ್ರದೇಶವನ್ನು ಅಭಿವೃದ್ಧಿಪಡಿಸಿದರೆಂಬುವುದನ್ನು ಅಲ್ಲಿ ದೊರೆತ ಶಾಸನ ಮತ್ತು ನಾಣ್ಯಗಳಿಂದ ತಿಳಿಯಬಹುದು.

ಗಂಗರ ಶಾಸನಗಳಲ್ಲಿ ನೀರಾವರಿಯ ಉದ್ದೇಶಕ್ಕೆ ಕೆರೆ, ಕಟ್ಟೆ, ಭೂದಾನ, ಆಯಕಟ್ಟು, ಅಚ್ಚುಕಟ್ಟುಗಳನ್ನು ನಿರ್ಮಿಸಿದ ವಿವರಗಳು ದೊರೆಯುತ್ತವೆ. ಭೂಮಿಯನ್ನು ದಾನ ಮಾಡಿರುವುದನ್ನು ಬಿಟ್ಟುವಟ್ಟು ಎಂದು ಉಲ್ಲೇಖಿಸಲಾಗಿದೆ. ಗಂಗ ಅರಸ ಸತ್ಯವಾಕ್ಯ ಪೆರ್ಮಾಡಿಯು ಕ್ರಿ.ಶ. ೯೬೮ರಲ್ಲಿ ದೇವಿಗೆರೆ ಮತ್ತು ಪೆರಿಯ ಗೆರೆಗಳನ್ನು ಬಿಟ್ಟುವಟ್ಟಾಗಿ ದಾನ ಮಾಡುತ್ತಾನೆ(ಪೂಜಾರಹಳ್ಳಿ,೨೦೧೬: ೯೦). ಗಂಗರು ಕದಂಬರ ನಂತರ ದಕ್ಷಿಣ ಭಾರತದಲ್ಲಿ ಸಮರ್ಥವಾದ ಒಂದು ಕಾರ್ಯ ಕೈಗೊಂಡರು. ಕೃಷಿ ವಾಣಿಜ್ಯವನ್ನು ಪ್ರೋತ್ಸಾಹಿಸುವುದರ ಜೊತೆಗೆ ಅಂದಿನ ಸಾಮ್ರಾಜ್ಯದ ಅಭಿವೃದ್ಧಿಗೆ ಪೂರಕವಾದಂತಹ ಕೆಲಸಗಳನ್ನು ನಿರ್ವಹಿಸಿದರು.

ಗಂಗರ ಕಾಲದಲ್ಲಿ ಒಟ್ಟು ಉತ್ಪನ್ನದ ಆರನೆಯ ಒಂದು ಭಾಗ ಕಂದಾಯವನ್ನು ಪ್ರಜೆಗಳಿಂದ ಪ್ರಭುಗಳು ಪಡೆಯುತ್ತಿದ್ದರು. ಕಂದಾಯವನ್ನು ಸಂಗ್ರಹಿಸಲು ಮತ್ತು ವಿಧಿಸಲು ಭೂಮಾಪನ ಮಾಡಿ ನಿರ್ಧರಿಸುತ್ತಿದ್ದರು. ಮಾಪನದ ಸಾಧನ ಕೋಲು ಎಂದಾಗಿತ್ತು. ಅವುಗಳಲ್ಲಿ ಭೇರುಂಡ ಕೋಲು, ಗಂಗ ಕೋಲು, ಮರುಗುದ್ದಿ ಕೋಲು, ಕಚ್ಚವಿ ಕೋಲು ಮೊದಲಾದ ಹೆಸರುಗಳಿಂದ ಕರೆಯುತ್ತಿದ್ದರು. ಇವರ ಕಾಲದ ತೆರಿಗೆಗಳೆಂದರೆ; ಸೀಮಾಸುಂಕ, ಪೆನ್ನಯ, ಬೀಳ್ಕೊಡೆ ಸುಂಕ, ಮನ್ನೆಯ ಸುಂಕ, ಹೆಜ್ಜುಂಕ ಮೊದಲಾದ ತೆರಿಗೆಗಳನ್ನು ಸರ್ಕಾರಕ್ಕೆ ಸಲ್ಲಿಸುತ್ತಿದ್ದರು(ಕೇಶವ ಭಟ್ & ಕೃಷ್ಣರಾವ್,೧೯೭೦: ೮೮೪-೮೫).

ದಕ್ಷಿಣ ಭಾರತದಲ್ಲಿ ಬಾದಾಮಿ ಚಾಲುಕ್ಯರ ಕಾಲಾವಧಿಯು ಸುವರ್ಣಾಕ್ಷರಗಳಲ್ಲಿ ಬರೆದಿಡುವ ಕಾಲವಾಗಿದ್ದು, ಸಾಮ್ರಾಜ್ಯ ಪ್ರಗತಿಯಲ್ಲಿ ಜನಸಾಮಾನ್ಯರು ನೀಡಿದ ಪ್ರೋತ್ಸಾಹ ಗಣನೀಯವಾದುದಾಗಿತ್ತು. ಚಾಲುಕ್ಯರ ಕಾಲಾವಧಿಯಲ್ಲಿ ಹೆಚ್ಚಿನದಾಗಿ ವ್ಯಾಪಾರಿ ಸಮುದಾಯಗಳು ಗುರುತಿಸಿಕೊಂಡಿದ್ದು, ಈ ವ್ಯಾಪಾರಿಗಳು ಸಮಾಜ ಸೇವಾಕಾರ್ಯದಲ್ಲಿ ತೊಡಗಿಸಿಕೊಂಡಿರುತ್ತಿದ್ದರು. ಇವರು ಬಾದಾಮಿಯನ್ನು ತಮ್ಮ ಆರ್ಥಿಕ ಚಟುವಟಿಕೆಯ ಕೇಂದ್ರವನ್ನಾಗಿಸಿಕೊಂಡಿದ್ದರು. ಬಾದಾಮಿ ಚಾಲುಕ್ಯರ ಕಾಲದಲ್ಲಿ ಕೃಷಿಯು ಅರ್ಥವ್ಯವಸ್ಥೆಯ ಜೀವನಾಡಿಯಾಗಿತ್ತು. ಕಾರಣ ಕೃಷಿ ಉತ್ಪನ್ನಗಳಿಂದ ವ್ಯಾಪಾರ ವಾಣಿಜ್ಯವು ಪ್ರಗತಿ ಉಂಟಾಗಿ ಅರ್ಥವ್ಯವಸ್ಥೆಗೆ ಒಂದು ಹೊಸರೂಪ ಬಂದಿತೆಂದು ಹೇಳಬಹುದು.

ಇವರು ಚಾಲುಕ್ಯರ ಕಾಲದಲ್ಲಿ ಭೂಮಿಯನ್ನು ನಾಲ್ಕು ಭಾಗಗಳಾಗಿ ವಿಂಗಡಿಸಿದ್ದರು. ಅವುಗಳೆಂದರೆ ಗದ್ದೆ, ಬೆದ್ದಲು, ತೋಟ, ಅರಣ್ಯ ಎಂಬುದಾಗಿ ವಿಂಗಡಿಸಿದ್ದರು(ಪೂಜಾರಹಳ್ಳಿ, ೨೦೧೬:೮೭). ಬಾದಾಮಿ ಚಾಲುಕ್ಯರು ನೀರಾವರಿ ಬೆಳೆ ಮತ್ತು ಬೆದ್ದಲು ಬೆಳೆ ಎರಡಕ್ಕೂ ಸಮಾನ ಪ್ರಾಧಾನ್ಯತೆ ನೀಡಿದ್ದರೆಂಬುದು ತಿಳಿಯುತ್ತದೆ. ಜೋಳ, ರಾಗಿ, ಭತ್ತ ಇವು ಬೆದ್ದಲು ಮತ್ತು ನೀರಾವರಿ ಬೆಳೆಗಳಾಗಿದ್ದವೆಂದು ಗುರುತಿಸಲಾಗಿದೆ. ಮಾವು, ತೆಂಗು, ಹುಣಸೆ, ದಾಳಿಂಬೆ, ಹಲಸು ಮತ್ತು ಖರ್ಜೂರಗಳು ತೋಟದ ಬೆಳೆಗಳಾಗಿದ್ದವೆಂದು ಶಾಸನಗಳಲ್ಲಿ

ಉಲ್ಲೇಖಿಸಲಾಗಿದೆ(ದೊಡ್ಡಮನಿ:೨೦೦೨:೧೨೫). ವಾಸ್ತುಶಿಲ್ಪಗಳ ಮೂಲಕವಾಗಿಯೂ ಅಂದಿನ ಆರ್ಥಿಕ ಪರಿಸ್ಥಿತಿಯನ್ನು ಗುರುತಿಸಬಹುದಾಗಿದ್ದು, ಬಾದಾಮಿಯ ವಸ್ತುಸಂಗ್ರಹಾಲದಲ್ಲಿರುವ ಶಿಲ್ಪವೊಂದರಲ್ಲಿ ಜೋಳದ ಬೆಳೆಯು ಯೋಧನ ಕೈಯಲ್ಲಿರುವುದನ್ನು ಗಮನಿಸಬಹುದು. ಯಾವುದೇ ಸಾಮ್ರಾಜ್ಯ ಇಲ್ಲವೇ ಸಂಸ್ಥಾನಗಳ ಆರ್ಥಿಕ ವ್ಯವಸ್ಥೆಯನ್ನು ಅಲ್ಲಿನ ಸಾಹಿತ್ಯ ಕೃತಿಗಳು, ವಾಸ್ತುಶಿಲ್ಪ, ಮೂರ್ತಿಶಿಲ್ಪ ಮೊದಲಾದ ಅಂಶಗಳಿಂದಲೂ ಗುರುತಿಸಬಹುದಾಗಿದೆ. ಚಾಲುಕ್ಯರ ರಾಜ್ಯದಲ್ಲಿ ಹೇರಳವಾದ ಆಹಾರದಾನ್ಯಗಳು ಉತ್ಪಾದನೆಯಾಗುತ್ತಿದ್ದವು. ಬಾದಾಮಿ ಚಾಲುಕ್ಯರ ಸಾಮ್ರಾಜ್ಯಕ್ಕೆ ಭೇಟಿ ನೀಡಿದ್ದ ಹ್ಯೂಯೆನ್ ತ್ಸಾಂಗ್‌ನು ಅಲ್ಲಿ ಹಣ್ಣು-ಹಂಪಲುಗಳನ್ನು ಬೆಳೆಯುತ್ತಿದ್ದರು ಎಂದು ಹೇಳಿದ್ದಾನೆ.

ಚಾಲುಕ್ಯರ ಕಾಲದಲ್ಲಿ ವ್ಯಾಪಾರವು ಹೆಚ್ಚಿನದಾಗಿ ಪ್ರಗತಿ ಹೊಂದಿದ್ದು, ಅಯ್ಯಾವೊಳೆ ಐನೂರ್ವರ ವಾಣಿಜ್ಯ ಸಂಘ ಪ್ರಾಚೀನ ಕಾಲದಿಂದಲೂ ಪ್ರಬಲವಾದ ವ್ಯಾಪಾರಿ ಸಂಘವಾಗಿತ್ತು. ಈ ವ್ಯಾಪಾರ-ವ್ಯವಹಾರವನ್ನು ನಡೆಸುವಂತಹ ವರ್ತಕರು, ಬಂದ ಆದಾಯದಲ್ಲಿ ಅಲ್ಲಿನ ೩.೨೫ಯದು ಮಾನ್ಯ(ಮನ್ನೆಯ) ಅರ್ಧಮಾನ್ಯ ಮತ್ತು ಸರ್ವಮಾನ್ಯ ಎಂಬ ಕಡಿಮೆ ದರದ ತೆರಿಗೆಗಳಿದ್ದವು. ಕಂದಾಯರಹಿತ ಭೂದಾನಗಳಾದ ಬಿಟ್ಟುವಟ್ಟಿ ಕೆರೆಗೆ ಕೊಡುಗ ಅಥವಾ ಕತ್ತು ಕೊಡುಗೆಗಳಿದ್ದವು. ಬಿತ್ತುವಟ್ಟಿ ಅಥವಾ ಬಿತ್ತುಕಟ್ಟಿ ಎಂಬುದನ್ನು ಕೆರೆ ಕಟ್ಟಿದ ಅಥವಾ ಬಿತ್ತುಕಟ್ಟಿ ಎಂಬುದನ್ನು ಕೆರೆಕಟ್ಟಿದ ವ್ಯಕ್ತಿಗೆ ಕೊಡುವ ದಾನವಾಗಿದೆ(ಪೂಜಾರಹಳ್ಳಿ,೨೦೧೬: ೯೦).

ಬಾದಾಮಿ ಚಾಲುಕ್ಯರ ಕಾಲದಲ್ಲಿ ಸ್ವಂತ ಮನೆಯ ನಿವೇಶನ ಹೊಂದಿದವರು ಆಸ್ತಿಯ ತೆರಿಗೆ ಕೊಡುವ ನಿಯಮವಿತ್ತು. ಈ ನಿಯಮ ಆಧುನಿಕ ತೆರಿಗೆಪದ್ಧತಿಯಾಗಿ ಬೆಳವಣಿಗೆಯಾಗಿದ್ದು ಪ್ರಸ್ತುತ ಮನೆ ಕಂದಾಯವನ್ನು ಪ್ರತಿವರ್ಷ ಸರ್ಕಾರಕ್ಕೆ ಸಲ್ಲಿಸಲಾಗುತ್ತಿದೆ. ಸಂತೆಗಳಿಗೆ, ಮಾರುಕಟ್ಟೆಗಳಿಗೆ ತೆರಿಗೆಯನ್ನು ವಿಧಿಸುತ್ತಿದ್ದರು. ಪ್ರಾಚೀನ ಕಾಲದಿಂದಲೂ ಸಂತೆಗಳು ಆರ್ಥಿಕ ವಿನಿಮಯ ಕೇಂದ್ರಗಳಾಗಿದ್ದು, ಸರಕುಗಳ ರವಾನೆಯ ಕೇಂದ್ರಗಳಾಗಿದ್ದವು. ವಾರದ ಸಂತೆಗಳು ನಡೆಯುತ್ತಿದ್ದು, ಇಲ್ಲಿ ಸಂತೆ ನಡೆಯುವ ಕೇಂದ್ರಕ್ಕೂ ತೆರಿಗೆಗಳನ್ನು ವಸೂಲಿ ಮಾಡುತ್ತಿದ್ದರು. ಪ್ರಸ್ತುತ ಆಧುನಿಕ ಸಂದರ್ಭದಲ್ಲಿ ಸಂತೆ ನಡೆಯುವ ಕೇಂದ್ರಗಳಲ್ಲಿ ಜಕಾತಿಯನ್ನು ಆಯಾ ಪಂಚಾಯಿತಿಯ ವತಿಯಿಂದ ವಸೂಲಿ ಮಾಡುತ್ತಿರುವುದನ್ನು ಗಮನಿಸಬಹುದಾಗಿದೆ.

ಮಾರುಕಟ್ಟೆಗಳು ಸರಕುಗಳನ್ನು ರವಾನಿಸುವ ಕೇಂದ್ರಗಳಾಗಿದ್ದು, ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಸರಕನ್ನು ರವಾನಿಸುವ ಸಂದರ್ಭದಲ್ಲಿ ತೆರಿಗೆಯನ್ನು ಆಯಾ ರಾಜ್ಯಕ್ಕೆ ವಿನಿಯೋಗಿಸುತ್ತಿದ್ದರು. ನಾಣ್ಯಗಳು ಆಯಾ ಸಂಸ್ಥಾನದ ಆರ್ಥಿಕ ಪರಿಸ್ಥಿತಿಯನ್ನು ರೂಪಿಸುತ್ತವೆ. ಇವರು ವರಾಹ ಚಿಹ್ನೆಯನ್ನೊಳಗೊಂಡ ಮುದ್ರೆಯನ್ನು ಹೊಂದಿದ್ದು, ಇವರ ನಾಣ್ಯಗಳ ಮೇಲೆ ವರಹಾ ಮುದ್ರೆಯನ್ನು ಗಮನಿಸಬಹುದಾಗಿದೆ.

ಇವರ ಶಾಸನಗಳಲ್ಲಿ ಗದ್ಯಾಣ, ಸುವರ್ಣ, ಪಣ, ಪಲ ಮತ್ತು ವೀಸ ಎಂಬ ನಾಣ್ಯಗಳ ಉಲ್ಲೇಖವಿದೆ. ಐಹೊಳೆಯ ಲಾಡಕಾನ ದೇವಾಲಯದ ಶಾಸನದಲ್ಲಿ ಗದ್ಯಾಣವನ್ನು ಐದು ಬಾರಿ

ಪ್ರಯೋಗಿಸಲಾಗಿದೆ. ಮೂವತ್ತು ನಿವರ್ತನ ಭೂಮಿಯನ್ನು ಮೂವತ್ತು ಗದ್ಯಾಣಗಳಿಗೆ ಕೊಂಡು ಜ್ಞಾನ ಶಿವಾಚಾರ್ಯನು ಪಟ್ಟದಕಲ್ಲಿನ ವಿಜಯೇಶ್ವರ ದೇವಾಲಯದ ಪೂಜಾ ವಿಧಿಗಳಿಗಾಗಿ ಕೊಟ್ಟನೆಂಬ ಉಲ್ಲೇಖವಿದೆ. ಗದ್ಯಾಣವು ಉತ್ತಮ ಮೌಲ್ಯ ಹೊಂದಿರುವ ಬಂಗಾರದ ನಾಣ್ಯ. ಸಿಂಧರ ಆಳ್ವಿಕೆಗೆ ಒಳಪಟ್ಟ ಕುರುಗೋಡು ಶಾಸನದಲ್ಲಿ ನದಿಲಪೊನ್ ಎಂಬ ಚಿನ್ನದ ನಾಣ್ಯದ ಉಲ್ಲೇಖವಿದ್ದು, ನವಿಲಿನಿಂದ ಕಾರ್ತೀಕೇಯನ ಪೂಜೆಗೆ ಸಂಬಂಧಿಸಿದ ನಾಣ್ಯವೆಂದು ತಿಳಿಸುತ್ತದೆ(ನರಸಿಂಹಮೂರ್ತಿ,೨೦೦೮:೭೯).

ಕರ್ನಾಟಕದ ಚರಿತ್ರೆಯಲ್ಲಿ ಅಯ್ಯಾವೊಳೆ ವ್ಯಾಪಾರಿ ಸಂಘವು ವ್ಯಾಪಾರದಲ್ಲಿ ಪ್ರಸಿದ್ಧಿ ಪಡೆದಿದೆ. ಉತ್ತರ ಕರ್ನಾಟಕ ಭಾಗದ ಐಹೊಳೆ ಪರಿಸರದಲ್ಲಿ ವೀರಶೈವ ಬಣಜಿಗರದೇ ಮೇಲುಗೈ. ಪ್ರಾಚೀನ ಕಾಲದಿಂದಲೂ ಇವರು ವ್ಯಾಪಾರ–ವಾಣಿಜ್ಯದಲ್ಲಿ ಹೆಸರಾದವರು. ಐಹೊಳೆಯು ರಾಜಧಾನಿ ಪಟ್ಟಣವಾಗಿ ಪ್ರಾಚೀನ ಕಾಲದಿಂದಲೂ ವ್ಯಾಪಾರಿ ಕೇಂದ್ರವಾಗಿತ್ತು. ಐಹೊಳೆ ೫೦೦ ಜನ ಬ್ರಾಹ್ಮಣ ಮಹಾಜನಗಳ ಕೇಂದ್ರವಾಗಿ ಕದಂಬರ ಕಾಲದಿಂದಲೇ ಅಗ್ರಹಾರವಾಗಿ ಖ್ಯಾತಿ ಪಡೆದಿದೆ.

ಬಾದಾಮಿಯ ಚಾಲುಕ್ಯರು ಕರ್ನಾಟಕದ ವ್ಯಾಪಾರ–ವಾಣಿಜ್ಯದಲ್ಲಿ ಪ್ರಮುಖರಾಗಿದ್ದು, ಕೃಷಿ ಉತ್ಪಾದನೆಯನ್ನು ಹೆಚ್ಚು ಹೆಚ್ಚು ಅಭಿವೃದ್ಧಿಗೊಳಿಸುತ್ತಿದ್ದರು. ಬಾದಾಮಿ ಚಾಲುಕ್ಯರ ಆಳ್ವಿಕೆಯು ನರ್ಮದಾ ನದಿವರೆಗೂ ಸಾಮ್ರಾಜ್ಯ ವಿಸ್ತರಿಸಿಕೊಂಡಿದ್ದರು. ಕರ್ನಾಟಕದ ವ್ಯಾಪಾರ–ವಾಣಿಜ್ಯದಲ್ಲಿ ಬಾದಾಮಿ ಚಾಲುಕ್ಯರ ಕಾಲಾವಧಿಯು ಒಂದು ಬಗೆಯ ಸ್ಥಿತ್ಯಂತರಕ್ಕೆ ಒಳಗಾದ ಕಾಲವೆಂದು ಗುರುತಿಸಬಹುದಾಗಿದೆ. ಒಟ್ಟಾರೆಯಾಗಿ ಬಾದಾಮಿ ಚಾಲುಕ್ಯರು ಕರ್ನಾಟಕವನ್ನಾಳಿದ ರಾಜಮನೆತನಗಳಲ್ಲಿ ಮುಖ್ಯರಾಗಿದ್ದ ಇವರು ಅಲ್ಲಿನ ಕೃಷಿವ್ಯವಸ್ಥೆ ಮತ್ತು ಉತ್ಪಾದನೆಗೆ ವಿಶೇಷ ಪ್ರಾಮುಖ್ಯತೆಯನ್ನು ನೀಡಿದ್ದಾರೆ.

ಬಾದಾಮಿ ಚಾಲುಕ್ಯರ ನಂತರ ರಾಷ್ಟ್ರಕೂಟರು ಕರ್ನಾಟಕವನ್ನಾಳಿದ ರಾಜಮನೆತನಗಳಲ್ಲಿ ಒಂದಾಗಿದೆ. ರಾಷ್ಟ್ರಕೂಟರು ಎರಡು ಶತಮಾನಕ್ಕಿಂತ ಹೆಚ್ಚು ಕಾಲ ಕರ್ನಾಟಕವನ್ನಾಳಿದರು. ನರ್ಮದಾ ನದಿಯವರೆಗೂ ತಮ್ಮ ಸಾಮ್ರಾಜ್ಯವನ್ನು ವಿಸ್ತರಿಸಿಕೊಂಡಿದ್ದರು. ರಾಜಕೀಯ ಸಂಬಂಧಗಳ ಜೊತೆಯಲ್ಲಿ ಆರ್ಥಿಕವಾದ ಬೆಳವಣಿಗೆಗಳ ಮೂಲಕ ದೇಶ–ವಿದೇಶಗಳೊಂದಿಗೆ ವ್ಯಾಪಾರದಲ್ಲಿ ತೊಡಗಿದ್ದರು. ರಾಷ್ಟ್ರಕೂಟರ ಸಾಮ್ರಾಜ್ಯಕ್ಕೆ ಭೇಟಿ ನೀಡಿದ್ದ ಅರಬ್ ವರ್ತಕರು ಮತ್ತು ಪ್ರವಾಸಿಗನಾದ ಸುಲೈಮಾನ್ ಆರ್ಥಿಕ ವಿಚಾರಗಳನ್ನು ಕುರಿತಂತೆ ಸ್ಪಷ್ಟಪಡಿಸುತ್ತಾನೆ.

ಕೃಷಿಯೇತರ ಭೂಮಿಯನ್ನು ಕೃಷಿ ಭೂಮಿಯನ್ನಾಗಿ ಪರಿವರ್ತಿಸುವ ಪ್ರಕ್ರಿಯೆಗಳು ಕ್ರಿ.ಶ. ೮ನೆಯ ಶತಮಾನದಿಂದ ೧೪ನೆಯ ಶತಮಾನಗಳ ನಡುವಣ ಅವಧಿಯಲ್ಲಿ ಇತ್ತು ಎನ್ನುವುದಕ್ಕೆ ಸಾಕಷ್ಟು ಪುರಾವೆಗಳು ದೊರೆಯುತ್ತವೆ. ಈ ಕಾಲಘಟ್ಟದಲ್ಲಿ ಈ ರೀತಿಯಾಗಿ ಪರಿವರ್ತನಾ ಪ್ರಕ್ರಿಯೆಗಳಿಗೆ ಕಾರಣ ಕೃಷಿ ಉತ್ಪಾದನೆಯನ್ನು ಹೆಚ್ಚಿಸಿ ರಾಜ್ಯಕ್ಕೆ ಹೆಚ್ಚಿನ ಆದಾಯ ಬರುವಂತೆ ಮಾಡುವುದು ಇವರ ಮೂಲ ಉದ್ದೇಶವಾಗಿತ್ತೆಂದು ಹೇಳಬಹುದಾಗಿದೆ.

ರಾಷ್ಟ್ರಕೂಟರ ಕಾಲದಲ್ಲಿ ಹತ್ತಿ, ಸುಗಂಧದ್ರವ್ಯ, ಹರಳು, ವಜ್ರಗಳು, ವಿವಿಧ ಜಾತಿಯ ಹಣ್ಣುಗಳು ಇಲ್ಲಿಂದ ತಯಾರಾಗುತ್ತಿದ್ದವು. ಈ ಕಾಲದ ಶಾಸನವೊಂದರಲ್ಲಿ ಕಲ್ಯಾಣದ ಮಾರುಕಟ್ಟೆಯು

ಇಂದ್ರನ ಅರಮನೆಯಂತೆ ಶೋಭಿಸುತ್ತಿತ್ತು ಎಂದೂ ವಿವಿಧ ರೀತಿ ವಜ್ರಗಳನ್ನು ಮತ್ತು ದವಸ-ದಾನ್ಯಗಳನ್ನು ಮಾರುತ್ತಿದ್ದರೆಂದು, ಹಾಗೆಯೇ ಕುದುರೆಯ ವ್ಯಾಪಾರ ನಡೆಯುತ್ತಿರುವ ಕುರುಹುಗಳು ಸಹ ಈ ಕಾಲಾವಧಿಯಲ್ಲಿ ದೊರೆಯುತ್ತವೆ.

ರಾಷ್ಟ್ರಕೂಟರು ಮಹಾರಾಷ್ಟ್ರವನ್ನು ರಾಜಧಾನಿಯಾಗಿಸಿಕೊಂಡು ಆಳ್ವಿಕೆ ಆರಂಭಿಸಿದರು. ಕರ್ನಾಟಕದಲ್ಲಿ ಅವರ ಇತಿಹಾಸವನ್ನು ಪ್ರತಿಬಿಂಬಿಸುವ ಶಾಸನ, ನಾಣ್ಯಗಳು, ಸ್ಮಾರಕಶಿಲ್ಪಗಳ ಮೂಲಕವಾಗಿ ಅವರ ರಾಜಕೀಯ ಸಂಬಂಧಗಳನ್ನು ಗಮನಿಸಬಹುದಾಗಿದೆ.

ಮಾರ್ಕ್ಸ್ ಹೇಳಿದಂತೆ "ಪ್ರತಿಫಲ ಕೊಡದ ಶ್ರಮವನ್ನು ನೇರವಾಗಿ ಉತ್ಪಾದಕರಿಂದ ಹೊರತುಪಡಿಸುವ ನಿರ್ದಿಷ್ಟ ಆರ್ಥಿಕ ಸ್ವರೂಪವು ಆಳುವವರು ಮತ್ತು ಆಳಲ್ಪಡುವವರ ನಡುವಣ ಸಂಬಂಧವನ್ನು ನಿರ್ಧರಿಸುತ್ತದೆ." ರಾಷ್ಟ್ರಕೂಟರ ಆಳ್ವಿಕೆಯ ಮುಖ್ಯ ವರಮಾನ ಮೂಲವೆಂದರೆ ವಿವಿಧ ರೀತಿಯ ತೆರಿಗೆಗಳು ಮಧ್ಯಕಾಲೀನ ಸಂದರ್ಭದಲ್ಲಿ ಕೃಷಿ ಭೂಮಿಯನ್ನು ವಿಸ್ತಾರಗೊಳಿಸುವುದು ಹೆಚ್ಚು ಜನರನ್ನು ಕೃಷಿಯಲ್ಲಿ ತೊಡಗಿಸುವುದು, ಗೊಬ್ಬರಗಳ ಬಳಕೆ ಉತ್ತಮ ಬೀಜಗಳ ಆಯ್ಕೆ, ಕೆರೆಗಳ ನಿರ್ಮಾಣ ಮುಂತಾದ ವಿಚಾರಗಳ ಕುರಿತು ಮಾಹಿತಿ ಸಿಗುತ್ತದೆ. ಇವುಗಳ ಆಧಾರದ ಮೇಲೆ ಕೃಷಿಕ್ಷೇತ್ರದಲ್ಲಾದ ಬದಲಾವಣೆಗಳನ್ನು ಗುರುತಿಸಲು ಸಾಧ್ಯ. ಭೂಮಿಯ ಮೇಲೆ ಹಾಕಿದ ತೆರಿಗೆ, ತೆರಿಗೆಯ ಸ್ವರೂಪವು ನಗದು ಇಲ್ಲವೆ ಶ್ರಮದ ರೂಪದಲ್ಲಿ ವಿನಿಯೋಗವಾಗುತ್ತಿತ್ತು. ಇದರಿಂದ ಬಿಟ್ಟಿಸೇವೆಯ ಪರಿಕಲ್ಪನೆಯು ರಾಷ್ಟ್ರಕೂಟರ ಕಾಲದಲ್ಲಿ ಅಸ್ತಿತ್ವದಲ್ಲಿತ್ತೆಂದು ಸ್ಪಷ್ಟವಾಗುತ್ತದೆ. ಕೃಷಿ ಕೂಲಿಕಾರ್ಮಿಕರನ್ನು ಹಾಗೂ ಕುಶಲಕರ್ಮಿಗಳನ್ನು ಸಂಬಳ ಕೊಡದೆ ದುಡಿಯುವ ಬಲಾತ್ಕಾರದ ದುಡಿಮೆ ಮಧ್ಯಕಾಲೀನ ಕರ್ನಾಟಕದಲ್ಲಿ ಇತ್ತು ಎನ್ನುವುದಕ್ಕೆ ಸಾಕಷ್ಟು ಆಧಾರಗಳಿದ್ದು ಕೆರೆ, ಕಾಲುವೆ, ದೇವಾಲಯ, ಕೋಟೆ ನಿರ್ಮಾಣ ಮುಂತಾದ ಕಾರ್ಯಗಳಲ್ಲಿ ತೊಡಗಿಸಿಕೊಂಡ ಜನರಿಗೆ ಸಂಬಳ ಕೊಡದೇ ಬಿಟ್ಟಿಸೇವೆಗೆ ನೇಮಿಸಿಕೊಳ್ಳುತ್ತಿದ್ದರು. ಶೂದ್ರರು ಮತ್ತು ಕುಶಲಕರ್ಮಿಗಳು ಬಿಟ್ಟಿ ಸೇವೆ ಮಾಡಬೇಕಾಗಿತ್ತು(ರೈ.೨೦೧೭:೩೨).

ರಾಷ್ಟ್ರಕೂಟರ ಕಾಲದಲ್ಲಿ ವ್ಯಾಪಾರದ ವಿನಿಮಯಕ್ಕೆ ದಾರಿಯಾಗಿದ್ದು ರಥಗಳು, ಎತ್ತಿನ ಗಾಡಿಗಳು, ಕುದುರೆ ಗಾಡಿಗಳು ಒಳನಾಡ ಸಂಪರ್ಕಕ್ಕೆ ಮುಖ್ಯ ಸಾಧನಗಳಾಗಿದ್ದವು. ರಸ್ತೆಗಳು ಸಹ ಬಹುತೇಕ ಪ್ರತಿಯೊಂದು ಪಟ್ಟಣ ಗ್ರಾಮವನ್ನು ಸಂಪರ್ಕಿಸುತ್ತಿದ್ದರಿಂದ ವ್ಯಾಪಾರ-ವಾಣಿಜ್ಯವು ಸುವ್ಯವಸ್ಥೆಯಿಂದ ನಡೆಯುತ್ತಿತ್ತೆಂದು ಅಲ್ಲಿನ ದಾಖಲೆಗಳಿಂದ ತಿಳಿಯಬಹುದಾಗಿದೆ.

ಕುಶಲಕರ್ಮಿಗಳು ಮತ್ತು ಸಮಾಜದ ಎಲ್ಲ ವರ್ಗಗಳು ಕಟ್ಟುವ ತೆರಿಗೆ ಎಂದರೆ ಸಿದ್ಧಾಯ, ಮನೆದೆರೆ, ವಡ್ಡರಾವಯಳ್ಳ, ಬಲಸುಂಕ, ಹೊರಸುಂಕ, ತಳರಸುಂಕ, ಬಂಡಿದೆರೆ, ಕಬ್ಬುಣದೆರೆ, ಸುವರ್ಣಾದಾಯ, ಗಾಣದೆರೆ, ತುಪ್ಪದೆರೆ, ಬಿಲ್ಕೊಡೆ, ಕಾಣಿಕೆ, ಪನ್ನೆಯ, ಹೀಗೆ ವಿವಿಧ ರೀತಿಯ ತೆರಿಗೆಗಳನ್ನು ರಾಷ್ಟ್ರಕೂಟ ಮತ್ತು ಹೊಯ್ಸಳರ ಕಾಲದಲ್ಲಿ ಅಸ್ತಿತ್ವದಲ್ಲಿದ್ದವು(ರೈ.೨೦೧೭:೨೯).

ಕೃಷಿವ್ಯವಸ್ಥೆಗೆ ಪೂರಕವಾಗಿ ನೀರಾವರಿಯನ್ನು ವ್ಯವಸ್ಥೆಗೊಳಿಸಬೇಕಾಗುತ್ತದೆ. ಕಾರಣ ಕೃಷಿ ಅಭಿವೃದ್ಧಿಯ ಬೆಳೆಗಳನ್ನು ಮಳೆಯನ್ನೇ ಅವಲಂಬಿಸಿ ಬೆಳೆಯಲು ಸಾಧ್ಯವಿಲ್ಲ. ಆದ್ದರಿಂದ ಕೃಷಿಗೆ ಕೃತಕ ನೀರಿನ ವ್ಯವಸ್ಥೆ ಅನಿವಾರ್ಯವೆಂದು ಪ್ರಾಚೀನ ಕಾಲದಿಂದಲೂ ಕೃಷಿಗೆ ಪೂರಕವಾದ

ನೀರಾವರಿಯನ್ನು ಅಭಿವೃದ್ಧಿಗೊಳಿಸಿರುವುದನ್ನು ಅಲ್ಲಿನ ಶಾಸನ ಮತ್ತು ಸಾಹಿತ್ಯಾಧಾರಗಳಿಂದ ಗಮನಿಸಬಹುದು. ಮಾಚಗಾವುಂಡ ಎಂಬುವವನು ರಾಮಾಪುರದಲ್ಲಿ ಒಂದು ಕೆರೆ ಮತ್ತು ತೂಬು ನಿರ್ಮಿಸಿದ ಉಲ್ಲೇಖವು ಅಲ್ಲಿನ ಶಾಸನದಲ್ಲಿ ದೊರೆಯುತ್ತದೆ. ಕೆರೆ ಕಾಲುವೆಗಳನ್ನು ಅಲ್ಲಿ ಮಹಿಳೆಯರು ನಿರ್ಮಿಸಿದ್ದರು. ಚಿಕ್ಕಬ್ಬೆ ಎಂಬುವವಳು ಕೆರೆ ನಿರ್ಮಿಸಿದ ಮಾಹಿತಿ ತಿಳಿಯುತ್ತದೆ. ಕೆರೆ ನಿರ್ಮಾಣ ಪ್ರಕ್ರಿಯೆಯಲ್ಲಿ ಒಂದೇ ಸಮಾಜ ಕೆರೆ ನಿರ್ಮಿಸದೆ ಸಮಾಜದ ಎಲ್ಲ ವರ್ಗದವರು ಈ ಕಾರ್ಯವನ್ನು ನಿರ್ವಹಿಸುತ್ತಿದ್ದರು. ಯತಿಗಳು, ಮಾವುತರು, ಕುರುಬರು ಹೀಗೆ ಸಮಾಜದ ಆರ್ಥಿಕ ಅಭಿವೃದ್ಧಿಯೊಂದಿದ ವರ್ಗ ಈ ಕಾರ್ಯವನ್ನು ನಿರ್ವಹಿಸುತ್ತಿತ್ತು(ಮಂಜುನಾಥ,೨೦೧೨: ೨೧೮).

ಕೃಷಿಯ ಉತ್ಪಾದನೆ ಮತ್ತು ಕೃಷಿಯೇತರ ಉತ್ಪಾದನೆಯು ಕೃಷಿಯೇತರ ಚಟುವಟಿಕೆಗಳ ಹುಟ್ಟಿಗೂ ಕಾರಣವಾಗಿದೆ. ಕೃಷಿಯನ್ನು ಸುಧಾರಿಸುವ ಪ್ರಯತ್ನದ ಜೊತೆಗೆ ಉಳುಮೆಯ ವಿಚಾರದಲ್ಲಿಯೂ ಬದಲಾವಣೆಗಳುಂಟಾಗಿ ಕೃಷಿ ಉತ್ಪಾದನೆಯ ಹೆಚ್ಚಾಗಿ ಕೈಗಾರಿಕೋದ್ಯಮಗಳ ಹುಟ್ಟಿಗೂ ಕಾರಣವಾಯಿತು. ಅಜಂತಾ, ಎಲ್ಲೋರ, ಪಶ್ಚಿಮಘಟ್ಟ, ಕಡಪ, ಕರ್ನೂಲ್, ಗೋಲ್ಕಂಡ ಪ್ರದೇಶಗಳು ರಾಷ್ಟ್ರಕೂಟರ ಆಳ್ವಿಕೆಯಲ್ಲಿ ಉತ್ತಮ ಗುಣಮಟ್ಟದ ಲೋಹಗಾರಿಕೆಯನ್ನು ಹೊಂದಿದ್ದವು. ಬಟ್ಟೆ ಕೈಗಾರಿಕೆ, ಕಬ್ಬು, ಎಣ್ಣೆ, ಚರ್ಮಗಳ ಉದ್ದಿಮೆಗಳು ಬೆಳವಣಿಗೆಯಾದವು. ಇವರ ರಾಜಧಾನಿಯಾದ ಮಾನ್ಯಖೇಟವು ಆಡಳಿತ, ಆರ್ಥಿಕ ವ್ಯವಸ್ಥೆಯ ಕೇಂದ್ರಬಿಂದುವಾಗಿ ಕೈಗಾರಿಕೋದ್ಯಮದಲ್ಲಿ ಬೆಳವಣಿಗೆಯಾಗಿರುವುದನ್ನು ಗಮನಿಸಬಹುದಾಗಿದೆ.

ರಾಷ್ಟ್ರಕೂಟರ ರಾಜಧಾನಿಯಾದ ಮಾನ್ಯಖೇಟದ ಹತ್ತಿರವಿರುವ ನೇಸಾಂಕಾ ನೆಲೆಯು ಬಟ್ಟೆ ಕೈಗಾರಿಕೆಯಲ್ಲಿ ಪ್ರಸಿದ್ಧಿ ಪಡೆದಿದ್ದು, ಕಬ್ಬಿನಿಂದ ಸಕ್ಕರೆಯನ್ನು ತಯಾರಿಸುತ್ತಿದ್ದರು. ಕೃಷಿಯಾಧಾರಿತ ವಾಣಿಜ್ಯ ಬೆಳೆಗಳಲ್ಲಿ ತೆಂಗು, ಬಾಳೆ, ಕಬ್ಬು ಪ್ರಮುಖವಾಗಿದ್ದು, ಈ ಮೂಲಕ ಇಲ್ಲಿನ ವ್ಯಾಪಾರವು ಕೈಗಾರಿಕೋತ್ಪನ್ನಗಳ ಮೂಲಕ ಪ್ರಸಿದ್ಧಿಗೆ ಬಂದಿತ್ತೆಂದು ಅಲ್ಲಿನ ಶಾಸನಗಳ ದಾಖಲೆಗಳಿಂದ ತಿಳಿಯಬಹುದಾಗಿದೆ.

ರಾಷ್ಟ್ರಕೂಟರ ಕಾಲಾವಧಿಯಲ್ಲಿ ವ್ಯಾಪಾರ-ವಾಣಿಜ್ಯದಲ್ಲಿ ಪ್ರಮುಖವಾಗಿ ವರ್ತಕರು ಗುರುತಿಸಿಕೊಂಡಿದ್ದಾರೆ. ಲಕ್ಷ್ಮೇಶ್ವರದ ಶಾಸನವೊಂದರಲ್ಲಿ ಶ್ರೇಣಿ ಎಂಬ ಉಲ್ಲೇಖವಿದ್ದು, ಶಿಲಾಧಾರರ ಪಟ್ಟನಗುಂಡಿ ಶಾಸನವು ನಾಗೈಶ್ರೇಷ್ಟಿಸಿ, ತೊಕೈಶ್ರೇಷ್ಟಿನ ಮತ್ತು ಆದಿತ್ಯವರ್ಮ ಎಂಬ ಮೂವರು ವರ್ತಕರನ್ನು ಕುರಿತಾಗಿ ಉಲ್ಲೇಖಿಸುತ್ತದೆ. ಹಾಗೆಯೇ ರಾಷ್ಟ್ರಕೂಟರ ಕಾಲಾವಧಿಯಲ್ಲಿ ಹೆಚ್ಚಿನದಾಗಿ ದಾನ ದತ್ತಿಗಳನ್ನು ವರ್ತಕರು ನೀಡಿದ್ದು, ಅವರ ಕಾರ್ಯವೈಖರಿಗಳನ್ನು ಅವರ ಸೇವೆಯನ್ನು ಕುರಿತಂತೆ ಈ ಕಾಲಘಟ್ಟದ ಶಾಸನಗಳು ತಿಳಿಸುತ್ತವೆ. ರಾಷ್ಟ್ರಕೂಟರ ರಾಜಧಾನಿಯು ದೇಶೀಯ-ವಿದೇಶೀಯ ವ್ಯಾಪಾರ ಎರಡರಲ್ಲೂ ಪ್ರಾಮುಖ್ಯತೆ ಪಡೆದಿರುವುದನ್ನು ಗಮನಿಸಬಹುದಾಗಿದೆ.

ರಾಷ್ಟ್ರಕೂಟರ ರಾಜಧಾನಿ ಪಟ್ಟಣಕ್ಕೆ ಸಂಧಿಸಲು ಎಲ್ಲ ಕಡೆಯಿಂದಲೂ ರಸ್ತೆ ಮಾರ್ಗಗಳಿರುವುದನ್ನು ಗುರುತಿಸಲಾಗಿದೆ. ವಿದೇಶೀಯ ವ್ಯಾಪಾರ ಸೋಪಾರ ಸ್ಥಳವನ್ನು ಕೇಂದ್ರವಾಗಿಟ್ಟುಕೊಂಡು ಚೀನಾ, ಟಿಬೆಟ್, ಲಕ್ಷದ್ವೀಪಗಳೊಂದಿಗೆ ವಿಸ್ತಾರವಾದ ಸಮುದ್ರದ ವ್ಯಾಪಾರ ನಡೆಯುತ್ತಿತ್ತೆಂದು ಅಂದಿನ ಸಾಹಿತ್ಯಿಕ ಮತ್ತು ವಿದೇಶಿಯ ಬರಹಗಳಿಂದ ತಿಳಿಯಬಹುದಾಗಿದೆ. ಮಾನ್ಯಖೇಟದ ಜೊತೆ

ಸಂಬಂಧವಿದ್ದು ರಸ್ತೆ ಮಾರ್ಗಗಳಿದ್ದವೆಂದು ಅಲ್ಬೆರೂನಿಯು ತನ್ನ ಬರವಣಿಗೆಗಳಲ್ಲಿ ಸ್ಪಷ್ಟಪಡಿಸಿದ್ದಾನೆ. ರಾಷ್ಟ್ರಕೂಟರ ಆರಂಭಿಕ ಶಾಸನಗಳನ್ನು ಗಮನಿಸಿದರೆ ಈ ಮಾಹಿತಿಯು ಸ್ಪಷ್ಟವಾಗಿ ಗೋಚರಿಸುತ್ತದೆ.

ರಾಷ್ಟ್ರಕೂಟರ ಕಾಲವನ್ನು ಗಮನಿಸಿದ ಸಂದರ್ಭದಲ್ಲಿ ಭೂ ಆಧಾರಿತ ಅರ್ಥವ್ಯವಸ್ಥೆಯ ತಳಹದಿಯ ಮೇಲೆ ನಿಂತಿದ್ದ ಅಂದಿನ ರಾಜ್ಯವ್ಯವಸ್ಥೆಯು ಮಧ್ಯವರ್ತಿಗಳ ಮೂಲಕ ಹೆಣೆದುಕೊಂಡಿದ್ದು, ರಾಜಕಾರಣ ಮತ್ತು ಭೂ ಒಡೆತನದ ಮಧ್ಯೆ ನಿಕಟವಾದ ಸಂಬಂಧವು ಏರ್ಪಟ್ಟಿದ್ದವು. ಈ ಸಂದರ್ಭದಲ್ಲಿ ಕೃಷಿಕರು, ಕುಶಲಕರ್ಮಿಗಳು ಅರಸರ ರೀತಿಯಲ್ಲಿ ಗುರುತಿಸಿಕೊಂಡಿದ್ದರು. ಈ ವ್ಯವಸ್ಥೆಯೂ ಊಳಿಗಮಾನ್ಯ ಉತ್ಪಾದನಾ ವ್ಯವಸ್ಥೆಯ ಎಲ್ಲ ಲಕ್ಷಣಗಳನ್ನು ಹೊಂದಿದ್ದು, ಉತ್ಪಾದಕರು ಮತ್ತು ಕೆಳವರ್ಗದವರು ಕೆಳಸ್ತರಕ್ಕೆ ತಳ್ಳಲ್ಪಟ್ಟರು. ಈ ಮೂಲಕವಾಗಿ ಊಳಿಗಮಾನ್ಯ ಆರ್ಥಿಕ ವ್ಯವಸ್ಥೆಯು ರೂಪು ಪಡೆದಿರುವುದು ಇಲ್ಲಿ ಸ್ಪಷ್ಟವಾಗಿ ತಿಳಿಯುತ್ತದೆ.

ರಾಜ್ಯ ಮತ್ತು ವೃತ್ತಿ ಸಂಘಗಳ ನಡುವೆ ಊಳಿಗಮಾನ್ಯ ಸಂಬಂಧಗಳ ಬೆಳವಣಿಗೆಯನ್ನು ಗುರುತಿಸಬಹುದಾಗಿದ್ದು, ಡಂಬಳದ ವ್ಯಾಪಾರಿಗಳ ಸಂಘಕ್ಕೆ ಚಾಲುಕ್ಯ ಅರಸ ಜಗದೇಕಮಲ್ಲನು ಛತ್ರಿಗಳನ್ನು, ಚೌರಿಗಳನ್ನು ಮತ್ತು ರಾಜಶಾಸನಗಳನ್ನು ಕೊಟ್ಟನು. ಇದೇ ಪದ್ಧತಿ ರಾಷ್ಟ್ರಕೂಟರ ಕಾಲದಲ್ಲಿಯೂ ಮುಂದುವರೆದಿದೆ. ರಾಷ್ಟ್ರಕೂಟರ ಸಾಮಂತರಾಗಿದ್ದ ಶಿಲಾಧಾರರ ಕೊಲ್ಲಾಪುರ ಮತ್ತು ಮಿರಜ್‌ನ ಶಾಸನಗಳು ವೀರಬಲಂಜರ ವೃತ್ತಿಸಂಘ ಗುಡ್ಡದ ಚಿಹ್ನೆಯುಳ್ಳ ಧ್ವಜವನ್ನು ಹೊಂದಿತ್ತೆಂದು ತಿಳಿಸುತ್ತವೆ. ಒಂದು ರಾಜ್ಯದ ಅಭಿವೃದ್ಧಿಯಲ್ಲಿ ವೃತ್ತಿಸಂಘಗಳ ಪಾತ್ರವು ಅಪಾರವಾಗಿದ್ದು, ಸಾರ್ವಜನಿಕ ಸೇವಾ ಕಾರ್ಯಗಳನ್ನು ಈ ಸಂಘಗಳು ನಿರ್ವಹಿಸುತ್ತಿದ್ದವೆಂದು ಹೇಳಬಹುದು(ವಿರೂಪಾಕ್ಷಪ್ಪ,೨೦೦೦:೯೬).

ದಕ್ಷಿಣ ಭಾರತದಲ್ಲಿ ಆಳಿದ ರಾಷ್ಟ್ರಕೂಟರು ಇವರ ಕಾಲದಲ್ಲಿ ರಾಜಕೀಯ ವಿಚಾರಕ್ಕೆ ಹೇಗೆ ಪ್ರಾಮುಖ್ಯತೆ ನೀಡಿದ್ದರೋ ಹಾಗೆಯೇ ವ್ಯಾಪಾರ ವಾಣಿಜ್ಯಕ್ಕೂ ವಿಶೇಷ ಪ್ರಾಮುಖ್ಯತೆ ನೀಡಿರುವುದನ್ನು ಗುರುತಿಸಬಹುದಾಗಿದೆ. ಗದ್ಯಾಣ, ಸುವರ್ಣ, ಕಳಂಜು ಕಾಸು, ಮಂಜಾಡಿ ಮತ್ತು ಅಕ್ಕಂ ಎಂಬ ನಾಣ್ಯಗಳನ್ನು ಟಂಕಿಸಿದರು. ಇವರ ಕಾಲದ ನಾಣ್ಯಗಳಲ್ಲಿ ರಾಜರು ಹೊಂದಿರುವ ಬಿರುದುಗಳನ್ನು ವಿಶೇಷವಾಗಿ ಉಲ್ಲೇಖಿಸಿರುವುದನ್ನು ಗುರುತಿಸಲಾಗಿದೆ(ನರಸಿಂಹಮೂರ್ತಿ,೨೦೦೮:೮೧).

ರಾಷ್ಟ್ರಕೂಟರ ಸಾಮ್ರಾಜ್ಯದಲ್ಲಿ ವ್ಯಾಪಾರ ವಾಣಿಜ್ಯದಲ್ಲಿ ಮುಖ್ಯವಾಗಿದ್ದ ತೂಕ ಮತ್ತು ಅಳತೆಗಳಿಗೆ ಸಂಬಂಧಿಸಿದಂತೆ ಉಲ್ಲೇಖಗಳು ಅಲ್ಲಿನ ಶಾಸನದಿಂದ ತಿಳಿಯುತ್ತದೆ. ಭೂಮಿಯನ್ನು ಕಮ್ಮಮತ್ತರ, ನಿವರ್ತನ, ವೇಲಿ ಎಂಬ ಅಳತೆಗಳಿಂದ ಮಾಡಲಾಗುತ್ತಿತ್ತೆಂದು ಅಲ್ಲಿನ ಶಾಸನಗಳಿಂದ ತಿಳಿಯಬಹುದಾಗಿದೆ. ಮುಳಗುಂದ ಶಾಸನವು ಮತ್ತು ಕೊಣ್ಣೂರು ಶಾಸನವು ನಿವರ್ತನವನ್ನು ತಿಳಿಸುತ್ತದೆ. ಮತ್ತು ನೆಸರರ್ಗಿ ಶಾಸನವು ಕಮ್ಮವನ್ನು ತಿಳಿಸುತ್ತದೆ. ರಾಷ್ಟ್ರಕೂಟರ ಕಾಲದಲ್ಲಿ ಮತ್ತರ ಎಂಬುದು ಭೂ ಅಳತೆ ಮಾಡುವ ಒಂದು ಮಾನವಾಗಿದ್ದು, ಇದನ್ನು ಒಣಗಿದ ಇಲ್ಲವೇ ತೇವದ ಭೂಮಿಯನ್ನು ಅಳತೆ ಮಾಡಲು ಬಳಕೆ ಮಾಡುತ್ತಿದ್ದರು(ದೊಡ್ಡಮನಿ,೨೦೦೨:೩೮೬). ಈ ಅಳತೆ ಮಾಪನಗಳಿಂದ ತಿಳಿಯುವ ಅಂಶವೆಂದರೆ ರಾಷ್ಟ್ರಕೂಟರು ವ್ಯಾಪಾರ ವಾಣಿಜ್ಯಗಳಲ್ಲಿ ಪ್ರಗತಿ

ಹೊಂದಿದ್ದರು. ವ್ಯವಹಾರದಲ್ಲಿ ಸೂಕ್ತ ಅಳತೆ ಮಾಪನಗಳನ್ನು ಬಳಕೆ ಮಾಡಿಕೊಂಡಿದ್ದರಿಂದ ವ್ಯಾಪಾರವು ನ್ಯಾಯ ಸಮ್ಮತವಾಗಿ ನಡೆಯುತ್ತಿತ್ತೆಂದು ತಿಳಿಯಬಹುದಾಗಿದೆ.

ರಾಷ್ಟ್ರಕೂಟರು ಕರ್ನಾಟಕದ ಚರಿತ್ರೆಯಲ್ಲಿ ಅಲ್ಲದೇ ಇಡಿ ಭಾರತದ ಚರಿತ್ರೆಯಲ್ಲಿ ಪ್ರಮುಖ ಸ್ಥಾನವನ್ನು ಪಡೆದಿದ್ದಾರೆ. ಕೃಷಿ ಭೂಮಿಯನ್ನು ವಿಸ್ತರಿಸುವುದರ ಜೊತೆ ಕೃಷಿಯೇತರ ಉತ್ಪಾದನೆಯು ಅಧಿಕಗೊಂಡು ವ್ಯಾಪಾರ ವಾಣಿಜ್ಯವು ಅಭಿವೃದ್ಧಿ ಹೊಂದಲಾರಂಭಿಸಿತು. ದೇಶೀಯ ವ್ಯಾಪಾರ ವಾಣಿಜ್ಯವು ಸಂತೆಗಳನ್ನು ಕೇಂದ್ರ ಸ್ಥಳಗಳಾಗಿ ಮಾಡಿಕೊಂಡು ಗ್ರಾಮಗಳ ಸ್ವರೂಪವು ಬದಲಾಗುವ ಪ್ರಕ್ರಿಯೆಯು ರಾಜಧಾನಿ ಕೇಂದ್ರವಾಗಿ ಗುರುತಿಸಿಕೊಂಡ ನಗರಗಳ ಮೂಲಕ ಗುರುತಿಸಬಹುದಾಗಿದೆ. ರಾಷ್ಟ್ರಕೂಟರು ಕೃಷಿ ವಿಸ್ತರಣೆಯಿಂದ ನೀರಾವರಿಗೆ ಹೊಸ ರೂಪದ ತೆರಿಗೆಗಳನ್ನು ಈ ಕಾಲದಲ್ಲಿ ಚಲಾವಣೆಗೆ ತಂದಿರುವುದನ್ನು ಗುರುತಿಸಬಹುದಾಗಿದೆ.

ರಾಷ್ಟ್ರಕೂಟರ ನಂತರ ಕಲ್ಯಾಣ ಚಾಲುಕ್ಯರು ಕರ್ನಾಟಕದಲ್ಲಿ ಪ್ರಮುಖ ರಾಜಮನೆತನವಾಗಿ ಆಳ್ವಿಕೆ ಮಾಡತೊಡಗಿದರು. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ವೀರಶೈವ ಧರ್ಮವು ಪ್ರಾಮುಖ್ಯತೆ ಪಡೆದುಕೊಂಡಿತು. ಈ ಕಾಲದಲ್ಲಿ ದೇವಾಲಯಗಳು ಧಾರ್ಮಿಕ ಕೇಂದ್ರಗಳಾಗಿ ಪ್ರಾಮುಖ್ಯತೆ ಪಡೆದಿರುವುದರ ಜೊತೆಗೆ ಸಾಂಸ್ಕೃತಿಕ ಕೇಂದ್ರಗಳಾಗಿಯೂ ಪ್ರಾಮುಖ್ಯತೆಯನ್ನು ಪಡೆದುಕೊಂಡಿವೆ. ಈ ಕಾಲಾವಧಿಯಲ್ಲಿ ದೇವಾಲಯಗಳ ಪಾತ್ರ ಮಹತ್ವದ್ದಾಗಿದೆ.

ಇವರ ಕಾಲದಲ್ಲಿ ಆರ್ಥಿಕ, ಧಾರ್ಮಿಕ ಕ್ಷೇತ್ರದಲ್ಲಿ ಸಾಕಷ್ಟು ಬದಲಾವಣೆಯುಂಟಾಗಿ ನವ ಆರ್ಥಿಕ ಮತ್ತು ಸಾಮಾಜಿಕ ಬದಲಾವಣೆಗಳಿಂದ ಆರ್ಥಿಕ ಚರಿತ್ರೆಯು ರೂಪಗೊಳ್ಳಲಾರಂಭಿಸಿತು. ವೀರಶೈವ ಧರ್ಮ ಮತ್ತು ಸಾಹಿತ್ಯದ ಮೂಲಕ ಸಮಾಜದಲ್ಲಿ ಹಲವಾರು ಸಂಪ್ರದಾಯಗಳು ಬದಲಾವಣೆಗೆ ಒಳಪಟ್ಟವು. ಯಾವುದೇ ಕಾಲಘಟ್ಟವಾಗಲಿ ಸಮಾಜದ ಭದ್ರತೆಯೂ ಅಲ್ಲಿನ ಆರ್ಥಿಕ ವ್ಯವಸ್ಥೆಯನ್ನು ಅವಲಂಬಿಸಿರುತ್ತದೆ. ಸಮಾಜದ ಹೆಚ್ಚಿನ ಚಟುವಟಿಕೆಗಳು ಆರ್ಥಿಕ ಮೂಲಗಳನ್ನು ಆಧಾರವಾಗಿಟ್ಟುಕೊಂಡಿರುತ್ತವೆ. 

ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಕೃಷಿವ್ಯವಸ್ಥೆಯನ್ನು ಹಾಗೂ ಕೃಷಿ ಭೂಮಿಯನ್ನು ಎರಡು ರೀತಿಯಲ್ಲಿ ವಿಭಾಗಿಸಿದ್ದರು. ದೇವಮಾತೃಕೆ ಮತ್ತು ನದಿಮಾತೃಕೆಯಾಗಿ ವಿಭಾಗಿಸಿದ್ದರು. ಮಳೆಯನ್ನು ಆಶ್ರಯಸಿ ಕೃಷಿ ಮಾಡುವ ಭೂಮಿಯನ್ನು ದೇವಮಾತೃಕೆ ಎಂದು ಕರೆಯುತ್ತಿದ್ದರು. ಕೆರೆ, ನದಿ, ಕಾಲುವೆಗಳನ್ನು ಆಶ್ರಯಿಸಿ ಕೃಷಿ ಮಾಡುವ ಭೂಮಿಯು ನೀರಾವರಿಯಾಗಿದ್ದು, ಇದನ್ನು ನದಿ ಮಾತೃಕೆಯೆಂದು ಕರೆಯುತ್ತಾರೆ. ಭೂಮಿಯನ್ನು ಕಪ್ಪು, ಕೆಂಪು, ತೇವ ತೋಟಗಳೆಂದು ಸಾಮಾನ್ಯವಾಗಿ ವಿಭಾಗಿಸಲಾಗಿತ್ತು. ಈ ಮೂಲಕ ಚಾಲುಕ್ಯರು ಆಯಾ ಮಣ್ಣಿಗೆ ಹೊಂದಿಕೊಂಡಂತೆ ಕೃಷಿ ಭೂಮಿಯಲ್ಲಿ ತೊಡಗಿ ಬೆಳೆಯನ್ನು ಬೆಳೆಯುತ್ತಿದ್ದರು. ಆಧುನಿಕವಾಗಿ ನಾಲೆಗಳ ಮೂಲಕ ಕೆರೆ-ಬಾವಿಗಳಿಗೆ ನೀರು ತುಂಬಿಸುವ ವಿವಿಧ ಯೋಜನೆಗಳು ಜಾರಿಯಾಗುತ್ತಿವೆ. ಪ್ರಾಚೀನ ಕಾಲದಲ್ಲಿಯೇ ಕೆರೆ-ಬಾವಿ ಮೂಲಕ ನೀರನ್ನು ಕೃಷಿಗೆ ಸಂಗ್ರಹಿಸುತ್ತಿರುವ ಪ್ರಕ್ರಿಯೆಯನ್ನು ಈ ಕಾಲದ ದಾಖಲೆಗಳಿಂದ ತಿಳಿಯಬಹುದಾಗಿದೆ.

ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಗೋದಿ, ಭತ್ತ, ಅವರೆ, ಕಡಲೆ, ಹೆಸರು ಮೊದಲಾದ ಬೆಳೆಗಳನ್ನು ಬೆಳೆಯುತ್ತಿದ್ದರು. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ರಚಿತವಾದ ವಚನ ಸಾಹಿತ್ಯವು ಅಂದಿನ ಜೋಳ, ಗೋದಿ, ನವಣೆ, ಭತ್ತ, ರಾಗಿ ಮೊದಲಾದ ಬೆಳೆಗಳನ್ನು ಕುರಿತಂತೆ ವಿವರಿಸುತ್ತದೆ. ಮಧ್ಯಯುಗೀನ ಕಾಲದ ಚರಿತ್ರೆಯನ್ನು ಗಮನಿಸಿದರೆ ಕೆರೆ, ಕಾಲುವೆಗಳ ನಿರ್ಮಾಣವನ್ನು ಪುರುಷರಷ್ಟೆ ಅಲ್ಲದೇ ಮಹಿಳೆಯೂ ನಿರ್ವಹಿಸುತ್ತಿದ್ದಳು. ದೀವಳಾಂಬಿಕೆ, ಶಾಂತಲದೇವಿ, ಮೇಚಲದೇವಿ, ಚಿಕ್ಕಟ್ಟಿ ಮೊದಲಾದ ರಾಣಿಯರು ಕೆರೆಗಳನ್ನು ನಿರ್ಮಿಸಿದ ಉಲ್ಲೇಖಗಳು ದೊರೆಯುತ್ತವೆ (ಚಿದಾನಂದಮೂರ್ತಿ, ೨೦೧೬:೩೬೪).

ಕಲ್ಯಾಣದ ಚಾಲುಕ್ಯರ ಕಾಲದ ೧೦೧೦ರ ಮಸ್ಕಿ ಶಾಸನದಲ್ಲಿ ಎರಡನೆಯ ಜಯಸಿಂಹನು ಹಿರಿಯ ಮೊಸಂಗಿಯ ಕರಿದೊಯ್ಯಯ್ಯನಿಗೆ ನೂರು ಮತ್ತರು ಭೂಮಿಯನ್ನು ದಾನ ಬಿಟ್ಟ ಉಲ್ಲೇಖವಿದೆ. ಕ್ರಿ.ಶ. ೧೦೨೩ ರಸಂಕನೂರು ಶಾಸನವು ಪಿರಿಯ ಮಾನಸಂಗಿ ನಾಡಪೈಯ ದೇವರ್ಗ್ಗೆ ಶ್ರೀಜಗದೇಕ ಮಲ್ಲದೇವರ ಕಡಂಬೂರು ಬಡಗಣ ಪೊಳದೊಳ ಕೊಟ್ಟ ಕರಿನೆಲಂ ಎಂದು ತಿಳಿಸುತ್ತದೆ. ಅಂದರೆ ಇವರು ಬೆಳೆಯನ್ನು ಅಲ್ಲಿಯ ಫಲವತ್ತತೆ ಆಧರಿಸಿ ನಿರ್ಧರಿಸುತ್ತಿದ್ದರೆಂದು ಹೇಳಬಹುದು. ಕ್ರಿ.ಶ. ೧೦೪೯ರ ಬೆನರಿನ ಶಾಸನವು ಮೂವತ್ತಾರು ಮಹಾಜನರು ಅದೇ ಗ್ರಾಮದ ಮಾಡಿಮಯ್ಯನ ತುರುಗೋಳದಲ್ಲಿ ಮಾದಿರಾಜ ಎಂಬುವವನು ಕಳ್ಳರನ್ನು ಎದುರಿಸಿ ಗೋವುಗಳನ್ನು ಬಿಡಿಸಿಕೊಂಡು ಬರುವಾಗ ಹತನಾದ. ಹಾಗಾಗಿ ಆತನ ಸಂಬಂಧಿಕರ ಜೀವನಾಂಶಕ್ಕೆ ಭೂದಾನ ನೀಡಿದ್ದನ್ನು ತಿಳಿಸುತ್ತದೆ(ದೊಡ್ಡಮನಿ, ೨೦೦೨:೨೫೬). ಹಾಗೆಯೇ ೧೧೧೯ರ ನವಿಲೆ ಶಾಸನದಲ್ಲಿ ೬೪ ಮತ್ತರ ಭೂಮಿಯನ್ನು ಬಿಟ್ಟ ಉಲ್ಲೇಖಗಳು ದೊರೆಯುತ್ತವೆ. ಸಾಮಾನ್ಯವಾಗಿ ಮತ್ತರ ಎನ್ನುವುದು ಭೂಮಿಯನ್ನು ಅಳೆಯಲು ಉಪಯೋಗಿಸುವ ಸಾಧನವಾಗಿದ್ದು, ಈ ಮೂಲಕ ಸಮಾಜ ಸೇವೆ ಮಾಡಿದ ಜನರಿಗೆ ಪ್ರಭುತ್ವದ ಸಹಾಯದಿಂದ ಅವರಿಗೆ ಭೂಮಿಯನ್ನು ದಾನವಾಗಿ ನೀಡುತ್ತಿದ್ದರೆಂಬುದು ತಿಳಿಯುತ್ತದೆ. ಭೂಮಿ ದಾನ ಪ್ರಕ್ರಿಯೆಗಳು ಹೆಚ್ಚಿನದಾಗಿ ಬೆಳೆದು ದೇವಾಲಯ, ಮಠ–ಮಾನ್ಯಗಳು ಆರ್ಥಿಕ ಕೇಂದ್ರಗಳಾಗಿ ಬೆಳೆಯುವುದರಲ್ಲಿ ಸಹಾಯಕವಾದವು.

ಭೂಮಿಯ ಪ್ರಕಾರವನ್ನು ಕುರಿತಂತೆ ಉಲ್ಲೇಖಿತವಾದ ವಿವರಗಳು ಶೆಯಿ ಎಂಬ ಉಲ್ಲೇಖವು ರಾಯಚೂರು ಜಿಲ್ಲೆಯೊಂದರಲ್ಲಿ ೧೪ ಬಾರಿ ಉಲ್ಲೇಖಗೊಂಡಿದೆ. ಬಾಗಲಕೋಟೆ ಜಿಲ್ಲೆಯಲ್ಲಿ ೧೧ ಬಾರಿ ಉಲ್ಲೇಖಿಸಲಾಗಿದೆ. ಕರಿಯಕೆಯ್ಯ ಎಂಬ ಪ್ರಕಾರದ ಭೂಮಿಯು ರಾಯಚೂರು, ಬಾಗಲಕೋಟೆ, ಮೆಹಬೂಬನಗರ ಭಾಗದಲ್ಲಿ ಹೆಚ್ಚಾಗಿ ಉಲ್ಲೇಖಿತವಾಗಿದೆ. ನೆಲ ಎಂಬುದು ಬಾಗಲಕೋಟೆ, ಅನಂತಪುರ, ರಾಯಚೂರು, ಸೋಲ್ಲಾಪುರ, ಕರ್ನೂಲ ಜಿಲ್ಲೆಗಳಲ್ಲಿ ತಲಾ ಒಂದು ಬಾರಿ ಉಲ್ಲೇಖವಾಗಿರುವುದನ್ನು ಗುರುತಿಸಲಾಗಿದೆ. ಒಟ್ಟಾರೆಯಾಗಿ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಕೃಷಿ ಭೂಮಿಯು ಪ್ರಗತಿ ಹೊಂದಿತ್ತೆಂದು ಗಮನಿಸಬಹುದು(ಬಸವರಾಜು,೨೦೦೮: ೪೯).

ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಭತ್ತವು ಪ್ರಮುಖ ಬೆಳೆಯಾಗಿದ್ದು, ಇದನ್ನು ನೀರಾವರಿ ಪ್ರದೇಶದಲ್ಲಿ ಬೆಳೆಯಲಾಗುತ್ತಿತ್ತು. ಭತ್ತದಲ್ಲಿ ಎಂಟು ಬಗೆಯ ವಿಭಿನ್ನ ತಳಿಗಳು ಅಸ್ತಿತ್ವದಲ್ಲಿದ್ದವೆಂದು

ಮಾನಸೋಲ್ಲಾಸದಲ್ಲಿ ೩ನೆಯ ಸೋಮೇಶ್ವರ ಉಲ್ಲೇಖಿಸಿದ್ದಾನೆ. ಅವುಗಳೆಂದರೆ ರಕ್ತಸಾಲಿ, ಮಹಾಸಾಲಿ, ಗಂಧಸಾಲಿ, ಸೂಕ್ಷ್ಮಸಾಲಿ, ಕಲಿಂಗರ, ಮುಂಡಸಾಲ, ಸ್ಥೂಲಸಾಲಿ, ಸಶಿಷ್ಪಸಾಲಿಗಳೆಂದು ಈ ಮೂಲಕ ವಿಭಾಗಿಸಲಾಗಿತ್ತು. ಈ ವರ್ಗೀಕರಣವು ಸಾಮಾನ್ಯವಾಗಿ ಅಲ್ಲಿನ ಬಣ್ಣ, ಗಾತ್ರ ಮತ್ತು ಗುಣಗಳನ್ನು ಆಧರಿಸಿ ಮಾಡಲಾಗಿದೆ(ಬಸವರಾಜು,೨೦೦೮: ೩೫).

ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಕೃಷಿಯಾಧಾರಿತ ಮತ್ತು ಕೃಷಿಯೇತರ ಕೈಗಾರಿಕೆಗಳು ಬೆಳೆದು ಬಂದಿರುವುದನ್ನು ಕಾಣಬಹುದಾಗಿದ್ದು, ಕೃಷಿಯಾಧಾರಿತ ಕೈಗಾರಿಕೆಗಳೆಂದರೆ ತೋಟದ ಬೆಳೆಗಳಾದ ಅಡಿಕೆ, ವೀಳ್ಯೆದೆಲೆ, ಎಣ್ಣೆ, ಹೂವುಗಳು, ಹಣ್ಣುಗಳಾಗಿವೆ. ಇವು ದಿನನಿತ್ಯದ ಕಾರ್ಯಕ್ರಮಗಳಿಗೆ, ಪೂಜೆಗಳಿಗೆ ಅವಶ್ಯಕವಾಗಿದ್ದವು. ಅದರಂತೆ ಲೋಹ ತಯಾರಿಕೆ, ಬಟ್ಟೆ ತಯಾರಿಕೆ, ಸಕ್ಕರೆ ತಯಾರಿಕೆ, ಟಂಕಸಾಲೆ, ಬುಟ್ಟಿ ಹೆಣೆಯುವುದು, ಬಡಿಗತನ ಕೈಗೊಳ್ಳುವುದು, ಮಡಿಕೆ ತಯಾರಿಸುವುದು, ಬಂಡಿಗಳ ನೌಕೆಗಳನ್ನು ನಿರ್ಮಿಸುವುದು ಅಂದಿನ ಪ್ರಮುಖ ಕೈಗಾರಿಕೆಗಳಾಗಿದ್ದವೆಂದು ಸೋಮೇಶ್ವರ ಮಾನಸೋಲ್ಲಾಸ ಕೃತಿಯಲ್ಲಿ ಉಲ್ಲೇಖಿಸುತ್ತಾನೆ(ದೊಡ್ಡಮನಿ,೨೦೦೨:೨೫೪).

ರಾಜಧಾನಿ ನಗರಗಳು ಆಯಾ ಸಾಮ್ರಾಜ್ಯದ ಪ್ರಮುಖ ವ್ಯಾಪಾರಿ ಕೇಂದ್ರಗಳಾಗಿರುತ್ತಿದ್ದವು. ಕಲ್ಯಾಣದ ನೆರೆಹೊರೆಯ ಗ್ರಾಮಗಳಾದ ನಾರಾಯಣಪುರ, ಶಿವಪುರ, ಗೋರ್ಟಾ, ಧನ್ನೂರು, ಉಮ್ಮಾಪುರಗಳು ಅಂದಿನ ಕಲ್ಯಾಣ ನಗರದ ಭಾಗಗಳಾಗಿದ್ದವು. ಅವು ಕೆಲವು ನಿರ್ದಿಷ್ಟ ಧಾರ್ಮಿಕ, ಆರ್ಥಿಕ ಚಟುವಟಿಕೆಗಳ ಕೇಂದ್ರಗಳಾಗಿ ಕಾರ್ಯ ನಿರ್ವಹಿಸುತ್ತಿರುವುದನ್ನು ಗಮನಿಸಬಹುದಾಗಿದೆ. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಕೃಷಿಗೆ ಪೂರಕವಾಗಿ ಅನೇಕ ರೀತಿಯ ಕೆಲಸ ಕಾರ್ಯಗಳನ್ನು ನಿರ್ವಹಿಸುತ್ತಿದ್ದರು. ಇವರ ಕಾಲದಲ್ಲಿ ಬಸವೇಶ್ವರರು ಪ್ರಮುಖವಾಗಿ ತಮ್ಮ ಬೋಧನೆ ಮತ್ತು ತತ್ವಗಳ ಮೂಲಕ ಸಮಾಜದಲ್ಲಿ ಹಲವಾರು ಸುಧಾರಣೆಗಳನ್ನು ಮಾಡಿದ್ದಾರೆ. ಕಲ್ಯಾಣ ಚಾಲುಕ್ಯರು ನಗರಕೇಂದ್ರಗಳ ಬೆಳವಣಿಗೆಗೂ ಅವಕಾಶ ನೀಡಿದ್ದು, ಪ್ರಾಚೀನ ವ್ಯಾಪಾರಿ ಮಾರ್ಗಗಳೇ ಕಲ್ಯಾಣ ಚಾಲುಕ್ಯರ ಕಾಲದಲ್ಲಿಯೂ ಮುಂದುವರಿದಿರುವುದನ್ನು ಗಮನಿಸಬಹುದಾಗಿದೆ. ಈ ಕಾಲದಲ್ಲಿ ದೇವಾಲಯಗಳು ಆರ್ಥಿಕ, ಶೈಕ್ಷಣಿಕ, ಧಾರ್ಮಿಕ ಕೇಂದ್ರಗಳಾಗಿ ಗುರುತಿಸಿಕೊಂಡಿರುವುದನ್ನು ಗಮನಿಸಬಹುದಾಗಿದೆ. ಸೋಮೇಶ್ವರ ಮಾನಸೋಲ್ಲಾಸದಲ್ಲಿ ಕುಂಡಗಳು, ಮಣ್ಣಿನ ಪಾತ್ರೆಗಳು, ಕುಡಕಿಗಳು, ಕಲ್ಲ ಗಡಿಗೆಗಳ ಮೇಲೆ ಎಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ತೆರಿಗೆ ಕೊಡಬಾರದೆಂದು ಉಲ್ಲೇಖಿಸಿ ಇದನ್ನು ಕರದಾನ ವಿವೇಕ ಎಂದು ಬಣ್ಣಿಸಿದೆ.

ಕ್ರಿ.ಶ. ೧೧೬೨ರ ಶಾಸನವೊಂದು ಕುಂಬಾರದೆರೆಯ ವಿನಾಯಿತಿಯ ಉಲ್ಲೇಖವನ್ನು ನೀಡುತ್ತದೆ. ಈ ಮೂಲಕ ಕುಂಬಾರಿಕೆಯು ಆ ಕಾಲದ ಒಂದು ಪ್ರಮುಖ ಗೃಹ ಕೈಗಾರಿಕೆಯಾಗಿತ್ತು. ಆಧುನಿಕ ಸಂದರ್ಭದಲ್ಲಿಯೂ ಕುಂಬಾರಿಕೆಯು ಒಂದು ಗೃಹ ಕೈಗಾರಿಕೆಯಾಗಿದ್ದು, ಪ್ರಸ್ತುತ ಜಾಗತೀಕರಣದ ಪ್ರಭಾವದಿಂದ ಈ ವೃತ್ತಿಗಳ ಉತ್ಪಾದನೆಯೂ ಕಡಿಮೆಯಾಗಿರುವುದನ್ನು ಗಮನಿಸಬಹುದು. ಇವರ ಕಾಲಾವಧಿಯಲ್ಲಿ ೧೦೬೧ರ ಅನಂತಪುರ ಶಾಸನದಲ್ಲಿ ಭಂಡಿ, ಕ್ರಿ.ಶ. ೧೧೪೨ರ ಬೀದರ್ ಜಿಲ್ಲೆಯ ಬಸವಕಲ್ಯಾಣದಲ್ಲಿ ಬಿದಿರು ಬಂಡಿ ಎಂಬ ಉಲ್ಲೇಖವಿದ್ದು, ಇವರ ಕಾಲದಲ್ಲಿ ವಸ್ತುಗಳನ್ನು

ಸಾಗಿಸುವುದಕ್ಕೆ ಈ ರೀತಿಯ ಬಂಡಿಗಳ ಬಳಕೆಯಿತ್ತೆಂದು ಅಲ್ಲಿನ ದಾಖಲೆಗಳಿಂದ ತಿಳಿಯಬಹುದಾಗಿದೆ. ಕಲ್ಯಾಣ ಚಾಲುಕ್ಯರು ೧೦೪೭ರ ಮಹಾರಾಷ್ಟ್ರದ ತಡಖೇಲ ಶಾಸನದಲ್ಲಿ ಸೀರೆಯ ಸುಂಕ ಪೊದಕೆಗೆ, ಪಾಗ೨ ಸೀರಿಗೆ, ಪಾಗಂ ಮೊಟ್ಟೆಯ ಸೀರೆಗೆ, ಪೊಂಗೆ ಪಣದ ಬೇಡ ಸೀರೆಗೆ, ಪೊಂಗೆ ಪೊಣಂ ಎಂದು ಉಲ್ಲೇಖಿಸಲಾಗಿದೆ.

ಕಲ್ಯಾಣ ಚಾಲುಕ್ಯರ ಕಾಲದಲ್ಲಿ ವ್ಯಾಪಾರವು ಮುಖ್ಯವಾಗಿ ವರ್ತಕ ಸಮೂಹವನ್ನು ಅವಲಂಬಿಸಿತ್ತು. ಮುಖ್ಯವಾಗಿ ತೆಲ್ಲಿಗರು, ಅಕ್ಕಸಾಲಿಗ, ಕುಂಬಾರ, ಚಮ್ಮಾರ, ಮೇದರ, ಮಾದಿಗರು ಮೊದಲಾದ ಉತ್ಪಾದಕ ವರ್ತಕರಿದ್ದರು. ಅಯ್ಯಾವೊಳೆ, ಮುಮ್ಮರಿದಂಡ, ಗವರೆ, ಗಾತ್ರಿಗ, ನೇಕಾರರು, ಬಣಜಿಗರು, ಮಹಾವಡ್ಡ ವ್ಯವಹಾರಿ ಶೆಟ್ಟಿಗುತ್ತ, ಎಳಮೆ ಸಾಲಿಕ್ಯ ಬಲ್ಲಾಳು ಮೊದಲಾದ ವಿನಿಮಯ ವರ್ತಕರಿದ್ದರು. ಇವರು ಪ್ರಾಚೀನ ಕಾಲದಿಂದಲೂ ಗುರುತಿಸಿಕೊಂಡಿದ್ದು, ಕಲ್ಯಾಣ ಚಾಲುಕ್ಯರ ಕಾಲದಲ್ಲಿಯೂ ಮುಂದುವರಿದಿರುವುದನ್ನು ಕಾಣಬಹುದು.

ಗ್ರಾಮಗಳಿಂದ ಪಟ್ಟಣಗಳಿಗೆ ಸಂಚರಿಸಲು ಮಾರ್ಗಗಳಿದ್ದವು. ಬಿಜಾಪುರ ಜಿಲ್ಲೆಯ ರೂಗಿ ಶಾಸನದಲ್ಲಿ ಆಂಧ್ರಪ್ರದೇಶದ ಆಲಂಪುರಕ್ಕೆ ಹೋಗುವ ದಾರಿ ಮತ್ತು ಸೊಲ್ಲಾಪುರ ಜಿಲ್ಲೆಯ ಅಕ್ಕಲಕೋಟೆ ಶಾಸನದಲ್ಲಿ ಪೈಠಾಣ ಪಟ್ಟಣಕ್ಕೆ ಹೋಗುವ ದಾರಿಗಳ ಮಾಹಿತಿಯಿದೆ. ಕೋಳೂರು ಶಾಸನದಲ್ಲಿ ಕೋಳೂರಿನಿಂದ ಬಳ್ಳಾರಿಗೆ ಹೋಗುವ ದಾರಿ ಬೆಳಗಾವಿಯ ಹಲಸಗಿ ೧೨೦೦೦ದಿಂದ ಬಾಗಲಕೋಟೆಯ ತೇರದಾಳದವರೆಗೆ ಹೆದ್ದಾರಿ, ದೋರಸಮುದ್ರಕ್ಕೆ ಹೋಗುವ ಹೆದ್ದಾರಿ, ತಂಜಾವೂರಿನಿಂದ ಕಲ್ಯಾಣದವರೆಗಿನ ಹೆದ್ದಾರಿ ಮಾರ್ಗಗಳಿರುವುದನ್ನು ಶಾಸನಗಳು ದೃಢಪಡಿಸಿವೆ. ರಾಜಬೀದಿ, ರಾಜವಿತ್ತಿ ಎಂದು ಉಲ್ಲೇಖಿಸಿರುವುದನ್ನು ಗಮನಿಸಿದರೆ ಇಂದಿನಂತೆ ಜಿಲ್ಲೆ, ರಾಜ್ಯ, ರಾಷ್ಟ್ರೀಯ ಹೆದ್ದಾರಿಗಳಿರುವಂತೆ ಅಂದೂ ಸಹ ಅವುಗಳ ಅಸ್ತಿತ್ವವಿದ್ದದ್ದು ತಿಳಿದುಬರುತ್ತದೆ. ಈ ಮೂಲಕ ಕಲ್ಯಾಣ ಚಾಲುಕ್ಯರ ವ್ಯಾಪಾರ ಸಂಪರ್ಕವು ಒಂದು ಕಡೆಯಿಂದ ಇನ್ನೊಂದು ಕಡೆ ಸಾಗಲು ನಿರರ್ಗಳವಾದ ಭೂಮಾರ್ಗ ಮತ್ತು ಜಲಮಾರ್ಗಗಳಿದ್ದು, ಈ ಮೂಲಕ ವ್ಯಾಪಾರ ನಡೆಯುತ್ತಿತ್ತೆಂದು ಅಲ್ಲಿನ ಶಾಸನ ದಾಖಲೆಗಳಿಂದ ತಿಳಿಯಬಹುದಾಗಿದೆ.

ಪ್ರಾಚೀನ ಕಾಲದಿಂದಲೂ ಭಾರತವು ಕೃಷಿಪ್ರಧಾನ ರಾಷ್ಟ್ರವಾಗಿದ್ದು, ಕಲ್ಯಾಣ ಚಾಲುಕ್ಯರ ಕಾಲವು ಇದಕ್ಕೆ ಹೊರತಲ್ಲ. ಕೃಷಿಗೆ ಪೂರಕವಾದಂತಹ ಭೂಕಂದಾಯ ಆದಾಯದ ಮೂಲಗಳಲ್ಲಿ ಅತ್ಯಂತ ಪ್ರಮುಖವಾದದ್ದು. ಸಮಕಾಲೀನ ಶಾಸನಗಳಲ್ಲಿ ಬಳಕೆಯಾಗಿರುವ ದಶಗಂಧ, ಅರುವಣ, ಪತ್ತುಂದಿ, ಸಿದ್ದಾಯ, ಹೊಲದೆರೆ ಮೊದಲಾದ ಭೂಕಂದಾಯಗಳನ್ನು ಪ್ರಮುಖವಾಗಿ ಹೆಸರಿಸಬಹುದಾಗಿದೆ. ವೇಮುಲವಾಡ, ಗಬ್ಬೂರು, ಮುಂಬಯಿ, ಗೋರ್ಟಾ, ಮುಚಳಂಬ, ಅರುವಣ, ಮಸ್ಕಿ, ಚತ್ರತುಂಬಳಂ, ಕೊಕಟನೂರು ಮೊದಲಾದ ಭೂ ತೆರಿಗೆಯು ಅಸ್ತಿತ್ವದಲ್ಲಿತ್ತೆಂಬುದು ತಿಳಿದುಬರುತ್ತದೆ.

ಕಲ್ಯಾಣ ಚಾಲುಕ್ಯರು ಕೃಷಿ ಮತ್ತು ಆರ್ಥಿಕ ವ್ಯವಸ್ಥೆಯಲ್ಲಿ ಪ್ರಮುಖ ಸ್ಥಾನ ಪಡೆದುಕೊಂಡಿದ್ದು, ವ್ಯಾಪಾರ ವಾಣಿಜ್ಯದಲ್ಲಿ ಮುಖ್ಯಪಾತ್ರ ವಹಿಸಿದ್ದಾರೆ. ದೇವಾಲಯಗಳು ಈ ಕಾಲಘಟ್ಟದ ಆರ್ಥಿಕ

ವ್ಯವಸ್ಥೆಯಲ್ಲಿ ಗುರುತಿಸಿಕೊಂಡಿವೆ. ದೇವಾಲಯಗಳು ಆಧುನಿಕ ಬ್ಯಾಂಕ್‌ಗಳ ರೀತಿಯಲ್ಲಿ ಕೆಲಸ ನಿರ್ವಹಿಸುತ್ತಿದ್ದವು. ಹೆಚ್ಚಿನ ದಾನದತ್ತಿಗಳು ಈ ಕಾಲದಲ್ಲಿ ನೀಡಲ್ಪಟ್ಟಿದ್ದರಿಂದ ಆರ್ಥಿಕವಾಗಿ ಹೊಸ ರೀತಿಯ ಸ್ಥಿತ್ಯಂತರಕ್ಕೆ ಒಳಪಟ್ಟ ಕಾಲವೆಂದು ಹೊಯ್ಸಳರ ಕಾಲವನ್ನು ಗುರುತಿಸಬಹುದಾಗಿದೆ(ಚಂದ್ರಶೇಖರ್&ಸುರೇಂದ್ರರಾವ್,೨೦೧೬:೨೩). ನಗರವ್ಯವಸ್ಥೆಗೆ ಮತ್ತು ನಗರೀಕರಣ ಪ್ರಕ್ರಿಯೆಗೆ ಒಳಪಡುವ ಕಾಲವೆಂದು ಗುರುತಿಸಬಹುದಾಗಿದೆ. ಹೊಯ್ಸಳರ ರಾಜ್ಯಾಡಳಿತವು ಊಳಿಗಮಾನ್ಯ ಪದ್ಧತಿಯ ಅಂಶಗಳನ್ನು ಒಳಗೊಂಡಿತ್ತು. ದಂಡನಾಯಕರು ಮತ್ತು ಮನ್ನೆಯರು ಭೂಮಿ ಕಾಣಿಕೆಗಳನ್ನು ಆನುವಂಶಿಕವಾಗಿ ಪಡೆಯುತ್ತಿದ್ದರು.

ಹೊಯ್ಸಳರ ಕಾಲದಲ್ಲಿ ಕೃಷಿಯ ಉತ್ಪಾದನೆ ಹೆಚ್ಚಿತ್ತು. ಕೃಷಿಯೇತರ ಚಟುವಟಿಕೆಗಳ ಹುಟ್ಟಿಗೆ ಕಾರಣವಾದ ಕೃಷಿಯ ಬೆಳವಣಿಗೆಯು ಅದು ರಾಜ್ಯದ ಬೆಳವಣಿಗೆ ಎಂಬರ್ಥವನ್ನು ತೋರಿಸಿತು. ಕೃಷಿಯ ಪ್ರಾಮುಖ್ಯತೆಯನ್ನು ಅರಿತುಕೊಂಡ ಅರಸರು ಹಾಗೂ ಇತರ ಅಧಿಕಾರಿಗಳು ಕೃಷಿಯನ್ನು ಸುಧಾರಿಸುವ ಪ್ರಯತ್ನವನ್ನು ಮಾಡಿದರು. ಇದು ಕೃಷಿಯ ವಿಸ್ತರಣೆಗೆ ಕಾರಣವಾಗಿ ಉಳುಮೆಯ ವಿಧಾನದಲ್ಲೂ ಬದಲಾವಣೆಗಳು ಕಾಣಿಸಿಕೊಂಡವು. ಕೃಷಿಗೆ ಬಳಸುವ ಉಪಕರಣಗಳಲ್ಲಿ ಬದಲಾವಣೆಗಳಾಗಿ ಅದು ಕೃಷಿ ಉತ್ಪಾದನೆಯ ಮೇಲೆ ಮಹತ್ತರ ಪರಿಣಾಮಗಳನ್ನು ಬೀರಿತು.

ಹೊಯ್ಸಳರ ನೆಲವನ್ನು ಸಮೃದ್ಧಿಗೊಳಿಸಿದ್ದ ಕೃಷಿಕರನ್ನು ಹೊಯ್ಸಳ ಶಾಸನಗಳಲ್ಲಿ ಭೂಮಿಕಾರರೆಂದು ಕರೆದಿದೆ. ನದಿ ಕಣಿವೆಗಳಲ್ಲಿ ಅವರು ಬಗೆ ಬಗೆಯ ನೀರಾವರಿ ಬೆಳೆಗಳನ್ನು ಬೆಳೆಯುತ್ತಿದ್ದರು. ಕೃಷಿಕರನ್ನು ಸೂಚಿಸಲು ಶಾಸನಗಳಲ್ಲಿ ಒಕ್ಕಲು ಅಥವಾ ಬೆಸವೊಕ್ಕಲು ಎಂದು ಉಲ್ಲೇಖಿಸಲಾಗಿದೆ. ಕೃಷಿಕರು ಹೊಯ್ಸಳ ಆಡಳಿತದ ಬೆನ್ನೆಲುಬಾಗಿದ್ದರೆನ್ನುವುದರಲ್ಲಿ ಸಂದೇಹವಿಲ್ಲ. ಅವರು ಬೇರೆ ಬೇರೆ ಬಗೆಯ ತೆರಿಗೆಗಳನ್ನು ಕೊಡುತ್ತಿದ್ದರು(ದೇವರಕೊಂಡಾರೆಡ್ಡಿ: ಶಾಸನ ಸಂಖ್ಯೆ-೯೯).

ಹೊಯ್ಸಳರ ರಾಜ್ಯಾಡಳಿತದಲ್ಲಿ ಕೃಷಿಕರು ಪ್ರಮುಖ ಪಾತ್ರ ವಹಿಸಿದ್ದರು. ಹೊಯ್ಸಳರ ವರಮಾನವನ್ನು ಸಾಮಾನ್ಯವಾಗಿ ರಾಜಾಯ ಎಂದು ಕರೆಯುತ್ತಿದ್ದರು. ಇವರ ಕಾಲದಲ್ಲಿ ಸಾಗುವಳಿ ಭೂಮಿಯನ್ನು ಗದ್ದೆ, ಬೆದ್ದಲು ಅಥವಾ ಹೊಲ ಮತ್ತು ತೋಟ ಎಂದು ವರ್ಗೀಕರಿಸಲಾಗಿತ್ತು. ತೋಟಗಳ ಬಗೆಗಳನ್ನು ಶಾಸನದಲ್ಲಿ ಈ ರೀತಿಯಲ್ಲಿ ಉಲ್ಲೇಖಿಸಲಾಗಿದೆ.

೧. ೯೨೮ ಮರಗಳಿರುವ ಮಾವಿನ ತೋಟ

೨. ೨೦೦ ವೀಳ್ಯದೆಲೆ ಕುಳಿ

೩. ಹೂವಿನ ತೋಟ

೪. ಅಡಕೆ ತೋಟ

೫. ೧೫ ಗುಳ್ಳ ಏಲಕ್ಕಿ ತೋಟ

೬. ಹರಳಿನ ಎಣ್ಣೆ ತೋಟ(ಷೇಕ್ ಅಲಿ (೨),೨೦೧೮:೧೯೯)

ಈ ಮೂಲಕ ಹೊಯ್ಸಳರ ಕಾಲದ ಶಾಸನದಲ್ಲಿ ತೋಟದ ಉಲ್ಲೇಖಗಳಿರುವುದನ್ನು ಗಮನಿಸಬಹುದಾಗಿದೆ. ಹೊಯ್ಸಳ ಸಾಮ್ರಾಜ್ಯದಲ್ಲಿ ಒಂದು ಹಳ್ಳಿಯ ಕೃಷಿಕರು ಅಥವಾ ಭೂಮಾಲೀಕರು

ಕೊಡಬೇಕಾದ ತೆರಿಗೆಗಳ ಪಟ್ಟಿಯಲ್ಲಿ. ಕುಳ(ನೇಗಿಲು), ಉಳುವರಿ(ಉಳುಮೆಯ ತೆರಿಗೆ), ಕಿರುಕುಳ(ಕಿರು ಅಥವಾ ಹೆಚ್ಚಿನ ನೇಗಿಲು ತೆರಿಗೆ) ಎಂಬ ಪದಗಳ ಭೂತೆರಿಗೆಯನ್ನು ಸೂಚಿಸುವಂತೆ ತೋರುತ್ತದೆಂದು ತಿಳಿಯುತ್ತದೆ. ಎಷ್ಟು ಹಣ ಸಂಗ್ರಹಿಸಲಾಗಿತ್ತೆಂದು ಶಾಸನಗಳಿಂದ ಖಚಿತವಾಗಿ ತಿಳಿಯುವುದಿಲ್ಲ. ಪದೇ ಪದೇ ಸಿಕ್ಕುವ ಉಲ್ಲೇಖಗಳು ನಿರ್ದಿಷ್ಟಪಡಿಸಿದ ಎಲ್ಲ ತೆರಿಗೆಗಳು ಸೇರಿ ಒಂದು ಹಳ್ಳಿಯಿಂದ ಎಷ್ಟು ತೆರಿಗೆ ಬರಬೇಕೆಂದು ಹೇಳುತ್ತವೆ. ಈ ಮೂಲಕ ಹೊಯ್ಸಳರ ಕಾಲದ ತೆರಿಗೆಗಳನ್ನು ಕುರಿತಂತೆ ಸ್ಪಷ್ಟವಾದ ವಿವರಗಳು ಈ ಮೂಲಕ ದೊರೆಯುತ್ತವೆ

ಹೊಯ್ಸಳರ ಕಾಲದಲ್ಲಿ ನಗರಕೇಂದ್ರಗಳ ಹುಟ್ಟು ಮತ್ತು ಬೆಳವಣಿಗೆಗೆ ಪೋಷಕವಾದ ಅಂಶವೆಂದರೆ ನಗರಕೇಂದ್ರಗಳು ವಾಣಿಜ್ಯ ಮತ್ತು ಧಾರ್ಮಿಕ ಕ್ಷೇತ್ರಗಳಾಗಿ ಪ್ರಾಮುಖ್ಯತೆ ಪಡೆದಿರುವುದು ಹಳ್ಳಿಗಳಿಂದ ವರಮಾನವನ್ನು ಗುರುತಿಸಿ ಗೌರವಿಸಲು ಸಾಕಷ್ಟು ಎಚ್ಚರಿಕೆ ತೆಗೆದುಕೊಂಡಿತ್ತು. ಈ ರೀತಿಯ ನಿರ್ಣಯವನ್ನು ಕೈಗೊಳ್ಳುವುದಕ್ಕೆ ಅಲ್ಲಿನ ರಾಜರು ಪ್ರಾಮುಖ್ಯತೆ ವಹಿಸಿದ್ದರು. ಭೂಮಿಯನ್ನು ಮಾರಾಟದಿಂದ, ಅಡಮಾನದಿಂದ ಅಥವಾ ಉಡುಗೊರೆಯಿಂದ ಪರಭಾರೆ ಮಾಡುವುದು. ೨. ಬಿಡಿತಾಕುಗಳನ್ನು ಗ್ರಾಮದ ಗಡಿಗಳನ್ನು ಸೂಕ್ಷ್ಮ ವಿವರಗಳೊಂದಿಗೆ ಕರಾರುವಕ್ಕಾಗಿ ಗುರುತಿಸುವುದು(ಷೇಕ್‌ಅಲಿ(೨),೨೦೧೮:೧೯೮).

ಹೊಯ್ಸಳರ ಕಾಲದಲ್ಲಿ ಕೆರೆಗಳನ್ನು ಮೂರು ರೀತಿಯಲ್ಲಿ ವಿಭಾಗಿಸಿರುವುದನ್ನು ಗಮನಿಸಬಹುದಾಗಿದೆ. ಮೊದಲನೆಯದು ನದಿಯ ನೀರನ್ನು ಪಡೆಯುವ ಕೆರೆ, ಎರಡನೆಯದು ಕೇವಲ ಮಳೆಯ ನೀರನ್ನೇ ಆಶ್ರಯಿಸಿರುವ ಕೆರೆ, ಮೂರನೆಯದು ಚಿಕ್ಕ ಹಳ್ಳಗಳಿಂದ ಮತ್ತು ಅಕ್ಕಪಕ್ಕದ ಬೆಟ್ಟದಿಂದ ಮಳೆಗಾಲದಲ್ಲಿ ಹರಿದುಬರುತ್ತಿದ್ದ ಮೇಲ್ನೀರನ್ನು ಪಡೆಯುವ ಕೆರೆ ಎಂದು ಗುರುತಿಸಲಾಗಿದೆ. ಕೆರೆ ನಿರ್ಮಾಣದ ಸ್ಥಳವು ಹೆಚ್ಚಾಗಿ ಈ ರೀತಿಯಾಗಿಯೇ ಇರುತ್ತಿತ್ತು.

ಮೊದಲನೆಯ ವರ್ಗದ ಕೆರೆಗಳು ಸರ್ವಋತುಗಳಲ್ಲಿಯೂ ನದಿಗಳಿಂದ ನೀರು ಪಡೆಯುತ್ತಿದ್ದವು. ಈ ರೀತಿಯ ಕೆರೆಗಳಿಗೆ ಉದಾಹರಣೆಗಳೆಂದರೆ ಬೇಲೂರು ಮತ್ತು ಹಳೇಬೀಡಿನಲ್ಲಿನ ಕೆರೆಗಳು. ೧೩೦೦ರ ಬೇಲೂರು ತಾಲೂಕಿನ ಶಾಸನವೊಂದರಲ್ಲಿ ಯಗಚೆ ಕಾಲುವೆಯ ಉಲ್ಲೇಖ ದೊರೆಯುತ್ತದೆ(ಬಡಿಗೇರ್,೨೦೧೭:೧೬೩).ಪ್ರಸ್ತುತ ಈ ರೀತಿ ಕೆರೆಗಳಿಗೆ ನದಿಯಿಂದ ಕಾಲುವೆಗಳ ಮೂಲಕ ನೀರು ತುಂಬಿಸುವ ಪ್ರಕ್ರಿಯೆಯು ಆಧುನಿಕ ಸಂದರ್ಭದಲ್ಲಿ ಭದ್ರಾ ಮೇಲ್ದಂಡೆ ಯೋಜನೆಯು ಒಂದು ಉತ್ತಮ ಉದಾಹರಣೆಯಾಗಿದೆ. ಪ್ರಾಚೀನ ಕಾಲದ ಕೆಲವು ಮಹತ್ವದ ಅಂಶಗಳನ್ನು ಪ್ರಸ್ತುತ ವರ್ತಮಾನದ ಪರಿಸ್ಥಿತಿಯಲ್ಲಿಯೂ ಗಮನಿಸಬಹುದಾಗಿದೆ. ಎರಡನೆಯ ದರ್ಜೆಯ ಕೆರೆಗಳು ಸ್ಥಳೀಯವಾಗಿ ಚಿಕ್ಕ ಹಳ್ಳಿಗಳಿಂದ ಪಕ್ಕದ ಬೆಟ್ಟದಿಂದ ಮಳೆಗಾಲದಲ್ಲಿ ಹರಿದುಬರುವ ಮೇಲ್ನೀರನ್ನು ಸಂಗ್ರಹಿಸುತ್ತಿದ್ದರು. ಈ ನೀರನ್ನು ಬೇಸಾಯ ಕಾರ್ಯಕ್ಕೆ ಮಾತ್ರ ಉಪಯೋಗಿಸುತ್ತಿದ್ದರು. ಈ ಮಾದರಿಯು ಆಧುನಿಕ ಸಂದರ್ಭದ ಚೆಕ್‌ಡ್ಯಾಂ ನಿರ್ಮಾಣದ ಮಾದರಿಗಳೆಂದು ಹೇಳಬಹುದು.

ಹೊಯ್ಸಳರ ಕಾಲದಲ್ಲಿ ನೂರಾರು ಕೆರೆ-ಬಾವಿಗಳು ನಿರ್ಮಾಣವಾದವು. ಹೀಗೆ ನಿರ್ಮಾಣವಾದ ಕೆರೆಗಳಿಗೆ ಸರ್ಕಾರದ ವತಿಯಿಂದಲೂ ಅವರಿಗೆ ಬೇಕಾದ ಅಗತ್ಯಗಳನ್ನು ಪೂರೈಸುತ್ತಿದ್ದರು. ಈ

ಮೂಲಕವಾಗಿ ಹೊಯ್ಸಳರು ಅಪಾರ ಪ್ರಗತಿ ಹೊಂದಿದ್ದು, ನಗರಕೇಂದ್ರಗಳ ಹುಟ್ಟು-ಬೆಳವಣಿಗೆಗೆ ಕಾರಣವಾದರು. ಹೊಯ್ಸಳರು ಕೃಷಿ ಭೂಮಿಯನ್ನು ವಿಸ್ತರಿಸುವುದರ ಕೃಷಿಗೆ ಪೂರಕವಾದಂತಹ ಕೆರೆಗಳನ್ನು ನಿರ್ಮಿಸಿದ್ದರು. ಕೆರೆ ಹಿಂದಿನ ಜಮೀನಿನ ಪ್ರಶ್ನೆಯಾದಾಗ ಆ ಭೂಮಿಯು ಉಳುವವನ ಕೈ ಸೇರುತ್ತಿತ್ತು. ಹೊಯ್ಸಳರು ವ್ಯಾಪಾರ ವಾಣಿಜ್ಯಕ್ಕೆ ಅಪಾರ ಪ್ರೋತ್ಸಾಹ ನೀಡಿದ್ದು ಹಳೇಬೀಡು ಪ್ರದೇಶವು ವ್ಯಾಪಾರ ವಾಣಿಜ್ಯದ ಕೇಂದ್ರವಾಗಿ ಗುರುತಿಸಿಕೊಂಡಿದೆ. ಭೂಮಿಯ ಪರಭಾರೆಯು ಮಾರಾಟ, ಅಡಮಾನ, ಉಡುಗೊರೆಯ ರೂಪವನ್ನು ಪಡೆಯುತ್ತಿದ್ದರು.

ಹೊಯ್ಸಳ ಸಾಮ್ರಾಜ್ಯದಲ್ಲಿ ಒಂದು ಹಳ್ಳಿಯ ಕೃಷಿಕರು ಅಥವಾ ಭೂಮಾಲೀಕರು ಕೊಡಬೇಕಾದ ತೆರಿಗೆಗಳ ಪಟ್ಟಿಯಲ್ಲಿ ತುಳ, ಉಳುವರಿ, ತೆರುತುಳ ಎಂಬ ಪದಗಳ ಭೂತೆರಿಗೆಯನ್ನು ಸೂಚಿಸುವಂತೆ ತೋರುತ್ತದೆ. ಈ ಮೂಲಕವಾಗಿ ಹೊಯ್ಸಳರ ಕಾಲದಲ್ಲಿ ವಿವಿಧ ರೀತಿಯ ತೆರಿಗೆಗಳಿದ್ದು, ಇದರಿಂದ ರಾಜ್ಯಕ್ಕೆ ಹೆಚ್ಚಿನ ಆದಾಯ ಬರುತ್ತಿತ್ತು. ಕೃಷಿ ಅಭಿವೃದ್ಧಿಯಲ್ಲಿ ವಾಣಿಜ್ಯ ಕೃಷಿಯಲ್ಲಿ ಉತ್ಪಾದನೆ ಪೂರ್ತಿಯಾಗಿ ಮಾರುಕಟ್ಟೆಗೆ ಬರುತ್ತಿತ್ತು. ರೈತನು ತನ್ನ ಉಪಯೋಗಕ್ಕೆ ಮಾರುಕಟ್ಟೆಯಿಂದ ಕೊಳ್ಳುತ್ತಿದ್ದನು.

ಹೊಯ್ಸಳರ ಕಾಲದಲ್ಲಿ ಕೃಷಿ ಭೂಮಿಯನ್ನು ಕುರಿತಂತೆ ಗದ್ದೆ, ಬೆದ್ದಲು, ಮತ್ತು ತೋಟಗಳೆಂದು ವಿಭಾಗಿಸಿದ್ದರು. ಅಕ್ಕಿಯು ಆರಂಭದಿಂದಲೂ ಗದ್ದೆಯ ಬೆಳೆಯಾಗಿದ್ದು ಇವರ ಕಾಲದಲ್ಲಿ ಮುಂದುವರಿದಿದೆ. ದೋರಸಮುದ್ರದ ಶಾಸನಗಳು ಸ್ಪಷ್ಟವಾದ ಉಲ್ಲೇಖಗಳನ್ನು ನೀಡಿದ್ದು ನವಣಿ, ಕುಸುಬೆ, ರಾಗಿ, ಉದ್ದಿನ ಬೆಳೆಗಳನ್ನು ಬೆಳೆಯುತ್ತಿದ್ದರ ಬಗ್ಗೆ ತಿಳಿಸುತ್ತವೆ.

ಹೊಯ್ಸಳರ ಕಾಲದಲ್ಲಿ ಸಂತೆ ಮತ್ತು ಮಾರುಕಟ್ಟೆಗಳ ಮೂಲಕ ವ್ಯಾಪಾರ-ವಾಣಿಜ್ಯ ನಡೆಯುತ್ತಿದ್ದು, ಇವರ ಕಾಲದಲ್ಲಿ ಕೃಷಿವ್ಯವಸ್ಥೆಯಲ್ಲಿ ಸಾಕಷ್ಟು ಪ್ರಮಾಣದ ಹೆಚ್ಚುವರಿ ಉತ್ಪಾದನೆಯಾಗುತ್ತಿತ್ತು. ಕಾರಣ ಹೆಚ್ಚುವರಿಗೆ ತಕ್ಕಂತಹ ಪರಿಸ್ಥಿತಿಯನ್ನು ಇವರು ನಿರ್ಮಿಸುತ್ತಿದ್ದರು. ಅರಸುಮನೆತನಗಳು ಆರಂಭದಿಂದಲೂ ಕೃಷಿಗೆ ಬೆಂಬಲ ಸೂಚಿಸಿದಂತೆ ಇವರು ಹೊಸದಾಗಿ ಭೂಮಿಯನ್ನು ಕೃಷಿಗೊಳಪಡಿಸುವ ಅವರ ನೀತಿಯ ಫಲವಾಗಿ ಕೃಷಿ ಉತ್ಪಾದನೆ ಹೆಚ್ಚಾಯಿತು. ಈ ರೀತಿ ಕೃಷಿ ಉತ್ಪಾದನೆ ಹೆಚ್ಚಿದ್ದರಿಂದ ಗ್ರಾಮೀಣ ಪ್ರದೇಶಗಳು ನಗರಕೇಂದ್ರಗಳಾಗಿ ನಗರೀಕರಣ ಪ್ರಕ್ರಿಯೆಗೆ ಒಳಪಟ್ಟವು.ಹೊಯ್ಸಳರಕಾಲದಲ್ಲಿ ಗ್ರಾಮದಲ್ಲಿ ಬಹುಬೇಗ ಗ್ರಾಮಗುಚ್ಚಗಖು ಪಟ್ಟಣ ಕೇಂದ್ರದೊಂದಿಗೆ ಸಂಬಂಧಪಟ್ಟಿದ್ದವು. ಪಟ್ಟಣ ಎಂಬುದು ಒಂದು ವಾಣಿಜ್ಯ ನಗರ ಕೇಂದ್ರವಾಗಿತ್ತು ಈ ಪಟ್ಟಣಗಳಲ್ಲಿ ಪಟ್ಟಣಶೆಟ್ಟಿ ವ್ಯವಹಾರ ಮಾಡುತ್ತಿದ್ದನು(ಷೇಕ್ ಅಲಿ:೨೦೧೮:೨೨೯).

ರಾಜಮನೆತನಗಳು ಯಾವ ಪ್ರದೇಶವನ್ನು ತಮ್ಮ ರಾಜಧಾನಿ ಕೇಂದ್ರವಾಗಿ ಮಾಡಿಕೊಂಡಿರುತ್ತಿದ್ದವೊ ಅವು ಧಾರ್ಮಿಕ, ಆಡಳಿತ, ರಾಜಕೀಯ, ಆರ್ಥಿಕ ಕೇಂದ್ರಗಳಾಗಿಯೂ ಮುಂದುವರಿದಿರುತ್ತಿದ್ದವು. ಹಳೇಬೀಡು, ದೋರಸಮುದ್ರವು ಈ ಕಾಲದ ಒಂದು ಪ್ರಮುಖ ವ್ಯಾಪಾರಿ ಕೇಂದ್ರವಾಗಿರುವುದನ್ನು ಗಮನಿಸಬಹುದಾಗಿದೆ. ಇವರ ಕಾಲದಲ್ಲಿ ಕರಾವಳಿ ಪ್ರದೇಶದ ಮೂಲಕ ವಿದೇಶಿ ವರ್ತಕರೊಂದಿಗೆ ಸಂಬಂಧಪಟ್ಟಿದ್ದವು. ಒಂದು ನಗರಕೇಂದ್ರದ ಅಭ್ಯುದಯವು

ಸುತ್ತಮುತ್ತಣ ಗ್ರಾಮಗಳನ್ನು ಒಂದು ಸ್ಥಳೀಯ ವಿನಿಮಯ ಸಮುದಾಯವಾಗಿ ಮಾರುಕಟ್ಟೆ ಅಥವಾ ಪಟ್ಟಣದ ಉದಯಕ್ಕಾಗಿ ಪರಸ್ಪರ ಒಂದುಗೂಡಿಸುವ ಸಾಮರ್ಥ್ಯವನ್ನು ಅವಲಂಬಿಸಿದ್ದಿತು. ಈ ಮೂಲಕ ತಿಳಿಯುವ ಅಂಶವೆಂದರೆ ವ್ಯಾಪಾರ ವಿದೇಶಿ ಸ್ವರೂಪದಲ್ಲಿ ಹೆಚ್ಚು ಗುರುತಿಸಿಕೊಳ್ಳುವ ಕಾಲಘಟ್ಟವೆಂದು ಗುರುತಿಸಬಹುದು.

ಹೊಯ್ಸಳರ ಕಾಲದಲ್ಲಿ ವರ್ತಕ ಸಂಘಗಳಿದ್ದವು. ಒಬ್ಬ ಪಟ್ಟಣ ಸ್ವಾಮಿಯಿದ್ದನು. ಹೊಯ್ಸಳ ಶಾಸನಗಳು ವರ್ತಕರನ್ನು ಪಟ್ಟಣ ಸ್ವಾಮಿಗಳೆಂದು ಕರೆದಿದ್ದು, ಇವರು ರಾಜ್ಯದ ಅಭ್ಯುದಯಕ್ಕೆ ಆಧಾರವಾಗಿರುವವರು ಎಂದು ತಿಳಿಯಬಹುದು. ಇವರ ಕಾಲದಲ್ಲಿ ಮಲೆಯಾಳಿ ವರ್ತಕ ಸಮುದಾಯವು ವ್ಯಾಪಾರದಲ್ಲಿ ಗುರುತಿಸಿಕೊಂಡಿದ್ದು ವಿದೇಶೀಯ ವ್ಯಾಪಾರದಲ್ಲಿ ತನ್ನದೇ ಸಂಘ ಕಟ್ಟಿ ವ್ಯಾಪಾರ ನಡೆಸುತ್ತಿದ್ದರು. ಒಂದು ಪಟ್ಟಣದ ವರ್ತಕ ಸಂಘಗಳು ಒಂದು ನಗರಕೇಂದ್ರದ ಹಲವು ಸಂಘಗಳಲ್ಲಿ ಒಂದಾಗಿ ಕೆಲಸ ಮಾಡುತ್ತಿದ್ದವು. ಪಟ್ಟಣವು ವಸ್ತುಗಳ ವಿತರಣೆಯ ಸ್ಥಳವಾಗಿ ಕೆಲಸ ನಿರ್ವಹಿಸುತ್ತಿದಿತು(ಇತಿಹಾಸ ದರ್ಶನಸಂ.೧೦: ೧೮೦).

ಇವರ ಕಾಲದಲ್ಲಿ ವ್ಯಾಪಾರವನ್ನು ತಮ್ಮ ವೃತ್ತಿಯನ್ನಾಗಿ ಮಾಡಿಕೊಂಡಿದ್ದ ವರ್ತಕರ ವಿವಿಧ ಪ್ರಕಾರಗಳಿದ್ದು, ಅವರನ್ನು ಶೆಟ್ರು, ಬಣಜಿಗರು, ಸೆಟ್ಟಿ, ಸಿಕರ, ನಾನಾದೇಶಿ, ಉಭಯ ನಾನಾದೇಶಿ ಎನ್ನುವಂತಹ ಹೆಸರುಗಳಿಂದ ಕರೆಯುತ್ತಿದ್ದರು. ಇವರನ್ನು ಧಾನ್ಯದ ವರ್ತಕರು, ಬಟ್ಟೆಯ ವ್ಯಾಪಾರಿಗಳು, ಆನೆ-ಕುದುರೆಗಳ ವ್ಯಾಪಾರಿಗಳು, ಆಭರಣ ವ್ಯಾಪಾರಿಗಳು, ಎಣ್ಣೆ ಮಾರುವವರು, ವೀಳ್ಯದೆಲೆ ಮಾರುವವರು, ಕಟ್ಟಿಗೆ ವ್ಯಾಪಾರಿಗಳು, ತಿರುಗು ವ್ಯಾಪಾರಿಗಳು ಈ ರೀತಿಯ ವಿವಿಧ ರೀತಿಯ ವ್ಯಾಪಾರ ಮಾಡುವಂತಹ ವರ್ತಕರನ್ನು ಈ ಕಾಲದಲ್ಲಿ ನೋಡುತ್ತೇವೆ. ಈ ವರ್ತಕರ ಮೂಲಕವಾಗಿ ಬೆಳೆದ ಹಳ್ಳಿಗಳು ನಗರಕೇಂದ್ರಗಳ ಹುಟ್ಟಿಗೂ ಕಾರಣವಾಯಿತು.

ಕ್ರಿ.ಶ. ೧೨೫೧ರ ವೀರಸೋಮೇಶ್ವರನ ಆಳ್ವಿಕೆಗೆ ಸಂಬಂಧಿಸಿದ ಮಂಡ್ಯದ ಒಂದು ಶಾಸನ ಹಳ್ಳಿಯು ಪಟ್ಟಣವಾಗಿ ರೂಪಾಂತರಗೊಂಡ ಸ್ವಾರಸ್ಯವಾದ ಮಾಹಿತಿಯನ್ನು ಒದಗಿಸುತ್ತದೆ. ಹಾಗೆಯೇ ಪಟ್ಟಣವಾಗಿ ಪರಿವರ್ತಿಸಬೇಕಾಗಿದ್ದ ಹಳ್ಳಿಯ ಹೆಸರು ಯಮ್ಮದುರಹಳ್ಳಿ. ಈ ಹಳ್ಳಿಯನ್ನೇ ಪಟ್ಟಣವಾಗಿ ಪರಿವರ್ತಿಸುವ ಉಲ್ಲೇಖ ಅಲ್ಲಿನ ಶಾಸನಗಳಿಂದ ತಿಳಿದುಬರುತ್ತದೆ. ಹೀಗೆ ಹಳ್ಳಿಗಳು ನಗರಗಳಾಗಿ ರಾಜಧಾನಿ ಪಟ್ಟಣಗಳಾಗಿ ಬೆಳೆದವು. ನಂತರದ ಕಾಲದ ವೇಳೆಗೆ ಆ ನಗರಗಳು ಕ್ಷೀಣಿಸಿ ಹೊಸದೊಂದು ನಗರಗಳ ಹುಟ್ಟಿಗೂ ಇವು ಸಹಾಯಕವಾಗುತ್ತಿದ್ದವು. ಹಳೆಯ ನಗರಗಳು ಹೊಸ ನಗರಗಳ ಉಗಮಕ್ಕೆ ಎಡೆ ಮಾಡಿಕೊಡುತ್ತಿದ್ದವು. ಹೀಗೆ ಹೊಸದಾಗಿ ನಿರ್ಮಿತವಾದ ನಗರಗಳಿಗೆ ಅಥವಾ ನಿರ್ಮಿಸಿದವರಿಗೆ ಹಲವು ರೀತಿಯ ವಿನಾಯಿತಿಗಳನ್ನು ನೀಡಲಾಗುತ್ತಿತ್ತು.

ಹೊಯ್ಸಳರು ನಿಷ್ಕಾ, ಗದ್ಯಾಣ, ವರಾಹ, ಹೊನ್, ರಾತ, ಪಣ, ಹಾಗ, ವೀಸ, ಬೇಳೆ, ಕಾಣಿ ಮತ್ತು ಅಡ್ಡ ಈ ರೀತಿಯ ನಾಣ್ಯಗಳು ಇವರ ಕಾಲದಲ್ಲಿ ಅಸ್ತಿತ್ವದಲ್ಲಿದ್ದವು(ನರಸಿಂಹಮೂರ್ತಿ.೨೦೦೮ ೯೫). ಇವುಗಳ ಮೂಲಕ ಇವರು ವ್ಯಾಪಾರ ವಿನಿಮಯ ಮಾಡುತ್ತಿದ್ದರು. ಇವರ ಕಾಲದ ಶಾಸನಗಳಲ್ಲಿ ನಾಣ್ಯಗಳ ಉಲ್ಲೇಖವು ಹೆಚ್ಚಿನದಾಗಿ ದೊರೆತಿದ್ದು, ಇವರ ಕಾಲದಲ್ಲಿ ಮಹಿಳೆಗೆ

ಸಂಬಂಧಿಸಿದ ಶಾಸನವೊಂದು ದೊರೆತಿದ್ದು ವಿಷ್ಣುವರ್ಧನನ ರಾಣಿ ಶಾಂತಲಾದೇವಿಗೆ ಸಂಬಂಧಿಸಿದ ನಾಣ್ಯವು ದೊರೆತಿದೆ. ೫೪ ಗ್ರೀಕ್ ತೂಕವನ್ನು ಹೊಂದಿದೆ. ಈ ನಾಣ್ಯದ ಮೇಲೆ ಶ್ರೀರಾಮ, ಸೀತೆ ಮತ್ತು ಹನುಮಂತ ದೇವರ ಉಲ್ಲೇಖಗಳಿರುವುದನ್ನು ನೋಡಬಹುದು.

ಇವರ ಕಾಲದಲ್ಲಿ ವಾಣಿಜ್ಯ ಮತ್ತು ಸಾಂಸ್ಕೃತಿಕ ಅಂಶಗಳ ಜೊತೆಗೆ ಹೊಯ್ಸಳ ರಾಜ್ಯತಂತ್ರಗಳು ಕೂಡ ನಗರಕೇಂದ್ರಗಳ ಬೆಳವಣಿಗೆಗೆ ಪ್ರೋತ್ಸಾಹಕ ಅಂಶಗಳಾದವು. ರಾಜ್ಯತಂತ್ರದ ಅಗತ್ಯಗಳು ಮೂರು. ೧. ಆಡಳಿತ ೨. ಸೈನಿಕ ೩. ಆರ್ಥಿಕ. ರಾಜರು ವಾಸಮಾಡುತ್ತಿದ್ದ ಸ್ಥಳಗಳು ವಿಶೇಷವಾಗಿ ರಾಜಧಾನಿಗಳು ನಗರಗಳೇ ಆಗಿದ್ದವು. ಈ ಮೂಲಕವಾಗಿ ನಗರಕೇಂದ್ರಗಳಾಗಿ ಉಗಮವಾಗಿದ್ದನ್ನು ಗಮನಿಸಬಹುದಾಗಿದೆ.

ಹೊಯ್ಸಳರ ಕಾಲದಲ್ಲಿ ಹಲವು ರೀತಿಯ ಕೈಗಾರಿಕೆಗಳನ್ನು ನಡೆಸುತ್ತಿದ್ದರು. ಬಟ್ಟೆ ನೇಯುವುದು ಕುರಿತಂತೆ ತೊರೆಮಗ್ಗ ಮತ್ತು ಮಗ್ಗಗಳ ಉಲ್ಲೇಖಗಳು ದೊರೆಯುತ್ತವೆ. ಎಣ್ಣೆಯ ಬೀಜಗಳನ್ನು ಗಾಣಕ್ಕೆ ಹಾಕಿ ಎಣ್ಣೆಯನ್ನು ತೆಗೆಯುತ್ತಿದ್ದರು. ಕೈಗಾರಿಕೆಗಳ ಜೊತೆ ಬೆಲ್ಲ ಮತ್ತು ಕಬ್ಬುಗಳ ಬೆಳೆಯನ್ನು ಈ ಕಾಲಘಟ್ಟದಲ್ಲಿ ಗುರುತಿಸಬಹುದಾಗಿದೆ. ಈ ಕಾಲಘಟ್ಟದಲ್ಲಿ ಅಳತೆಯ ಮಾಪನಗಳ ಬಳಕೆಯಾಗಿರುವುದನ್ನು ಗಮನಿಸಬಹುದಾಗಿದೆ. ಗೇಣಿಘಳೆ, ಮೂವತ್ತೆರಡು ಮೆಟ್ಟಿನ ಗೆಳೆ, ಮರೆಯಾದೆ ಅಳತೆಯ ಘಳೆ ಎಂದು ಉಲ್ಲೇಖಿಸಿದ್ದಾರೆ. ಈ ಮರಿಯಾದೆ ಅಳತೆಯ ಘಳೆ ಎಂಬ ಮಾಪನವು ಯಾವ ನಿರ್ದಿಷ್ಟ ಉದ್ದೇಶಕ್ಕೆ ಇದನ್ನು ಬಳಸಲಾಗುತ್ತದೆ ಎಂದು ತಿಳಿಯದು. ಆದರೆ ವ್ಯಕ್ತಿಯ ನಡೆಯನ್ನು ನಿರ್ಧರಿಸಲು ಈ ರೀತಿಯ ಮಾಪನವನ್ನು ಬಳಸುತ್ತಿರಬಹುದೆಂದು ಊಹಿಸಬಹುದಾಗಿದೆ.

ಈ ರೀತಿಯಾಗಿ ಹೊಯ್ಸಳರ ಕಾಲಾವಧಿಯಲ್ಲಿ ಕೃಷಿ ಆರ್ಥಿಕತೆಯಲ್ಲಿ ಅಪಾರ ಪ್ರಗತಿ ಹೊಂದಿತ್ತು. ಹೀಗೆ ವಿವಿಧ ಅರಸರ ಕಾಲದಲ್ಲಿ ಏರು ಪೇರುಗಳನ್ನು ನೋಡಬಹುದು. ಹೊಯ್ಸಳ ಸಾಮ್ರಾಜ್ಯವು ಕಲೆ ಮತ್ತು ವಾಸ್ತುಶಿಲ್ಪ ಸಂಪತ್ತಿನಲ್ಲಿ ಮಾತ್ರ ಪ್ರಾಮುಖ್ಯತೆಯನ್ನು ಪಡೆದುಕೊಳ್ಳದೆ, ಆರ್ಥಿಕತೆಯಲ್ಲಿಯೂ ತನ್ನ ಅಸ್ಮಿತೆಯನ್ನು ಈ ಸಾಮ್ರಾಜ್ಯ ಉಳಿಸಿಕೊಂಡಿತು.

**೩.೨. ವಿಜಯನಗರಕಾಲೀನ ಆರ್ಥಿಕತೆ ಮತ್ತು ವಾಣಿಜ್ಯ**

ದಕ್ಷಿಣ ಭಾರತದ ಚರಿತ್ರೆಯಲ್ಲಿ ವಿಜಯನಗರ ಸಾಮ್ರಾಜ್ಯದ ಚರಿತ್ರೆಯು ಅವಿಸ್ಮರಣಿಯವಾದದ್ದು. ಮುಸ್ಲಿಮರ ಆಳ್ವಿಕೆಯ ವಿರುದ್ಧ ಹಿಂದೂಧರ್ಮದ ರಕ್ಷಣೆಗಾಗಿ ಆರಂಭವಾದ ಈ ಸಾಮ್ರಾಜ್ಯವು ಒಂದು ಚಿರಸ್ಮರಣೀಯವಾದ ಕಾಲವಾಗಿದೆ. ಯಾವುದೇ ಸಾಮ್ರಾಜ್ಯದ ಅರ್ಥವ್ಯವಸ್ಥೆಯಲ್ಲಿ ಕೃಷಿಯ ಪಾತ್ರ ಮುಖ್ಯವಾದದ್ದು. ಕೃಷಿಯು ಅಭಿವೃದ್ಧಿಯಾದಂತೆ ಕೃಷಿಯೇತರ ಇತರೇ ಕಸುಬುಗಳು ಹೆಚ್ಚಾಗುತ್ತವೆ. ಕೃಷಿಯನ್ನು ಅಲ್ಲಿನ ಸಾಮ್ರಾಜ್ಯದ ರಾಜರು ಅಭಿವೃದ್ಧಿಪಡಿಸಿ ಕೃಷಿಯೋಗ್ಯವಲ್ಲದ ಭೂಮಿಯನ್ನು ಕೃಷಿಯೋಗ್ಯ ಭೂಮಿಯನ್ನಾಗಿ ಪರಿವರ್ತಿಸುವ ಮೂಲಕ ಕೃಷಿ ಚಟುವಟಿಕೆಗಳನ್ನು ಮಾಡುತ್ತಿದ್ದರು.

ವಿಶ್ವವು ಅವಲಂಬಿಸಿರುವುದು ಪ್ರಮುಖವಾಗಿ ಕೃಷಿಯನ್ನಾಗಿದ್ದು, ಕೃಷಿಯು ಭಾರತದ ಆರ್ಥಿಕತೆಯ ಮೂಲವಾಗಿದೆ. ಕೃಷಿಯು ಸಮಾಜ, ಸಾಮ್ರಾಜ್ಯದ ಬೆನ್ನೆಲುಬಿನಂತಲ್ಲದೆ ಇದು ಆ ಸಮಾಜದ

ಅಭಿವೃದ್ಧಿಯನ್ನು ಅವಲಂಬಿಸಿರುತ್ತದೆ. ಜನರು ಕೈಗೊಳ್ಳುವ ಅನೇಕ ವೃತ್ತಿಗಳಲ್ಲಿ ಕೃಷಿಯೇ ಪ್ರಮುಖವಾಗಿದ್ದು, ಕೃಷಿಯ ಮೂಲಕ ಕೈಗಾರಿಕೆಗಳು ಅಭಿವೃದ್ಧಿ ಹೊಂದಲಾರಂಭಿಸಿದವು. ಈ ಕೃಷಿಯ ಪ್ರಗತಿಯಿಂದ ಕೈಗಾರಿಕೆಗಳು ಹೆಚ್ಚಿನ ಸಂಖ್ಯೆಯಲ್ಲಿ ಬೆಳೆದು ಆ ದೇಶ, ಸಾಮ್ರಾಜ್ಯವು ಆರ್ಥಿಕ ಸ್ಥಿತಿಯನ್ನು ಸುಧಾರಿಸಿಕೊಳ್ಳಲು ಸಹಾಯಕವಾಗುತ್ತದೆ. ವಿಜಯ ನಗರದ ಆರ್ಥಿಕತೆಯು ಚೋಳರ ಕಾಲದ ರೀತಿಯಲ್ಲಿಯೇ ಮುಂದುವರಿದಿದ್ದು ಕಮ್ಮಾರ ಮತ್ತು ಬಡಗಿಯು ಈ ಕಾಲಾವಧಿಯಲ್ಲಿ ಪ್ರಮುಖ ಸ್ಥಾನವನ್ನು ಪಡೆಯುತ್ತಾರೆ(ಜೀತೇಂದ್ರಕುಮಾರ್:೨೦೧೨:೧೩೨). ವಿಜಯನಗರದ ಅರಸರು ಕೃಷಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿದ್ದರು. ವಿಜಯನಗರ ಕಾಲದಲ್ಲಿ ಕೃಷಿಯನ್ನು ಅಭಿವೃದ್ಧಿಪಡಿಸುವುದಕ್ಕೆ ಕಾಡುಗಳನ್ನು ಕಡಿದು ಕೃಷಿ ಭೂಮಿಯನ್ನು ವಿಸ್ತಾರಗೊಳಿಸಿರುವುದನ್ನು ನೋಡಬಹುದು. ಈ ರೀತಿ ವಿಜಯನಗರದ ಅರಸರು ಕೃಷಿಗೆ ಪ್ರಾಮುಖ್ಯತೆ ನೀಡಿರುವುದಕ್ಕೆ ಕಾರಣವೆಂದರೆ, ರಾಜ್ಯಕ್ಕೆ ಕೃಷಿಯ ಮೂಲಕ ಹೆಚ್ಚಿನ ಆದಾಯ ಬರುತ್ತಿತ್ತು. ಕೃಷಿ ಭೂಮಿಯನ್ನು ಅಭಿವೃದ್ಧಿಪಡಿಸಿ ನೀರಾವರಿಗೆ ಅವಕಾಶ ನೀಡಬೇಕೆಂದು ಶ್ರೀಕೃಷ್ಣದೇವರಾಯನೇ ಆಮುಕ್ತಮೌಲ್ಯದದಲ್ಲಿ ಹೇಳಿದ್ದಾನೆ. ಈ ಕಾಲದಲ್ಲಿ ನೀರಾವರಿ ವ್ಯವಸಾಯಕ್ಕೆ ಕೆರೆ, ಕಾಲುವೆಗಳ ಸೌಲಭ್ಯವನ್ನು ಒದಗಿಸಬೇಕು. ಜಮೀನಿಗೆ ಅನುಕೂಲಕರವಾದ ಕಂದಾಯದ ದರದ ಮೇಲೆ ಆ ಭೂಮಿಯನ್ನು ಬಡ ರೈತರಿಗೆ ವ್ಯವಸಾಯಕ್ಕೆ ಕೊಡಬೇಕೆಂದು, ಇದರಿಂದ ರಾಜ್ಯದ ಬೊಕ್ಕಸಕ್ಕೆ ಹೆಚ್ಚಿನ ಲಾಭವುಂಟಾಗುತ್ತದೆಂದು ಕೃಷ್ಣದೇವರಾಯನೇ ಆಮುಕ್ತಮೌಲ್ಯದ ಕೃತಿಯಲ್ಲಿ ಹೇಳಿದ್ದಾನೆ. ಪಶ್ಚಿಮ ಕರಾವಳಿ ಫಲವತ್ತಾದ ಅನೇಕ ವ್ಯವಸಾಯ ಕ್ಷೇತ್ರಗಳಿಂದ ಕೂಡಿತ್ತು. ಅಲ್ಲಿ ಬೆಳೆದ ಅಕ್ಕಿಯನ್ನು ಮಲಬಾರ್ ಮತ್ತು ಅರ್ಮುಜ್‌ಗೆ ರಫ್ತು ಮಾಡಲಾಗುತ್ತಿತ್ತು(ಶ್ರೀನಿವಾಸ,೨೦೦೮:೯೫).

ವಿಜಯನಗರದ ಅರಸರು ಆರಂಭದಿಂದಲೂ ಕೃಷಿಯನ್ನು ಅಭಿವೃದ್ಧಿಪಡಿಸಿದ್ದರು. ಅವರ ಸಾಮ್ರಾಜ್ಯದ ಕೃಷಿಯು ಅಭಿವೃದ್ಧಿ ಹೊಂದಿತ್ತು ಎಂದು ತಿಳಿಯಲು ವಿಜಯನಗರ ಸಾಮ್ರಾಜ್ಯಕ್ಕೆ ಭೇಟಿ ಕೊಟ್ಟ ಅನೇಕ ವಿದೇಶಿ ಪ್ರವಾಸಿಗರ ಬರವಣಿಗೆಗಳಿಂದ ಅಂದಿನ ಸಮಾಜವು ಕೃಷಿಯಲ್ಲಿ ಪ್ರಾಮುಖ್ಯತೆಯನ್ನು ಹೊಂದಿತ್ತೆಂದು ತಿಳಿಯುತ್ತದೆ. ಕೃಷಿ ನಡೆಯುತ್ತಿದ್ದ ಭೂಮಿಯು ಇಂದು ಇರುವಷ್ಟು ಪ್ರಮಾಣದಲ್ಲಿ ಅಂದು ಇರಲಿಲ್ಲವೆಂದು ಟಿ.ವಿ. ಮಹಾಲಿಂಗಂ ಅವರು ಅಭಿಪ್ರಾಯ ಪಡುತ್ತಾರೆ(ಮಹಾಲಿಂಗಂ:೧೯೫೧: ೪೩). ವಿದೇಶಿ ಪ್ರವಾಸಿಗರಾದ ಅಬ್ದುಲ್ ರಜಾಕ್ ಅವರು ವಿಜಯನಗರದ ಬಹುಪಾಲು ಭೂಮಿಯು ಉತ್ತು ಹಸನಾಗಿ ಫಲವತ್ತಾದ ಭೂಮಿಯಾಗಿತ್ತೆಂದು ದಾಖಲಿಸುತ್ತಾರೆ(ವಿವೇಕ್ ರೈ:೨೦೧೪:೮೦). ಹೀಗೆ ವಿಜಯನಗರ ಅರಸರ ಆಳ್ವಿಕೆಯ ಕಾಲಾವಧಿಯಲ್ಲಿ ಕೃಷಿ ಭೂಮಿಯು ಪ್ರಗತಿ ಹೊಂದಿ ಅಭಿವೃದ್ಧಿಯಾಗಿತ್ತು ಎಂದು ಹೇಳುತ್ತಾರೆ. ೧೬ನೇ ಶತಮಾನದಲ್ಲಿ ವಿಜಯನಗರ ಸಾಮ್ರಾಜ್ಯಕ್ಕೆ ಭೇಟಿ ಕೊಟ್ಟ ಬಾರ್ಬೋಸಾ ನರಸಿಂಗನ ರಾಜ್ಯವು ತುಂಬಾ ಶ್ರೀಮಂತವಾಗಿತ್ತು. ಆಹಾರ ವಸ್ತುಗಳು ಧಾರಾಳವಾಗಿ ಪೂರೈಕೆಯಾಗುತ್ತಿದ್ದವು. ಇಡೀ ದೇಶವು ಫಲವತ್ತಾಗಿ ಕೃಷಿಗೆ ಒಳಪಟ್ಟಿತ್ತೆಂದು ಹೇಳುತ್ತಾರೆ(ನಾಗೇಗೌಡ,೨೦೦೭:೧೧೦).

ವಿಜಯನಗರ ಕಾಲವು ವ್ಯಾಪಾರ ವಾಣಿಜ್ಯದಲ್ಲಿ ಪ್ರಮುಖವಾದ ಕಾಲವಾಗಿದೆ. ಅರಬರು ಇಲ್ಲಿ ವಿಜಯನಗರಕ್ಕೆ ಆನೆ ಕುದುರೆಗಳನ್ನು ರವಾನಿಸುತ್ತಾ ಇಲ್ಲಿನ ಮುತ್ತು ರತ್ನ ಮತ್ತು ವಜ್ರಗಳನ್ನು

ವಿದೇಶಕ್ಕೆ ಕೊಂಡೊಯ್ಯುತ್ತಿದ್ದರು. ವಿಜಯನಗರ ದೇಶಿ ಮತ್ತು ವಿದೇಶಿ ವ್ಯಾಪಾರದಲ್ಲಿ ಪ್ರಮುಖವಾಗಿದ್ದು ಕಲ್ಲಿಕೋಟೆ ಅಂದಿನ ಪ್ರಮುಖ ಬಂದರು ಆಗಿತ್ತು ಹಿಂದೂ ಮಹಾಸಾಗರದೊಂದಿಗೆ ವ್ಯಾಪಾರ ಸಂಬಂಧವನ್ನು ಹೊಂದಿದ್ದರು. ವಿಜಯನಗರ ಕಾಲದಲ್ಲಿ ಪೋರ್ಚುಗೀಸರೊಂದಿಗೆ ಉತ್ತಮ ಸಂಬಂಧವನ್ನು ಹೊಂದಿದ್ದರು. ಕರಾವಳಿಯ ಭಟ್ಕಳ ಮತ್ತು ಹೊನ್ನಾವರದೊಂದಿಗೆ ರಾಜ್ಯದಿಂದ ವ್ಯಾಪಾರ ಸಂಪರ್ಕಕ್ಕೆ ನೇರ ಮಾರ್ಗವಿತ್ತು ಈ ಮೂಲಕ ಸ್ಥಳೀಯ ವರ್ತಕರು ವಿಜಯನಗರದೊಂದಿಗೆ ವ್ಯಾಪಾರ ನಡೆಸಿ ಈ ಮಾರ್ಗದ ಮೂಲಕ ವಿದೇಶಕ್ಕೆ ರಫ್ತು ಮಾಡುತ್ತಿದ್ದರು.

ವಿಜಯನಗರ ಸಾಮ್ರಾಜ್ಯದ ವೇಳೆಗೆ ಕೃಷಿವ್ಯವಸ್ಥೆಯು ಹೆಚ್ಚಾಗಿಯೇ ವಿಸ್ತರಣೆಯಾಗಿತ್ತು ಅದರಲ್ಲಿಯೂ ಪಶ್ಚಿಮ ಕರಾವಳಿಯು ಫಲವತ್ತಾದ ಅನೇಕ ವ್ಯವಸಾಯ ಕ್ಷೇತ್ರಗಳಿಂದ ಕೂಡಿತ್ತು. ಅಲ್ಲಿ ವಿಶೇಷವಾಗಿ ಅಕ್ಕಿಯನ್ನು ಮಲಬಾರ್ ಮತ್ತು ಅರ್ಮುಜ್‌ಗೆ ರಫ್ತು ಮಾಡಲಾಗುತ್ತಿತ್ತು. ಗೋವಾದ ಬಳಿಯ ವ್ಯವಸಾಯದ ಕ್ಷೇತ್ರಗಳಲ್ಲಿ ಗೋದಿ, ದ್ವಿದಳ ದಾನ್ಯಗಳು, ಎಣ್ಣೆಯ ಬೀಜಗಳು ಮತ್ತು ಹತ್ತಿ ಇವುಗಳನ್ನು ಬೆಳೆಯಲಾಗುತ್ತಿತ್ತು ಎಂದು ವಿಶ್ಲೇಷಿಸಲಾಗಿದೆ(ಕರ್ನಾಟಕ ಪರಂಪರೆ ಸಂ.೨: ೧೦೭).

ಕುಶಲ ಕೈಗಾರಿಕೆಗಳು ವಿಜಯನಗರ ಕಾಲದಲ್ಲಿ ಪ್ರಗತಿ ಸಾಧಿಸಿದ್ದು ವಿಜಯನಗರ ಕಾಲದಲ್ಲಿ ವೃತ್ತಿ ಆಧಾರಿತ ಜಾತಿಗಳು ಇಲ್ಲಿ ಹೆಚ್ಚು ಗುರುತಿಸಿಕೊಳ್ಳಲಾರಂಭಿಸಿದವು

ವಿಜಯನಗರ ಕಾಲದ ವ್ಯಾಪಾರಿ ಕೇಂದ್ರವಾದ ಬಂಕಾಪುರ ಮತ್ತು ಸುತ್ತಮುತ್ತಲಿನ ಪ್ರದೇಶವು ವಿಜಯನಗರ ಕಾಲದಲ್ಲಿ ಬೀಜೋತ್ಪಾದನ ಹಾಗೂ ಪಶುಸಂಗೋಪನ ಕ್ಷೇತ್ರಗಳಿಂದ ಸಮೃದ್ಧವಾಗಿತ್ತೆಂದು ನ್ಯೂನಿಜ್ ಹೇಳುತ್ತಾನೆ(ನಾಗೇಗೌಡ:೨೦೦೭:೧೦). ವಿಜಯನಗರ ಅರಸರು ಕಾಲ ಕಾಲಕ್ಕೆ ಬದಲಾಗುವ ಋತು ಆಧಾರಿತ ವ್ಯವಸಾಯದ ವಿಭಜನೆಯನ್ನು ಉತ್ತಮ ರೀತಿಯಲ್ಲಿಯೇ ಅನುಸರಿಸಿಕೊಂಡಿದ್ದರು. ಕೃಷಿ ಉತ್ಪಾದನೆಯನ್ನು ಎರಡು ಕಾಲಘಟ್ಟದಲ್ಲಿ ಬೆಳೆಯುತ್ತಿದ್ದರು. ಜೂನ್‌ನಿಂದ ಅಕ್ಟೋಬರ್‌ವರೆಗೆ ನೈರುತ್ಯ ಮುಂಗಾರು ಮಳೆಗೆ ಹೊಂದಿಕೊಳ್ಳುವ ಅವಧಿಯಾಗಿತ್ತು. ಹಾಗೆಯೇ ಜನವರಿ–ಫೆಬ್ರವರಿ ತಿಂಗಳುಗಳು ಚಳಿಗಾಲದ ಫಸಲು ಎಂದು ವಿಭಾಗಿಸಿಕೊಂಡು ವ್ಯವಸಾಯ ಮಾಡುತ್ತಿದ್ದರು(ಸೋಸಲೆ,೨೦೦೪:೧೧೬).

ವಿಜಯನಗರ ಅರಸರ ಆಳ್ವಿಕೆಯ ಕಾಲಾವಧಿಯಲ್ಲಿ ಸಂಪೂರ್ಣವಾಗಿ ಕೃಷಿಯನ್ನೇ ಅವಲಂಬಿಸಿದ್ದರು. ಸಂಗಮ ಅರಸರು ಕಾಡನ್ನು ಕಡಿದು ಕೃಷಿ ಮಾಡುವುದಕ್ಕೆ ಭೂಮಿಯ ಕಣಿವೆ, ಕೆಳಭಾಗದ ನದಿ, ಕಾಲುವೆ ಮೂಲಕ ನೀರು ಪಡೆಯುತ್ತಿದ್ದ ಭೂಮಿಯನ್ನು ಬಯಲುಭೂಮಿ ಎಂದೂ ಸಂಪೂರ್ಣ ಮಳೆಯನ್ನು ಅವಲಂಬಿಸಿ ಕೃಷಿಗೆ ಒಳಪಡುತ್ತಿದ್ದ ಭೂಮಿಯನ್ನು ಮಳೆಗಾಡು ಎಂದು ಕರೆಯುತ್ತಿದ್ದರು. ಒಟ್ಟಾರೆಯಾಗಿ ವಿಜಯನಗರ ಅರಸರ ಕೃಷಿ ಭೂಮಿಯನ್ನು ಮಳೆಯಾಶ್ರಿತ, ಕೆರೆ ಬಾವಿ, ನೀರಾವರಿ ಆಶ್ರಿತವಾಗಿ ಅಳವಡಿಸಿಕೊಂಡು ಕೃಷಿಯಲ್ಲಿ ನಿರತರಾಗಿದ್ದಾರೆಂದು ಹೇಳಬಹುದಾಗಿದೆ. ವಿಜಯನಗರದ ಅರಸರು ಹೆಚ್ಚು ಕೆರೆಗಳನ್ನು ನಿರ್ಮಿಸುವ ಮೂಲಕ ಕೆರೆ ನೀರಾವರಿಗೆ ಹೆಚ್ಚು ಪ್ರೋತ್ಸಾಹವನ್ನು ನೀಡಿದ್ದರು. ಇದರಿಂದ ಕಾಡು ಕಡಿದು ಕೃಷಿ ಭೂಮಿಯನ್ನು ಹೆಚ್ಚಿಸುವುದಕ್ಕೆ ಸರ್ಕಾರವೇ ಹೆಚ್ಚು ಪ್ರೋತ್ಸಾಹ ನೀಡಿತ್ತು.

ವಿಜಯನಗರದ ಸಂಗಮ ಅರಸರಾದ ಹರಿಹರನು ಅವನ ಕಾಲದಲ್ಲಿ ಕಾಡು ಕಡಿದು ಸ್ವಚ್ಛಮಾಡಿ(ಕಲಬುರ್ಗಿ,೧೯೯೪:೯೯), ಬೆಂಕಿಯಿಂದ ಸುಟ್ಟು ಸ್ವಚ್ಛಗೊಳಿಸಿ ಕೃಷಿಯೋಗ್ಯ ಭೂಮಿಯನ್ನಾಗಿ ಮಾರ್ಪಡಿಸಿಕೊಳ್ಳಲು ಪ್ರೋತ್ಸಾಹ ನೀಡುತ್ತಿದ್ದನು. ವಿಜಯನಗರದ ಅರಸರ ಕಾಲಾವಧಿಯಲ್ಲಿ ಮಳೆ, ನಕ್ಷತ್ರ, ವಾರ, ತಿಥಿ, ಭವಿಷ್ಯ ನೋಡುವ ಪದ್ಧತಿ ಇತ್ತು. ಈ ವೇಳೆಯಲ್ಲಿ ಮಡಿಕೆ, ಕೂರಿಗೆ, ಕುಂಟೆಗಳನ್ನು ಪೂಜಿಸುವ ಪದ್ಧತಿ ಇತ್ತು. ಈ ಉಪಕರಣಗಳನ್ನು ಕಟ್ಟಿಗೆಯಿಂದ ಮಾಡಿರುತ್ತಿದ್ದರು. ಅಂದರೆ ಬಡಗಿಯೂ ಕೃಷಿಯ ಜೊತೆ ಹೊಂದಿದ ಸಂಬಂಧವನ್ನು ಇಲ್ಲಿ ತಿಳಿಯಬಹುದು(ಪೂಜಾರಹಳ್ಳಿ,೨೦೧೬೫:೧೬೪). ಕೃಷಿಗೆ ಉಪಯೋಗವಾಗುವಂತಹ ಉಪಕರಣಗಳನ್ನು ಕಟ್ಟಿಗೆಯಿಂದ ಮಾಡುತ್ತಿದ್ದರು. ಈ ಮೂಲಕ ಕಮ್ಮಾರ ವೃತ್ತಿ ಬೆಳವಣಿಗೆಯನ್ನು ಆರಂಭಿಸಿರುವುದು ಗಮನಾರ್ಹವಾಗಿದೆ. ವಿಜಯನಗರದ ಅರಸರು ಕೃಷಿಯಲ್ಲಿ ಪ್ರಗತಿಯನ್ನು ಸಾಧಿಸಿದ್ದರಿಂದ ಕೈಗಾರಿಕೋದ್ಯಮಗಳು ಬೆಳವಣಿಗೆ ಹೊಂದುವುದಕ್ಕೆ ಸಹಾಯಕವಾಯಿತು. ಪ್ರಸ್ತುತ ಆಧುನಿಕ ಸಂದರ್ಭದಲ್ಲಿಯೂ ಕೃಷಿ ಚಟುವಟಿಕೆಯ ಕಾರ್ಯಗಳನ್ನು ಆರಂಭಿಸುವುದಕ್ಕೆ ಮುಂಚೆ ಭವಿಷ್ಯ ನೋಡುತ್ತಿರುವುದನ್ನು ಗಮನಿಸಬಹುದು.

ವಿಜಯನಗರ ಸಾಮ್ರಾಜ್ಯದ ಕಾಲಾವಧಿಯಲ್ಲಿ ಸೋಮವಾರದಂದು ಕೃಷಿ ಚಟುವಟಿಕೆಯ ಯಾವುದೇ ಕಾರ್ಯಗಳನ್ನು ನಿರ್ವಹಿಸುತ್ತಿರಲಿಲ್ಲ. ಹಾಗೆಯೇ ಪ್ರಸ್ತುತ ವರ್ತಮಾನ ಕಾಲದಲ್ಲಿಯೂ ಕೃಷಿಯ ಈ ಆಚರಣೆಗಳು ಮುಂದುವರಿದುಕೊಂಡು ಬಂದಿವೆ. ನೀರಾವರಿ ವ್ಯವಸಾಯಕ್ಕೆ ರಾಯಲಸೀಮೆಯ ಜಿಲ್ಲೆಗಳಾದ ಬಳ್ಳಾರಿ, ಅನಂತಪುರಂಗಳಲ್ಲಿ ನೀರಾವರಿ ಸಾಧ್ಯತೆಗಳ ಬಗ್ಗೆ ಸರ್ ಥಾಮಸ್ ಮನ್ರೋ ಹೀಗೆ ಹೇಳುತ್ತಾನೆ; 'ಈ ಪ್ರದೇಶದಲ್ಲಿ ಹೊಸ ಕೆರೆಗಳನ್ನು ಕಟ್ಟುವ ಪ್ರಯತ್ನ ತೀರಾ ನಿರರ್ಥಕವಾದದ್ದು. ಅದರ ಬದಲು ಇರುವ ಕೆರೆಗಳನ್ನು ರಿಪೇರಿ ಮಾಡಿಸುವುದೇ ಉತ್ತಮ. ಏಕೆಂದರೆ ಇಲ್ಲಿನ ನಿವಾಸಿಗಳಿಂದ ನೀರಾವರಿಗೆಂದು ಕಟ್ಟಲ್ಪಟ್ಟಿರುವ ಕೆರೆಗಳೇ ಬೇಕಾದಷ್ಟಿರುವಾಗ ಬೇರೆಯ ಕೆರೆಗಳ ನಿರ್ಮಾಣಕ್ಕೆ ಸ್ಥಳವೇ ಇಲ್ಲದಾಗಿದೆ. ಇದಕ್ಕೆ ವಿಜಯನಗರದ ಕಾಲದ ರಾಜರುಗಳಿಂದ ಅನುಸರಿಸಲ್ಪಟ್ಟ ನೀರಾವರಿ ಯೋಜನೆಗಳೇ ಕಾರಣ. ಶ್ರೀಕೃಷ್ಣದೇವರಾಯನೇ ಈ ಬಗ್ಗೆ ಸ್ಪಷ್ಟವಾಗಿ ಹೀಗೆ ಘೋಷಿಸಿದ್ದಾನೆ; "ಈ ಸಾಮ್ರಾಜ್ಯವು ನೀರಾವರಿ ವ್ಯವಸಾಯಕ್ಕೆ ಕೆರೆ, ಕಾಲುವೆಗಳ ಸೌಲಭ್ಯಗಳನ್ನು ಒದಗಿಸಬೇಕು. ಜಮೀನಿಗರಿಗೆ ಅನುಕೂಲವಾದ ಕಂದಾಯದ ದರದವನ್ನು ನಿಗದಿ ಮಾಡಿ ಬಡ ರೈತರಿಗೆ ವ್ಯವಸಾಯಕ್ಕೆ ಕೊಡಬೇಕು. ಇದರಿಂದ ರಾಜ್ಯದ ಬೊಕ್ಕಸಕ್ಕೆ ಲಾಭವುಂಟಾಗುವುದೆಂದು ಹೇಳಿದ್ದಾನೆ(ಶ್ರೀನಿವಾಸ,೨೦೦೮:೯೫).

ವಿಜಯನಗರ ಕಾಲದಲ್ಲಿ ಕಾಡಿನ ತೆರೆದ ಭಾಗಗಳಲ್ಲಿ ಕುಮ್ರಿ ಅಥವಾ ಸ್ಥಳ ಬದಲಾಯಿಸುವ ಬೇಸಾಯವನ್ನು ನಡೆಸಲಾಗುತ್ತಿತ್ತು. ಕಾಡನ್ನು ಸುಟ್ಟ ಮೇಲೆ ಅಲ್ಲಿ ರಾಗಿ, ಬೇಳೆ ಕಾಳುಗಳು ಮತ್ತು ಎಣ್ಣೆ ಬೀಜಗಳನ್ನು ಬಿತ್ತುತ್ತಿದ್ದರು. ವಿಸ್ತಾರವಾದ ಅರಣ್ಯ ಪ್ರದೇಶಗಳಿರುವವರಿಗೆ ಈ ಬಗೆಯ ಕುಮ್ರಿ ಬೇಸಾಯ ಹಾನಿಕಾರಕವಾಗಿರಲಿಲ್ಲ. ಮುಖ್ಯವಾಗಿ ಇದು ದಕ್ಷಿಣ ಮತ್ತು ಉತ್ತರ ಕನ್ನಡ ಜಿಲ್ಲೆಗಳಲ್ಲಿ ಹಾಗೂ ಕರ್ನಾಟಕದ ಮಲೆನಾಡು ಪ್ರದೇಶಗಳಲ್ಲಿ ರೂಢಿಯಲ್ಲಿತ್ತೆಂದು ಹೇಳಬಹುದು(ಷೇಕ್ ಅಲಿ-೩,೨೦೧೮:೨೦೫).

ನೇಗಿಲುಗಳಿಗೆ ಕೋಣಗಳನ್ನು ಕಟ್ಟಲಾಗುತ್ತಿತ್ತು. ಕುಮರೆಗಳನ್ನೆಲ್ಲಾ ನಮ್ಮ ಹಾಗೆಯೇ ರೈತರು ಎತ್ತುಗಳನ್ನು, ಕೋಣಗಳನ್ನು ಜೊತೆ ಜೊತೆಯಾಗಿ ಹೂಡಿ ನೆಲವನ್ನು ಉಳುತ್ತಿದ್ದರು ಎಂಬುದಾಗಿ ಬಾರ್ಬೋಸಾ ಹೇಳುತ್ತಾನೆ(ಎ.ಕ.೧೧,ದಾ:೧೨೦). ಕೃಷಿ ಭೂಮಿಯ ವಿಸ್ತರಣೆಯಿಂದಾಗಿ ಜನರು ವಾಸಿಸುವ ಕಡೆಗಳಲ್ಲಿ ಕೆರೆ ಮತ್ತು ದೇವಾಲಯಗಳನ್ನು ನಿರ್ಮಿಸುತ್ತಿದ್ದರು. ಕ್ರಿ.ಶ.೧೬೫೩ರ ಚನ್ನಗಿರಿ ಶಾಸನದಲ್ಲಿ ಬಸವಾಪಟ್ಟಣದ ನಾಡಿಗರು ಮತ್ತು ಸೆಟ್ಟಿಗಳ ಕೋರಿಕೆಯ ಮೇರೆಗೆ ಅಲ್ಲಿನ ಅಧಿಕಾರಿ ಮಲ್ಲಿಕನು ಕಾಡನ್ನು ಕಡಿಸಿ ಕೆರೆಯನ್ನು ಕಟ್ಟಿಸಿ ಕೆರೆ ಕೆಳಗಿನ ಭೂಮಿಯನ್ನು ರೈತರಿಗೆ ಉಚಿತವಾಗಿ ಅವನ ಹೆಸರಿನಲ್ಲಿಯೇ 'ಮಲ್ಲಿಪುರ' ಎಂಬ ಗ್ರಾಮವನ್ನು ನಿರ್ಮಿಸಿದ್ದನು(ಎ.ಕ,೧೧,ದಾ:೭೯,).

ಕೃಷಿ ಭೂಮಿಯನ್ನು ವಿಸ್ತರಿಸುವ ಅಥವಾ ಅಭಿವೃದ್ಧಿಪಡಿಸುವ ಜನರಿಗೆ ರಾಜ್ಯವು ಸಹಾಯ ಸಹಕಾರಗಳನ್ನು ನೀಡುತ್ತಿತ್ತು. ಅಂತಹ ವ್ಯಕ್ತಿ ಅಥವಾ ಸಮುದಾಯಗಳಿಗೆ ಕೆಲವೊಂದು ಅನುಕೂಲಗಳನ್ನು ಕಲ್ಪಿಸುತ್ತಿದ್ದರು. ಹರಿಹರದಲ್ಲಿ ಹರಿದ್ರಾ ನದಿಗೆ ಒಂದು ಕಟ್ಟೆಯನ್ನು ಕಟ್ಟಿ ಹರಿಹರಕ್ಕೆ ಒಂದು ಕಾಲುವೆಯನ್ನು ನಿರ್ಮಾಣ ಮಾಡಿದರು. ಹೀಗೆ ಕಾಲುವೆ ಮೂಲಕ ಹರಿಹರಕ್ಕೆ ನೀರು ಹರಿಯಲಾರಂಭಿಸಿತು. ಅವರ ಸ್ವಂತ ವೆಚ್ಚದಲ್ಲಿ ಕಾಲುವೆ ನಿರ್ಮಿಸಿದ್ದರಿಂದ ಕಟ್ಟೆ ಕಟ್ಟಿದ ಮಹಾಜನತೆಗೆ ತೆರಿಗೆ ಮಾಫಿ ಮಾಡಿ ಮೂರನೇ ಒಂದು ಭಾಗ ಭೂಮಿ ಸಲ್ಲಿಸತಕ್ಕದೆಂದು ನಿಯಮ ಮಾಡಿದರು.

ಭಾರತದಲ್ಲಿ ಉತ್ಪನ್ನವಾಗುತ್ತಿರುವ ಬೃಹತ್ ಕೈಗಾರಿಕೆಯ ಉತ್ಪನ್ನಗಳು ಕೃಷಿಯನ್ನು ಅವಲಂಬಿಸಿವೆ. ಈಗಿನ ಜಿಲ್ಲೆಗಳಾದ ಬಳ್ಳಾರಿ, ಕರ್ನೂಲು, ಅನಂತಪುರ ಜಿಲ್ಲೆಗಳಲ್ಲಿ ಕೃಷಿ ಉತ್ಪನ್ನಗಳನ್ನು ಬೆಳೆಯುತ್ತಿದ್ದರು. ಕಾಡುಗಳನ್ನು ಕಡಿದು ಕೃಷಿ ಭೂಮಿಯಾಗಿ ಮಾರ್ಪಡಿಸಿ ಬೆಳೆಯನ್ನು ಬೆಳೆಯುವುದಕ್ಕೆ ಅವಕಾಶ ಮಾಡಿಕೊಟ್ಟಿದ್ದರು. ಹೀಗೆ ಕೃಷಿ ವಿಸ್ತರಣೆಯಿಂದಾಗಿ ಆ ಭೂಮಿಯು ಸಮಗ್ರವಾಗಿ ಕೃಷಿ ಚಟುವಟಿಕೆಗಳ ಸ್ಥಳವಾಗುತ್ತಿತ್ತು. ಉತ್ತಮವಾದ ಇಳುವರಿ ಬರುತ್ತಿತ್ತು. ಇದರಿಂದ ಈ ಪ್ರದೇಶದಲ್ಲಿ ಜನರು ವಾಸ ಮಾಡಲು ನಿರ್ಧರಿಸಿ ಅಲ್ಲಿ ಹೊಸದೊಂದು ಹಳ್ಳಿಯ ಉಗಮಕ್ಕೆ ಕಾರಣವಾಗುತ್ತಿತ್ತು. ಹೀಗೆಯೇ ವಿಜಯನಗರದ ಕಾಲಾವಧಿಯಲ್ಲಿ ಕೃಷಿ ಭೂಮಿಯ ಅಭಿವೃದ್ಧಿಯಿಂದ ಅನೇಕ ಹಳ್ಳಿಗಳ ಉಗಮವನ್ನು ಸಹ ಗಮನಿಸಬಹುದಾಗಿದೆ. ಈ ರೀತಿಯಾಗಿ ಅಭಿವೃದ್ಧಿ ಹೊಂದಿದ ಹಳ್ಳಿಗಳು ಬ್ರಹ್ಮದೇಯ ದೇವದಾಯವಾಗಿ ಮಾರ್ಪಡುತ್ತಿದ್ದವು. ಆ ಹಳ್ಳಿಯ ಸಂಪೂರ್ಣ ಕೃಷಿ ಭೂಮಿಯು ದೇವಾಲಯದ ಅಧೀನಕ್ಕೆ ಹೋಗುತ್ತಿತ್ತು. ಈ ಮೂಲಕ ಹೊಸದಾಗಿ ಉದಯಿಸಿದ ಕೃಷಿ ಭೂಮಿಯನ್ನು ಕುರಿತು ಟಿ.ವಿ. ಮಹಾಲಿಂಗಂ ಅವರು ಚರ್ಚಿಸಿದ್ದಾರೆ(ಮಹಾಲಿಂಗಂ:೧೯೬೫: ೨೨). ಕೃಷ್ಣದೇವರಾಯನು ಕೃಷಿ ನೀರಾವರಿಯನ್ನು ಅಭಿವೃದ್ಧಿಗೊಳಿಸಲು ಆರಂಭದಲ್ಲಿ ರಾಜಧಾನಿಗೆ ಹತ್ತಿರದಲ್ಲಿ ಒಂದು ಕೆರೆಯನ್ನು ಕಟ್ಟಿಸಿ ಕೃಷಿ ಅಭಿವೃದ್ಧಿಗೆ ಪೂರಕವಾದನು.

ಭೂಮಿಯಲ್ಲಿ ಕೃಷಿ ಮಾಡುವವನನ್ನು ಒಕ್ಕಲಿಗ ಎಂದು ಕರೆಯುವರು. ಭೂಮಿಯನ್ನು ಉತ್ತು ಬಿತ್ತಿ ಬೆಳೆ ತೆಗೆಯುವುದು ಒಕ್ಕಲಿಗನ ಮುಖ್ಯ ಕರ್ತವ್ಯ. ಹೀಗೆ ಭೂಮಿಯನ್ನು ಕೃಷಿ ಮಾಡಿ ಬೆಳೆ ತೆಗೆಯುವ ರೈತರನ್ನು ಭೂಮಿತಾಯಿಯ ಮಕ್ಕಳೆಂದು ಕರೆಯಲಾಗುತ್ತದೆ. ಕೃಷಿಯು ರಾಜ್ಯದ

ಆದಾಯದ ಮೂಲವಾಗಿದ್ದರಿಂದ ಅದರ ಬೆಳವಣಿಗೆಗೆ ರಾಜ್ಯವು ಸಾಕಷ್ಟು ಪ್ರಮಾಣದಲ್ಲಿ ಪ್ರೋತ್ಸಾಹ ಮತ್ತು ರಿಯಾಯಿತಿಯನ್ನು ಕೊಡುತ್ತಿತ್ತು. ಹೊಸದಾಗಿ ಸಾಗುವಳಿ ಮಾಡಿದ ವ್ಯಕ್ತಿಯು ಅಲ್ಲಿನ ಕಂದಾಯವನ್ನು ಸಂಗ್ರಹಿಸುವ ಅಧಿಕಾರವನ್ನು ಹೊಂದಿದ್ದನು. ಅಂತಹ ಭೂಮಿಯನ್ನು ಅವನೇ ಹೊಂದಿದ್ದರೆ ಕೆಲವು ವರ್ಷಗಳ ಕಾಲ ಕಂದಾಯ ಪಾವತಿಸುವಂತಿರಲಿಲ್ಲ. ವಿಜಯನಗರದ ಕಾಲದಲ್ಲಿ ಹೊಸದಾಗಿ ಸಾಗುವಳಿ ಮಾಡಿದ ಭೂಮಿಯನ್ನು ಸುಮಾರು ೨ರಿಂದ ೯ ವರ್ಷಗಳವರೆಗೆ ಕಂದಾಯವನ್ನು ಪಾವತಿಸುವಂತಿರಲಿಲ್ಲ. ಯಾರು ಭೂಮಿಯನ್ನು ಹೊಸದಾಗಿ ಉಳುಮೆಗೆ ಒಳಪಡಿಸುತ್ತಾರೆಯೋ ಅಂತವರಿಗೆ ಭೂಕಂದಾಯವನ್ನು ೧೦ರಿಂದ ೧೨ ವರ್ಷಗಳು ಮಾನ್ಯ ಮಾಡಿದ್ದರಿಂದ ಅಲ್ಲಿನ ಜನರು ಹೆಚ್ಚಿನದಾಗಿ ಬಂಜರುಭೂಮಿಯನ್ನು ಹೆಚ್ಚು ಹೆಚ್ಚು ಕೃಷಿ ಭೂಮಿಯನ್ನಾಗಿ ಮಾರ್ಪಡಿಸಿದರು. ಇದರಿಂದ ರಾಜ್ಯಕ್ಕೆ ಹೆಚ್ಚಿನ ಆದಾಯ ಬರಲಾರಂಭಿಸಿತು. ಹೊಸದಾಗಿ ಕೃಷಿಗೆ ಒಳಪಡುವ ಭೂಮಿಯಿಂದ ಹೊಸದೊಂದು ಗ್ರಾಮೀಣ ಆರ್ಥಿಕತೆಯು ಬೆಳೆಯಲಾರಂಭಿಸಿ ಹೆಚ್ಚಿನ ಜನಸಂಖ್ಯೆಯನ್ನು ಹೊಂದಲಾರಂಭಿಸಿತು(ಸೋಸಲೆ:೨೦೦೪:೧೧೩).

ಕೃಷಿ ಅಭಿವೃದ್ಧಿಯಿಂದ ಮಳೆಯಾಶ್ರಿತವಾಗಿ ಬೆಳೆಯನ್ನು ಬೆಳೆಯುತ್ತಿದ್ದ ಕೃಷಿಕರು ನೀರಾವರಿಯ ಅನುಕೂಲತೆಯಿಂದ ಎರಡು ಬೆಳೆಗಳನ್ನು ಬೆಳೆಯಲಾರಂಭಿಸಿದರು. ಇದರಿಂದ ಆಹಾರಧಾನ್ಯಗಳ ಉತ್ಪಾದನಾಮಟ್ಟ ಅಧಿಕಗೊಂಡಿತು. ತಮ್ಮ ದಿನನಿತ್ಯದ ಅವಶ್ಯಕತೆಗಿಂತ ಹೆಚ್ಚಾಗಿದ್ದ ಆಹಾರ ಧಾನ್ಯಗಳನ್ನು ಮಾರುಕಟ್ಟೆಗಳಿಗೆ ರವಾನಿಸಲಾರಂಭಿಸಿದರು. ಈ ಹೆಚ್ಚುವರಿ ಉತ್ಪಾದನೆಯಿಂದ ಅಂದಿನ ಸಮಾಜದ ಸಾಮಾಜಿಕ ಆರ್ಥಿಕ ಜೀವನದ ಮೇಲೆ ಗಾಢ ಪ್ರಭಾವ ಬೀರಲಾರಂಭಿಸಿತು. ಹಾಗೆಯೇ ಕೃಷಿಯೇತರ ಚಟುವಟಿಕೆಗಳ ಹುಟ್ಟಿಗೂ ಕಾರಣವಾಯಿತು.

ವಿಜಯನಗರ ಕಾಲಾವಧಿಯಲ್ಲಿ ಕೃಷಿಯಲ್ಲಿ ಪ್ರಮುಖವಾಗಿ ಋತುಮಾನಕ್ಕೆ ತಕ್ಕಂತೆ ಬೆಳೆಗಳನ್ನು ಬೆಳೆಯುತ್ತಿದ್ದರು. ಒಂದೊಂದು ಸ್ಥಳವು ಒಂದೊಂದು ಬೆಳೆ ಬೆಳೆಯುವುದಕ್ಕೆ ಪ್ರಸಿದ್ಧವಾಗಿತ್ತು. ಕೃಷಿ ಬೆಳೆಯನ್ನು ಕುರಿತಂತೆ ಅಲ್ಲಿನ ಶಾಸನಗಳು, ವಿದೇಶೀಯ ಬರಹಗಳು ನಮಗೆ ಮಾಹಿತಿಯನ್ನು ನೀಡುತ್ತವೆ. ಈ ಕಾಲದ ಬೆಳೆಯನ್ನು ಕುರಿತಂತೆ ಒಂದು ಶಾಸನವು ಹೀಗೆ ಮಾಹಿತಿ ನೀಡುತ್ತದೆ.

೧. ದ್ವಿದಳ ದಾನ್ಯಗಳು : ಅವರೆ, ಉದ್ದು, ಹೆಸರು, ಹುರುಳಿ, ಕಡ್ಲೆಕಾಳು, ಅಲಸಂದೆ,

೨. ಸಾಂಬಾರ ವಸ್ತುಗಳು : ಮೆಣಸು, ಅಡಿಕೆ, ಸಾಸುವೆ, ಮೆಂತ್ಯ, ಜೀರಿಗೆ, ಸಬ್ಬಕ್ಕಿ, ಧನಿಯ, ಮತ್ತು ಅರಿಸಿನ

೩. ತೋಟದ ಬೆಳೆಗಳು : ತೆಂಗು, ಹಣ್ಣು ಹಂಪಲುಗಳು

೪. ನೀರಾವರಿ ಬೆಳೆಗಳು : ಭತ್ತ, ರಾಗಿ, ಜೋಳ, ಗೋದಿ, ನವಣೆ, ಮುಸುಕಿನ ಜೋಳ, ಹತ್ತಿ, ಸೆಣಬು. ಉತ್ತರ ಮತ್ತು ದಕ್ಷಿಣ ಕನ್ನಡ, ಮಲೆನಾಡು ಮತ್ತು ಮೈಸೂರು ಪ್ರಾಂತ ಇವು ಭತ್ತ ಬೆಳೆಯುವ ಮುಖ್ಯ ಕೇಂದ್ರಗಳಾಗಿದ್ದವು. ಕರ್ನಾಟಕದ ಪಶ್ಚಿಮ ಕರಾವಳಿಯು ಸಾಂಬಾರು ವಸ್ತುಗಳಾದ ಮೆಣಸು ಮತ್ತು ಏಲಕ್ಕಿಗಳ ಉತ್ಪಾದನೆಯ ಪ್ರದೇಶವಾಗಿತ್ತು.

ಧಾನ್ಯಗಳು ಜನರ ಮುಖ್ಯ ಆಹಾರವಾಗಿದ್ದು, ಶ್ರೀಮಂತರಿಗೆ ಅಕ್ಕಿ ಪ್ರಧಾನ ಆಹಾರ. ರಾಗಿ, ಕಬ್ಬು ಮತ್ತು ಜೋಳ ಬಡವರ ಮುಖ್ಯ ಆಹಾರ. ರಾಜಧಾನಿಯಲ್ಲಿದ್ದ ಮುಸ್ಲಿಂ ನಿವಾಸಿಗಳು

ಗೋಧಿಯನ್ನು ಹೆಚ್ಚಾಗಿ ಬಳಸುತ್ತಿದ್ದರು. ವಿಜಯನಗರವು ಭತ್ತದ ಬೆಳೆಗೆ ಪ್ರಮುಖವಾದ ಸ್ಥಳವಾಗಿತ್ತು(ಷೇಕ್‌ಅಲಿ,೨೦೧೮:೨೦೬-೨೦೭).

ಕೋಲಾರವು ಕರ್ನಾಟಕದ ಒಣ ಪ್ರದೇಶಗಳಲ್ಲೊಂದಾಗಿದ್ದು, ಗದ್ದೆ, ತೋಟದ ಬೆಳೆಗಳನ್ನು ಅಲ್ಲಿ ಬೆಳೆಯಲಾಗುತ್ತಿತ್ತು. ಮುಳಬಾಗಿಲು ಮತ್ತು ಗೌರಿಬಿದನೂರು ತಾಲ್ಲೂಕುಗಳಲ್ಲಿ ಅಡಿಕೆಯನ್ನು ಬೆಳೆಯುತ್ತಿದ್ದರು. ಕೋಲಾರ ಜಿಲ್ಲೆಯಲ್ಲಿ ಪ್ರಮುಖವಾಗಿ ಎರಡು ಬೆಳೆ ತೆಗೆಯುತ್ತಿದ್ದರು. ವೈಶಾಖ ಬೆಳೆ ಮತ್ತು ಕಾರ್ತಿಕ ಬೆಳೆ. ಹೊಲಗಳಲ್ಲಿ ರಾಗಿಯನ್ನು ಬಿತ್ತುತ್ತಿದ್ದರು. ಕೆರೆಗಳಿರುವ ಕಡೆಗಳಲ್ಲಿ ಅಡಿಕೆ, ತೆಂಗು ಮೊದಲಾದ ಕಾಯಂ ತೋಟ ಬೆಳೆಗಳನ್ನು ನಿರ್ವಹಿಸುತ್ತಿದ್ದರು. ಈ ಜಿಲ್ಲೆಯಲ್ಲಿ ರಾಗಿ ಮತ್ತು ಜೋಳಗಳನ್ನು ಈಗಲೂ ಬೆಳೆಯುತ್ತಿದ್ದಾರೆ(ಷೇಕ್‌ಅಲಿ,೨೦೧೮:೨೦೬-೨೦೭).

ಕಡೂರು ಜಿಲ್ಲೆಯಲ್ಲಿ ಬತ್ತ, ರಾಗಿ, ಹುಣಸೆಹಣ್ಣು, ಬೇಳೆಕಾಳು, ತೊಗರಿ, ಎಣ್ಣೆ, ತುಪ್ಪ, ಬೆಲ್ಲ, ತೆಂಗು, ಕೊಬ್ಬರಿ, ಖರ್ಜೂರ, ಅಡಕೆ, ಈರುಳ್ಳಿ, ಬೆಳ್ಳುಳ್ಳಿ, ಅರಿಸಿನ, ಜೀರಿಗೆ, ಹೊಗೆಸೊಪ್ಪು ಮತ್ತು ಮೆಣಸು ಇವು ಮುಖ್ಯ ಬೆಳೆಗಳಾಗಿದ್ದವು ಡೋಮಿಂಗೋ ಪಯಾಸ್ ವಿಜಯನಗರಕ್ಕೆ ಬಂದಾಗ ಇಲ್ಲಿನ ಭತ್ತ, ಹತ್ತಿ, ಹುರುಳಿ, ಗೋಧಿ, ಮತ್ತಿತರ ಧಾನ್ಯ ಎಣ್ಣೆ ಬೀಜಗಳು ಬಗ್ಗೆ ಮಾಹಿತಿ ತಿಳಿಸಿದ್ದಾನೆ. ಹಂಪಿ ಪ್ರದೇಶದ ಸುತ್ತಮುತ್ತ ಭತ್ತ, ಕಿತ್ತಳೆ, ನಿಂಬೆ, ಸಿಭಾನ, ಕೆಂಪು ಮೂಲಂಗಿ ಮತ್ತು ಎಲೆಕೋಸು ಮೊದಲಾದ ಬೆಳೆಗಳನ್ನು ಬೆಳೆಯುತ್ತಿದ್ದರು. ಮೈಸೂರು ಸುತ್ತಮುತ್ತಲಿನ ಪ್ರದೇಶದಲ್ಲಿ ಭತ್ತದ ಕಾಳುಗಳು, ಅಡಿಕೆ, ಕಬ್ಬು, ಹೊಗೆಸೊಪ್ಪು, ಹತ್ತಿ, ಹೆಸರು, ಹುರುಳಿ ಮತ್ತು ಇತರ ಬೆಳೆಗಳನ್ನು ಬೆಳೆಯುತ್ತಿದ್ದರು. ಬೆಂಗಳೂರು ಜಿಲ್ಲೆಯಲ್ಲಿ ಧಾನ್ಯಗಳು, ಹುಣಸೆ, ತರಕಾರಿಗಳು, ಸಾಂಬಾರ ವಸ್ತುಗಳು ಮತ್ತು ಹೊಗೆಸೊಪ್ಪುಗಳನ್ನು ಬೆಳೆಯುತ್ತಿದ್ದರು. ಡೊಮಿಂಗೋ ಪಯಾಸ್ ಕರ್ನಾಟಕದಲ್ಲಿ ಬೆಳೆಯುತ್ತಿದ್ದ ಈ ಮೇಲಿನ ಬೆಳೆಗಳ ವಿವರಣೆಯನ್ನು ಕೊಟ್ಟಿದ್ದಾನೆ . ವಿಜಯನಗರದಲ್ಲಿ ಗೃಹ ಕೈಗಾರಿಕೆಗಳಾದ ಎಣ್ಣೆ ಬೀಜಗಳ ಸಂಸ್ಕರಣ ಮತ್ತು ಗಾಣಗಳಿಗೆ ಹಾಕಿ ಎಣ್ಣೆ ತೆಗೆಯುವ ಬೆಳೆಗಳನ್ನು ಗಮನಿಸಿದನು(ಷೇಕ್ ಅಲಿ(ಇ),೨೦೧೮:೨೦೭).

ವಿಜಯನಗರ ಕಾಲದ ಮುಳವಾಯಿ ರಾಜ್ಯದಲ್ಲಿ ಎರಡು ಪ್ರಮುಖ ಭೂವರ್ಗಗಳಿದ್ದವು. ಅವುಗಳೆಂದರೆ ಗದ್ದೆ ಮತ್ತು ಬೆದ್ದಲು. ಗದ್ದೆ ಎಂದರೆ ನೀರಿನ ಸೌಕರ್ಯವುಳ್ಳ ಭೂಮಿ, ಬೆದ್ದಲು ಎಂದರೆ ನೀರಿನ ಆಸರೆಯಿಲ್ಲದೆ ಕೇವಲ ಮಳೆಯನ್ನು ಆಶ್ರಯಿಸಿರುವ ಭೂಮಿ. ಕೃಷಿ ಭೂಮಿಯನ್ನು ಕಾಡಾರಂಭ ಮತ್ತು ನೀರಾರಂಭ ಎಂದು ವರ್ಗೀಕರಿಸುತ್ತಿದ್ದರು. ಕಾಡಾರಂಭ ಎಂದರೆ ಒಣ ಬೇಸಾಯದ ಭೂಮಿ, ನೀರಾರಂಭ ಎಂದರೆ ಕೆರೆ ಮತ್ತು ಭಾವಿಗಳ ಆಶ್ರಯಗಳಿಂದ ಕೆಲವೊಮ್ಮೆ ನದಿಯ ಆಶ್ರಯದಿಂದ ಕೃಷಿ ಮಾಡುವ ಭೂಮಿ. ೧೫೬೫ರ ಕೋಲಾರ ತಾಲೂಕಿನ ಶಾಸನ ಕಾಡಾರಂಭ ನೀರಾರಂಭ ಭೂಮಿಯನ್ನು ದಾನವಾಗಿ ನೀಡಿದ್ದನ್ನು ತಿಳಿಸುತ್ತದೆ. ಪಶ್ಚಿಮ ಕರಾವಳಿಯು ಫಲವತ್ತಾದ ಅನೇಕ ಕ್ಷೇತ್ರಗಳಿಂದ ಕೂಡಿತ್ತು. ಅಲ್ಲಿ ವಿಶೇಷವಾಗಿ ಬೆಳೆದ ಅಕ್ಕಿಯನ್ನು ಮಲಬಾರ್ ಮತ್ತು ಆರ್ಮೂಜ್‌ಗೆ ರಫ್ತು ಮಾಡಲಾಗುತ್ತಿತ್ತು. ಗೋವಾದ ಬಳಿ ದೊರೆತಿರುವ ವ್ಯವಸಾಯ ಕ್ಷೇತ್ರಗಳಲ್ಲಿ ಗೋಧಿ ದ್ವಿದಳ ಧಾನ್ಯಗಳು ಎಣ್ಣೆಯ ಬೀಜಗಳು ಮತ್ತು ಹತ್ತಿ ಇವುಗಳನ್ನು

ಬೆಳೆಯಲಾಗುತ್ತಿತ್ತು. ಪಾಯಸ್ ಭಟ್ಕಳದಿಂದ ವಿಜಯನಗರದವರೆಗೂ ಉತ್ತಮ ಕೃಷಿ ಕ್ಷೇತ್ರಗಳಿಂದ ಫಲವತ್ತಾಗಿತ್ತೆಂದು ಹೇಳುತ್ತಾನೆ(ಶ್ರೀನಿವಾಸ:೨೦೦೮: ೯೪). ಕ್ಷಾಮ ಪ್ರದೇಶದಲ್ಲಿ ದೊಡ್ಡ ದೊಡ್ಡ ಕೆರೆ ಕಾಲುವೆಗಳನ್ನು ಕಟ್ಟಿಸಿ ನೀರಾವರಿಯ ಮೂಲಕ ಕೃಷಿ ಸೌಕರ್ಯಗಳನ್ನು ಒದಗಿಸಲಾಗುತ್ತಿದ್ದಿತು. ಕೃಷ್ಣದೇವರಾಯ ಮತ್ತು ಚಿಕ್ಕದೇವರಾಜರು ಹೊಸಪೇಟೆ, ಕೋಲಾರ ಮೊದಲಾದ ಕಡೆಗಳಲ್ಲೆಲ್ಲ ಕೆರೆಗಳನ್ನು, ಕಾಲುವೆಗಳನ್ನು ಮಾಡಿಸಿ ಕೃಷಿಗೆ ಬಹಳ ಅನುಕೂಲತೆಯನ್ನು ಒದಗಿಸಿದ್ದರು. ವಿಜಯನಗರ ಅರಸರ ಕಾಲಾವಧಿಯಲ್ಲಿ ಕುಸುಬೆ, ಹರಳು, ಎಳ್ಳು ಮುಂತಾದ ಎಣ್ಣೆಕಾಳುಗಳು ಸಾಕಷ್ಟು ಬೆಳೆಯುತ್ತಿದ್ದರು. ಈ ಮೂಲಕ ಎಣ್ಣೆ ಕೈಗಾರಿಕೆಗಳು ಅಭಿವೃದ್ಧಿಯನ್ನು ಕಂಡವು(ಸಾಲೆತೊರೆ, ಸಂ.೧: ೧೧೮). ವಿಜಯನಗರ ಅರಸರ ಆಳ್ವಿಕೆಯ ಪೂರ್ವದಲ್ಲಿ ಕ್ರಿ.ಶ. ೪ನೇ ಶತಮಾನದಿಂದ ೧೦ನೇ ಶತಮಾನದವರೆಗೂ ಕೃಷಿ ಮತ್ತು ಕೃಷಿ ಸಂಬಂಧಿತ ವಿಚಾರಗಳು ಗಣನೀಯ ಪ್ರಮಾಣದಲ್ಲಿ ಅಭಿವೃದ್ಧಿ ಹೊಂದಿದವು. ವಿಜಯನಗರ ಆಳ್ವಿಕೆಯ ಕಾಲದಲ್ಲಿ ಕೃಷಿಯೇತರ ಚಟುವಟಿಕೆಗಳು ಗಟ್ಟಿಯಾಗತೊಡಗಿದ್ದು, ಈ ಮೂಲಕ ಆರ್ಥಿಕ ಕ್ಷೇತ್ರದಲ್ಲಿ ಪರಿವರ್ತನೆಯಾಗಿ ಕೈಗಾರಿಕೆಗಳು ಬೃಹತ್ ಪ್ರಮಾಣದಲ್ಲಿ ಬೆಳವಣಿಗೆಯಾಗಲಾರಂಭಿಸಿದವು. ಈ ವ್ಯವಸ್ಥೆಯು ವರ್ತಮಾನ ಕಾಲದಲ್ಲಿ ಅಸ್ತಿತ್ವದಲ್ಲಿರುವ ಬಂಡವಾಳಗಾರಿಕೆಯ ಅರ್ಥವ್ಯವಸ್ಥೆ ಎಂದೇ ಹೇಳಬಹುದು. ಈ ಮೂಲಕವಾಗಿ ಕೃಷಿಯೇತರ ಉತ್ಪಾದನೆಯ ಹೆಚ್ಚಳದಿಂದ ಸಂತೆ ಮತ್ತು ಮಾರುಕಟ್ಟೆಕೇಂದ್ರಿತ ವ್ಯಾಪಾರಕ್ಕೆ ಪೂರಕವಾಯಿತು. ವಿಜಯನಗರ ಅರಸರ ಆಳ್ವಿಕೆಯ ಕಾಲಾವಧಿಯಲ್ಲಿ ಕಾರವಾರವು ಪ್ರಮುಖ ಬಂದರು ಪ್ರದೇಶವಾಗಿದ್ದು, ಕೃಷಿ ಸಂಬಂಧಿತ ಸರಕುಗಳ ಸಾಗಾಣಿಕೆಯ ಕೇಂದ್ರವಾಗಿತ್ತು. ೧೬ನೇ ಶತಮಾನದ ನಂತರ ಈ ಪ್ರದೇಶವು ಕೃಷಿ ಸರಕುಗಳ ಕೃಷಿ ಸಂಬಂಧಿತ ವ್ಯಾಪಾರ ಕೇಂದ್ರವಾಯಿತು.

ಕೃಷಿ ಉತ್ಪಾದನೆಯಲ್ಲಿ ಭೂಮಾಲೀಕರು ಕೂಲಿ ಕೆಲಸಗಾರರನ್ನು ಜೀತದಾಳುಗಳಾಗಿ ನೇಮಿಸಿಕೊಳ್ಳುತ್ತಿದ್ದರು. ಕೂಲಿ ಕೆಲಸಗಾರರು ಸಾಮಾನ್ಯವಾಗಿ ಶೂದ್ರ ಜಾತಿಗೆ ಸೇರಿದವರಾಗಿರುತ್ತಿದ್ದರು. ಜೀತದಾಳುಗಳನ್ನು ಶಾಸನಗಳಲ್ಲಿ ಹೊಲೆಯರು ಮತ್ತು ಮುಲದ್ದು ಎಂದು ಕರೆಯಲಾಗಿದೆ. ಇವರು ಸಾಮಾನ್ಯವಾಗಿ ಅಂತ್ಯಜ ಅಥವಾ ಅಸ್ಪೃಶ್ಯ ಜಾತಿಗೆ ಸೇರಿದವರಾಗಿದ್ದರು(ಶ್ರೀಕಂಠಯ್ಯ, ೩೧೩). ಭತ್ತದ ಸಾಗುವಳಿ ವಿಧಾನದ ಬಗ್ಗೆ ಸಮಕಾಲೀನ ಚರಿತ್ರೆಯೊಂದನ್ನು ಬಾರ್ಬೋಸ ನೀಡುತ್ತಾನೆ. ನೀರಿನಿಂದ ಆವೃತವಾದ ಕಣಿವೆ ಹಾಗೂ ಸಮತಟ್ಟಾದ ಪ್ರದೇಶಗಳಲ್ಲಿ ಎಲ್ಲೆಡೆ ಅವರು ಭತ್ತವನ್ನು ಬಿತ್ತುತ್ತಾರೆ. ನಾವು ಮಾಡುವ ಹಾಗೆಯೇ ಎತ್ತು ಅಥವಾ ಎಮ್ಮೆಗಳನ್ನು ನೇಗಿಲುಗಳಿಗೆ ಕಟ್ಟಿ ಅವರು ನೆಲವನ್ನು ಉಳುತ್ತಿದ್ದರು. ನೇಗಿಲ ಗುಳದಲ್ಲಿ ಕುಳಿಯೊಂದಿದ್ದು, ಅದರಲ್ಲಿ ಭತ್ತವನ್ನು ಇರಿಸಲಾಗುತ್ತದೆ. ಭೂಮಿ ನೀರಿನಿಂದ ತುಂಬಿದಾಗ ಗುಳ ಉಳುತ್ತಾ ಹೋದಂತೆ ಭತ್ತದ ಕಾಳು ನೀರಿನೊಳಗೆ ಮತ್ತು ನೆಲದೊಳಗೆ ಸೇರುತ್ತದೆ. ಒಣ ಭೂಮಿಯಲ್ಲಿ ಅವರು ಅದನ್ನು ಕೈಯಿಂದ ಬಿತ್ತುತ್ತಾರೆ ಎಂದು ಆತ ಹೇಳುತ್ತಾನೆ.

ಗ್ರಾಮೀಣ ಪ್ರದೇಶಗಳು ಕೃಷಿಕ ವರ್ಗದಿಂದ ತುಂಬಿರುತ್ತಿದ್ದವು. ಈ ಕೃಷಿಕ ವರ್ಗದ ಸದಸ್ಯರು, ಭೂಮಾಲೀಕ ಮತ್ತು ಕೆಲಸಗಾರರಾಗಿದ್ದರು. ಆಮೀನ್ದಾರರು, ದೇವಾಲಯ ಮತ್ತು

ಮಠಗಳಂತಹ ಭೂಮಿ ಹೊಂದಿದ ಸಂಸ್ಥೆಗಳು ಭೂಮಿ ದಣಿಗಳಾಗಿದ್ದರೆ, ಕೆಲಸಗಾರರು ಆ ಭೂಮಿಯಲ್ಲಿ ಕೆಲಸ ಮಾಡಿ ಸಂಪಾದಿಸಿ ತಮ್ಮ ಜೀವನ ಸಾಗಿಸುತ್ತಿದ್ದವರಾಗಿದ್ದರು. ಆಮೀನುದಾರನು ಭೂಮಿಯ ಮೇಲೆ ಪ್ರಭುತ್ವದ ಹಕ್ಕನ್ನಷ್ಟೇ ಅನುಭೋಗಿಸುತ್ತಿದ್ದನು. ಅಕ್ಕಿ, ರಾಗಿ, ಗೋಧಿ, ಮತ್ತು ಇತರ ಕಾಳುಗಳನ್ನು ಸಾಮಾನ್ಯವಾಗಿ ಮನೆಯಲ್ಲಿಯೇ ಇಟ್ಟು ಮಾಡಿಕೊಳ್ಳಲಾಗುತ್ತಿತ್ತು.

ವಿಜಯನಗರ ಕಾಲಾವಧಿಯಲ್ಲಿ ಕೃಷಿಯೇತರ ಉತ್ಪಾದನೆಯ ಹೆಚ್ಚಳ, ಸಂತೆ ಮತ್ತು ಮಾರುಕಟ್ಟೆ ಕೇಂದ್ರಿತ ವ್ಯಾಪಾರವು ಅಭಿವೃದ್ಧಿಯಾಗಿ ಒಳನಾಡು ಹಾಗೂ ಸಾಗರೋತ್ತರ ವಾಣಿಜ್ಯ ವಹಿವಾಟಿನ ವೃದ್ಧಿಗೆ ಕಾರಣವಾಯಿತು. ವಿಜಯನಗರ ಕಾಲದಲ್ಲಿ ಬಲವಾದ ನಗರ ಆರ್ಥಿಕ ಕೇಂದ್ರಗಳಾಗಿದ್ದವು. ಬೀದರ್, ಗುಲ್ಬರ್ಗ, ಬಿಜಾಪುರ, ಗೋಲ್ಕೊಂಡ, ವರಂಗಲ್, ನವಗೊಂಡ, ಕೊಂಡಪಲ್ಲಿ, ಅಮ್ರೋಟಿ, ದೇವರಕೊಂಡ, ರಾಯಚೂರು, ಬಾಗಲಕೋಟೆ, ಬೆಳಗಾವಿ, ಕೊಲ್ಲಾಪುರ, ಮೀರಜ್, ಸತಾರಾ, ವಿಜಯನಗರ, ದಕ್ಷಿಣದ ದ್ವಾರಸಮುದ್ರ, ಗುತ್ತಿ, ಆದೋನಿ, ಹೊನ್ನಾವರ, ಚಂದ್ರಗುತ್ತಿ, ಪೆನುಗೊಂಡ, ಉದಯಗಿರಿ, ಆನೆಗೊಂದಿ, ಇಕ್ಕೇರಿ, ಮಂಗಳೂರು, ಬಾರಕೂರು ಮೊದಲಾದ ನಗರಗಳು ಈ ಕಾಲದಲ್ಲಿ ಹುಟ್ಟನ್ನು ಕಂಡುಕೊಡವು(ಷೇಕ್‌ಅಲಿ,ಬಿ.,೨೦೧೮:೨೫೭). ೧೬ನೇ ಶತಮಾನದ ವೇಳೆಗೆ ಕೃಷಿ ಉತ್ಪಾದನೆ ಪ್ರಮುಖ ಉದ್ಯಮವಾಗಿ ಕೈಗಾರಿಕೆಗಳು ಪ್ರಬಲವಾಗಲಾರಂಭಿಸಿದವು. ಕಾರವಾರ ಬಂದರಿನಲ್ಲಿ ವ್ಯಾಪಾರಕ್ಕಾಗಿ ಬರುತ್ತಿದ್ದ ಪ್ರಮುಖ ಕೃಷಿ ಉತ್ಪನ್ನಗಳೆಂದರೆ ಅಕ್ಕಿ, ಕರಿಮೆಣಸು, ಏಲಕ್ಕಿ, ತೆಂಗಿನಕಾಯಿ. ವಿಜಯನಗರ ಕಾಲವಧಿಯಲ್ಲಿ ಅರಸರ ನೀರಾವರಿ ನೀತಿ, ನೀರಾವರಿ ಕಾರ್ಯಗಳ ನಿರ್ಮಾಣದ ಮೂಲಕ ಕೃಷಿಯ ವಿಸ್ತರಣೆಯಲ್ಲಿ ರಾಜರು ತೀವ್ರವಾದ ಆಸಕ್ತಿ ತೋರಿಸುತ್ತಿದ್ದರು. ಕೃಷಿಯ ವಿಸ್ತರಣೆಗೆ ನೀರಾವರಿಯನ್ನು ಅಭಿವೃದ್ಧಿಗೊಳಿಸುವ ವಿಚಾರವನ್ನು ಕುರಿತಂತೆ ಸರ್ ಥಾಮಸ್ ಮನ್ರೋ ವಿಜಯನಗರ ಸಾಮ್ರಾಜ್ಯದ ಹೃದಯ ಭಾಗವಾಗಿದ್ದ ಬಳ್ಳಾರಿ ಜಿಲ್ಲೆಯಲ್ಲಿ ಕೈಗೊಳ್ಳಬಹುದಾದ ನೀರಾವರಿ ಕಾರ್ಯಗಳ ಸಾಧ್ಯತೆಗಳನ್ನು ಹೀಗೆ ಹೇಳಿದ್ದಾನೆ. ಹೊಸದಾಗಿ ಇಲ್ಲಿ ಕೆರೆಗಳನ್ನು ನಿರ್ಮಿಸ ಹೋಗುವುದು, ತುಂಬಿ ಹೋಗಿರುವ ಕೆರೆಗಳ ದುರಸ್ತಿ ಕಾರ್ಯ ಕೈಗೊಳ್ಳುವುದಕ್ಕಿಂತ ವ್ಯರ್ಥ ಪ್ರಯೋಗವಾಗುತ್ತದೆ. ವಿಜಯನಗರ ೧ನೇ ದೇವರಾಯನ ಕಾಲದಲ್ಲಿ ವಿಜಯನಗರ ಪಟ್ಟಣದಲ್ಲಿ ದೊಡ್ಡ ಜಲಾಶಯವನ್ನು ತುಂಗಾಭದ್ರಾ ನದಿಗೆ ಕಟ್ಟಿದ್ದರು. ಇಂದಿಗೂ ಆ ಕಾಲದ ಕಾಲುವೆಗಳಿವೆ. ನ್ಯೂನಿಜ್‌ನು ನದಿಯಿಂದ ೫ ಸಣ್ಣ ಕಾಲುವೆಗಳ ಮೂಲಕ ಹರಿದುಹೋಗುವ ನೀರಿನ ಬಗ್ಗೆ ತಿಳಿಸುತ್ತಾ ತುರ್ತು ಕಾಲುವೆ ೧೧ ಮೈಲು ನೀರಾವರಿ ಪ್ರದೇಶಕ್ಕೆ ನೀರುಣಿಸುತ್ತಿದ್ದ ಬಗ್ಗೆ ಉಲ್ಲೇಖಿಸಲಾಗುತ್ತಾನೆ.

ವಿಜಯನಗರ ಕಾಲದಲ್ಲಿ ಕೃಷಿ ಮಾಡುವವರನ್ನು ಒಕ್ಕಲಿಗ ಎಂದು ಕರೆಯುತ್ತಿದ್ದರು. ಭೂಮಿಯನ್ನು ಉತ್ತಿ, ಬಿತ್ತಿ, ಬೆಳೆ ತೆಗೆಯುವುದು ಒಕ್ಕಲಿಗನ ಮುಖ್ಯ ಕರ್ತವ್ಯ. ಹೀಗೆ ಭೂಮಿಯಲ್ಲಿ ಕೃಷಿ ಮಾಡಿ ಬೆಳೆ ತೆಗೆಯುವ ರೈತರನ್ನು ಭೂಮಿ ತಾಯಿಯ ಮಕ್ಕಳೆಂದು, ಒಕ್ಕಲು ಮಕ್ಕಳೆಂದು ಕರೆಯುವರು. ಇದನ್ನು ಕುರಿತಂತೆ ಹಲವಾರು ಶಾಸನಾಧಾರಗಳು ತಿಳಿಸುತ್ತವೆ. ಒಕ್ಕಲಿಲ್ಲವಾದ ಊರು ಕೊಳೆತುನಾರುವ ನೀರು, ಅಂತಹ ಊರು ಇದ್ದು ತಾನೆ ಏನು ಫಲ ಎಂದು ದಾಸರು ಅವರ ಕೀರ್ತನೆಗಳಲ್ಲಿ ವಿವರಿಸಿದ್ದಾರೆ.

ಶ್ರೀಕಂಠಯ್ಯನವರ "ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಜೀವನ ಚಿತ್ರಣ" ಎಂಬ ಕೃತಿಯಲ್ಲಿ ಶೂದ್ರರಲ್ಲಿ ಕೃಷಿ, ಪಶುಪಾಲನೆ ಮುಂತಾದ ವೃತ್ತಿಗಳನ್ನನುಸರಿಸಿ ಅನೇಕ ಪಂಗಡಗಳು ಉಂಟಾದವು. ಬೇಟೆಯಿಂದ ಬೇಡ, ಪಶುಪಾಲನೆಯಿಂದ ಕುರುಬ, ಗೊಲ್ಲ, ಗೌಳಿಗರು, ವ್ಯವಸಾಯದಿಂದ ಗಂಗಡಿಕಾರ, ಒಕ್ಕಲಿಗರು, ನಾಡಗೌಡರು, ತಿಗುಳರು, ಕಸುಬುಗಳಿಂದ ಮೇದರು, ದರ್ಜಿ, ಕುಂಬಾರ, ಅಗಸ, ನಾಯಿಂದ, ಬಂಜಾರ ಮುಂತಾದವರು ಬೇರೆ ಬೇರೆ ಜಾತಿಗಳಾದರು. ಒಟ್ಟಾರೆಯಾಗಿ ವ್ಯವಸಾಯ ಅಥವಾ ಕೃಷಿ ವೃತ್ತಿಯನ್ನು ಅವಲಂಬಿಸಿ ಒಕ್ಕಲಿಗ ಎಂಬ ಒಳಪಂಗಡವಾಯಿತು.

ಅಂಗಡಿ ಬೀದಿಗಳು ಬಹು ಉದ್ದವಾಗಿಯೂ, ಅಗಲವಾಗಿಯೂ ಇವೆ. ಗುಲಾಬಿ ವ್ಯಾಪಾರಿಗಳು ತಮ್ಮ ಅಂಗಡಿಗಳ ಮುಂದೆ ಎತ್ತರವಾದ ವೇದಿಕೆಗಳನ್ನು ನಿರ್ಮಿಸಿಕೊಂಡಿದ್ದರು. ಈ ವೇದಿಕೆಗಳ ಎರಡೂ ಕಡೆ ಹೂಗಳನ್ನು ರಾಶಿಹಾಕಿ ವ್ಯಾಪಾರ ಮಾಡುತ್ತಿದ್ದರು. ಕುರಿ, ಕೋಳಿ, ಐದು ಮಣ ಅಕ್ಕಿ, ಒಂದು ಮಣ ಬೆಣ್ಣೆ, ಒಂದು ಮಣ ಸಕ್ಕರೆ, ಎರಡು ಚಿನ್ನದ ವರಾಹಗಳನ್ನು ಕೊಡುತ್ತಿದ್ದರು. ಹೀಗೆ ವ್ಯಾಪಾರಿಗಳು ವಿಜಯನಗರ ಕಾಲದಲ್ಲಿ ವ್ಯಾಪಾರ ನಡೆಸುತ್ತಿದ್ದರೆಂದು ವಿದೇಶಿ ಪ್ರವಾಸಿಗನಾದ ಅಬ್ದುಲ್ ರಜಾಕ್ ಅಭಿಪ್ರಾಯಪಟ್ಟಿದ್ದಾನೆ.

ವಿಜಯನಗರದ ಅರಸರ ಕಾಲದಲ್ಲಿ ಭೂಮಿಯನ್ನು ಸರ್ವೇ ಮಾಡಿ ಕಂದಾಯ ನಿಗದಿ ಮಾಡುತ್ತಿದ್ದರು. ಅಳತೆ ಕೋಲಿನ ಮೂಲಕ ಭೂಮಿಯನ್ನು ಅಳತೆ ಮಾಡುತ್ತಿದ್ದರು. ವಿಜಯನಗರ ಅರಸರು ಅಳತೆಯ ಮಾಪನಕ್ಕೆ ರಾಯರೇಖ ಎಂದು ಕರೆಯುತ್ತಿದ್ದರು. ರಾಯರೇಖ ಮತ್ತು ಬೀಜಾವರಿ ಎನ್ನುವ ಎರಡು ರೀತಿಯ ಕಂದಾಯ ಪದ್ಧತಿಗಳನ್ನು ಈ ಕಾಲಘಟ್ಟದಲ್ಲಿ ಬಳಸಿರುವುದನ್ನು ದಾಖಲೆಗಳು ಮತ್ತು ಶಾಸನಾಧಾರಗಳಿಂದ ತಿಳಿಯಬಹುದಾಗಿದೆ. ಇದೇ ವಿಧಾನವನ್ನು ವಿಜಯನಗರೋತ್ತರ ಕಾಲದ ಎಲ್ಲ ಮನೆತನಗಳು ಕೆಲವು ಬದಲಾವಣೆಯೊಂದಿಗೆ ಸಂಗ್ರಹಿಸಿದರು.

ಕೃಷಿಯೇತರ ಉತ್ಪಾದನೆಯ ಚಟುವಟಿಕೆ ಮತ್ತು ಕಸುಬುಗಳು ದಕ್ಷಿಣದಲ್ಲಿ ೧೪ನೆಯ ಶತಮಾನಕ್ಕಿಂತ ಹೆಚ್ಚಾಗಿ ಈ ಕಾಲಘಟ್ಟದಲ್ಲಿ ಕೃಷಿಯೇತರ ಉತ್ಪಾದನೆಯು ತ್ವರಿತಗತಿಯಲ್ಲಿ ಸಾಗಿ ಪ್ರತಿಯೊಂದು ಹಂತದಲ್ಲಿಯೂ ವಿವಿಧ ರೀತಿಯ ತೆರಿಗೆಗಳನ್ನು ವಸೂಲಿ ಮಾಡುತ್ತಿದ್ದರು. ಕುಶಲ ವಸ್ತುಗಳನ್ನು ಉತ್ಪಾದನೆ ಮಾಡುವ ಸಾಮಾನ್ಯ ಮಾಲೀಕ, ರೈತನು ಸಹ ಈ ಕಾಲಘಟ್ಟದಲ್ಲಿ ತೆರಿಗೆಯನ್ನು ಕೊಡಬೇಕಾಗಿತ್ತು. ಉದ್ಯಮದ ಮೇಲೆಯೇ ಒಂದು ರೀತಿಯ ತೆರಿಗೆ ಇತ್ತು. ಆ ಉದ್ಯಮಕ್ಕೆ ಬಳಸಿದ ಯಂತ್ರಗಳ ಮೇಲೆ ಮತ್ತು ಉತ್ಪಾದನೆಯ ವಿವಿಧ ಹಂತಗಳ ಮೇಲೆ ತೆರಿಗೆಗಳಿದ್ದವು.

ವಿಜಯನಗರ ಕಾಲದಲ್ಲಿ ಕೃಷಿ ಆರ್ಥಿಕತೆಯನ್ನು ಅಭಿವೃದ್ಧಿಪಡಿಸದೆ ಒಟ್ಟಾರೆ ಆರ್ಥಿಕತೆಯ ಎಲ್ಲ ಅಂಶಗಳನ್ನು ಕುರಿತಂತೆ ಅಭಿವೃದ್ಧಿಪಡಿಸಿರುವುದನ್ನು ಗಮನಿಸಬಹುದಾಗಿದೆ. ವಿಜಯನಗರ ಕಾಲದ ಸಂಘಂ, ಸಾಳುವ, ತುಳುವ ಮತ್ತು ಅರವೀಡು ವಂಶಗಳು ಕೃಷಿ ಅಭಿವೃದ್ಧಿಯಲ್ಲಿ ಮುಖ್ಯಪಾತ್ರ ವಹಿಸಿದ್ದವು. ವಿಜಯನಗರ ಕಾಲದಲ್ಲಿ ಕೃಷಿ ಅಭಿವೃದ್ಧಿಯ ಜೊತೆ ಜೊತೆಗೆ

ನೀರಾವರಿ ವ್ಯವಸ್ಥೆಯನ್ನು ಅಭಿವೃದ್ಧಿಪಡಿಸಿದ್ದಾರೆ. ಚರಿತ್ರೆಯುದ್ದಕ್ಕೂ ನೋಡುತ್ತಾ ಬಂದರೆ ದೇಶ-ದೇಶಗಳ ನಡುವೆ, ರಾಜ್ಯ-ರಾಜ್ಯಗಳ ನಡುವೆ ರಾಜಕೀಯ, ಆರ್ಥಿಕವಾಗಿ, ಸಾಮಾಜಿಕವಾಗಿ ಹಲವಾರು ಒಪ್ಪಂದಗಳಾಗಿರುತ್ತವೆ. ಮಧ್ಯಕಾಲೀನ ಭಾರತದ ಚರಿತ್ರೆಯಲ್ಲಿ ವಿಜಯನಗರ ಕಾಲಾವಧಿಯು ಹಲವು ಚಟುವಟಿಕೆಗಳು ಗಮನಾರ್ಹವಾದ ರೀತಿಯಲ್ಲಿ ಹೆಚ್ಚಳ ಉಂಟಾದವು. ಈ ಮೂಲಕ ಗ್ರಾಮೀಣ ಆರ್ಥಿಕತೆಯಿಂದ ನಗರ ಆರ್ಥಿಕತೆಯ ಸ್ವರೂಪ ಬದಲಾಗಿ ನಗರೀಕರಣ ಪ್ರಕ್ರಿಯೆಗೆ ಕಾರಣವಾಯಿತು.

ಯಾವುದೇ ಸಾಮ್ರಾಜ್ಯವಾಗಲಿ ಸಮಾಜದಲ್ಲಾಗುವ ಪ್ರತಿಯೊಂದು ಪರಿಣಾಮಗಳು ಆರ್ಥಿಕತೆಯ ಮೇಲೆ ಪ್ರಭಾವವನ್ನುಂಟು ಮಾಡುತ್ತವೆ. ಸಮಾಜದ ಚಲನಶೀಲತೆಗೆ ಹಾಗೂ ಸ್ಥಿತ್ಯಂತರತೆಗೆ ಆಂತರಿಕ ಮತ್ತು ವಿದೇಶಿಯ ವ್ಯಾಪಾರ, ನಗರೀಕರಣ, ಮಾರುಕಟ್ಟೆ, ನಿರ್ದೇಶಿತ ವಸ್ತುಗಳ ಉತ್ಪಾದನೆ, ಕೃಷಿಯೇತರ ಆರ್ಥಿಕ ಬೆಳವಣಿಗೆ ಹಾಗೂ ಎಡಗೈ ಹಾಗೂ ಬಲಗೈ ಜಾತಿಗಳ ಬಲವರ್ಧನೆಯಾಗಿ ಎಡಗೈ ಜಾತಿಗಳು ಕೃಷಿ ಚಟುವಟಿಕೆಯಲ್ಲಿ ಹೆಚ್ಚಿನದಾಗಿ ತೊಡಗಿಸಿಕೊಳ್ಳುತ್ತಾರೆ. ಬಲಗೈ ಜಾತಿಯವರು ವ್ಯಾಪಾರ-ವಾಣಿಜ್ಯ ಚಟುವಟಿಕೆಯಲ್ಲಿ ತೊಡಗಿಸಿಕೊಳ್ಳುವರು. ಈ ಮೂಲಕ ಸಮಾಜದಲ್ಲಿ ಸಂಚಲನ ಸ್ಥಿತಿಗೆ ಒಳಪಡುವಂತಾಯಿತು.

ನಗರದ ಬೀದಿಗಳು, ಚೌಕಗಳು ವಿಶಾಲವಾಗಿವೆ. ನಾನಾ ದೇಶದ ಮತ್ತು ನಾನಾ ಜನಾಂಗದ ಜನರು ಈ ಬೀದಿಗಳಲ್ಲಿ ಹಾಗೂ ಚೌಕಗಳಲ್ಲಿ ತುಂಬಿರುತ್ತಾರೆ. ಇಲ್ಲಿ ಅನೇಕ ಮೂರ್ ವರ್ತಕರು ಮತ್ತು ಶ್ರೀಮಂತ ಜೆಂಟೈಲ್ ನಿವಾಸಿಗಳಲ್ಲದೆ ಬೇರೆ ಕಡೆಗಳಿಂದ ಸಂಖ್ಯಾತ ಸಂಖ್ಯೆಯಲ್ಲಿ ಬಂದು ಮುತ್ತಿಕೊಂಡಿರುವ ಜನರಿದ್ದಾರೆ. ಯಾರು ಬೇಕಾದರೂ ಅಡೆತಡೆಗಳಿಲ್ಲದೆ ಸುರಕ್ಷಿತವಾಗಿ ಇಲ್ಲಿರಲು ರಾಜ ಅವಕಾಶ ಮಾಡಿಕೊಟ್ಟಿದ್ದಾನೆ. ಯಾರಿಂದಲೂ ಅವರಿಗೆ ತೊಂದರೆ ಇಲ್ಲ.

ವಿಜಯನಗರ ಕಾಲದಲ್ಲಿ ಕೈಗಾರಿಕೆಗಳು ಅಪಾರ ಪ್ರಮಾಣದಲ್ಲಿ ಬೆಳೆದು ಹಲವಾರು ಸ್ಥಿತ್ಯಂತರಗಳಿಗೆ ಒಳಪಟ್ಟ ಕಾಲವೆಂದು ಕರೆಯಬಹುದಾಗಿದೆ. ಈ ಮೂಲಕವಾಗಿ ವ್ಯಾಪಾರ-ವಾಣಿಜ್ಯ ವಿದೇಶೀಯ ಮತ್ತು ಸ್ವದೇಶೀಯ ಎರಡು ದೃಷ್ಟಿಯಲ್ಲಿಯೂ ಬೆಳವಣಿಗೆಯಾಗಿರುವುದನ್ನು ಗುರುತಿಸಬಹುದಾಗಿದೆ.

ವಿಜಯನಗರ ಕಾಲಾವಧಿಯಲ್ಲಿ ಅಸ್ತಿತ್ವದಲ್ಲಿದ್ದ ತೆರಿಗೆಗಳನ್ನು ಕುರಿತಂತೆ ಗಮನಿಸಿದಾಗ ಕೈಮಗ್ಗದಿಂದ ಬಟ್ಟೆ ತಯಾರಿಸುವ ಕೈಗಾರಿಕೆಯಾಗಿತ್ತು. ಆಯಗಾರರೆಂದು ಗುರುತಿಸಿಕೊಂಡವರು ಈ ಕಾಲಾವಧಿಯಲ್ಲಿ ತಮ್ಮದೇಯಾದ ಕೆಲಸದಲ್ಲಿ ತೊಡಗಿಸಿಕೊಂಡಿದ್ದರು. ಚರ್ಮ ಹದ ಮಾಡುವ ಬೆಲ್ಲ, ಎಣ್ಣೆ ತಯಾರಿಕೆಯ ಕೈಗಾರಿಕೆಗಳು ಅಸ್ತಿತ್ವದಲ್ಲಿದ್ದವು. ಕೈಮಗ್ಗದಿಂದ ಬಟ್ಟೆ ತಯಾರಿಕೆಯ ಕೆಲಸದಲ್ಲಿ ಹೆಚ್ಚಿನದಾಗಿ ಮಹಿಳೆಯರು ಭಾಗವಹಿಸುತ್ತಿದ್ದರು. ಬಟ್ಟೆ ಕೈಗಾರಿಕೆಯನ್ನು ಕುರಿತಂತೆ ಮಗ್ಗಗಳ ಉಲ್ಲೇಖವನ್ನು ಕುರಿತಂತೆ ಹೆಚ್ಚಿನ ಮಾಹಿತಿಯನ್ನು ಈ ಕಾಲದ ಆಕರಗಳು ಒದಗಿಸುತ್ತವೆ.

ಕ್ರಿ.ಶ. ೧೩೮೨ರಲ್ಲಿ ೧ನೆಯ ಬುಕ್ಕರಾಯನ ಆಳ್ವಿಕೆಯ ಕಾಲಕ್ಕೆ ಸೇರಿದ ಬೇಲೂರಿನ ಈ ಶಾಸನದಲ್ಲಿ ವಿಜಯನಗರ ಸಾಮ್ರಾಜ್ಯದಲ್ಲಿ ತಯಾರಿಸಿದ ಮತ್ತು ಮಾರಾಟವಾದ ವಿವಿಧ ರೀತಿಯ ಜವಳಿಗಳ ಆಸಕ್ತಿದಾಯಕ ಪಟ್ಟಿಯನ್ನು ಅಲ್ಲಿ ಕೊಟ್ಟಿದ್ದಾರೆ.

೧. ದೇವಗಿರಿಯಲ್ಲಿ ತಯಾರಿಸಿದ ಬಟ್ಟೆಗಳು

೨. ಮಧುಗಿರಿಯಲ್ಲಿ ತಯಾರಿಸಿದ ಬಟ್ಟೆಗಳು. ಈ ಬಟ್ಟೆಗಳನ್ನು ವಿವಾಹ ಸಂದರ್ಭದಲ್ಲಿ ವಿಶೇಷವಾಗಿ ಬಳಸಲಾಗುತ್ತಿತ್ತು.

೩. ಬಿಳಿ ಜವಳಿ

೪. ಪಟ್ಟೆನೂಲು ಜವಳಿ

ಹೀಗೆ ಹಲವಾರು ರೀತಿಯ ಜವಳಿ ವ್ಯಾಪಾರವನ್ನು ಕುರಿತಾದ ಉಲ್ಲೇಖಗಳು ಶಾಸನಗಳಿಂದ ದೊರೆಯುತ್ತವೆ(ನಂಜುಂಡಪ್ಪ,೧೯೮೨:೧೫).

ವಿಜಯನಗರ ಕಾಲಾವಧಿಯಲ್ಲಿ ಉತ್ಪನ್ನವಾಗಿದ್ದ ವಿವಿಧ ಕ್ಯಾಲಿಕೋ ಬಟ್ಟೆಗಳು ಕೆಂಪು ಪಟ್ಟಿಕೆಗಳಿಂದ ಕೂಡಿದ್ದವು. ಕಪ್ಪು, ಕೆಂಪು ಬಟ್ಟೆಗಳು ಕೈಮಗ್ಗಗಳಿಂದ ತಯಾರಿಸಿ ವಿದೇಶಕ್ಕೆ ರವಾನಿಸುತ್ತಿದ್ದರು. ವಿಜಯನಗರ ಕಾಲದಲ್ಲಿ ಬಟ್ಟೆ ಕೈಗಾರಿಕೆಯು ಪ್ರಮುಖವಾಗಿತ್ತು. ವಿದೇಶಿ ಬರಹಗಾರರು, ಸಾಹಿತಿಗಳು ಅಂದಿನ ಬಟ್ಟೆ ಕೈಗಾರಿಕೆಯ ಬಗ್ಗೆ ಹೇಳುವ ಮಾತೆಂದರೆ ಸಾಮ್ರಾಜ್ಯದಲ್ಲಿ ನೇಕಾರರು ತಯಾರಿಸಿದ ಬಟ್ಟೆಗಳು ಸ್ಥಳೀಯ ಬೇಡಿಕೆಯನ್ನು ಪೂರೈಸುವುದರ ಜೊತೆ ದೇಶ–ವಿದೇಶಗಳ ಮಾರುಕಟ್ಟೆಯ ಬೇಡಿಕೆಗಳನ್ನು ಪೂರೈಸುತ್ತಿದ್ದವು. ಸಂತೆ ಹಾಗೂ ಜಾತ್ರೆಗಳಲ್ಲಿ ಬಟ್ಟೆಗಳನ್ನು ಮಾರಾಟ ಮಾಡುತ್ತಿದ್ದರು. ಉತ್ತಮ ಮಟ್ಟದ, ನಯವಾದ ಬಟ್ಟೆಗಳನ್ನು ವ್ಯಾಪಾರಿಗಳು ಸಂತೆಗಳಲ್ಲೆ ಕೊಂಡುಕೊಂಡು ರಪ್ತು ಮಾಡುತ್ತಿದ್ದರು. ಬಟ್ಟೆಯನ್ನು ತಯಾರಿಸಲು ಬೇಕಾದ ದಾರವನ್ನು ಖರೀದಿಸಲು ವರ್ತಕರು ನೇಕಾರರಿಗೆ ಮುಂಗಡ ಹಣವನ್ನು ಕೊಡುತ್ತಿದ್ದರು ಎಂದು ಸುದೀರ್ಘವಾಗಿ ವಿವರಿಸಿರುವುದು ಅಂದಿನ ಕೈಮಗ್ಗದ ಅಭಿವೃದ್ಧಿಯನ್ನು ಸೂಚಿಸುತ್ತದೆ. ಅಂದು ಹತ್ತಿಯನ್ನು ಹೆಚ್ಚಾಗಿ ರಾಯಚೂರು ಮತ್ತು ಬಳ್ಳಾರಿಯಲ್ಲಿ ಬೆಳೆಯಲಾಗುತ್ತಿತ್ತು.

ತುಮಕೂರು, ಚಿತ್ರದುರ್ಗ, ಚಿಕ್ಕಮಗಳೂರು, ಕೋಲಾರ ವಿಭಾಗಗಳು ಹೆಚ್ಚಾಗಿ ಉಣ್ಣೆ ತಯಾರಿಸುವ ಕೇಂದ್ರಗಳಿದ್ದವು. ಮೈಸೂರು, ಮಂಡ್ಯ, ಹುಣಸೂರು, ಕೊಪ್ಪಳ, ಬಳ್ಳಾರಿ, ಸಿಂಧನೂರು, ಸಿರಗುಪ್ಪ, ರಾಯಚೂರು ಕಂಬಳಿಗಳನ್ನು ತಯಾರಿಸುವ ಕೇಂದ್ರಗಳಾಗಿದ್ದವು. ಈ ಮೂಲಕ ಮಧ್ಯಕರ್ನಾಟಕದಲ್ಲಿ ಕಂಬಳಿ ಉತ್ಪಾದನೆಯು ಅತಿ ಹೆಚ್ಚಾಗಿತ್ತು ಹಾಗೂ ಪ್ರಸ್ತುತವಾಗಿಯೂ ಕರ್ನಾಟಕದಲ್ಲಿ ನೇಕಾರ ಸಮುದಾಯವು ಈ ಉತ್ಪಾದನೆಯಲ್ಲಿ ತೊಡಗಿರುವುದನ್ನು ಗಮನಿಸಬಹುದಾಗಿದೆ ಬಟ್ಟೆ ಕೈಗಾರಿಕೆಯ ಜೊತೆ ಎಣ್ಣೆ ಕೈಗಾರಿಕೆಯು ಈ ಕಾಲದಲ್ಲಿ ಪ್ರಮುಖವಾಗಿ ಗುರುತಿಸಿಕೊಂಡಿದೆ. ಗಾಣಗಳ ಕುರಿತಂತೆ ಮರಗಾಣ, ಕಲ್ಲುಗಾಣಗಳೆಂದು ವರ್ಗೀಕರಿಸುತ್ತಾರೆ. ಕೋಲಾರ, ಶಿಕಾರಿಪುರ, ಚಾಮರಾಜನಗರ, ಚನ್ನರಾಯಪಟ್ಟಣ, ಹೊಸಪೇಟೆ, ಮಂಗಳೂರು ಇನ್ನೂ ಮೊದಲಾದ ಕಡೆಗಳಲ್ಲಿ ಈ ಎಣ್ಣೆ ಉತ್ಪಾದನೆಯ ಕೇಂದ್ರಗಳನ್ನು ಸ್ಥಾಪಿಸಿ ವ್ಯಾಪಾರದಲ್ಲಿ ತೊಡಗಿರುವುದನ್ನು ನೋಡಬಹುದು. ಈ ಗಾಣಗಳಿಗೆ ತೆರಿಗೆಯನ್ನು ವಿಧಿಸುತ್ತಿದ್ದರು. ಈ ಉತ್ಪಾದನೆಯು ಹೆಚ್ಚಿನ ಆದಾಯವನ್ನು ತರುತ್ತಿತ್ತು. ಹೀಗಾಗಿ ರಾಜ್ಯಕ್ಕೆ ಇದರಿಂದ ಹೆಚ್ಚಿನ ಆದಾಯ ಬರುವ ಕಾರಣಕ್ಕಾಗಿಯೇ ಈ ಕೈಗಾರಿಕೆಯನ್ನು ವಿಜಯನಗರ ಕಾಲದಲ್ಲಿ ಆರಂಭಿಸಿದ್ದರೆಂದು ಹೇಳಬಹುದಾಗಿದೆ.

ನಿಸರ್ಗದತ್ತವಾದ ಸಂಪನ್ಮೂಲಗಳು ಇಲ್ಲಿ ಹೆಚ್ಚಿನದಾಗಿ ದೊರೆತಿದ್ದರಿಂದ ಇಲ್ಲಿ ಕೈಗಾರಿಕೆಗಳನ್ನು ಸ್ಥಾಪಿಸಲು ಅವಕಾಶವನ್ನು ನೀಡಿದ್ದರೆಂದು ಹೇಳಬಹುದು(ಸೋಸಲೆ:೨೦೦೮:೧೨೪).

ವಿಜಯನಗರ ಕಾಲಾವಧಿಯಲ್ಲಿ ಕೃಷಿಯ ವಿಸ್ತರಣೆಯಿಂದಾಗಿ ಕೃಷಿಯೇತರ ಉತ್ಪಾದನೆಗಳ ಹೆಚ್ಚಳ ಉಂಟಾಗಿ ವ್ಯಾಪಾರ–ವಾಣಿಜ್ಯದಲ್ಲಿ ಹೆಚ್ಚಿನ ಪ್ರಗತಿ ಹೊಂದಲು ಸಹಾಯಕವಾಯಿತು. ವಿಜಯನಗರ ಕಾಲಾವಧಿಯು ಆರ್ಥಿಕ ಸ್ಥಿತ್ಯಂತರದಲ್ಲಿ ಒಂದು ಪ್ರಮುಖವಾದ ಘಟ್ಟವೆಂದು ಪರಿಗಣಿಸಬಹುದಾಗಿದೆ. ಕಾರಣ ಇದುವರೆಗೂ ವಿದೇಶೀಯರಾದ ಅರಬ್ಬರು ಭಾರತದ ವ್ಯಾಪಾರ–ವಾಣಿಜ್ಯದಲ್ಲಿ ಗುರುತಿಸಿಕೊಂಡಿದ್ದು, ಇವರು ವಿಜಯನಗರ ಅರಸರಿಗೆ ಕುದುರೆಯ ವ್ಯಾಪಾರದಲ್ಲಿ ಸಹಕರಿಸುತ್ತಿದ್ದರು. ೧೪೯೮ರಲ್ಲಿ ಭಾರತಕ್ಕೆ ಬಂದ ಪೋರ್ಚುಗೀಸರು ಕರ್ನಾಟಕದ ಕರಾವಳಿ ಭಾಗಗಳಲ್ಲಿ ವ್ಯಾಪಾರ ಚಟುವಟಿಕೆಗಳನ್ನು ವಿಸ್ತರಿಸುವುದರ ಮೂಲಕ ಅವರ ಜೊತೆ ಅನೇಕ ವ್ಯಾಪಾರಿ ಒಪ್ಪಂದಗಳನ್ನು ಮಾಡಿಕೊಂಡಿದ್ದರು. ಪಶ್ಚಿಮ ಕರಾವಳಿಯ ನಗರಕೇಂದ್ರಗಳು ಆರ್ಥಿಕ ಚಟುವಟಿಕೆಗಳಿಂದ ಪ್ರಭಾವಿತವಾಗಿದ್ದವು. ಈ ಕೇಂದ್ರಗಳಲ್ಲಿ ವ್ಯಾಪಾರಿಗಳು ಇಲ್ಲಿನ ವ್ಯಾಪಾರದಲ್ಲಿ ಮುಖ್ಯಪಾತ್ರ ವಹಿಸುತ್ತಿದ್ದರು. ಉತ್ತರ ಕನ್ನಡದ ಅಂಕೋಲ, ಹೊನ್ನಾವರ, ಭಟ್ಕಳ, ಬಾರಕೂರು, ಬಸ್ರೂರು ಮುಂತಾದ ವ್ಯಾಪಾರಿಗಳು ಪ್ರಮುಖವಾಗಿ ಗುರುತಿಸಿಕೊಂಡರು(ನಂಜುಂಡಪ್ಪ,೧೯೮೨: ೨೫).

೧೫೦೫ರಿಂದ ೧೫೧೨ರವರೆಗೂ ನಾಲ್ಕು ಬಾರಿ ವಿಜಯನಗರಕ್ಕೆ ಪೋರ್ಚುಗೀಸ್ ನಿಯೋಗಿಗಳು ಬಂದರು. ವಿಜಯನಗರದ ಅಧೀನದಲ್ಲಿದ್ದ ಕರಾವಳಿ ಪ್ರದೇಶಗಳಲ್ಲಿ ಸರ್ವಸ್ವಾಮಿಗಳೆಂಬಂತೆ ವರ್ತಿಸಿ ವಾರ್ಷಿಕ ಕಪ್ಪ ಸಂಗ್ರಹಿಸತೊಡಗಿದರೂ ಮಂಗಳೂರು ಹಾಗೂ ಭಟ್ಕಳಗಳನ್ನು ಸುಟ್ಟು ನಾಶ ಮಾಡಿದರು. ಪೋರ್ಚುಗೀಸ್ ಎಂದರೆ ಜಗಳಗಂಟ ಎಂಬ ಅರ್ಥ ಕರಾವಳಿಯಲ್ಲಿ ರೂಢಿಯಲ್ಲಿದೆ. ಈ ಮೂಲಕ ಕರಾವಳಿ ಕರ್ನಾಟಕದಲ್ಲಿ ವಾಣಿಜ್ಯ ಸಂಘರ್ಷದಲ್ಲಿ ಈ ಕಾಲದಲ್ಲಿ ಪೋರ್ಚುಗೀಸರು ತೊಡಗಿದ್ದರೆಂದು ಹೇಳಬಹುದು.

೧೫೪೭ರಲ್ಲಿ ಪೋರ್ಚುಗೀಸರಿಗೂ ವಿಜಯನಗರದ ಅರಸರಿಗೂ ಒಂದು ಒಪ್ಪಂದವಾಯಿತು. ಈ ಪ್ರಕಾರ ಗೋವಾಕ್ಕೆ ಬಂದು ಇಳಿದ ಎಲ್ಲ ಯುದ್ಧ ಕುದುರೆಗಳನ್ನು ವಿಜಯನಗರಕ್ಕೆ ಕಳುಹಿಸಬೇಕು. ಇಲ್ಲಿಯ ಸ್ಥಳೀಯ ವರ್ತಕರು ತಮ್ಮ ವ್ಯಾಪಾರವನ್ನು ಹೊನ್ನಾವರ ಮತ್ತು ಕುಂದಾಪುರ ಬಂದರುಗಳ ಮೂಲಕ ಮಾರಬೇಕು ಎಂದು ಒಪ್ಪಂದವಾಯಿತು(ಬಾಂಬೆ ಗ್ಯಾಝಿಟೀಯರ್.೧೭೮೯:ಕೆನರಾ–೨: ೧೧೫). ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಈ ವೇಳೆಯಲ್ಲಿ ಬೆಳೆಯುವ ಎಲ್ಲ ವಾಣಿಜ್ಯ ಬೆಳೆಗಳನ್ನು ಅವರೇ ಕೊಳ್ಳುತ್ತಿದ್ದರು. ಕ್ರಿಶ ೧೫೬೫ರ ನಂತರ ಪೋರ್ಚುಗೀಸರ ವ್ಯಾಪಾರಕ್ಕೆ ದೊಡ್ಡ ಪೆಟ್ಟುಬಿದ್ದರೂ ಭಟ್ಕಳ ಮತ್ತು ಹೊನ್ನಾವರದ ವ್ಯಾಪಾರ ಕ್ಷೀಣಿಸಿತೆಂದು ಹೇಳಬಹುದು. ಒಂದು ಅರ್ಥದಲ್ಲಿ ಪ್ರಸಿದ್ಧ ಮಾರುಕಟ್ಟೆಯಾಗಿ ಗುರುತಿಸಿಕೊಂಡ ಗೋವಾ ಪುನಃ ಚೇತರಿಸಿಕೊಳ್ಳಲಾಗದ ಸ್ಥಿತಿಗೆ ಬಂದು ತಲುಪಿತ್ತೆಂದು ಹೇಳಬಹುದು. ಗೋವಾದ ವ್ಯಾಪಾರ ಕೆಳದಿ ನಾಯಕರ ಸಂಬಂಧಗಳ ಕಡೆ ಪುನಾರವರ್ತನೆಯಾಯಿತು. ಇದೇ ವೇಳೆಯಲ್ಲಿ ಬಿಜಾಪುರದ ಆದಿಲ್‌ಶಾಹಿ ಮನೆತನಗಳ

ಕಡೆ ತಮ್ಮ ವ್ಯಾಪಾರವನ್ನು ಸ್ಥಿತ್ಯಂತರಗೊಳಿಸಿದರೆಂದು ಹೇಳಬಹುದು. ಪ್ರಸಿದ್ಧ ವ್ಯಾಪಾರ ಕೇಂದ್ರವಾಗಿ ಗುರುತಿಸಿಕೊಂಡ ವಿಜಯನಗರ ಪಟ್ಟಣ ಒಂದು ಕಡೆ ತನ್ನ ವ್ಯಾಪಾರದ ಸ್ಥಿತ್ಯಂತರವನ್ನು ಕಂಡ ಕಾಲವೆಂದು ಹೇಳಬಹುದು.

ವಿಜಯನಗರೋತ್ತರ ಕಾಲದ ವೇಳೆಗೆ ಹೊಸ ಪಟ್ಟಣಗಳ ಹುಟ್ಟು ಕಂಡ ಕಾಲವೆಂದು ಹೇಳಬಹುದು. ವಿಜಯನಗರದ ಅಧೀನ ಸಂಸ್ಥಾನಗಳು ಸ್ವಾತಂತ್ರ್ಯವನ್ನು ಪಡೆದು ತಮ್ಮದೇ ಆರ್ಥಿಕ ವ್ಯವಸ್ಥೆಯನ್ನು ಹುಟ್ಟು ಹಾಕಿದರು. ವಿಜಯನಗರದ ಅಧೀನದಲ್ಲಿ ವ್ಯಾಪಾರ ವಾಣಿಜ್ಯದಲ್ಲಿ ಗುರುತಿಸಿಕೊಂಡ ಮುಸ್ಲಿಂ ವರ್ತಕ ಸಮುದಾಯಕ್ಕೆ ದೊಡ್ಡ ಪೆಟ್ಟು ಬಿದ್ದ ಕಾಲವೆಂದೇ ಹೇಳಬಹುದು. ಸಂಪೂರ್ಣವಾಗಿ ಅವರು ವ್ಯಾಪಾರದಿಂದ ಹಿಂದೆ ಉಳಿಯಲಾರಂಬಿಸಿದರು. ಬಿಜಾಪುರದ ಸುಲ್ತಾನರ ಕಾಲದಲ್ಲಿ ಪ್ರಮುಖವಾಗಿ ಪುನಃ ವ್ಯಾಪಾರದಲ್ಲಿ ಗುರುತಿಸಿಕೊಂಡ ಇವರು ಪೋರ್ಚುಗೀಸರ ನಿರಂತರ ಸಂಘರ್ಷಕ್ಕೆ ಕಾರಣರಾದರು. ಈ ಮೂಲಕ ವಿಜಯನಗರೋತ್ತರ ಕಾಲದ ವ್ಯಾಪಾರ ವಾಣಿಜ್ಯದಲ್ಲಿ ಮುಸ್ಲಿಂ ಸಮುದಾಯದ ವ್ಯಾಪಾರ ಕ್ಷೀಣಿಸಿದ ಕಾಲವಾಗಿದೆ. ತಮಿಳುನಾಡಿನ ನಾಯಕ ಮನೆತನಗಳು ವಿಜಯನಗರದ ಸಾರ್ವಭೌಮತೆಯನ್ನು ೧೬೫೦ರವರೆಗೂ ಮುಂದುವರಿಸಿದ್ದರೆಂಬುದಕ್ಕೆ ಆಧಾರಗಳಿದ್ದು ಅಲ್ಲಿನ ಜಿಂಜಿ, ತಂಜಾವೂರು, ಮಧುರೈ ನಾಯಕರು ಪೋರ್ಚುಗೀಸರು ಮತ್ತು ಡಚ್ಚರೊಂದಿಗೆ ಮಾಡಿಕೊಂಡ ಒಪ್ಪಂದಗಳಿಂದ ಅದು ಸ್ಪಷ್ಟವಾಗುತ್ತದೆ. ಈ ಮೂಲಕ ವಿಜಯನಗರೋತ್ತರ ಕಾಲದ ವ್ಯಾಪಾರ ವಾಣಿಜ್ಯ ಪ್ರಭುತ್ವಕೇಂದ್ರಿತವಾದ ಬಿಜಾಪುರದ ಅಧೀನದಲ್ಲಿ ವಿಜಯನಗರದ ವರ್ತಕರ ವ್ಯಾಪಾರ ಮುಂದುವರೆದಿದೆ. ವಿಜಯನಗರದ ನಂತರ ಆಳ್ವಿಕೆ ಮಾಡಿದ ಅರಸರ ವ್ಯಾಪಾರ ಬಂಡವಾಳಕೇಂದ್ರಿತ ಹುಟ್ಟು ಕಂಡ ಕಾಲವೆಂದು ಹೇಳಬಹುದು. ವಿಜಯನಗರೋತ್ತರ ಕಾಲವು ವಾಣಿಜ್ಯೋದ್ಯಮದಲ್ಲಿ ಹೆಚ್ಚು ಗುರುತಿಸಿಕೊಂಡ ಕಾಲವಾಗಿದೆ.

ಅಧ್ಯಾಯ - ನಾಲ್ಕು

# ವಿಜಯನಗರೋತ್ತರ ಕಾಲದ ಆರ್ಥಿಕತೆಯ ವಿವಿಧ ಆಯಾಮಗಳು

೪.೧. ಕೃಷಿ ಮತ್ತು ನೀರಾವರಿ ವ್ಯವಸ್ಥೆ
೪.೨. ಕೃಷಿ ಉತ್ಪನ್ನಗಳು
೪.೩. ಭೂ ಹಿಡುವಳಿಗಳು
೪.೪. ಆಯಗಾರರು
೪.೫. ಭೂ ಮಾಲೀಕರು ಮತ್ತು ಕೃಷಿ ಕಾರ್ಮಿಕರು
೪.೬. ಬಿಟ್ಟಿಸೇವೆ
೪.೭. ತೆರಿಗೆ ಪದ್ಧತಿ

## ಅಧ್ಯಾಯ – ನಾಲ್ಕು

# ವಿಜಯನಗರೋತ್ತರ ಕಾಲದ ಆರ್ಥಿಕತೆಯ ವಿವಿಧ ಆಯಾಮಗಳು

ಕೃಷಿಯು ಪ್ರಾಚೀನ ಕಾಲದಿಂದಲೂ ಭಾರತದ ಪ್ರಮುಖ ಉದ್ಯೋಗವಾಗಿದೆ. ಯಾವುದೇ ಸಾಮ್ರಾಜ್ಯದ ಅಭಿವೃದ್ಧಿಗೆ ಆರ್ಥಿಕತೆಯ ಬೆನ್ನಲುಬಾಗಿ ಕೃಷಿ ಪ್ರಮುಖ ಸ್ಥಾನ ಪಡೆದಿದೆ. ಯಾವುದೇ ಸಾಮ್ರಾಜ್ಯವಾಗಿರಲಿ ಅದು ಪ್ರಗತಿ ಹೊಂದಿದೆ ಎಂದರೆ ಆ ಸಾಮ್ರಾಜ್ಯದಲ್ಲಿ ಕೃಷಿಗೆ ವಿಶೇಷ ಪ್ರಮುಖ್ಯತೆ ನೀಡಲಾಗಿರುತ್ತದೆ. ಪ್ರಾಚೀನ ಕಾಲದಿಂದಲೂ ಸಾಮ್ರಾಜ್ಯದ ಆದಾಯದಲ್ಲಿ ಕೃಷಿಯ ಪಾಲೇ ಹೆಚ್ಚು. ಕೃಷಿ ಭೂಮಿಯನ್ನು ವಿಸ್ತರಿಸುವುದಕ್ಕೆ ಪ್ರಭುತ್ವಗಳು ಹೆಚ್ಚು ಹೆಚ್ಚು ಅವಕಾಶ ನೀಡುತ್ತಿದ್ದವು. ಆದ್ದರಿಂದ ರಾಜ್ಯಕ್ಕೆ ಹೆಚ್ಚಿನ ಆದಾಯ ಬರುತ್ತಿತ್ತು. ಇದರಿಂದ ಆ ಸಾಮ್ರಾಜ್ಯವು ಪ್ರಗತಿಯೊಂದಲಾರಂಭಿಸುತ್ತಿತ್ತು. ಈ ಮೂಲಕ ಕೃಷಿಯ ಹೆಚ್ಚುವರಿ ಉತ್ಪಾದನೆಯಿಂದ ಕೃಷಿಯೇತರ ಕಸುಬುಗಳು ಹೆಚ್ಚಾಗಲಾರಂಭಿಸಿದವು. ಹೀಗೆ ಮಧ್ಯಕಾಲೀನ ಭಾರತದ ಚರಿತ್ರೆಯನ್ನು ಗಮನಿಸಿದಾಗ ಕರ್ನಾಟಕದಲ್ಲಿ ಅರೇಬಿಯನ್ನರು, ಯುರೋಪಿಯನ್ನರು ಇಲ್ಲಿನ ಉತ್ಪಾದನೆಯನ್ನು ಗಮನಿಸಿ ಕರ್ನಾಟಕಕ್ಕೆ ಬಂದ ನಂತರ ಕರ್ನಾಟಕದ ಸಾಮಾಜಿಕ ಮತ್ತು ಆರ್ಥಿಕ ಕ್ಷೇತ್ರದಲ್ಲಿ ಮಹತ್ತರವಾದ ಪರಿವರ್ತನೆಗಳು ಕಾಣಿಸಿಕೊಳ್ಳಲಾರಂಭಿಸಿದವು. ಈ ಕಾಲಘಟ್ಟವೇ ವಿಜಯನಗರೋತ್ತರ ಕಾಲವೆಂದು ಗುರುತಿಸಬಹುದಾಗಿದೆ. ವಿಜಯನಗರದ ಆಳ್ವಿಕೆಯ ಕಾಲಾವಧಿಯಲ್ಲಿ ಕೃಷಿಕರಾಗಿ ಗುರುತಿಸಿಕೊಂಡ ಅಮರನಾಯಕರು ಕೃಷಿ ಭೂಮಿಯಲ್ಲಿ ಬೇಸಾಯ ಮಾಡಿ ಕೃಷಿ ಉತ್ಪನ್ನಗಳನ್ನು ಬೆಳೆದು ಸರ್ಕಾರಕ್ಕೆ ತೆರಿಗೆ ಪಾವತಿ ಮಾಡುತ್ತಿದ್ದರು. ಈ ಪ್ರಕ್ರಿಯೇ ಮುಂದೆ ಸಾಮಂತ ಅರಸುಮನೆತನಗಳಾಗಿ ರೂಪಗೊಂಡವು.

ವಿಜಯನಗರೋತ್ತರ ಕಾಲಾವಧಿಯು ಯುರೋಪಿಯನ್ನರ ಆಗಮನದ ಕಾಲವಾಗಿದ್ದು, ಗ್ರಾಮ ಹಾಗೂ ಸಂಸ್ಥಾನಗಳು ಕೃಷಿಯಲ್ಲಿ ಮತ್ತು ಆಹಾರ ಬೆಳೆಗಳಲ್ಲಿ ಸ್ವಯಂ ಪರಿಪೂರ್ಣತೆಯನ್ನು ಹೊಂದಿದ್ದವು. ಆದರೆ ಬ್ರಿಟಿಶರ ಕೃಷಿನೀತಿಯಿಂದ ಗ್ರಾಮಕ್ಕೆ ಬೇಕಾದ ವಸ್ತುಗಳಿಗೆ ಮಾರುಕಟ್ಟೆಯನ್ನು

ಅವಲಂಬಿಸುವಂತೆ ಮಾಡಿತ್ತು. ಮಾರುಕಟ್ಟೆಕೇಂದ್ರಿತ ಹೊಸ ಅರ್ಥವ್ಯವಸ್ಥೆಯೊಂದರ ಉಗಮಕ್ಕೂ ಈ ಕಾಲಘಟ್ಟವು ಕಾರಣವಾಗಿದೆ(ಚಂದ್ರಪ್ಪ, ೨೦೧೨:೨೩).

ಕೆಳದಿಯ ನಾಯಕರು ಅವರ ರಾಜ್ಯದಲ್ಲಿ ಫಲವತ್ತಾದ ಕೃಷಿಭೂಮಿಯನ್ನು ಹೊಂದಿದ್ದರು. ಶಿವಮೊಗ್ಗ, ಚಿಕ್ಕಮಗಳೂರು, ಕಾರವಾರ, ದಕ್ಷಿಣ ಕನ್ನಡ ಮತ್ತು ಧಾರವಾಡ ಪ್ರದೇಶಗಳು ಇವರ ಆಳ್ವಿಕೆಗೆ ಸೇರಿದ್ದು, ಇವರು ಕೃಷಿಭೂಮಿಯ ವಿಸ್ತರಣೆಗೆ ಹಲವಾರು ಯೋಜನೆಗಳನ್ನು ರೂಪಿಸಿದ್ದರು. ಹಾಗೆಯೇ ಕೆಳದಿ ನಾಯಕರ ಆಳ್ವಿಕೆಯ ಕಾಲಾವಧಿಯು ಕೃಷಿಗೆ ವಿಶೇಷ ಪ್ರಾಮುಖ್ಯತೆ ನೀಡಿರುವುದನ್ನು ಅಲ್ಲಿನ ಶಾಸನಗಳಿಂದ ಮತ್ತು ಅವರು ರೂಪಿಸಿದ ಭೂಕಂದಾಯ ಪದ್ಧತಿಯಿಂದ ಗಮನಿಸಬಹುದು. ಇವರು ಕೃಷಿಗೆ ವಿಶೇಷ ಪ್ರಾಮುಖ್ಯತೆ ನೀಡಿದ್ದರು ಎನ್ನುವುದಕ್ಕೆ ಶಿವಪ್ಪನಾಯಕನು ನಾಡಿನಲ್ಲಿ ಸ್ಥಿರವಾದ ರಾಜಕೀಯ ಹತೋಟಿ ಇರಬೇಕಾದರೆ ಸಂತುಷ್ಟರೂ ತೃಪ್ತರೂ ಆದ ರೈತಾಪಿವರ್ಗ ಅತ್ಯಗತ್ಯ ಎಂದು ನಂಬಿದ್ದವರು(ಷೇಕ್‌ಅಲಿ.ಬಿ,(೩), ೨೦೧೮:೨೩೮). ಕೃಷಿಯನ್ನಾಧರಿಸಿ ಜೀವನ ನಡೆಸುವವರನ್ನು ರೈತ ಎಂದು ಕರೆಯಬಹುದಾಗಿದ್ದು, ರೈತ ಎಂಬ ಪರಿಕಲ್ಪನೆಯು ಕಾಲದಿಂದ ಕಾಲಕ್ಕೆ ಸಾಕಷ್ಟು ವ್ಯತ್ಯಾಸಗಳನ್ನು ಹೊಂದುವುದರ ಮೂಲಕ ಈ ರೈತರನ್ನು ಕೃಷಿಕ, ಕೂಲಿ ಕಾರ್ಮಿಕರು, ಭೂಮಾಲೀಕ ವರ್ಗ, ಶ್ರೀಮಂತವರ್ಗದ ರೈತರು, ಸಣ್ಣ ಹಿಡುವಳಿಗಾರರು, ಕೃಷಿ ಕೂಲಿಕಾರ್ಮಿಕರು ಹೀಗೆ ಹಲವಾರು ವ್ಯತ್ಯಾಸಗಳಾಗಿರುವುದನ್ನು ಗಮನಿಸಬಹುದಾಗಿದೆ.

### ೪.೧. ಕೃಷಿ ಮತ್ತು ನೀರಾವರಿ ವ್ಯವಸ್ಥೆ

ಕೆಳದಿಯ ನಾಯಕರು ವಿಜಯನಗರದ ಅರಸರಂತೆಯೇ ಕೃಷಿವ್ಯವಸ್ಥೆಯನ್ನು ಅಭಿವೃದ್ಧಿಗೊಳಿಸಿದರು. ಕೆಳದಿಯ ನಾಯಕರ ಕಾಲದಲ್ಲಿ ನೀರಾವರಿ ಉಪಯೋಗಕ್ಕೆ ಕೆರೆ, ಕೊಳ, ಬಾವಿ, ಮೊದಲಾದವುಗಳು ರಾಜರಿಂದ, ಸಾರ್ವಜನಿಕರಿಂದ ನಿರ್ಮಾಣವಾಗುತ್ತಿದ್ದವು. ಅವುಗಳಿಂದ ಚಿಕ್ಕ ಹಿಡುವಳಿಗಳಿಗೆ ತಕ್ಕಂತೆ ಎಕರೆ ಭೂಮಿಗಳಿಗೆ ನೀರಿನ ಸೌಲಭ್ಯ ದೊರಕಿಸಿಕೊಡಲಾಗುತಿತ್ತು. ಈ ಕಾಲದಲ್ಲಿ ನಿರ್ಮಾಣವಾಗಿರುವ ಕೆರೆಗಳು ಈಗಲೂ ಉಳಿದುಕೊಂಡಿವೆ. ಬಂದಗದ್ದೆ ತೋಟದ ಮೇಲಿನ ಶಕ್ತಿ ಸಂಪಕಟ್ಟೆಕೆರೆ, ಹೊಲಗುಡಿ ಕೆರೆ, ಕಣಗಳು ಕೆರೆ, ಸಂಡೇಕಟ್ಟೆಕೆರೆ,(ವೆಂಕಟೇಶ್,೧೯೯೮,೩,ದರ್ಶ:೨೪೫) ಮುಂತಾದವುಗಳನ್ನು ಉದಾಹರಣೆಗೆ ನೀಡಬಹುದು. ಮಲೆನಾಡ ಪ್ರದೇಶವಾದ್ದರಿಂದ ಗದ್ದೆ ಬೆಳೆಯಲ್ಲಿ ಹೆಚ್ಚಿನ ಪ್ರಾಮುಖ್ಯತೆ ಪಡೆದಿತ್ತು.

ಶಿವಪ್ಪನಾಯಕನು ಕೃಷಿ ಭೂಮಿಯನ್ನು ಈ ಕೆಳಗಿನಂತೆ ವಿಂಗಡಿಸಿದ್ದನು. ಮರಳುಮಿಶ್ರಿತವಾದ ಎರೆಮಣ್ಣಿನಿಂದ ಕೂಡಿರುವುದು ಉತ್ತಮ ಭೂಮಿ, ಎತ್ತರವಾಗಿ ಬಯಲಾಗಿರುವ ಕೆಂಪು ಮಣ್ಣಿನಿಂದ ಕೂಡಿರುವುದು ಮಧ್ಯಮ ತರಗತಿಯದ್ದು, ಕರಿ ಮರಳು ಮತ್ತು ಸಾಧಾರಣ ಮಣ್ಣು ಅಲ್ಲದೆ ನೀರಿನ ವಸತಿಯಿಂದ ಕೂಡಿದ ಭೂಮಿ ಕನಿಷ್ಠ ದರ್ಜೆಯದ್ದು, ಎಟ್ಟೆ ಅಥವಾ ತೇವವಿಲ್ಲದ ಗಟ್ಟಿಯಾಗಿರುವ ಭೂಮಿ ಅಧಮವರ್ಗದ್ದು. ಉರಿಮಂಡಲ ಬಿಸಿ ಮರಳು ಮತ್ತು ನೀರಿನ ಮಟ್ಟಕ್ಕಿಂತಲೂ ಮೇಲಿರುವ ಭೂಮಿ ಅಧಮಾಧಮವಾಗಿರುವುದು. ಹೀಗೆ ಭೂಮಿಯ ಗುಣಲಕ್ಷಣಗಳ ಆಧಾರದ ಮೇಲೆ ಈ ಐದು ವಿಭಾಗಗಳನ್ನಾಗಿ ವಿಭಾಗಿಸಿದನು.

ಕೆಳದಿಯ ಶಿವಪ್ಪನಾಯಕನು ಕಾವೇರಿ ನದಿಗೆ ಸೇತುವೆ ಕಟ್ಟಿದನು(ಶಾಮಶಾಸ್ತ್ರಿ, ೧೯೭೩:೧೬೯). ಶಿವಪ್ಪನಾಯಕನು ಆರ್ಥಿಕತೆಯಲ್ಲಿ ಪ್ರಮುಖ ಪಾತ್ರ ವಹಿಸಿದ್ದನು. ಇವನು ಕೃಷಿವ್ಯವಸ್ಥೆಯನ್ನು ಅಭಿವೃದ್ಧಿಗೊಳಿಸುವುದಕ್ಕೆ ನೀರಾವರಿಗೆ ವಿಶೇಷವಾದ ಪ್ರೋತ್ಸಾಹ ನೀಡಿರುವುದನ್ನು ಹಲವಾರು ದಾಖಲೆಗಳಿಂದ ತಿಳಿಯಬಹುದಾಗಿದೆ. ಅಗ್ರಹಾರ ಮತ್ತು ದೇವಾಲಯ ಪೋಷಣೆಯ ಸುತ್ತ ಕೆರೆ ಮತ್ತು ಕೃಷಿಭೂಮಿ ಅನಿವಾರ್ಯವಾಗಿರುತ್ತಿದ್ದವು. ಕಾರಣವೆಂದರೆ ಅಗ್ರಹಾರಗಳ ನಿರ್ಮಾಣಕ್ಕೆ ಫಲವತತ್ತಾದ ಭೂಮಿಯನ್ನೇ ಆಯ್ಕೆ ಮಾಡಿಕೊಳ್ಳುತ್ತಿದ್ದರು. ಅಗ್ರಹಾರಗಳ ಫಲವಾದ ಭೂಮಿಯು ಕೃಷಿಯ ಬೆಳವಣಿಗೆಗೆ ಬಹುಮುಖ್ಯವಾದ ಭಾಗವಾಗಿದ್ದನ್ನು ಇಲ್ಲಿ ಗಮನಿಸಬಹುದು.

ಕೆಳದಿ ನಾಯಕರ ಕಾಲದಲ್ಲಿ ಕೃಷಿವ್ಯವಸ್ಥೆಯಲ್ಲಿ ಅಗ್ರಹಾರಗಳ ಪಾತ್ರವನ್ನು ಮರೆಯುವಂತಿಲ್ಲ. ಏಕೆಂದರೆ ದಾನ ನೀಡುವ ಅಗ್ರಹಾರಗಳು ಹಂತದಿಂದ ಹಂತಕ್ಕೆ ಕೃಷಿ ವ್ಯಾಪಾರದ ಕೇಂದ್ರಗಳಾಗಿ ಬೆಳೆದುಕೊಂಡು ಬಂದವುಗಳಾಗಿದ್ದವು. ಅಗ್ರಹಾರಗಳಲ್ಲಿ ಹೆಚ್ಚಾಗಿ ಬ್ರಾಹ್ಮಣರು ವಾಸವಾಗಿದ್ದು, ಇನ್ನುಳಿದ ಜಾತಿಯವರು ಅಲ್ಲಿ ಕೃಷಿ ಉತ್ಪನ್ನ ಚಟುವಟಿಕೆಗಳನ್ನು ನಿರ್ವಹಿಸಿಕೊಂಡು ಹೋಗುವವರಾಗಿದ್ದರು.

ಕೆಳದಿಯ ನಾಯಕರು ಕೃಷಿಯನ್ನು ಪ್ರಧಾನವಾಗಿ ಅಭಿವೃದ್ಧಿಪಡಿಸಿದ್ದರು ಎಂಬುದಕ್ಕೆ ಕೆಳದಿ ನೃಪವಿಜಯದಲ್ಲಿ ಈ ಕೆಳಗಿನಂತೆ ವಿವರಿಸಿದ್ದಾರೆ.

ಕೆರೆಸಾಳ್ವುರಮಾರಾಮಂ
ವರಕಾಲಿಸಿಕೇಳು ದಾನ್ಯಭೂಮಿಕೆಯೆಸೆವಾ
ಗರ ತೊಂಟಮಿ ವರ್ಗಗಳಿಂದಡೆ
ದರೆಪಿಲ್ಲದ ತೆರೆದೆ ಗೆಯೆಗೊಳಿಸಿನಿಳೆಯಂ(ಆರ್.ಶಾಮಶಾಸ್ತ್ರಿ, ೧೯೭೩:೭೪).

ಈ ಮೂಲಕವಾಗಿ ಕೆಳದಿಯ ರಾಜ್ಯದಲ್ಲಿ ಹೆಚ್ಚಿನದಾಗಿ ಕೃಷಿ ಮತ್ತು ಕೃಷಿ ಉತ್ಪನ್ನಗಳ ತಯಾರಿಕೆಗೆ ಇವರು ವಿಶೇಷವಾದ ಪ್ರಾಮುಖ್ಯತೆಯನ್ನು ನೀಡಿದ್ದರು. ಭಾರತಕ್ಕೆ ಬಂದ ಯುರೋಪಿಯನ್ನರು ಕೃಷಿ ವಸ್ತುಗಳು ಮತ್ತು ಸಾಂಬಾರು ಪದಾರ್ಥಗಳನ್ನು ಕೆಳದಿಯ ರಾಜ್ಯದಿಂದ ರಫ್ತು ಮಾಡಿಕೊಳ್ಳುತ್ತಿದ್ದರು. ಕೆಳದಿ ರಾಜ್ಯವು ಕೃಷಿ ಉತ್ಪನ್ನಗಳ ಪ್ರಮುಖ ವ್ಯಾಪಾರ ಕೇಂದ್ರವಾಗಿತ್ತು. ಕೆಳದಿ ರಾಜ್ಯದಲ್ಲಿ ಕೃಷಿ ಹೆಚ್ಚಿನದಾಗಿ ಅಭಿವೃದ್ಧಿಗೊಂಡಿದ್ದು, ತೋಟದ ಬೆಳೆಗಳಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿದ್ದರು. ರಾಜ್ಯಕ್ಕೆ ಕೃಷಿ ಉತ್ಪನ್ನಗಳಿಂದ ಹೆಚ್ಚಿನ ಆದಾಯ ಬರುತ್ತಿದ್ದು ಶಿವಮೊಗ್ಗ, ಸಾಗರ ಮತ್ತು ಗೇರುಸೊಪ್ಪೆಗಳಲ್ಲಿ ಯಥೇಚ್ಛವಾಗಿ ಮೆಣಸನ್ನು ಬೆಳೆಯುಲಾಗುತ್ತಿದ್ದರು. ಈ ಕರಿಮೆಣಸಿನ ವ್ಯಾಪಾರಕ್ಕೆ ಪೋರ್ಚುಗೀಸರು ಇವರ ಜೊತೆ ಆರ್ಥಿಕ ಸಂಬಂಧವನ್ನು ಹೊಂದಿದ್ದರು.

ಕೆಳದಿಯ ರಾಜ್ಯವು ಬೇರೆ ಬೇರೆ ಕಡೆ ಕೃಷಿ ವ್ಯಾಪಾರ ನಡೆಸಲು ಈ ಕೆಳಗಿನ ನಗರಗಳೊಂದಿಗೆ ಸಂಬಂಧ ಹೊಂದಿತ್ತು. ಅವುಗಳೆಂದರೆ: ವಾಲಾಜುಪೇಟೆ, ಮೊಳಕಾಲ್ಮೂರು, ಕಂಬದಪೇಟೆ, ರಾಯದುರ್ಗ, ತಾಡಪತ್ರೆ, ಉರವಕೊಂಡ, ಕಡಪ, ಬಳ್ಳಾರಿ, ನಗರಗೇರಿ ಮೊದಲಾದ ಪ್ರದೇಶಗಳು ಕೃಷಿ ಉತ್ಪನ್ನ ವ್ಯಾಪಾರದ ಕೇಂದ್ರಗಳಾಗಿದ್ದವು(ಅರುಣ್, ೨೦೦೬:೭೪).

ಕೆಳದಿಯ ನಾಯಕರು ವ್ಯಾಪಾರ ಚಟುವಟಿಕೆಯ ವಸ್ತುಗಳಾದ ಭತ್ತ, ಅಕ್ಕಿ, ರಾಗಿ, ಉಪ್ಪು, ಹುಣಸೆಹಣ್ಣು, ಬೇಳೆಕಾಳುಗಳು, ಎಣ್ಣೆ, ತುಪ್ಪ, ಬೆಲ್ಲ, ತೆಂಗಿನಕಾಯಿ, ಒಣಕೊಬ್ಬರಿ, ಮೊದಲಾದ ಕೃಷಿ ಉತ್ಪನ್ನಗಳನ್ನು ಈ ಕಾಲಾವಧಿಯಲ್ಲಿ ಬೆಳೆದಿರುವುದನ್ನು ಗಮನಿಸಬಹುದಾಗಿದೆ. ಈ ಉತ್ಪನ್ನಗಳನ್ನು ವಿಜಯನಗರ ಕಾಲದಲ್ಲಿಯೂ ಬೆಳೆಯುತ್ತಿದ್ದರು. ಇದು ಕೆಳದಿಯ ನಾಯಕರ ಕಾಲದಲ್ಲಿಯೂ ಮುಂದುವರಿದಿದೆ(ಷೇಕ್ ಅಲಿ,(ಇ),೨೦೧೮,:೨೪೩). ಕರ್ನಾಟಕದಲ್ಲಿ ಗುರುತಿಸಿಕೊಂಡ ಈ ಮೇಲಿನ ಬೆಳೆಗಳು ಮಾನವನ ಜೀವನಾವಶ್ಯಕ ವಸ್ತುಗಳಾಗಿದ್ದು ಇವುಗಳು ಹಂತದಿಂದ ಹಂತಕ್ಕೆ ಬೆಳೆಯುವ ವಿಧಾನದಲ್ಲಿ ಮಾರ್ಪಾಡುಗಳಾಗಿರುವುದನ್ನು ಗಮನಿಸಬಹುದಾಗಿದೆ.

ಕೆಳದಿಯ ನಾಯಕರು ಕೃಷಿಗೆ ಯೋಗ್ಯವಾದ ಭೂಮಿಯನ್ನು ನೀರಾವರಿ ಭೂಮಿ ಹಾಗೂ ಖುಷ್ಕಿ ಭೂಮಿ ಎಂದು ಎರಡು ಭಾಗಗಳಾಗಿ ವಿಭಾಗಿಸಿಕೊಂಡಿದ್ದರು. ಮೊದಲೇ ತಿಳಿಸಿದಂತೆ ನೀರಾವರಿ ಕೃಷಿಗೆ ಕೆರೆ, ನದಿ, ಬಾವಿ ನೀರನ್ನು ಅವಲಂಬಿಸಿದರೆ, ಖುಷ್ಕಿ ಭೂಮಿಯಲ್ಲಿ ಮಳೆಗಾಲವನ್ನು ಅನುಸರಿಸಿಕೊಂಡು ಬಿತ್ತನೆ ಮಾಡಿ ರಾಗಿ, ಕಬ್ಬು, ಎಳ್ಳು, ಶೇಂಗಾ, ಭತ್ತ ಮೊದಲಾದ ಬೆಳೆಗಳನ್ನು ಕೆಳದಿಯ ನಾಯಕರು ಬೆಳಯುತ್ತಿದ್ದರು(ಸೋಸಲೆ, ೨೦೦೪:೨೯).

ಅಗ್ರಹಾರಗಳನ್ನು ಹೆಚ್ಚಿನದಾಗಿ ಪಡೆದಿದ್ದ ಈ ಬ್ರಾಹ್ಮಣರು ಅಲ್ಲಿನ ಭೂಮಿಯನ್ನು ಊರಿನ ರೈತರು ಸಾಗುವಳಿ ಮಾಡಿ ಅವರಿಂದ ಗೇಣಿ ರೂಪದಲ್ಲಿ ಸಂಭಾವನೆಯನ್ನು ಪ್ರತಿವರ್ಷ ಪಡೆಯುತ್ತಿದ್ದರು. ಈ ಗೇಣಿಯನ್ನು ಅವರು ವ್ಯವಸಾಯ ಮಾಡುವ ಭೂಮಿಯ ವಿಸ್ತರಣೆಯ ಪ್ರಕಾರ ನಿಗದಿ ಪಡಿಸಲಾಗುತ್ತಿದ್ದಿತು. ಈ ಮೂಲಕವಾಗಿ ಕೆಳದಿ ನಾಯಕರು ತಮ್ಮ ಕಾಲಾವಧಿಯಲ್ಲಿ ಕೃಷಿಗೆ ಪ್ರೋತ್ಸಾಹವನ್ನು ನೀಡಿದ್ದರು. ಕೃಷಿ ಮೂಲದ ಕಂದಾಯವ್ಯವಸ್ಥೆಯನ್ನು ಕುರಿತಂತೆ ವಿಶೇಷ ಯೋಜನೆಗಳನ್ನು ಶಿವಪ್ಪನಾಯಕನು ಜಾರಿಗೆ ತಂದಿದ್ದನು. ಅದೇ ಶಿವಪ್ಪನಾಯಕನ ಸಿಸ್ತಾ ಎಂದು ಪ್ರಸಿದ್ಧವಾಗಿದೆ,

ಕೆಳದಿಯನ್ನಾಳಿದ ಪೂರ್ವಜರು ಮಣ್ಣಿನ ಮಕ್ಕಳು. ಕೃಷಿಯೇ ಅವರ ಕಾಯಕ ಎಂಬ ಕಥೆ ಐತಿಹ್ಯಗಳಿಂದ ತಿಳಿಯುತ್ತದೆ. ಆದರೆ ಸ್ವಸಾಮರ್ಥ್ಯದಿಂದ ಅವರು ತಮ್ಮ ಸಾಮ್ರಾಜ್ಯ ಬಲಿಷ್ಠವಾಗುವಂತೆ ಶ್ರಮಿಸಿದರು(ಮರುಳಯ್ಯ, ೨೦೧೬:೧೧). ಇವರು ಕೃಷಿ ವೃತ್ತಿಯನ್ನು ಅಭಿವೃದ್ಧಿಪಡಿಸುತ್ತಾ ಮಲೆನಾಡಿನ ಆರ್ಥಿಕ ವ್ಯವಸ್ಥೆಯನ್ನು ಬಲಿಷ್ಠವನ್ನಾಗಿಸಿರುವುದನ್ನು ಗುರುತಿಸಬಹುದು. ಯುರೋಪಿಯನ್ನರು ಇಲ್ಲಿನ ಕೃಷಿ ಆರ್ಥಿಕ ವ್ಯವಸ್ಥೆಯನ್ನು ಬದಲಿಸಿ ಕೆಳದಿಯ ನಾಯಕರ ವಾಣಿಜ್ಯ ಬೆಳೆಗಳ ಅಭಿವೃದ್ಧಿಗೆ ಬೆಂಬಲ ನೀಡಿರುವುದನ್ನು ಗುರುತಿಸಬಹುದಾಗಿದೆ. ಕೆಳದಿ ಆಹಾರದ ಕೃಷಿ ಉತ್ಪನ್ನಕ್ಕೆ ಪ್ರಾಮುಖ್ಯತೆ ಪಡೆದ ಮನೆತನವಾಗಿದ್ದು ಕೃಷಿಗೆ ಪೂರಕವಾಗಿರುವಂತೆ ಶಿವಪ್ಪನಾಯಕನು ಭುವನಗಿರಿಯಲ್ಲಿ ಕೋಟೆ, ದೇವಾಲಯ, ಅಗ್ರಹಾರಗಳ ನಿರ್ಮಾಣದ ಜೊತೆ ಭತ್ತದ ಗದ್ದೆ ಮತ್ತು ತೋಟಗಳಿಗೆ ನೀರು ಸರಬರಾಜು ಮಾಡಲು ಕೆರೆಯನ್ನು ಕಟ್ಟಿಸಿದನು. ಇವನು ತನ್ನ ಅಜ್ಜನ ಹೆಸರಿನಲ್ಲಿ ಸದಾಶಿವಸಾಗರ ಎಂಬ ಕೆರೆಯನ್ನು ಕಟ್ಟಿಸಿ ಸಂಗಮೇಶ್ವರ ಎಂಬ ಗ್ರಾಮವನ್ನು ನಿರ್ಮಿಸಿ ಸಾರ್ವಜನಿಕರಿಗೆ ಅನುಕೂಲವನ್ನು ಒದಗಿಸಿಕೊಟ್ಟಿದ್ದನು.(ಶ್ಯಾಮಶಾಸ್ತ್ರಿ, ೧೯೭೩:೭೫–

೭೬). ಹೀಗೆ ಕೆಳದಿ ನಾಯಕರು ನೀರಾವರಿಗೆ ಅನುಕೂಲವಾಗಲೆಂದು ಅನೇಕ ಕೆರೆ ಕಾಲುವೆಗಳನ್ನು ನಿರ್ಮಿಸಿದ್ದಾರೆ. ಸಾರ್ವಜನಿಕರು ಸದಾ ಕೃಷಿಗೆ ಪೂರಕವಾಗಿ ನೀರಾವರಿ ಕಾರ್ಯಗಳನ್ನು ಕೈಗೊಂಡಿದ್ದರು. ೧೬೨೧ ರಲ್ಲಿ ವೆಂಕಟಪ್ಪನಾಯಕನ ಕಾಲದಲ್ಲಿ ಹತ್ತಿಮುತ್ತೋರಿನ ಸೇನಬೋವ ಕಾಮದೇವಭಟ್ಟನ ಮಗನು ಗೋವರ್ಧನಗಿರಿಯ ಗೇರುಸೊಪ್ಪೆ ಮಾರ್ಗದಲ್ಲಿ ಒಂದು ಕೆರೆಯನ್ನು ಕಟ್ಟಿಸಿದನೆಂದು ಉಲ್ಲೇಖ ಸಿಗುತ್ತದೆ(ಎ.ಕ.೪.ಸಾ.೫೪). ಪ್ರಭುತ್ವವಲ್ಲದೇ ಪ್ರಭುತ್ವದ ಅಧೀನದಲ್ಲಿರುವ ಸಾಮಂತ ಆಡಳಿತಾಧಿಕಾರಿಗಳು ಕೆರೆ ಕಟ್ಟೆ ನಿರ್ಮಿಸುತ್ತಿದ್ದರು.

ಪ್ರಾಚೀನ ಕಾಲದಿಂದಲೂ ಮುಂದುವರಿದ ಸಂಪ್ರದಾಯ ಕೆಳದಿಯ ನಾಯಕರ ಆಳ್ವಿಕೆಯ ಕಾಲದಲ್ಲಿಯೂ ಇತ್ತು. ಭೂದಾನ ನೀಡಿದವರು ಸ್ವರ್ಗಲೋಕಕ್ಕೆ ಪ್ರಾಪ್ತರಾಗುವವರೆಂದು ನಂಬಿಕೆಯಿತ್ತು. ಇವರು ಹಿಂದೆ ನಿರ್ಮಾಣವಾಗಿದ್ದ ಎಲ್ಲ ನೀರಾವರಿ ಮೂಲಗಳನ್ನು ರಿಪೇರಿ ಮಾಡಿಸುತ್ತಿದ್ದರು. ಈ ಮೂಲಕ ಇವರು ಕೃಷಿ ನೀರಾವರಿಗೆ ವಿಶೇಷವಾದ ಪ್ರಾಮುಖ್ಯತೆ ನೀಡಿರುವುದು ಕಂಡುಬರುತ್ತದೆ. ಕರಾವಳಿ ಭಾಗಗಳನ್ನೊಳಗೊಂಡ ಈ ಪ್ರದೇಶವು ಕೃಷಿ ನೀರಾವರಿಯನ್ನೊಳಗೊಂಡ ತೋಟದ ಬೆಳೆಗಳನ್ನು ಬೆಳೆಯುವುದಕ್ಕೆ ಭೌಗೋಳಿಕ ಪರಿಸರ ಅಚ್ಚುಕಟ್ಟಾಗಿತ್ತು. ಕೃಷಿ ಭೂಮಿಯನ್ನು ವಿಸ್ತರಿಸುವುದಕ್ಕೆ ಇವರು ರೈತರಿಗೆ ಮುಂಗಡವಾಗಿ ಹಣವನ್ನು ನೀಡಿ ಅಧಿಕ ಉತ್ಪನ್ನ ಪಡೆಯಲು ನೆರವು ನೀಡುತ್ತಿದ್ದರು. ಹಾಗಾಗಿ ಶ್ರಮಕ್ಕೆ ತಕ್ಕ ಪ್ರತಿಫಲ ಪಡೆದ ನಂತರ ಅದನ್ನು ಸರ್ಕಾರಕ್ಕೆ ಹಿಂದಿರುಗಿಸಬೇಕಿತ್ತು. ಕೆರೆಗಳನ್ನು ನಿರ್ಮಿಸಿ ಬೀಳುಭೂಮಿಯನ್ನು ಕೃಷಿಯೋಗ್ಯ ಭೂಮಿಯನ್ನಾಗಿ ಪರಿವರ್ತಿಸಿ ಕೃಷಿಗೆ ಒಳಪಡಿಸುತ್ತಿದ್ದರು. ಪ್ರಜೆಗಳ ಯೋಗಕ್ಷೇಮವನ್ನು ಕುರಿತಂತೆ ಪ್ರಕೃತಿ ವಿಕೋಪದಿಂದ ನಷ್ಟ ಹೊಂದಿದಾಗ ಸರ್ಕಾರದಿಂದ ಪರಿಹಾರವನ್ನು ನೀಡುತ್ತಿದ್ದರು. ಅಂದರೆ ಸರ್ಕಾರ ವಸೂಲಿ ಮಾಡುವ ತೆರಿಗೆಯನ್ನು ಮನ್ನಾ ಮಾಡುವುದು. ಅಥವಾ ಪರಿಹಾರ ನೀಡುವುದು ೯೪ ಶಾಸನಗಳಲ್ಲಿ ಈ ಕುರಿತ ಮಾಹಿತಿ ಇದೆ(ಎ.ಕ.೮, ಟಿಎಲ್:೯೫). ಪ್ರಸ್ತುತ ಆಧುನಿಕ ಸಂದರ್ಭದಲ್ಲಿಯೂ ಪ್ರಕೃತಿ ವಿಕೋಪ ಮೊದಲಾದ ಕಾರಣದಿಂದ ನಷ್ಟ ಉಂಟಾದರೆ ಸರ್ಕಾರವೇ ಗಂಜಿ ಕೇಂದ್ರಗಳನ್ನು ತೆರೆದು ವಸತಿಯೋಗ್ಯ ಭೂಮಿ ಅಥವಾ ಮನೆಗಳನ್ನು ನಿರ್ಮಿಸಿಕೊಡುತ್ತಿರುವುದನ್ನು ಗಮನಿಸಬಹುದಾಗಿದೆ. ಈ ರೀತಿ ನಿರ್ಮಿಸಿದ ವಸತಿನೆಲೆಗಳು ಪುನಃ ಹೊಸದೊಂದು ಹಳ್ಳಿ ಸ್ವರೂಪದಿಂದ ಬೆಳೆದು ತನ್ನ ಅಸ್ತಿತ್ವ ಕಂಡುಕೊಳ್ಳುತ್ತಿತ್ತು. ಪ್ರಕೃತಿ ವಿಕೋಪವಾದಾಗ ಗ್ರಾಮದ ಕಂದಾಯ ದಾನ ಮತ್ತು ತೆರಿಗೆ ವಿನಾಯಿತಿ ನೀಡಿದ್ದರು. ಇದಕ್ಕೆ ಪೂರಕವೆಂಬಂತೆ ೧೬೬೪ರ ಒಂದು ಶಾಸನದಂತೆ ತೂದೂರು ಗ್ರಾಮದ ಒಬ್ಬ ರೈತನ ನೀರಾವರಿ ಭಾವಿಯೂ ಅನಿರೀಕ್ಷಿತವಾಗಿ ಹಾಳಾದಾಗ ಸರ್ಕಾರವು ೧೧/೨ ಗದ್ಯಾಣ ಹಣವನ್ನು ಪರಿಹಾರ ರೂಪದಲ್ಲಿ ನೀಡಿತೆಂದು ಹೇಳುತ್ತದೆ(ಎ.ಕ–೮:೧೮೫). ಹೀಗೆ ಕೆಳದಿಯ ನಾಯಕರು ಕೃಷಿಯೋಗ್ಯವಲ್ಲದ ಭೂಮಿಯನ್ನು ಕೃಷಿಯೋಗ್ಯ ಭೂಮಿಯನ್ನಾಗಿ ಪರಿವರ್ತಿಸಿ. ಕೆರೆ, ಕಾಲುವೆ, ಭಾವಿಗಳನ್ನು ನಿರ್ಮಿಸಿ ನೀರಾವರಿಗೆ ಅನುಕೂಲ ಒದಗಿಸಿಕೊಟ್ಟಿರುವುದನ್ನು ಅಲ್ಲಿನ ಶಾಸನ, ಸಾಹಿತ್ಯಾಧಾರಗಳಿಂದ ತಿಳಿಯಬಹುದಾಗಿದೆ.

ವಿಜಯನಗರದ ಅರಸರ ಕಾಲದಲ್ಲಿ ಅಮರ ಮಾಗಣಿಯನ್ನು ಪಡೆದು ಪ್ರಥಮ ಸ್ಥಾನದಲ್ಲಿದ್ದ ನಾಯಕರಲ್ಲಿ ಚಿತ್ರದುರ್ಗದ ನಾಯಕರು ಸೇರುತ್ತಾರೆ. ೧೪೩೫ರಲ್ಲಿ ಹೊಳಲ್ಕೆರೆಯ ಪ್ರದೇಶದಲ್ಲಿ

ಬಡ್ತಿ ಪಡೆದು ತಮ್ಮ ಆಳ್ವಿಕೆಯನ್ನು ಆರಂಭಿಸುತ್ತಾರೆ. ಚಿತ್ರದುರ್ಗ ಪ್ರದೇಶವು ಬಯಲುಸೀಮೆಯ ಪ್ರದೇಶವನ್ನೊಳಗೊಂಡಿದ್ದು, ಇಲ್ಲಿನ ಹವಾಗುಣ, ಖನಿಜ, ಜಲಸಂಪತ್ತು, ಕಾಡು, ಹೊರಗಿನಿಂದ ಬಂದ ಜನರಿಗೆ ಆಕರ್ಷಕವಾಗಿತ್ತು. ಇಲ್ಲಿನ ಕಾಡು ಹೊರಗಿನಿಂದ ಜನರನ್ನು ವಲಸೆ ಬರುವಂತೆ ಆಹ್ವಾನಿಸುವಷ್ಟು ಸಮೃದ್ಧವಾಗಿರುವ ಪ್ರದೇಶವಾಗಿದ್ದು ಇಲ್ಲಿನ ಕೃಷಿಯು ಹೆಚ್ಚು ಮಳೆಯನ್ನು ಅವಲಂಬಿಸಿತ್ತು.

ವಿಜಯನಗರದ ಅರಸರು ಅಳವಡಿಸಿಕೊಂಡ ಕೃಷಿ ವಿಧಾನವನ್ನು ವಿಜಯನಗರೋತ್ತರ ಸಾಮಂತ ಪ್ರಭುತ್ವಗಳು ಮುಂದುವರಿಸಿದವು. ಅದರಲ್ಲಿ ಚಿತ್ರದುರ್ಗವು ಸಹ ಒಂದು. ಚಿತ್ರದುರ್ಗದ ನಾಯಕರು ಕೃಷಿಯೋಗ್ಯವಲ್ಲದ ಭೂಮಿಯನ್ನು ಕೃಷಿಭೂಮಿಯನ್ನಾಗಿ ವಿಸ್ತರಿಸುತ್ತಿದ್ದರು. ಬುಡಕಟ್ಟು ಜನರು ಹೆಚ್ಚು ನೆಲೆಸಿರುವ ಈ ಪ್ರದೇಶದಲ್ಲಿ ಕೃಷಿಭೂಮಿಯ ವಿಸ್ತರಣೆಯ ಜೊತೆ ಬುಡಕಟ್ಟು ವೃತ್ತಿಗಳಾದ ಪಶುಪಾಲನೆ, ಕುರಿ ಸಾಕಣೆ, ಹೈನುಗಾರಿಕೆಯನ್ನು ಈ ಪ್ರದೇಶದ ಜನರು ಅಭಿವೃದ್ಧಿಪಡಿಸಿದ್ದರು. ಈ ರೀತಿಯ ಆರ್ಥಿಕ ಸಮೃದ್ಧಿಯ ಪರಿಣಾಮವಾಗಿ ಈ ಪ್ರದೇಶದಲ್ಲಿ ವಿಜಯನಗರದ ಅರಸರ ಮಾದರಿಯಲ್ಲಿಯೇ ಪಾಳೆಯಗಾರರು ತಮ್ಮ ಆರ್ಥಿಕ ವ್ಯವಸ್ಥೆಯನ್ನು ಅಭಿವೃದ್ಧಿಪಡಿಸಿದರು. ಬುಡಕಟ್ಟು ಸಂಸ್ಕೃತಿಯ ಆರ್ಥಿಕ ವ್ಯವಸ್ಥೆಯ ಪರಂಪರೆಯನ್ನು ಉಳಿಸಿಕೊಂಡು ಬಂದಿದ್ದರು. ಚಿತ್ರದುರ್ಗದ ನಾಯಕರು ಆಳ್ವಿಕೆ ನಡೆಸಿದ ಪ್ರದೇಶವು ಬಯಲುಸೀಮೆಯ ಪ್ರದೇಶವಾಗಿದ್ದು, ಮಳೆಯ ನೀರನ್ನು ಆಶ್ರಯಿಸಲಾಗಿತ್ತು. ಜೊತೆಗೆ ಅನೇಕ ಕೆರೆ, ಬಾವಿ, ಕಟ್ಟೆಗಳು ನಿರ್ಮಿಸಿರುವುದನ್ನು ಇವರ ಕಾಲದಲ್ಲಿ ಕಾಣಬಹುದು.

ಇವರ ಮುಖ್ಯ ಕಸುಬು ಕೃಷಿಯಾಗಿದ್ದು, ಇದರ ಅಭಿವೃದ್ಧಿಗೆ ಆಡಳಿತ ಮತ್ತು ಕೃಷಿಕರು ಸಕ್ರಿಯವಾಗಿ ತೊಡಗಿದ್ದರು. ಕೃಷಿಭೂಮಿಯನ್ನು ಅನೇಕ ವಿಧಗಳಾಗಿ ವಿಭಾಗಿಸಿಕೊಂಡಿದ್ದರು. ಬ್ರಾಹ್ಮಣರಿಗೆ ಭೂದಾನಗಳನ್ನು ನೀಡುವಾಗ ಉತ್ತಮ, ಮಧ್ಯಮ, ಕನಿಷ್ಠವೆಂದು ವಿಂಗಡಿಸಿದ್ದರು(ಕಲಬುರ್ಗಿ, ೧೯೯೪:೩೫-೩೭). ಪ್ರಾಚೀನ ಕಾಲದಿಂದಲೂ ಬ್ರಾಹ್ಮಣರಿಗೆ ಭೂಮಿಯನ್ನು ದಾನ ಕೊಡುವ ಪರಿಕಲ್ಪನೆ ಇದ್ದು, ದೇವಾಲಯಕ್ಕೆ ದೇವದಾಯಗಳನ್ನು ದೇವರಿಗೆ ಭೂಮಿಯನ್ನು ದಾನ ಬಿಡುತ್ತಿದ್ದರು. ಬ್ರಾಹ್ಮಣರಿಗೆ ಮತ್ತು ದೇವಾಲಯಗಳಿಗೆ ನೀಡಿದ ದಾನಗಳು ಆರ್ಥಿಕ ಮೂಲಗಳಾಗಿ ಪರಿವರ್ತನೆಗೊಳಪಡುತ್ತಿದ್ದವು. ಹೀಗೆ ಬ್ರಾಹ್ಮಣರಿಗೆ ನೀಡಿದ ಭೂಮಿಗಳನ್ನು ಕೃಷಿಗೆ ಒಳಪಡಿಸುತ್ತಿದ್ದರು. ಕೃಷಿಗೆ ಒಳಪಡಿಸಿದ್ದರಿಂದ ಸಾಗುವಳಿಗೆ ಒಳಪಟ್ಟು ಭೂಮಿಯು ಕೃಷಿಯೋಗ್ಯ ಭೂಮಿಯಾಗಿ ಪರಿವರ್ತಿತವಾಗುತ್ತಿತ್ತು. ಇವರು ಸಾಗುವಳಿಯಾದ ಭೂಮಿಯನ್ನು ಗದ್ದೆ, ಬೆದ್ದಲು ಮತ್ತು ತೋಟ ಎಂಬುದಾಗಿ ವರ್ಗೀಕರಿಸಿಕೊಂಡಿದ್ದರು.

೧೬೬೮ರಲ್ಲಿ ಬಿಚ್ಚುಗತ್ತಿಭರಮಣ್ಣ ನಾಯಕನು ನೀರ್ಥಡಿಯ ಶ್ರೀರಂಗನಾಥ ಸ್ವಾಮಿಯ ದೇವಾಲಯ ಜೀರ್ಣೋದ್ಧಾರ ಮಾಡಿ ಆ ದೇವರಿಗೆ ಎರಡು ಮಮಸ್ತೆ ತೋಟವನ್ನು ದತ್ತಿ ನೀಡಿದನು(ಎ.ಕ,೧೧, ದಾ:೬೪). ಇವರ ಆಳ್ವಿಕೆಯ ಕಾಲಾವಧಿಯಲ್ಲಿ ಖುಷ್ಕಿ, ತರಿ, ಬಾಗಾಯ್ತು ಎಂಬ ಭೂ ಹಿಡುವಳಿಗಳಿದ್ದವು. ಕಂದಾಯ ಪಡೆಯುವ ಭೂಹಿಡುವಳಿಗಳನ್ನು ಗದ್ದೆ, ಹೊಲ,

ಬೆದ್ದಲು, ಬೈಲು, ತೋಟ, ತುಡಿಕೆ ಎಂದು ಕರೆಯುತ್ತಿದ್ದರು. ಈ ಪ್ರದೇಶದಲ್ಲಿ ಜೀವನದಿಗಳ ಉಗಮ ಸ್ಥಾನಗಳಿಲ್ಲದೇ ಇರುವುದರಿಂದ ಕೃಷಿ ನೀರಾವರಿಗೆ ಕೆರೆಗಳೇ ಆಶ್ರಯ ತಾಣಗಳಾಗಿದ್ದವು. ಹಾಗಾಗಿ ವಿಜಯನಗರೋತ್ತರ ಕಾಲದ ಪಾಳೆಯಗಾರರ ಕಾಲದಲ್ಲಿ ಕೆರೆ, ಬಾವಿ, ಹೊಂಡಗಳ ನಿರ್ಮಾಣ ಕಾರ್ಯ ತ್ವರಿತವಾಗಿ ಸಾಗಿತ್ತು. ಚಿತ್ರದುರ್ಗದ ನಾಯಕರ ಆಳ್ವಿಕೆಯ ಕಾಲದಲ್ಲಿ ಆಧುನಿಕವಾಗಿ ಹೊನ್ನಾಳಿ ಚಿತ್ರದುರ್ಗ ಮತ್ತು ಮೊಳಕಾಲ್ಮೂರು ತಾಲೂಕು ಪ್ರದೇಶಗಳಲ್ಲಿ ಇವರು ನಿರ್ಮಾಣ ಮಾಡಿದ ಕೆರೆ, ಬಾವಿ, ಹೊಂಡಗಳು ಪ್ರಸ್ತುತವೂ ಕಂಡುಬರುತ್ತದೆ.

ಮಳೆಯನ್ನು ಅವಲಂಬಿಸಿ ವ್ಯವಸಾಯ ಮಾಡಬೇಕಿದ್ದ ಜಮೀನನ್ನು ಹೊಲ ಮತ್ತು ಬೆದ್ದಲು ಎಂದು ಕರೆಯುತ್ತಿದ್ದರು. ಕೆರೆ, ಬಾವಿ ಮೊದಲಾದವುಗಳನ್ನು ಆಧರಿಸಿ ನಡೆಸುತ್ತಿದ್ದ ವ್ಯವಸಾಯ ಪದ್ಧತಿಯನ್ನು ನೀರಾರಂಭವೆಂದು ಕರೆಯುತ್ತಿದ್ದರು. ಒಂದು ಗ್ರಾಮದ ಕೃಷಿ ಭೂಮಿಯಲ್ಲಿ ಲಿಂಗಮುದ್ರ ಕಲ್ಲುಗಳ ಮೂಲಕ ಕೃಷಿಭೂಮಿಯ ಗಡಿ ಗುರುತಿಸಲು ಉಪಯೋಗಿಸುತ್ತಿದ್ದರು. ಒಂದು ಗ್ರಾಮದಿಂದ ಮತ್ತೊಂದು ಗ್ರಾಮವನ್ನು ಪ್ರತ್ಯೇಕಿಸುವ ಈ ಕಲ್ಲುಗಳ ಮೂಲಕ ಹಾಗೂ ಲಿಂಗಮುದ್ರೆ ಕಲ್ಲುಗಳನ್ನು ನೆಟ್ಟು ಗಡಿಯನ್ನು ಗುರುತಿಸುವ ಕ್ರಮ ಜಾರಿಯಲ್ಲಿತ್ತೆಂದು ನಿಬಗೂರು ಶಾಸನದಿಂದ ತಿಳಿಯುತ್ತದೆ(ಎ.ಕ.೧೧. ದಾ:೨೩-೩೧).

ಚಿತ್ರದುರ್ಗದ ನಾಯಕರು ಕೃಷಿ ನೀರಾವರಿಯನ್ನು ಅಭಿವೃದ್ಧಿಪಡಿಸಿರುವುದಕ್ಕೆ ಅಲ್ಲಿನ ಭೌಗೋಳಿಕ ಪರಿಸರವು ಕಾರಣವಾದರೆ, ಕೋಟೆ ಕಟ್ಟಿ ಆಳ್ವಿಕೆ ನಡೆಸಲು ಅಲ್ಲಿನ ಪರಿಸರವು ಮುಖ್ಯ ಕಾರಣವಾಗಿದೆ. ಬಯಲುಸೀಮೆಯ ಪ್ರದೇಶವಾದ ಚಿತ್ರದುರ್ಗಕ್ಕೆ ನೀರಾವರಿ ಭೂಮಿಯನ್ನು ಅಳವಡಿಸಿಕೊಳ್ಳುವುದಕ್ಕೆ ಕೆರೆ, ಬಾವಿಗಳನ್ನು ತೋಡಿಸಿದ್ದರು. ಇವರ ನೀರು ಸಂಗ್ರಹ ಮತ್ತು ಅದರ ತಾಂತ್ರಿಕತೆಗೆ ಸಂಬಂಧಿಸಿದಂತೆ ಚಿತ್ರದುರ್ಗದಲ್ಲಿರುವ ಸಂತೆಹೊಂಡವು ಉತ್ತಮ ಉದಾಹರಣೆಯಾಗಿದೆ. ಈ ಹೊಂಡಕ್ಕೆ ಕೋಟೆ ಪರಿಸರದಿಂದ ನಾಲೆಗಳ ಮೂಲಕ ನೀರನ್ನು ಹರಿಸುವ ತಂತ್ರಜ್ಞಾನ ಆಧುನಿಕತೆಯನ್ನು ಮೀರಿಸುವಂತದ್ದು. ಈ ತಂತ್ರಜ್ಞಾನವನ್ನು ಕುರಿತಂತೆ ಪ್ರಸ್ತುತ ಹೆಚ್ಚು ಅಧ್ಯಯನಗಳಾಗುತ್ತಿವೆ.

ಭರಮಣ್ಣನಾಯಕನ ಕಾಲದಲ್ಲಿ ಈ ಸೀಮೆಯಲ್ಲಿ ಇಪ್ಪತ್ತು ಕೆರೆಗಳು, ಚಿತ್ರದುರ್ಗದ ಊರ ಸುತ್ತ ಇರುವ ಹೊರಸುತ್ತಿನ ಭಾರಿ ಕೋಟೆ, ಅನೇಕ ಕೋಟೆ ಬಾಗಿಲುಗಳು, ಬುರುಜುಗಳು ಇವೇ ಮೊದಲಾದ ಬೃಹತ್ ಕೆಲಸಗಳನ್ನು ಮಾಡಿಸಿದನು. ಹಾಗೆಯೇ ಕೃಷಿ ಮತ್ತಿತರ ಗ್ರಾಮೀಣ ಕುಲಕಸುಬುಗಳಿಗೆ ಎಲ್ಲಾ ರೀತಿಯ ಪ್ರೋತ್ಸಾಹವನ್ನು ಭರಮಣ್ಣನಾಯಕನು ನೀಡಿದ್ದನು(ರಾಜಶೇಖರಪ್ಪ, ೨೦೧೬:೨೦೩). ಹೀಗೆ ಚಿತ್ರದುರ್ಗದ ನಾಯಕರ ಆಳ್ವಿಕೆಯ ಕಾಲಾವಧಿಯಲ್ಲಿ ಹಲವಾರು ರೀತಿಯ ಪ್ರೋತ್ಸಾಹ ಅಲ್ಲಿನ ಕಸುಬುದಾರರಿಗೆ ದೊರೆಯುತ್ತಿತ್ತೆಂದು ಹೇಳಬಹುದು. ಈ ಮೂಲಕ ಕೃಷಿಗೆ ಪೂರಕವಾದ ವೃತ್ತಿ ಕಸುಬುಗಳು ಅಭಿವೃದ್ಧಿಯಾದವು.

ಒಂದು ಗ್ರಾಮಕ್ಕೆ ಹೊಲ, ಕೆರೆ ಹಿಂದೆ ಗದ್ದೆ, ತೋಟ, ಮಳಲು ಗ್ರಾಮದಲ್ಲಿ ಎರಡು ಎತ್ತಿನ ಗಳೆ ೧ಕ್ಕೆ ಅಳೆವತ್ತು(ಅಳೆಯುವ ಒತ್ತ), ಐದು ಕೊಳಗ ಎರೆ ಗ್ರಾಮದಲ್ಲಿ ಎಂಟೆತ್ತಿನಗಳಕ್ಕೆ ಅಳೆವತ್ತು ಹತ್ತು ಕೊಳಗ, ಹೊರೆಹುಲ್ಲು, ಮೊರಬತ್ತ, ಒಲಾಗಿವತ್ತ, ಬೊಗಸೆಬತ್ತ ಎಂದು ಎಂ.ಎಸ್.ಪುಟ್ಟಣ್ಣ

ಅವರು ಚಿತ್ರದುರ್ಗದ ಪಾಳೆಯಗಾರರು ಕೃತಿಯಲ್ಲಿ ವಿವರಿಸಿ ಹೇಳಿದ್ದಾರೆ. ಒಂದು ಗ್ರಾಮದ ನಿರ್ಮಾಣಕ್ಕೆ ಹೊಲವನ್ನು ಇಂತಿಷ್ಟು ಎಂದು ನಿಗದಿಪಡಿಸಿ ಆ ಗ್ರಾಮಕ್ಕೆ ಅದನ್ನು ಕೊಡುತ್ತಿದ್ದರು. ಕೆರೆ ಹಿಂದೆ ಇರುವ ಭೂಮಿಯು ಯಾವಾಗಲೂ ಬ್ರಾಹ್ಮಣರಿಗೆ ಹೋಗುತ್ತಿತ್ತು. ಅದು ಫಲವತ್ತಾದ ಭೂಮಿಯಾಗಿತ್ತು ಆದ ಕಾರಣ ಯಾವಾಗಲೂ ಅದು ಬ್ರಾಹ್ಮಣರಿಗೆ ದೊರೆಯುತ್ತಿತ್ತು. ಚಿತ್ರದುರ್ಗದ ನಾಯಕರ ಕಾಲದಲ್ಲಿ ಹಲವಾರು ಅಗ್ರಹಾರಗಳು ಉಗಮವಾಗಿದ್ದು, ಇವೆಲ್ಲವೂ ನಾಯಕರ ಕಾಲದ ಕೃಷಿವ್ಯವಸ್ಥೆಯನ್ನು ಬಿಂಬಿಸುವಂತಹವುಗಳಾಗಿವೆ.

ಚಳ್ಳಕೆರೆ ತಾಲೂಕಿನ ನಾಯಕನಹಟ್ಟಿ ಕೆರೆಯನ್ನೊಳಗೊಂಡಂತೆ ೫೯ ದೊಡ್ಡಕೆರೆಗಳು ೧೦೨ ಸಣ್ಣಕೆರೆಗಳು ಈಗಲೂ ಅಸ್ತಿತ್ವದಲ್ಲಿದ್ದು, ಇವುಗಳ ನಿರ್ಮಾಣದಿಂದ ಕೃಷಿ ಮತ್ತು ನೀರಾವರಿ ಚಟುವಟಿಕೆಗಳು ಹೆಚ್ಚಾಗಿ ಆ ಮುಖಾಂತರ ಪ್ರಾದೇಶಿಕ ಆರ್ಥಿಕ ಸಮೃದ್ಧಿಗೆ ಕಾರಣವಾದವರು ಈ ನಾಯಕರು(ಇತಿಹಾಸ ದರ್ಶನ ಸಂಪುಟ–೧೦ ಸಿ. ಚಂದ್ರಪ್ಪ: ಚಿತ್ರದುರ್ಗದ ಪಾಳೆಯಗಾರರ ಆರ್ಥಿಕ ಅವಲೋಕನ, ಪುಟ ೩೦೬). ಈ ಕಾಲದಲ್ಲಿ ಕೃಷಿಯ ಜೊತೆಗೆ ಕೃಷಿ ಉಪಕಸುಬುಗಳಿಗೆ ಅನುಗುಣವಾದ ಪರಿಸರ ಹಾಗೂ ಕಚ್ಚಾವಸ್ತುಗಳು ಲಭ್ಯವಿದ್ದವು. ಇಂತಹ ಕಸುಬುಗಳಲ್ಲಿ ಪ್ರಮುಖವಾಗಿ ಹತ್ತಿಬಟ್ಟೆ ಮತ್ತು ಉಣ್ಣೆಬಟ್ಟೆಗಳ ತಯಾರಿಕೆಯನ್ನು ಮಾಡುತ್ತಿದ್ದರು. ಈ ಪ್ರದೇಶದಲ್ಲಿ ಹತ್ತಿಯನ್ನು ಬೆಳೆಯುತ್ತಿದ್ದರು. ಈ ಮೂಲಕ ಬಟ್ಟೆ ನೇಕಾರಿಕೆಯೂ ಅಭಿವೃದ್ಧಿಯಾಯಿತು.

ಮದಕರಿನಾಯಕನು ತನ್ನ ಹೆಂಡತಿಯಾದ ಚಿಕ್ಕಮ್ಮ ನಾಗತಿಯ ಹೆಸರಿನಲ್ಲಿ ನೆಲ್ಲಿಕಟ್ಟೆಯಲ್ಲಿ ಒಂದು ಕೆರೆಯನ್ನು ಕಟ್ಟಿಸಿದನು(ಎ.ಕ.–೧೧, ಚಿ:೭೩). ಹಟ್ಟಿ ಕಸ್ತೂರಿ ರಂಗಪ್ಪನಾಯಕನು ತನ್ನ ತಾಯಿ ಲಕ್ಷ್ಮಮ್ಮನಾಗತಿಯ ಹೆಸರಿನಲ್ಲಿ ಮೊಳಕಾಲ್ಮೂರಿನ ಬೆಟ್ಟದ ಮೇಲೆ ಕೆರೆಯನ್ನು ಕಟ್ಟಿಸಿದನು. ಹೀಗೆ ಚಿತ್ರದುರ್ಗದ ಪಾಳೆಯಗಾರರು ಊರಿನ ಒಳಿತಿಗಾಗಿ ತಮ್ಮ ಆಳ್ವಿಕೆಯ ಪ್ರದೇಶದಲ್ಲಿ ಹೆಂಡತಿ ಮತ್ತು ತಾಯಂದಿರ ಹೆಸರಿನಲ್ಲಿ ಅನೇಕ ಕೆರೆ ಕಾಲುವೆಗಳು ನಿರ್ಮಿಸಿರುವುದರ ಮೂಲಕ ಕುಡಿಯುವ ಮತ್ತು ನೀರಾವರಿಗೆ ಅನುಕೂಲ ಆಗುವಂತೆ ಜನಪರ ಕಾರ್ಯಗಳನ್ನು ಮಾಡಿಕೊಟ್ಟಿದ್ದರು.

ಚಿತ್ರದುರ್ಗದ ನಾಯಕರ ಆಳ್ವಿಕೆಯಲ್ಲಿ ಬಿತ್ತನೆಯ ಪ್ರಮಾಣದ ಮೇಲೆ ಖಂಡುಗ, ಕೊಳಗ ಮತ್ತು ಮತ್ತರು ಎಂಬ ಅಳತೆಯ ಮಾಪನಗಳಿಂದ ಭೂಹಿಡುವಳಿಯ ಉತ್ಪಾದಕತೆಯನ್ನು ನಿರ್ಧರಿಸಲಾಗುತ್ತಿತ್ತು.

ಚಿತ್ರದುರ್ಗ ಪ್ರದೇಶದ ಕೃಷಿಗೆ ಪೂರಕವಾದ ನೀರಾವರಿ ವ್ಯವಸ್ಥೆಯೆಂದರೆ ಕೆರೆ ನೀರಾವರಿ ಎನ್ನಬಹುದು. ಅದಕ್ಕೆ ಕಾರಣ ಈ ಪ್ರದೇಶದ ಭೌಗೋಳಿಕತೆ ಎಂದರೆ ಅಲ್ಲಲ್ಲಿ ಗುಡ್ಡ, ಬೆಟ್ಟಗಳಿದ್ದರೂ ಬಹುತೇಕ ಭಾಗ ಬಯಲುಸೀಮೆಯದ್ದು. ಕೆರೆ ನಿರ್ಮಾಣಕ್ಕೆ ಅನುಕೂಲಕರವಾಗುವಂತೆ ಅದು ಅಲ್ಲಲ್ಲಿ ದೊಡ್ಡ ಪ್ರಮಾಣದ ತಗ್ಗು ದಿಣ್ಣೆಗಳನ್ನು ಹೊಂದಿದೆ(ರಾಜಶೇಖರಪ್ಪ, ೨೯೫:೧೬೯). ಹೀಗೆ ತಗ್ಗು ದಿಣ್ಣೆಗಳಿಂದ ಕೂಡಿದ ಇಳಿಜಾರಿನ ಭೂಮಿಯಲ್ಲಿ ಕೆರೆ ಹೊಂಡಗಳನ್ನು ನಿರ್ಮಿಸಿರುವುದನ್ನು ಗಮನಿಸಬಹುದಾಗಿದೆ.

ಶೆಟ್ಟರ ಅಯ್ಯಣ್ಣನೆಂಬುವನು ಚಿತ್ರದುರ್ಗದಲ್ಲಿ ತನ್ನ ಹೆಸರಿನಲ್ಲಿ ಅಯ್ಯಣ್ಣನ ಬಾವಿ ಕಟ್ಟಿಸಿದ. ಅಣಜಿ, ಹುಚ್ಚವ್ವನಹಳ್ಳಿ ಕೆರೆ, ಭೀಮಸಮುದ್ರ ಕೆರೆ, ರಾಣಿಕೆರೆ, ದೊಡ್ಡಕೆರೆ, ಮಲ್ಲಾಪುರಕೆರೆ,

ಮುದ್ದಾಪುರಕೆರೆಗಳು ದೊಡ್ಡ ಕೆರೆಗಳಾಗಿವೆ ಮತ್ತು ಈಗಲೂ ಸುಸ್ಥಿತಿಯಲ್ಲಿವೆ. ಈ ಕೆರೆಗಳು ಇಂದಿಗೂ ಕೃಷಿ ನೀರಾವರಿಗೆ ಅನುಕೂಲ ಒದಗಿಸುತ್ತಿವೆ. ಮೈಸೂರಿನ ಚಿಕ್ಕದೇವರಾಜ ಒಡೆಯರ ಕಾಲಾವಧಿಯಲ್ಲಿ ಇದ್ದಂತೆ ನೀರಗಂಟಿ ಎಂಬ ಅಧಿಕಾರಿ ಗ್ರಾಮಾಡಳಿತ ವ್ಯವಸ್ಥೆಯಲ್ಲಿದ್ದು, ಅಚ್ಚುಕಟ್ಟಾಗಿ ನೀರನ್ನು ಒದಗಿಸುವ ಕಾರ್ಯವನ್ನು ನಿರ್ವಹಿಸುತ್ತಿದ್ದನು(ಸಂತೋಷ್, ೨೦೦೯:೧೧೮). ಈ ಮೂಲಕವಾಗಿ ಚಿತ್ರದುರ್ಗದ ನಾಯಕರು ಕೆರೆ, ಕಾಲುವೆಗಳ ಮೂಲಕ ನೀರನ್ನು ಒದಗಿಸಿ ಕೃಷಿ ನೀರಾವರಿಗೆ ಹೆಚ್ಚು ಪ್ರಾಮುಖ್ಯತೆಯನ್ನು ನೀಡಿರುವುದು ಕಂಡುಬರುತ್ತದೆ.

ಹರಪನಹಳ್ಳಿ ಪಾಳೆಯಗಾರರು ಕೃಷಿಗೆ ವಿಶೇಷವಾದ ಪ್ರೋತ್ಸಾಹವನ್ನು ನೀಡಿದ್ದರು. ಇವರಿಗೆ ವ್ಯವಸಾಯವೇ ಮುಖ್ಯ ಕಸುಬಾಗಿದ್ದು, ಕೃಷಿಯು ಅವರ ಆರ್ಥಿಕ ಚಟುವಟಿಕೆಯ ಕೇಂದ್ರವಾಗಿತ್ತು. ಗ್ರಾಮ ಮುಖಂಡರು, ಅಧಿಕಾರಿಗಳು, ಅರಸರು ಈ ಭಾಗದಲ್ಲಿ ಕೆರೆ, ಕಾಲುವೆ, ಕಟ್ಟೆಗಳನ್ನು ನಿರ್ಮಿಸುವುದರ ಮೂಲಕ ನೀರಾವರಿಗೆ ಹೆಚ್ಚಿನ ಪ್ರೋತ್ಸಾಹವನ್ನು ನೀಡಿದ್ದರು.

ಹರಪನಹಳ್ಳಿಯ ಪಾಳೆಯಗಾರರು ಸಹ ವಿಜಯನಗರೋತ್ತರ ಪಾಳೆಯಗಾರರಂತೆಯೇ ಕೃಷಿಭೂಮಿಯನ್ನು ಗದ್ದೆ, ಬೆದ್ದಲು, ತೋಟವೆಂದು ವಿಭಾಗಿಸಿದ್ದರು. ೧೫೮೭ರಲ್ಲಿ ಬಾಗಳಿಯ ಐವತ್ತು ಮಹಾಜನರು ದೋಸಲೂರು ಹಿರಿಯ ಕೆರೆಯ ಕೆಳಗೆ ಬಿಟ್ಟ ತೆಂಗಾಡು ಮತ್ತರ ಕೆರೆ ಮಾನ್ಯವಾಗಿ ಬಿಟ್ಟರು(ಸಂತೋಷ್,೨೦೦೯:೮೧). ಬಾಗಳಿಯ ಮಹಾನಾಯಕಾಚಾರ್ಯನಾದ ಬಸವನಾಯಕನು ಮೈದೂರಿನಲ್ಲಿ ಬಾವಿಯನ್ನು ಕಟ್ಟಿಸಿದನು(ಕ.ವಿ.ವಿ.ಶಾ.ಸಂ,೧:೧೯೨). ವಿಜಯನಗರದಲ್ಲಿ ವೆಂಕಟಪತಿರಾಯರು ಆಳುತ್ತಿದ್ದಾಗ ಕಸವನಹಳ್ಳಿ ಪುರವರ್ಗವನ್ನು ಜೀರ್ಣೋದ್ಧಾರ ಮಾಡಿದ ತಿರುಕಪ್ಪನಿಗೆ ಕುಳದ ಎರೆ ಭೂಮಿಯನ್ನು ನೀಡಿದರು(ಕ.ವಿ.ವಿ.ಶಾಸಂ-೦೧,ಹ:೨೧೨, ಕ್ರಿ.ಶ.೧೬೦೦). ಕ್ರಿ.ಶ.೧೭೧೨ರಲ್ಲಿ ಬಾಗಳಿ ಬಸಪ್ಪನಾಯಕರ ಸೋಮಶೇಖರ ನಾಯಕನು ಅಶ್ವಲಾಯನ ಸೂತ್ರದ ಭಾರದ್ವಾಜಗೋತ್ರದ ವಿಠಲಯ್ಯನಿಗೆ ಅಗ್ರಹಾರದ ಮೈದೂರು ಗ್ರಾಮದ ಅರಮನೆಗೆ ನಡೆದು ಬರುವ ದಾರಿಯಲ್ಲಿ ಎರೆಯೊಲ ಬೀಜವರಿ ಹತ್ತು ಗಿದ್ದನಕ್ಕೆ ಪಡಲಿ ನಲವತ್ತು ಪಡಿ ಹೊಲವನ್ನು ಸರ್ವಮಾನ್ಯವಾಗಿ ನೀಡಿದನು(ಸದಾಶಿವಪ್ಪ, ೨೦೧೬:೧೦೦). ಬಾಗಳಿ ಹಿರಿಯಮ್ಮಾಜಿಯು ಜೋಯಿಸರ ಪ್ರಸನ್ನಭಟ್ಟರು ವಿರೂಪಾಕ್ಷ ದೇವರನ್ನು ಪ್ರತಿಷ್ಠಾಪನೆ ಮಾಡಿದರು. ಆ ದೇವರ ಅಮೃತಪಡಿಗೆ ಬಂದು ವಕ್ಕಳ ಗದ್ದೆಯನ್ನು ಬಾಗಳಿಯಲ್ಲಿ ನೀಡಿದರು(ಸದಾಶಿವಪ್ಪ,೧೦೫).

ಹರಪನಹಳ್ಳಿ ಪಾಳೆಯಗಾರರ ಆಳ್ವಿಕೆಯ ಪ್ರದೇಶವು ಸಹ ಬಯಲುಸೀಮೆಯ ಪ್ರದೇಶವಾಗಿದ್ದು ಮಳೆಯ ಆಶ್ರಯದಿಂದ ಭೂಮಿ, ಹೊಲ, ಬೆದ್ದಲು ಎಂದು ವಿಂಗಡಿಸಿ ಕೃಷಿ ನೀರಾವರಿಯನ್ನು ಕೈಗೊಳ್ಳುತ್ತಿದ್ದರು. ಕೆರೆ ಹೊಂಡಗಳು ಇರುವ ಭಾಗಗಳಲ್ಲಿ ನೀರಿನ ಅನುಕೂಲಗಳಿರುವಲ್ಲಿ ತೋಟಗಳಿರುತ್ತಿದ್ದವು. ಕೃಷಿಭೂಮಿಯ ವಿಸ್ತರಣೆಗೆ ಸರ್ಕಾರದಿಂದ ಸಹಾಯಹಸ್ತ ತೋರುತ್ತಿದ್ದರು. ಅರಣ್ಯಭೂಮಿಗಳು ಕೃಷಿಗೆ ಒಳಪಡುತ್ತಿದ್ದವು. ಸಾಗುವಳಿಗೆ ಒಳಪಟ್ಟ ಭೂಮಿಯನ್ನು ತುಳದ ಭೂಮಿ(ಕ.ವಿ.ವಿ.ಶಾ.ಸಂ.೧, ಹ-೨೧೨), ಬೀಜವರಿ ಭೂಮಿ(ಸದಾಶಿವಪ್ಪ: ೯೯). ವಕ್ಕಳ ಭೂಮಿಯೆಂದು ವಿಂಗಡಿಸಿರುವುದು ಶಾಸನಗಳಿಂದ ತಿಳಿಯುತ್ತದೆ. ಹೀಗೆ ಹರಪನಹಳ್ಳಿಯ

ಪಾಳೆಯಗಾರರು ಕೃಷಿ ನೀರಾವರಿಯನ್ನು ಅಭಿವೃದ್ಧಿಗೊಳಿಸಿದ್ದು ನದಿ, ಕೆರೆ, ಹಳ್ಳ, ಬಾವಿಗಳು ಇರುವಲ್ಲಿ ತೋಟ, ಗದ್ದೆಗಳು ಸಾಮಾನ್ಯವಾಗಿ ಇರುತ್ತಿದ್ದವು. ಗದ್ದೆಯಲ್ಲಿ ಭತ್ತವನ್ನು ಬೆಳೆದರೆ, ತೋಟಗಳಲ್ಲಿ ತೆಂಗು, ಅಡಿಕೆ, ಬಾಳೆ, ವೀಳ್ಯದೆಲೆ, ಹಣ್ಣುಗಳು, ತರಕಾರಿಗಳನ್ನು ಬೆಳೆಯಲಾಗುತ್ತಿತ್ತು. ಮಳೆಯಾಶ್ರಿತ ಬೆದ್ದಲುಭೂಮಿಗಳಲ್ಲಿ ರಾಗಿ, ಜೋಳ, ದ್ವಿದಳಧಾನ್ಯ, ಎಣ್ಣೆಬೀಜಗಳನ್ನು ಬೆಳೆಯುತ್ತಿದ್ದರು. ಹೀಗೆ ಹರಪನಹಳ್ಳಿಯ ಪಾಳೆಯಗಾರರು ವಿಜಯನಗರದ ಅರಸರು ಅನುಸರಿಸಿದ ಕೃಷಿ ನೀರಾವರಿಯಂತೆಯೇ ಇವರು ಕೆಲವು ಮಾರ್ಪಾಡುಗಳೊಂದಿಗೆ ಮುಂದುವರಿಸಿರುವುದನ್ನು ಅಲ್ಲಿನ ಶಾಸನಗಳಿಂದ ತಿಳಿಯಬಹುದಾಗಿದೆ.

ಎರಡನೆಯ ಬಸವಂತನಾಯಕನು ಪ್ರಯಾಣಿಕರ ಅನುಕೂಲಕ್ಕಾಗಿ ಹರಪನಹಳ್ಳಿಯಲ್ಲಿ ಅರವಟ್ಟಿಗೆಗಳನ್ನು ನಿರ್ಮಿಸಿದನು. ಈ ಅರವಟ್ಟಿಗೆಗಳು ದಣಿದ ಪ್ರಯಾಣಿಕರಿಗೆ ವಿಶ್ರಾಂತಿಯನ್ನು ಒದಗಿಸುವ ತಾಣಗಳೆಂದರೆ ತಪ್ಪಾಗಲಾರದು. ಅರವಟ್ಟಿಗೆ ಎಂದರೆ ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಪ್ರವಾಸಿಗರು ಬಂದು ತಂಗುವ ತಾಣಗಳು(ಸದಾಶಿವಪ್ಪ, ೨೦೧೬:೪೨). ೧೭೪೬-೧೭೪೭ರಲ್ಲಿ ಮೊದಲನೆಯ ವೀರಭದ್ರಪ್ಪನಾಯಕನು ಹರಪನಹಳ್ಳಿ ಪಟ್ಟಣದಲ್ಲಿ ಪಾವಟಿಕೆಗಳ ಒಂದು ಬಾವಿಯನ್ನು ನಿರ್ಮಿಸಿದನು(ಸದಾಶಿವಪ್ಪ,೨೦೧೬:೪೬).

ಇಲ್ಲಿ ಗಮನಿಸುವ ಅಂಶವೆಂದರೆ ಪಾಳೆಯಗಾರರು ಸಂಸ್ಥಾನದ ಜನರಿಗೋಸ್ಕರ ಸಾರ್ವಜನಿಕ ಕಾರ್ಯ ಕೈಗೊಳ್ಳುತ್ತಿದ್ದರು. ರಸ್ತೆಯ ಮಾರ್ಗದಲ್ಲಿ ಪ್ರಯಾಣಿಕರಿಗೆ ವಿಶ್ರಾಂತಿ ತಾಣಗಳನ್ನು ನಿರ್ಮಿಸಿರುವುದನ್ನು ಕಾಣುತ್ತೇವೆ. ಈ ಪರಿಕಲ್ಪನೆ ಮಧ್ಯಕಾಲೀನ ಭಾರತದಲ್ಲಿ ಮೊದಲು ಷೇರ್‌ಷಾ ಆರಂಭಿಸಿದ್ದ ಈ ಮಾದರಿ ಕರ್ನಾಟಕದ ಸಾಮಂತ ಸಂಸ್ಥಾನಗಳು ಅಳವಡಿಸಿಕೊಂಡಿರುವುದು ಕಂಡುಬರುತ್ತದೆ.

ಸಂತೆಬೆನ್ನೂರು ನಾಯಕರು ವಿಜಯನಗರದ ಅರಸರ ಕಾಲಾವಧಿಯಲ್ಲಿ ದಾವಣಗೆರೆ ಜಿಲ್ಲೆಯ ಚನ್ನಗಿರಿ ತಾಲೂಕಿನ ಸಂತೆಬೆನ್ನೂರನ್ನು ಅಮರಮಾಗಣಿಯಾಗಿ ಪಡೆದುಕೊಂಡರು. ಇದರ ಜೊತೆ ಬಸವಾಪಟ್ಟಣದ ಹೆಣ್ಣುಮಗಳನ್ನು ಮದುವೆಯಾಗಿ ಮಂದೆ ಪಾಳೇಪಟ್ಟು ಕಟ್ಟಿ ಆಡಳಿತ ನಡೆಸಿದರು. ಈ ಮೂಲಕ ವಿಜಯನಗರದ ಪತನದ ನಂತರ ಸ್ವತಂತ್ರ ಪಾಳೆಯಪಟ್ಟವನ್ನು ಕಟ್ಟಿಕೊಂಡು ಆಳ್ವಿಕೆ ಮಾಡಿದರು. ಸಂತೆಬೆನ್ನೂರು ನಾಯಕರ ಸಂಸ್ಥಾನದಲ್ಲಿ ಜನರ ಮುಖ್ಯ ಕಸುಬು ವ್ಯವಸಾಯವಾಗಿದ್ದು, ಕೃಷಿಯಿಂದ ಸರ್ಕಾರಕ್ಕೆ ಹೆಚ್ಚಿನ ಆದಾಯ ಬರುತ್ತಿತ್ತು. ಇದಕ್ಕಾಗಿ ಅರಸರು, ಅಧಿಕಾರಿಗಳು ಕಾಡು ಕಡಿದು ಕೃಷಿಭೂಮಿಯನ್ನು ಅಭಿವೃದ್ಧಿಪಡಿಸುತ್ತಿದ್ದರು. ಪ್ರಾಚೀನ ಕಾಲದಿಂದಲೂ ಕೃಷಿಭೂಮಿಯ ಅಭಿವೃದ್ಧಿ ವಿಸ್ತರಣೆಗೆ ವಿಶೇಷವಾದ ಪ್ರೋತ್ಸಾಹ ಕೊಟ್ಟಿರುವುದನ್ನು ಅಲ್ಲಿನ ಶಾಸನ ಮತ್ತು ಸಾಹಿತ್ಯಾಧಾರಗಳಿಂದ ತಿಳಿಯಬಹುದಾಗಿದೆ. ಸಂತೆಬೆನ್ನೂರು ನಾಯಕರ ಆಳ್ವಿಕೆಯ ಪ್ರದೇಶವು ಆರ್ಥಿಕ ದೃಷ್ಟಿಯಿಂದ ಅರೆಮಲೆನಾಡು ಮೈದಾನಪ್ರದೇಶವಾಗಿದ್ದು, ಹೆಚ್ಚಾಗಿ ಜನರು ಕೃಷಿಯನ್ನು ಅವಲಂಬಿಸಿದ್ದರು. ತುಂಗಾ-ಭದ್ರಾ, ಶರಾವತಿ ನದಿಗಳ ಕೆಲವು ಪ್ರದೇಶಗಳು ಇವರ ಆಡಳಿತ ಭಾಗಕ್ಕೆ ಸೇರಿದ್ದು ನೀರಿನ ಕೊರತೆಯಿಂದಾಗಿ ಅನೇಕ ಕೆರೆ-ಕಟ್ಟೆಗಳನ್ನು ಕಟ್ಟಿ ನೀರಾವರಿಗೆ ಆದ್ಯತೆ

ನೀಡಿದ್ದರು. ಕೃಷಿ ಆಧಾರಿತ ಕೈಗಾರಿಕೆಗಳಿಗೆ ಹೆಚ್ಚಿನ ಪ್ರೋತ್ಸಾಹವನ್ನು ನೀಡಿದ್ದರು. ವಿಜಯನಗರದ ವೀರವೆಂಕಟಪತಿ ದೇವರಾಯನ ಕಾಲದಲ್ಲಿ ಅವನ ಪ್ರತಿನಿಧಿಯಾಗಿದ್ದ ಕಳಸಪ್ಪಯ್ಯ ಹನುಮಸಾಗರದಲ್ಲಿ ಪ್ರತಿಷ್ಠಾಪಿಸಿದ ಸದಾಶಿವಸ್ವಾಮಿಯ ಅಂತರಂಗ ವೈಭೋಗ ವಿನಿಯೋಗಕ್ಕೆ ಸೀಮೆ ಒಳಗಣ ಗರಗ ಗ್ರಾಮವನ್ನು ಹೊಲ, ಗದ್ದೆ, ಬೆದ್ದಲುಹೊಲ ೧೬ ಉಂಬಳಿ, ೫೦ ವರಹ ಭೂಮಿಯನ್ನು ಸಂತೆಬೆನ್ನೂರು ನಿಚ್ಚಮದವಣಿಗ ವೀರ ಹನುಮಪ್ಪ ನಾಯಕರು ದಾನ ನೀಡಿದ್ದನ್ನು ತಿಳಿಸುತ್ತದೆ (ನಾಡಿಗ,೨೦೦೮:೯೫). ವಿಜಯನಗರದ ಹರಿಹರ ದೇವರಾಯ ರತ್ನ ಸಿಂಹಾಸನಾರೂಢನಾಗಿ ಆಳುತ್ತಾ ಹರಿಹರ ಮುಂತಾದ ಸ್ಥಳಗಳಲ್ಲಿ ಬಂದಾಗ, ಮದಕರಿ ಎಂಬ ಸ್ಥಳದಲ್ಲಿ ದಟ್ಟಕಾಡು ಬೆಳೆದು, ಕಾಡುಪ್ರಾಣಿಗಳಿಂದ ತುಂಬಿತ್ತು. ಅಲ್ಲಿ ಕಾಡು ಕಡಿಸಿ ಅಲ್ಲಿಯೇ ದೇವಸ್ಥಾನವನ್ನು ಕಟ್ಟಿಸಿದರು. ಆ ದೇವರಿಗೆ ತೋಪಿನರಂಗನೆಂದು ಕರೆದು ಆ ಹಳ್ಳಿಗೆ ತೋಪಿನಹಳ್ಳಿಯೆಂದು ಕರೆದನು.

ಸಂತೆಬೆನ್ನೂರು ನಾಯಕರು ಕೃಷಿ ಅಭಿವೃದ್ಧಿಗಾಗಿ ಕೆರೆ, ಕಾಲುವೆಗಳ ಜೊತೆಗೆ ಹಲವಾರು ಗ್ರಾಮಗಳನ್ನು ನಿರ್ಮಿಸುತ್ತಿದ್ದರು. ಗ್ರಾಮ ನಿರ್ಮಾಣ ಕಾರ್ಯದ ಹಿಂದಿನ ಉದ್ದೇಶವು ಕೃಷಿ ಅಭಿವೃದ್ಧಿಯಾಗಿದೆ. ಯಾವುದೇ ಹೊಸ ಗ್ರಾಮಗಳ ನಿರ್ಮಾಣವನ್ನು ಅಲ್ಲಿನ ಭೌಗೋಳಿಕ ಪರಿಸರವನ್ನು ಆಧರಿಸಿಯೇ ನಿರ್ಧರಿಸುತ್ತಿದ್ದರು. ಉದಾ: ಕ್ರಿ.ಶ. ೧೫೭೦ರಲ್ಲಿ ಇಮ್ಮಡಿ ಹನುಮಪ್ಪನಾಯಕರ ಕುಮಾರ ರಾಮನಾಯಕ ಮತ್ತು ಕೆಂವಳನಾಯಕರ ಹೆಸರಿನಲ್ಲಿ ರಾಮೇನಹಳ್ಳಿ ಮತ್ತು ಕೆಂಚಾಪುರ ಎಂಬ ಗ್ರಾಮವನ್ನು ನಿರ್ಮಿಸಿದರು. ಈ ಹಳ್ಳಿಗಳ ಪಕ್ಕದಲ್ಲಿ ಹರಿಯುತ್ತಿದ್ದ ಹಳ್ಳಕ್ಕೆ ಒಡ್ಡುಹಾಕಿಸಿ ದೊಡ್ಡ ಕೆರೆಯನ್ನು ನಿರ್ಮಿಸಿದರು(ಕಲಬುರ್ಗಿ, ೧೯೯೪:೨೧೧). ಹೀಗೆ ಸಂತೆಬೆನ್ನೂರು ನಾಯಕರು ಗ್ರಾಮ ನಿರ್ಮಾಣ ಕಾರ್ಯದ ಜೊತೆ ಜೊತೆಯಲ್ಲಿಯೇ ಕೃಷಿ ಅಭಿವೃದ್ಧಿ ಮಾಡಿರುವುದನ್ನು ಗಮನಿಸಬಹುದಾಗಿದೆ. ಸಂತೆಬೆನ್ನೂರು ಹನುಮಪ್ಪನಾಯಕನ ಹೆಂಡತಿ ಗಿರಿಯವ್ವ ನಾಗತಿಯು ಕ್ರಿ.ಶ.೧೪೯೦ರಲ್ಲಿ ಕಂಚುಗಾರ ಹಳ್ಳಿಯಲ್ಲಿ ಕೆರೆಯನ್ನು ಕಟ್ಟಿಸಿದಳೆಂದು ಸಾಸುವೆಹಳ್ಳಿ ಕೈಫಿಯತ್ತು ತಿಳಿಸುತ್ತದೆ. ಕಂಚುಗಾರ ಎಂಬ ಹೆಸರು ಆ ಗ್ರಾಮಕ್ಕೆ ಹೆಸರು ಬರಲು ಕಾರಣ ಆ ಹಳ್ಳಿ ಕಂಚಿನ ಕೆಲಸ ಮಾಡುವ ಹೆಚ್ಚು ಜನ ನೆಲೆಸಿರುವುದೇ ಮುಖ್ಯ ಕಾರಣವಾಗಿದೆ ಎಂದು ಅಂದಾಜಿಸಬಹುದಾಗಿದೆ.

ಇವರು ಕೃಷಿಭೂಮಿಯ ಉಳುಮೆಗಾಗಿ ಗದ್ದೆ, ಬೆದ್ದಲು, ತೋಟ ಎಂದು ಮೂರು ಭಾಗಗಳಾಗಿ ವಿಂಗಡಿಸಿದ್ದರು. ಹೊಲ ಮತ್ತು ಬೆದ್ದಲುಭೂಮಿಯು ಮಳೆಯಾಶ್ರಿತ ಭೂಮಿಯಾಗಿದ್ದು, ಕ್ರಿ.ಶ.೧೫೬೩ರಲ್ಲಿ ವಿಜಯನಗರದಲ್ಲಿ ಸದಾಶಿವರಾಯನು ಆಳುತ್ತಿದ್ದಾಗ ದುಮ್ಮಿಯ ಮಲುಕ ಒಡೆಯನು ಎಂಬ ಅಧಿಕಾರಿ ಜನರಿಗೆ ಕಿರುಕುಳ ಉಂಟುಮಾಡಿದನು. ಈ ಉಪಟಳವನ್ನು ಅಡಗಿಸಲು ಸಂತೆಬೆನ್ನೂರು ಪಿಲ್ಲಪ್ಪನಾಯಕರು ಚಿತ್ಕಗಂಗೂರ ಗೌಡನನ್ನು ಕಳುಹಿಸಿದಾಗ ಮಲುಕ ಒಡೆಯನು ಇವನನ್ನು ಕೊಂದು ಹಾಕಿದ್ದಕ್ಕೆ ನೆತ್ತರು ಕೊಡುಗೆಯಾಗಿ ಅವನ ಮಗನಿಗೆ ಎರೆಹೊಲ ಎಂಭತ್ತೆರಡು, ಮನಜಿನ ಹೊಲ ಎಂಭತ್ತಮೂರು ಒಟ್ಟು ನೂರು ಅರವತ್ತೈದು ಭೂಮಿಯನ್ನು ನೀಡಿದರು.(ಎ.ಕ.೬,ಚ:೬೯).

ನೀರಾವರಿ ವ್ಯವಸ್ಥೆಯಲ್ಲಿ ಗದ್ದೆ ಮತ್ತು ತೋಟಗಳು ನೀರಿನ ಅಶ್ರಯದಲ್ಲಿದ್ದವು. ಇವು ಹೆಚ್ಚಾಗಿ ಕೆರೆಯ ಪಕ್ಕದಲ್ಲಿ ಇಲ್ಲವೇ ಬಾವಿಗಳು ಇರುವಲ್ಲಿ ಕಂಡುಬರುತ್ತವೆ. ಗದ್ದೆಯಲ್ಲಿ ಭತ್ತವನ್ನು ಬೆಳೆಯುತ್ತಿದ್ದರು. ತೋಟಗಳಲ್ಲಿ ತೆಂಗು, ಬಾಳೆ, ನಾಗವಲ್ಲಿ(ವೀಳ್ಯದೆಲೆ) ಅಡಿಕೆ ಬೆಳೆಯುತ್ತಿದ್ದರು. (ಎ.ಕ.೬,ಚ:೪೩.). ಈಗಲೂ ಚಿತ್ರದುರ್ಗ ಸಂತೆಬೆನ್ನೂರು, ಚನ್ನಗಿರಿ ಭಾಗಗಳಲ್ಲಿ ಕೆರೆಯ ಹಿಂದಿನ ಭೂಮಿಯಲ್ಲಿ ಅಡಕೆಯ ತೋಟಗಳನ್ನು ಗಮನಿಸಬಹುದು.

ಕೃಷಿಭೂಮಿಯ ವಿಸ್ತರಣೆಯಿಂದ ಮುಖ್ಯವಾಗಿ ಹೊಸ ಜನವಸತಿಗಳನ್ನು ಕೆರೆ ಮತ್ತು ದೇವಾಲಯಗಳ ಪಕ್ಕ ಹೊಸ ಗ್ರಾಮಗಳು ನಿರ್ಮಾಣವಾಗುತ್ತಿದ್ದವು. ೧೬೫೩ರ ಚನ್ನಗಿರಿ ಶಾಸನವು ತಿಳಿಸುವಂತೆ ಬಸವಾಪಟ್ಟಣದ ನಾಡಿಗರು ಮತ್ತು ಸೆಟ್ಟಿಗಳ ಕೋರಿಕೆಯ ಮೇರೆಗೆ ಅಲ್ಲಿನ ಅಧಿಕಾರಿ ಮಲ್ಲಿಕನು ಕಾಡನ್ನು ಕಡಿಸಿ ಕೆರೆ ಕಟ್ಟಿಸಿ, ಕೆರೆ ಕೆಳಗಿನ ಭೂಮಿಯನ್ನು ರೈತರಿಗೆ ಉಚಿತವಾಗಿ ಹಂಚಿದನು. ತನ್ನ ಹೆಸರಿನಲ್ಲಿ ಮೊಲ್ಲಿಪುರ ಎಂಬ ಗ್ರಾಮವನ್ನು ನಿರ್ಮಿಸಿ, ಅಲ್ಲಿಯೇ ಸರೋವರವೆನಿಸುವಂತಹ ಕೆರೆಯನ್ನು ನಿರ್ಮಿಸಿದರು.

ಮೈಸೂರಿನ ಆಡಳಿತ ವ್ಯವಸ್ಥೆಯಲ್ಲಿ ಪ್ರಮುಖ ಪಾತ್ರ ವಹಿಸಿದವರು ಕಳಲೆ ಮನೆತನದ ದಳವಾಯಿಗಳು. ಈ ದಳವಾಯಿಗಳ ಆಳ್ವಿಕೆಯ ಕಾಲಾವಧಿಯಲ್ಲಿ ಫ್ರೆಂಚರು, ಇಂಗ್ಲಿಶರು ಮೈಸೂರು ಸಂಸ್ಥಾನದ ಮೇಲೆ ಅಧಿಕಾರ ಪಡೆಯಲು ಹೋರಾಡಿದರು. ಇಂತಹ ಸಂಕಷ್ಟದ ಪರಿಸ್ಥಿತಿಯಲ್ಲಿ ಮೈಸೂರಿನ ಸಂಸ್ಥಾನವನ್ನು ದಳವಾಯಿಗಳು ಆಳ್ವಿಕೆ ನಡೆಸುತ್ತಿದ್ದಾಗ ಸಂಸ್ಥಾನದ ಅಭಿವೃದ್ಧಿಗೆ ಅನೇಕ ಯೋಜನೆಗಳನ್ನು ಜಾರಿಗೊಳಿಸಿದರು. ಅದರಲ್ಲಿ ಕೃಷಿಯೂ ಒಂದಾಗಿತ್ತು. ಇವರ ಕಾಲದ ಕೃಷಿವ್ಯವಸ್ಥೆಯನ್ನು ಕುರಿತಂತೆ ಶಾಸನಗಳಲ್ಲಿ ಕ್ರಯ, ವಿಕ್ರಯಗಳ ಉಲ್ಲೇಖವನ್ನು ತಿಳಿಸುತ್ತವೆ. ಭೂಮಿಯನ್ನು ಎರಡು ಭಾಗಗಳಾಗಿ ವಿಂಗಡಿಸಿದ್ದರು. ವ್ಯವಸಾಯಯೋಗ್ಯ ಭೂಮಿ, ವ್ಯವಸಾಯಕ್ಕೆ ಅನರ್ಹವಾದ ಭೂಮಿ, ಇಲ್ಲಿ ಕೃಷಿಯೋಗ್ಯ ಭೂಮಿಯನ್ನು ಮಣ್ಣಿನ ಫಲವತ್ತತೆಯ ಆಧಾರದ ಮೇಲೆ ಉತ್ತಮ, ಮಾಧ್ಯಮ ಕನಿಷ್ಠವೆಂದು ವರ್ಗೀಕರಿಸಲಾಗಿತ್ತು(ಶಿವಣ್ಣ, :೧೯೪).

ಭೂಮಿಯ ವರ್ಗೀಕರಣವನ್ನು ಮಣ್ಣಿನ ಗುಣ ಮತ್ತು ಒಣಭೂಮಿಯ ಅಳತೆ, ಬೆಳೆಯುವ ಬೆಳೆ, ನೀರಾವರಿ ಸೌಲಭ್ಯ ಬಿತ್ತನೆಯ ಸಾಮರ್ಥ್ಯಗಳನ್ನು ಆಧಾರವಾಗಿಟ್ಟುಕೊಂಡು ಕರಿಹೊಲ, ಕೆಬ್ಬೆಗದ್ದೆ, ಕೆರೆಕೆಳಗಣಗದ್ದೆ, ಬೀಜವರಿ ೨೧೦೦ ಭೂಮಿ ಎಂದು ವರ್ಗೀಕರಿಸಿದ್ದರು. ಇವುಗಳಲ್ಲಿಯೇ ತೆಂಗಿನ ತೋಟ, ಸೊಪ್ಪಿನ ತೋಟ ಮುಂತಾದ ಭೂಮಿಗಳು ವಿವಿಧ ವರ್ಗಗಳನ್ನು ಸೂಚಿಸುತ್ತವೆ. ದಳವಾಯಿಗಳ ಆಳ್ವಿಕೆಯ ಕಾಲಾವಧಿಯಲ್ಲಿ ಗ್ರಾಮ ಮತ್ತು ಅಗ್ರಹಾರಗಳಲ್ಲದೆ ಕೃಷಿಭೂಮಿಯೊಂದಿಗೆ ಗೋಮಾಳ, ಪಿತ್ತಲು, ಕೆರೆಕಟ್ಟೆ ಕಾಲುವೆಗಳು ಇದ್ದವು. ಈ ಮೂಲಕವಾಗಿ ತಿಳಿಯುವ ಅಂಶವೆಂದರೆ ಸಾಮಾಜಿಕ ಸ್ತರವಿನ್ಯಾಸದಲ್ಲಿ ಬ್ರಾಹ್ಮಣ ಶೂದ್ರರ ಪರಿಕಲ್ಪನೆಗಳು ವೀರಶೈವ ಮನೆತನದ ದಳವಾಯಿಗಳ ಕಾಲದಲ್ಲಿಯೂ ಮುಂದುವರಿದಿರುವುದನ್ನು ಗುರುತಿಸಬಹುದಾಗಿದೆ.

೧೭೫೪ರಲ್ಲಿ ಚಾಮರಾಜನಗರ ತಾಲ್ಲೂಕಿನ ಮಳದವಾಡಿ ಹಳ್ಳಿಯಲ್ಲಿರುವ ಸಂಪನಗೌಡನು ಕೆರೆಯನ್ನು ಕಟ್ಟಿಸಿದನು. ಕೆರೆಗಳಿಂದ ಕಾಲುವೆಗಳ ಮೂಲಕ ನೀರನ್ನು ಜಮೀನುಗಳಿಗೆ ಹಾಯಿಸಿ

ಅಚ್ಚುಕಟ್ಟು ಮಾಡಿದ್ದರು. ಈ ಸಂಪನಗೌಡ ಕೆರೆಯು ಪ್ರಸ್ತುತವು ಸುಸ್ಥಿತಿಯಲ್ಲಿದ್ದು, ಈ ಕೆರೆಯ ಮೂಲಕ ಇಂದಿಗೂ ನೀರಾವರಿ ಸೌಲಭ್ಯಗಳನ್ನು ಒದಗಿಸುತ್ತಿರುವುದನ್ನು ಗುರುತಿಸಬಹುದಾಗಿದೆ. ಹಾಗೆಯೇ ದೇವರಾಜಯ್ಯ ಎಂಬುವವನು ಕಪಿಲಾ ಮತ್ತು ಕಾವೇರಿ ನದಿಗಳಿಗೆ ಸಂಪರ್ಕ ಸೇತುವೆಯನ್ನು ಕಟ್ಟಿಸಿದನು. ಹೀಗೆ ಕಳಲೆ ವೀರಶೈವ ದಳವಾಯಿಗಳಿಂದ ಕೃಷಿ ನೀರಾವರಿಯು ಅಧಿಕವಾಗಿ ಕೃಷಿಯ ಹುಟ್ಟುವಳಿ ವಿಸ್ತಾರತೆಯನ್ನು ಕಂಡಿದೆ.

ಕಳಲೆಯ ನಂಜರಾಜಯ್ಯನ ಕಾಲದಲ್ಲಿ ಗ್ರಾಮಗಳಲ್ಲಿನ ಕೃಷಿಯೋಗ್ಯವಾದ ಭೂಮಿಯನ್ನು ಕ್ಷೇತ್ರ ಎಂಬುದಾಗಿ ಕರೆದಿದ್ದರು(ಗುರುರಾಜಾಚಾರ್,೧೯೭೪:೧೭-೧೮). ಭೌಗೋಳಿಕತೆಗೆ ಅನುಗುಣವಾಗಿ ಗದ್ದೆ, ಬೆದ್ದಲು, ತೋಟ ತುಡಿಕೆಗಳೆಂದು ವಿಂಗಡಿಸಿದ್ದರು(ಸುಧಾಮಣಿ, ೨೦೦೯:೭೭). ಕೆರೆಕಟ್ಟೆ, ಕಾಲುವೆಗಳಿಂದ ನೀರಾವರಿ ಸೌಲಭ್ಯವಿದ್ದು ಬೆಳೆ ತೆಗೆಯುವ ಭೂಮಿಗೆ ಗದ್ದೆಯೆಂದು, ಮಳೆಯ ನೀರನ್ನೇ ಅವಲಂಬಿಸಿ ಬೇಸಾಯ ಮಾಡುತ್ತಿದ್ದ ಭೂಮಿಗೆ ಬೆದ್ದಲು ಎಂದು ವಿಂಗಡಿಸಿದ್ದರು. ಈ ಮೂಲಕವಾಗಿ ಮೈಸೂರಿನ ಪರಿಸರದಲ್ಲಿ ಕಾಯಿಪಲ್ಲೆಗಳನ್ನು ಬೆಳೆಯುವ ಸ್ಥಳಕ್ಕೆ ತುಡಿಕೆ ಬೆಳೆ ಎಂದು ಕರೆಯುತ್ತಿದ್ದರು. ತುಡಿಕೆ ಎಂದು ಕರೆಯುವ ಪರಿಪಾಟ ಬೇರೆ ಮನೆತನಗಳ ಕಾಲಾವಧಿಯಲ್ಲಿ ಕಂಡುಬರುವುದಿಲ್ಲ. ಕೃಷಿಯ ಜೊತೆಗೆ ಆರ್ಥಿಕತೆಯ ಇನ್ನೊಂದು ಭಾಗವಾದ ಪಶುಪಾಲನೆಯು ಈ ಕಾಲದಲ್ಲಿದ್ದು, ಪಶುಗಳ ಮೇವಿಗಾಗಿ ಗೋಮಾಳವನ್ನು ಬಿಡುತ್ತಿದ್ದರು.

ಸರ್ಕಾರವು ನದಿಗಳಲ್ಲಿ ನೀರನ್ನು ಶೇಖರಿಸಲು ಅಣೆಕಟ್ಟುಗಳನ್ನು ಕಟ್ಟಿಸಿದ್ದರು. ಈ ಅಣೆಕಟ್ಟುಗಳ ನೀರು ಬಳಸಿ ಬೆಳೆ ಬೆಳೆಯುತ್ತಿದ್ದ ಕೃಷಿಭೂಮಿಗೆ ಅಣೆ ಅಚ್ಚುಕಟ್ಟು ಎಂಬ ವಿಶೇಷ ತೆರಿಗೆಯನ್ನು ವಿಧಿಸಿದ್ದುದು ಗಮನಾರ್ಹ(ಸುಧಾಮಣಿ, ೨೦೦೯:೯೨). ಇದಕ್ಕೂ ಪೂರ್ವದಲ್ಲಿ ಅಣೆಕಟ್ಟು ತೆರಿಗೆ ಎಂಬ ಪದ ಉಲ್ಲೇಖವಾಗಿಲ್ಲ.

೧೭೩೦ರಲ್ಲಿ ರಾಣಿ ಚೆಲುವಾಂಬೆ ತನ್ನ ತವರೂರಾದ ಕಳಲೆಯಲ್ಲಿ ಕೆರೆಯೊಂದನ್ನು ಕಟ್ಟಿಸಿದ್ದಳು. ಅದನ್ನು ಇಂದಿಗೂ ಚೆಲುವಾಂಬೆಕೆರೆ ಎಂದು ಕರೆಯುತ್ತಾರೆ. ಈ ಕೆರೆಯ ಮೂಲಕ ಕಳಲೆಯ ಪ್ರದೇಶದಲ್ಲಿ ಕೃಷಿ ನಿರ್ವಹಿಸಲು ನೀರನ್ನು ಒದಗಿಸುತ್ತಿತ್ತೆಂದು ಹೇಳಬಹುದು. ನಂಜರಾಜ ಮತ್ತು ದೇವರಾಜಯ್ಯರ ಕಾಲದಲ್ಲಿ ಕನ್ನಂಬಾಡಿ ಬಳಿ ಕಾವೇರಿ ನದಿಗೆ ಕಟ್ಟೆಯೊಂದನ್ನು ಕಟ್ಟಿಸಿ ಅದಕ್ಕೆ ದಳವಾಯಿ ನಂಜರಾಜನಾಲಾ ಎಂಬುದಾಗಿ ಕರೆದರು. ಇದರಲ್ಲಿ ಶೇಖರಿಸಿದ್ದ ನೀರು ಕನ್ನಂಬಾಡಿ ಸ್ಥಳಕ್ಕೆ ಸೇರಿದ ರೈತರಿಗೆ ನೀರಾವರಿ ಮಾಡಲು ಅನುಕೂಲವಾಗಿತ್ತು. ದೇವರಾಜಯ್ಯ ನಂಜನಗೂಡಿನ ಸಮೀಪ ವಡ್ಡರಹಳ್ಳಿಯಲ್ಲಿ ಕೆರೆಯೊಂದನ್ನು ಕಟ್ಟಿಸಿದ್ದನು. ಅದಕ್ಕೆ ದಳವಾಯಿ ಕೆರೆ ಎಂದು ಕರೆಯಲಾಗುತ್ತಿತ್ತು. ಹೀಗೆ ದಳವಾಯಿಗಳ ಕಾಲದಲ್ಲಿ ಮೈಸೂರು ಸಂಸ್ಥಾನದಲ್ಲಿ ಕೃಷಿ ಮತ್ತು ನೀರಾವರಿಗೆ ವಿಶೇಷವಾದ ಪ್ರೋತ್ಸಾಹವನ್ನು ನೀಡಿದ್ದರು. ಕೃಷಿ ನೀರಾವರಿಯು ಅಲ್ಲಿ ನದಿ ನೀರನ್ನು ಬಳಸಿ ಕೃಷಿ ಚಟುವಟಿಕೆಗಳು ನಡೆಯುತ್ತಿದ್ದವು. ಕಾರಣ ಕಾವೇರಿ ಮತ್ತು ಕಪಿಲ ನದಿ ಹರಿಯುವಿಕೆಯ ಭಾಗವಾಗಿದ್ದ ಈ ಪ್ರದೇಶಗಳು ಕೃಷಿ ವಿಸ್ತರಣೆಗೆ ಮತ್ತು ಪ್ರಗತಿಗೆ ಪೂರಕವಾಗಿದ್ದವು. ಕಳಲೆಯ ದಳವಾಯಿಗಳ ಕಾಲಾವಧಿಯಲ್ಲಿ ಮನೆವಾರ್ತೆ ವೀರಯ್ಯ ಎಂಬಾತ ಮಲ ದೇವರ

ಹಳ್ಳಿಯಲ್ಲಿರುವ ಸಂಪನಗೌಡನ ಕೆರೆಯನ್ನು ಕಟ್ಟಿಸಿದನು. ಶಾಸನಗಳಲ್ಲಿ ವಿವರಿಸಿರುವಂತೆ ಚಿಕ್ಕಡೊಂಕಿಹಳ್ಳಿ ಕೆರೆ, ಚಿಕ್ಕಟಿಗ್ರಾಮದಕೆರೆ, ಹನೂರು, ಕಲಿದೇವರಹಳ್ಳಿ, ಮುಗಳೂರು, ಬೆಳವಾಡಿ, ಕುರುಬರಹಳ್ಳಿ, ಕೊಟ್ಟಿಗನಹಳ್ಳಿ, ಹೊಸಹಳ್ಳಿ ಈ ರೀತಿಯಾಗಿ ಹಲವಾರು ಕೆರೆಗಳು ನಿರ್ಮಾಣವಾಗಿದ್ದವು(ಸುಧಾಮಣಿ, ೨೦೦೯:೯೩). ಈ ಕೆರೆಗಳು ಮಳೆಗಾಲದಲ್ಲಿ ನೀರಿನಿಂದ ತುಂಬಿಕೊಳ್ಳುತ್ತಿದ್ದು, ಬೇಸಿಗೆಯಲ್ಲಿ ಇವು ರೈತನಿಗೆ ಜೀವನಾಧಾರವಾಗಿರುತ್ತಿದ್ದವು. ಕೆರೆ ನಿರ್ಮಾಣದ ಕಾರ್ಯದ ಹಿಂದೆ ಅನೇಕ ದಲಿತರು ಕಾರ್ಯ ನಿರ್ವಹಿಸಿದ್ದರೂ ನಿರ್ಮಾಣದ ಹೆಸರು ಮಾತ್ರ ಪ್ರತಿಷ್ಠಿತ ರಾಜರು ಮತ್ತು ಉನ್ನತವರ್ಗದ ಅಧಿಕಾರಿಗಳಿಗೆ ಮಾತ್ರ ದಕ್ಕುತ್ತಿತ್ತು. ಫಲವತ್ತಾದ ಕೃಷಿಭೂಮಿ ಅವರ ಹೆಸರಿನಲ್ಲಿ ನೋಂದಣಿಯಾಗುತ್ತಿದ್ದು, ದಲಿತರಿಗೆ ಶ್ರಮಕ್ಕೆ ಪ್ರತಿಫಲವಾಗಿ ಸ್ವಲ್ಪ ದೊರೆಯುತ್ತಿತ್ತು. ವಿಜಯನಗರೋತ್ತರ ಕಾಲದಲ್ಲಿ ಹೆಚ್ಚು ಕೆರೆ, ಕಾಲುವೆಗಳು ನಿರ್ಮಾಣವಾದವು. ಈ ನಿರ್ಮಾಣ ಪ್ರಕ್ರಿಯೆಯಲ್ಲಿ ಒಳಗೊಂಡ ಕಾರ್ಮಿಕರ ಉಲ್ಲೇಖ ಮಾತ್ರ ಎಲ್ಲಿಯೂ ದೊರೆಯುವುದಿಲ್ಲ. ಈ ಕೆರೆ ನಿರ್ಮಾಣದಲ್ಲಿ ಗ್ರಾಮದ ಸಾಮಾನ್ಯ ಜನರು ತಮ್ಮ ಕಾರ್ಯ ನಿರ್ವಹಿಸಬೇಕಿತ್ತು.

ಕೃಷಿಗೆ ಪೂರಕವಾದ ವ್ಯವಸ್ಥೆಯಲ್ಲಿ ಭೂಮಿಯ ಫಲವತ್ತತ್ತೆಯನ್ನು ಹೆಚ್ಚಿಸಲು ಗೊಬ್ಬರವನ್ನು ಉಪಯೋಗಿಸುತ್ತಿದ್ದರು. ಈ ಗೊಬ್ಬರವನ್ನು ಸಂಗ್ರಹಿಸುವ ಸ್ಥಳಕ್ಕೆ ತಿಪ್ಪೆ ಎಂದು ಕರೆಯುತ್ತಿದ್ದರು. ಈ ಜಾಗಕ್ಕೆ ತಿಪ್ಪೆಹಣ ಎಂದು ಕರೆಯುವ ಕರವನ್ನು ಸಂಗ್ರಹ ಮಾಡುತ್ತಿದ್ದರು(ಎ.ಕ.೫ ಟಿ.ಎನ್, ೫:೧೬). ಈ ಮೂಲಕ ಜಾನುವಾರುಗಳ ಸಗಣಿಯನ್ನು ತಿಪ್ಪೆಯಲ್ಲಿ ತಂದು ಅದನ್ನು ಸಂಗ್ರಹಿಸಿ ಅದಕ್ಕೆ ಮಣ್ಣು ಸೇರಿಸಿ ಹದವಾದ ಗೊಬ್ಬರವನ್ನು ತಯಾರು ಮಾಡುತ್ತಿದ್ದರು. ಒಟ್ಟಾರೆಯಾಗಿ ವಿಜಯನಗರೋತ್ತರ ಕಾಲಘಟ್ಟದಲ್ಲಿ ಕೃಷಿಯ ಪ್ರಗತಿ ಅಥವಾ ಬದಲಾವಣೆಗೆ ಈ ಮನೆತನವು ಉತ್ತಮ ಉದಾಹರಣೆಯಾಗಿದೆ.

ವಿಜಯನಗರೋತ್ತರ ಕಾಲಘಟ್ಟದಲ್ಲಿ ಯುರೋಪಿಯನ್ನರ ಆಗಮನದ ಕಾಲವಾಗಿದ್ದರಿಂದ ಸಾಮಾಜಿಕ ಮತ್ತು ಆರ್ಥಿಕ ಸ್ಥಿತ್ಯಂತರಕ್ಕೆ ಒಳಪಟ್ಟ ಕಾಲವೆಂದು ಗುರುತಿಸಬಹುದು. ಮೈಸೂರು ಸಂಸ್ಥಾನವು ಹೈದರ್ ಮತ್ತು ಟಿಪ್ಪು ಆಳ್ವಿಕೆಯ ಕಾಲಾವಧಿಯಲ್ಲಿ ಇಂಗ್ಲಿಶರ ಪ್ರವೇಶದಿಂದ ಹಲವಾರು ಹೊಸ ರೀತಿಯ ಬದಲಾವಣೆಗಳನ್ನು ಈ ಕಾಲಘಟ್ಟದಲ್ಲಿ ಗುರುತಿಸಬಹುದಾಗಿದೆ.

ಹೈದರ್ ಮತ್ತು ಟಿಪ್ಪುವಿನ ಕಾಲವು ಭಾರತದ ಸಾಮಾಜಿಕ, ಆರ್ಥಿಕ ಕ್ಷೇತ್ರದಲ್ಲಿ ಹೊಸ ತಿರುವನ್ನು ಪಡೆದ ಕಾಲಘಟ್ಟವಾಗಿದೆ. ಟಿಪ್ಪುಸುಲ್ತಾನನು ರಾಜ್ಯದ ಆದಾಯವನ್ನು ಹೆಚ್ಚಿಸುವ ಸಲುವಾಗಿ ಹಲವಾರು ಹೊಸ ಹೊಸ ಕೃಷಿನೀತಿಗಳನ್ನು ಜಾರಿಗೆ ತಂದನು. ರಾಜ್ಯದಲ್ಲಿ ಜಾರಿಯಲ್ಲಿದ್ದ ಮೊಗಲ್ ಮಾದರಿಯ ಅಂಶಗಳನ್ನು ಜೊತೆಗೂಡಿಸಿ ವ್ಯವಸ್ಥಿತ ಕಂದಾಯವನ್ನು ಕೇಂದ್ರೀಕರಿಸಲು ಸ್ಥಳೀಯ ಪಾಳೆಯಗಾರರು ದೇಶಮುಖ ಮೊದಲಾದ ಅಧಿಕಾರಿಗಳನ್ನು ಪದಚ್ಯುತಿಗೊಳಿಸಿ ರೈತಾಪಿ ಕಂದಾಯವನ್ನು ನೇರವಾಗಿ ಸಂಗ್ರಹಿಸಲು ಕ್ರಮ ಕೈಗೊಂಡಿದ್ದು ಕೃಷಿ ಆಧುನಿಕತೆಗೆ ಒಳಪಡುವ ಒಂದು ಮುಖ್ಯ ಘಟ್ಟವೆಂದು ಕರೆಯಬಹುದಾಗಿದೆ. ಹೈದರನು ತನ್ನ ಆಳ್ವಿಕೆಯ ಕಾಲದಲ್ಲಿ ಸಾಮ್ರಾಜ್ಯದ ಆರ್ಥಿಕ ಸುಭದ್ರತೆಯನ್ನು ಕಾಪಾಡುವುದಕ್ಕಿಂತ ಮುಖ್ಯವಾಗಿ ಸಾಮ್ರಾಜ್ಯವನ್ನು

ವಿಸ್ತರಿಸುವುದರಲ್ಲಿ ನಿರತನಾಗಿದ್ದನು. ಆದರೆ ಟಿಪ್ಪು ಸುಲ್ತಾನನು ಸಾಮ್ರಾಜ್ಯವನ್ನು ವಿಸ್ತರಿಸುವ ಜೊತೆಗೆ ಸಾಮ್ರಾಜ್ಯದ ಅಭಿವೃದ್ಧಿಗೆ ಹಲವಾರು ಹೊಸ ರೀತಿಯ ಯೋಜನೆಗಳನ್ನು ಜಾರಿಗೆ ತಂದನು. ಬ್ರಿಟಿಶರ ವಸಾಹತುಶಾಹಿ ವಿಸ್ತರಣೆಯ ಅಬ್ಬರವನ್ನು ತಡೆಗಟ್ಟುವ ತನ್ನ ಉದ್ದೇಶದ ಯಶಸ್ಸು ಪಡೆಯಲು ಪ್ರಯತ್ನಿಸಿದ. ಟಿಪ್ಪು ಕೃಷಿ, ಕೈಗಾರಿಕೆ, ವಾಣಿಜ್ಯ ನೀತಿಗಳಲ್ಲಿ ರಾಜ್ಯವನ್ನು ಅತ್ಯಂತ ಪ್ರಗತಿಪರ ರಾಜ್ಯವನ್ನಾಗಿ ಬೆಳೆಸಲು ಆರ್ಥಿಕತೆಯ ಸಾಧನವನ್ನು ಬಳಸಿಕೊಂಡು ಆರ್ಥಿಕ ದಿಗ್ಭಂಧನ ನೀತಿಯನ್ನು ರೂಪಿಸಿ ಬ್ರಿಟಿಶರೊಡನೆ ಸೆಣಸಾಡಲು ಮುಂದಾದನು.

ಕೃಷಿಗೆ ಸಂಬಂಧಿಸಿದಂತೆ ಹೈದರ್ ಮತ್ತು ಟಿಪ್ಪು ಕಾಲದಲ್ಲಿ ಊಳಿಗಮಾನ್ಯ ವ್ಯವಸ್ಥೆಯನ್ನು ಅಂತ್ಯಗೊಳಿಸಿ, ಉತ್ತರ ಕರ್ನಾಟಕದ ದೇಶಮುಖ ಎಂಬ ಬ್ರಾಹ್ಮಣರ ಅಧೀನದಲ್ಲಿದ್ದ ಸಾವಿರಾರು ಎಕರೆ ಭೂಮಿಯನ್ನು ವಾಪಸ್ ಪಡೆದು ಗೇಣಿದಾರರಿಗೆ ಹಂಚಿದನು(ಜಗದೀಶ ಕೊಪ್ಪ, ೨೦೧೯:೫೬).

ಮೂಡಬಿದ್ರಿಯ ಜೈನ ಬಸದಿ ವಶದಲ್ಲಿದ್ದ ಭೂಮಿಯನ್ನು ಮತ್ತು ಉತ್ತರ ಕರ್ನಾಟಕದ ದೇಶಮುಖರ ಭೂಮಿಯನ್ನು ಎಲ್ಲರಿಗೂ ಸಮನಾಗಿ ಹಂಚಿದನು. ಟಿಪ್ಪು ಕಾಲದಲ್ಲಿ ಇಡೀ ರಾಜ್ಯ ಒಡೆತನದ ಭೂಮಿಯನ್ನು ರೈತರಿಗೆ ಗೇಣಿಗೆ ನೀಡಲಾಗುತ್ತಿತ್ತು. ನಿರ್ದಿಷ್ಟಪಡಿಸಿದ ಗೇಣಿಯನ್ನು ರಾಜ್ಯಕ್ಕೆ ನೀಡುವಲ್ಲಿ ವಿಫಲವಾದ ಸಂದರ್ಭದಲ್ಲಿ ಆ ಭೂಮಿಯನ್ನು ಬೇರೆ ಇತರೆ ರೈತರಿಗೆ ಗೇಣಿಗೆ ನೀಡಲಾಗುತ್ತಿತ್ತು(ಚಂದ್ರಶೇಖರ್, ರಾವ್, ೨೦೧೬:೭೬). ಹೈದರ್ ಮತ್ತು ಟಿಪ್ಪು ಕಾಲದಲ್ಲಿ ೩೯ ಲಕ್ಷ ಎಕರೆ ಪ್ರದೇಶದಲ್ಲಿ ಎಂಟು ಲಕ್ಷ ಎಕರೆ ಭೂಮಿ ಕೃಷಿ ನೀರಾವರಿಗೆ ಒಳಪಟ್ಟದ್ದನ್ನು ಮತ್ತು ನಾಡಿನುದ್ದಕ್ಕೂ ಕೆರೆ ಕಟ್ಟೆಗಳನ್ನು ಕಟ್ಟಿಸಿರುವ ಮಾಹಿತಿಯನ್ನು ಬುಕಾನನ್ ವರದಿಯಲ್ಲಿ ಕಾಣಬಹುದು. ೧೭೯೦ರಲ್ಲಿ ಕಾವೇರಿ ನದಿಗೆ ಅಣೆಕಟ್ಟನ್ನು ನಿರ್ಮಿಸುವ ಕನಸು ಕಂಡು ಕೃಷ್ಣರಾಜಸಾಗರ ಜಲಾಶಯ ಇರುವ ಸ್ಥಳದಲ್ಲಿ ಪ್ರಥಮ ಬಾರಿಗೆ ಶಿಲಾನ್ಯಾಸ ನೆರವೇರಿಸಿದ್ದನು. ಕೃಷಿ ಅಭಿವೃದ್ಧಿಗಾಗಿ ಟಿಪ್ಪು ೧೨೭ ಕಾನೂನುಗಳನ್ನು ಜಾರಿಗೆ ತಂದಿದ್ದು, ಅದಕ್ಕಾಗಿ ಅಮಲ್ದಾರ್ ಕಾನೂನು ಸಂಹಿತ ಅಧಿಕಾರಗಳನ್ನು ನೇಮಿಸಿದ್ದನು. ಈ ಸಂಹಿತೆಗಳು ಕೃಷಿಯನ್ನು ಕುರಿತಂತೆ ಹಲವಾರು ನಿಯಮಗಳನ್ನು ತಿಳಿಸುತ್ತಿದ್ದವು. ಕೃಷಿಯಲ್ಲಿ ಟಿಪ್ಪು ಕೆಲವು ಬೆಗಳಿಗೆ ನಿರ್ಬಂಧ ವಿಧಿಸಿದ್ದನು.

ಕೃಷಿಯಲ್ಲಿ ಅಧಿಕ ಇಳುವರಿಯನ್ನು ಬಯಸಿ ಆ ಮೂಲಕ ಬಡ ರೈತರ ಕಲ್ಯಾಣಕ್ಕೆ ಶ್ರಮಿಸಿದನು. ೨ನೇ ಕಾನೂನಿನ ಪ್ರಕಾರ ಅಮೀಲ್ಲರು ತಕ್ಕಾವಿಯನ್ನು ೩ ಅಥವಾ ೪ ಪಗೋಡಗಳಂತೆ ಪ್ರತಿ ನೇಗಿಲಿಗೂ ನೀಡುತ್ತಿದ್ದನು. ನಂತರ ಪಡೆದುಕೊಂಡ ಸಾಲವನ್ನು ಒಂದು ಅಥವಾ ಎರಡು ವರ್ಷದಲ್ಲಿ ಹಿಂದಿರುಗಿಸಬೇಕಾಗಿತ್ತು. ಕೃಷಿಭೂಮಿಯನ್ನು ಅಳತೆ ಮಾಡುವಾಗ ಎಚ್ಚರಿಕೆಯಿಂದ ಇರಬೇಕಾದದ್ದನ್ನು ತಿಳಿಸಿದನು. ಇವರು ಉತ್ಪಾದನೆಯ ಮೇಲೆ ಬೀರುವ ಪರಿಣಾಮವನ್ನು ಗಮನಿಸಬೇಕಾಗಿತ್ತು. ಟಿಪ್ಪು ಸುಲ್ತಾನನು ಭೂಮಿಯನ್ನು ಬೇಸಾಯ ಮಾಡದ ಹಾಗೆ ಬಿಡಬಾರದೆಂದು ರೈತರಿಗೆ ತಿಳಿಸಿದ್ದನು. ಹೀಗೆ ಟಿಪ್ಪುಸುಲ್ತಾನನು ಹೊಸ ಹೊಸ ಕೃಷಿನೀತಿಗಳನ್ನು ವಿಭಿನ್ನ ರೀತಿಯಲ್ಲಿ ಜಾರಿಗೆ ತಂದಿದ್ದನು.

ಟಿಪ್ಪು ಸುಲ್ತಾನ್ ಕೃಷಿ ಕಾನೂನು ಕುರಿತ ಮುಖ್ಯವಾದ ಅಂಶವೆಂದರೆ ಭೂ ಒಡೆಯರು ಅಥವಾ ರೈತರು ಕೃಷಿಭೂಮಿಯನ್ನು ಉಳುಮೆ ಮಾಡದಿದ್ದರೆ ಶಿಕ್ಷೆಗೆ ಒಳಗಾಗಬೇಕಿತ್ತು. ಎಂದು

ಕಟ್ಟುನಿಟ್ಟಿನ ಎಚ್ಚರಿಕೆಯನ್ನು ನೀಡಿದ್ದನು. ಗ್ರಾಮಗಳಲ್ಲಿ ಭೂಮಿಯನ್ನು ಹೊಂದಿರುವ ಪಟೇಲರು ಮತ್ತು ಶಾನುಭೋಗರು ಏಕಕಾಲದಲ್ಲಿ ಬೇಸಾಯ ಮಾಡಬೇಕಿತ್ತು. ಇವರು ಒಂದು ಸ್ಥಳದಲ್ಲಿ ಮಾತ್ರ ಭೂಮಿಯನ್ನು ಹೊಂದಿರಬೇಕಿತ್ತು(ಮಹಾದೇವಮ್ಮ,೨೦೦೮:೧೩). ಹೆಚ್ಚಿನ ಭಾಗಗಳಲ್ಲಿ ಭೂಮಿಯನ್ನು ಹೊಂದುವಂತಿರಲಿಲ್ಲ.

ಟಿಪ್ಪು ಸುಲ್ತಾನನ್ ಕಾಲದಲ್ಲಿ ಕೃಷಿ ಕಾನೂನು, ಕೃಷಿಕ ವರ್ಗದವರೊಂದಿಗೆ ವ್ಯವಹರಿಸಬೇಕಾಗಿದ್ದ ಅಧಿಕಾರಿಗಳು, ಅವರು ಮಾಡಬೇಕಾದ ಕರ್ತವ್ಯ, ಬೇಸಾಯಕ್ಕೆ ಅಳವಡಿಸಿರುವ ಜಮೀನಿನ ವಿಸ್ತಾರ, ಒಂದು ತಾಕು ಜಮೀನಿಗೆ ಅಗತ್ಯವಾದ ಬೀಜದ ಪ್ರಮಾಣ ಈ ಮುಂತಾದ ವಿಷಯಗಳನ್ನು ಕುರಿತಾದ ಅತಿ ಸೂಕ್ಷ್ಮ ವಿವರಗಳನ್ನು ಟಿಪ್ಪು ಪಡೆದುಕೊಳ್ಳುತ್ತಿದ್ದನು. ಎರಡನೆಯದಾಗಿ ಜಮೀನಿನ ವರ್ಗೀಕರಣ ಆಗಲೇಬೇಕೆಂದು ಒತ್ತಾಯಪಡಿಸಲಾಗಿತ್ತು. ಅದಕ್ಕೆ ಕೆರೆ, ಕಟ್ಟೆ, ನದಿಗಳಿಂದ ನೀರು ಹಾಯಿಸಿ ನೀರಾವರಿ ಮಾಡಲಾಗುತ್ತದೆಯೇ ಅಥವಾ ಕಲ್ಲುತುಂಬಿದ ಬೆಟ್ಟಗುಡ್ಡಗಳ ನೆಲವೇ ಎಂದು ತಿಳಿಸಿದ್ದನು. ಮಣ್ಣಿನ ಗುಣಮಟ್ಟವನ್ನು ನಿರ್ಧರಿಸಲು ನಾಲ್ಕು ಅಂಶಗಳಿರಬೇಕೆಂದು ನಿರ್ಧರಿಸಬೇಕಾಗಿತ್ತು(ಷೇಕ್ ಅಲಿ,(ಸಂ), ೨೦೧೮:೬೫೯).

ಕೃಷಿಯನ್ನು ಸುಧಾರಿಸಿಕೊಳ್ಳುವುದಕ್ಕೆ, ಉತ್ಪಾದನೆಯನ್ನು ಹೆಚ್ಚಿಸಲು ಬಲಪ್ರಯೋಗ ಮತ್ತು ಪ್ರಚೋದನೆ ಎಂಬ ತಂತ್ರಗಳನ್ನು ಅಳವಡಿಸಿಕೊಂಡನು. ಬಲಪ್ರಯೋಗವೆಂಬುದು ಸಾಮಾನ್ಯ ಜನ, ರೈತರ ಮೇಲಲ್ಲದೇ ಅಧಿಕಾರಿಗಳ ಮೇಲಾಗಿತ್ತು. ಆಯಾ ವಿಭಾಗಗಳಿಗೆ ನೇಮಿಸಿದ ಅಧಿಕಾರಿಗಳು ಯಾವ ರೀತಿ ಕೆಲಸ ಕಾರ್ಯಗಳನ್ನು ನಿರ್ವಹಿಸುತ್ತಿದ್ದರು, ರೈತರ ಅಗತ್ಯತೆಗಳಿಗೆ ಬೇಕಾದ ಬೀಜ, ನೇಗಿಲು, ಹಣ, ಇನ್ನು ಮುಂತಾದವುಗಳು ಇವೆಯೋ ಇಲ್ಲವೋ ಎಂಬುದನ್ನು ಆ ಅಧಿಕಾರಿಗಳು ಖಚಿತಪಡಿಸಿಕೊಂಡು ರೈತರಿಗೆ ಬೇಕಾದ ಅವಶ್ಯಕತೆಗಳನ್ನು ಈಡೇರಿಸುವ ಕೆಲಸ ಮಾಡಬೇಕಾಗಿತ್ತು. ಕಾಡುಭೂಮಿ ಅಥವಾ ಬಂಜರುಭೂಮಿಯನ್ನು ಕೃಷಿಯೋಗ್ಯ ಭೂಮಿಯನ್ನಾಗಿ ಪರಿವರ್ತಿಸಲು ಸರ್ಕಾರದಿಂದ ಸಹಾಯ ಸಹಕಾರವನ್ನು ನೀಡುತ್ತಿದ್ದರು. ಬಂಜರು ಭೂಮಿಯನ್ನು ಸಾಗುವಳಿಗೆ ತಂದರೆ ಅದಕ್ಕೆ ಸಂಬಂಧಪಟ್ಟ ಒಂದು ಆದೇಶವನ್ನು ಒಪ್ಪಂದದ ಮೂಲಕ ರೈತರಿಗೆ ವಹಿಸಿಕೊಡಲಾಗುತ್ತದೆ. ಅದೇನೆಂದರೆ ಮೊದಲ ವರ್ಷ ಅವರು ಯಾವುದೇ ತೆರಿಗೆಯನ್ನು ನೀಡಬೇಕಾಗಿಲ್ಲ. ಎರಡನೆಯ ವರ್ಷ ತೆರಿಗೆಯ ಅರ್ಧ ಮಾತ್ರ ಕೊಡಬೇಕು. ಆದರೆ ಮೂರನೆ ವರ್ಷ ಪೂರ್ತಿಯಾಗಿ ನಿಗಧಿಯಾದ ತೆರಿಗೆಯನ್ನು ಕಟ್ಟಬೇಕಾಗಿತ್ತು(ಷೇಕ್‌ಅಲಿ,(ಸಂ), ೨೦೧೮:೬೬೦). ಈ ರೀತಿಯಾದ ಬಂಜರುಭೂಮಿಯನ್ನು ಕೃಷಿಯೋಗ್ಯ ಭೂಮಿಯನ್ನಾಗಿ ಪರಿವರ್ತಿಸುವ ಪ್ರಕ್ರಿಯೆ ಪ್ರಾಚೀನ ಕಾಲದಿಂದಲೂ ಇದ್ದು ಕೃಷಿಯೇತರ ಕಸುಬುಗಳ ಪರಿಕಲ್ಪನೆ ಹೆಚ್ಚಾದಾಗ ಕೃಷಿಯೋಗ್ಯ ಭೂಮಿಯನ್ನು ರೂಪಿಸುವ ಪರಿಕಲ್ಪನೆ ಬೆಳೆದು ಬಂದಿರುವುದನ್ನು ಗಮನಿಸಬಹುದಾಗಿದೆ. ಕೃಷಿಯಲ್ಲಿ ಪಾಲ್ಗೊಳುವ ಸಮುದಾಯವು ಈ ಭಾಗದಲ್ಲಿ ವಿಶೇಷವಾಗಿ ದಲಿತರು ಮತ್ತು ಮುಸ್ಲಿಂ ಸಮುದಾಯುದವರಾಗಿದ್ದರು. ಇವರು ಕೃಷಿಯನ್ನು ತಮ್ಮ ವೃತ್ತಿಯನ್ನಾಗಿಸಿಕೊಂಡಿದ್ದ ಸಮುದಾಯಗಳಾಗಿದ್ದವು. ಇಂದಿಗೂ ಕೂಡ ಮಳವಳ್ಳಿ, ಬನ್ನೂರು, ಟಿ.ನರಸೀಪುರ ತಾಲೂಕು,

ಪಾಂಡವಪುರ, ಶ್ರೀರಂಗಪಟ್ಟಣ ಮತ್ತು ಮಂಡ್ಯ ತಾಲೂಕುಗಳಲ್ಲಿ ಕೃಷಿಯನ್ನು ವೃತ್ತಿಯಾಗಿಸಿಕೊಂಡ ದಲಿತ ಹಾಗೂ ಮುಸ್ಲಿಂ ಸಮುದಾಯದ ಕುಟುಂಬಗಳನ್ನು ಕಾಣಬಹುದು(ಜಗದೀಶ್ ಕೊಪ್ಪ, ೨೦೧೯:೫೭). ಪ್ರಾಚೀನ ಕಾಲದಿಂದಲೂ ಕೃಷಿಯಲ್ಲಿ ತೊಡಗಿಸಿಕೊಂಡ ಮುಖ್ಯ ಸಮುದಾಯವೆಂದರೆ ದಲಿತರು. ವಿಜಯನಗರೋತ್ತರ ಕಾಲಾವಧಿಯು ಪಾಳೆಯಗಾರ ಆಳ್ವಿಕೆಯ ಜೊತೆಯಲ್ಲಿ ಬಿಜಾಪುರ ಮತ್ತು ಬಹಮನಿ, ನಿಜಾಮನ ರಾಜ್ಯಗಳು ಅಸ್ತಿತ್ವಕ್ಕೆ ಬಂದು, ಕಲ್ಯಾಣ ಕರ್ನಾಟಕ ಮತ್ತು ಉತ್ತರ ಕರ್ನಾಟಕ ಭಾಗಗಳಲ್ಲಿ ಈ ರಾಜ್ಯ ಕೃಷಿ ನೀರಾವರಿಗೆ ಅನೇಕ ರೀತಿಯಾದ ಯೋಜನೆಗಳನ್ನು ರೂಪಿಸಿದರು.

ರಾಜ್ಯದ ನೇರ ಆಳ್ವಿಕೆಗೆ ಒಳಪಟ್ಟಿರುವ ಕೆರೆ, ಕುಂಟೆ, ಬಾವಿ, ನಾಲೆಗಳ ದುರಸ್ತಿ ಕಾರ್ಯವನ್ನು ರಾಜ್ಯ ಪ್ರತಿನಿಧಿಗಳಾದ ಅಮೀಲರು, ಮುತ್ಸದ್ದಿ ಮತ್ತು ಹಿರ್ತರ್‌ಪ್ರಬರುಗಳು ಪ್ರತಿಯೊಂದು ಹಳ್ಳಿಗಳಿಗೆ ತೆರಳಿ ನೀರಾವರಿ ಮೂಲಗಳನ್ನು ಪರಿಶೀಲಿಸಿ ಅವು ದುಸ್ಥಿತಿಯಲ್ಲಿದ್ದಲ್ಲಿ ಅಂತಹವುಗಳ ಮಾಹಿತಿಯ ವರದಿಯನ್ನು ಕಚೇರಿ ಹಾಗೂ ಪ್ರತಿಯೊಂದು ಗ್ರಾಮಮಟ್ಟದಲ್ಲಿ ಶಾನುಭೋಗರ ಕಚೇರಿಯಲ್ಲಿ ಇಡಬೇಕಿತ್ತು. ಶಾನುಭೋಗರ ಕೆರೆಗಳ ಹೂಳೆತ್ತುವ ಜವಾಬ್ದಾರಿಯನ್ನು ನಿರ್ವಹಿಸುತ್ತಿದ್ದರು. ಕೆರೆ, ಬಾವಿ, ನಾಲೆಗಳ ದುರಸ್ತಿ ಕಾರ್ಯದಲ್ಲಿ ತಾನು ಒಬ್ಬೊಬ್ಬ ಶ್ರಮಿಕನಿಗೂ ನೀಡಿದ ದಿನಗೂಲಿಯ ವಿವರಣೆ ಹಾಗೂ ಒಂದೊಂದು ಕೆರೆಯಿಂದ ಕೋಣಗಳ ಸಹಾಯದಿಂದ ಹೂಳೆತ್ತಿದ್ದರ ಪ್ರತಿಯೊಂದು ವಿವರಗಳನ್ನು ಆಯಾ ಗ್ರಾಮದ ಶಾನುಭೋಗರು ನಿರ್ವಹಿಸಬೇಕಾಗಿತ್ತು(ಚಂದ್ರಶೇಖರ್, ರಾವ್, ೨೦೧೬:೮೦). ಮಧ್ಯವರ್ತಿ ಅಧಿಕಾರಿಗಳನ್ನು ರದ್ದುಪಡಿಸಿದ್ದರು. ಸರ್ಕಾರದಿಂದ ವೇತನವನ್ನು ಪಡೆದು ಸರ್ಕಾರಕ್ಕೆ ನ್ಯಾಯಯುತವಾಗಿ ಅಧಿಕಾರಿಗಳು ಕಾರ್ಯವನ್ನು ನಿರ್ವಹಿಸಬೇಕಾಗಿತ್ತು.

ಕೆಲಸ ನಿರ್ವಹಿಸುವ ಅಧಿಕಾರಿಗಳು ತಮ್ಮ ಅಧಿಕಾರ ವ್ಯಾಪ್ತಿಗೆ ಬರುವ ಗ್ರಾಮಗಳಲ್ಲಿ ಪಟೇಲರು ತಾವು ಪಡೆದುಕೊಂಡ ಇನಾಂ ಭೂಮಿಯಲ್ಲಿ ಕೆರೆ, ಬಾವಿ, ನಾಲೆಗಳನ್ನು ತಮ್ಮದೇ ಖರ್ಚು, ವೆಚ್ಚಗಳಲ್ಲಿ ನಿರ್ವಹಿಸಬೇಕಿತ್ತು. ಅವು ಯಾವಾಗಲೂ ಸುಸ್ಥಿತಿಯಲ್ಲಿರಬೇಕು. ಅವುಗಳ ರಕ್ಷಣೆಯ ಜವಾಬ್ದಾರಿ ಅಲ್ಲಿನ ಅಧಿಕಾರಿಗಳದ್ದಾಗಿದ್ದು ಒಂದು ವೇಳೆ ಅವನ ಕರ್ತವ್ಯಗಳನ್ನು ಸರಿಯಾಗಿ ನಿರ್ವಹಿಸದಿದ್ದರೆ ಅಂತವರಿಗೆ ತಕ್ಕ ಶಿಕ್ಷೆಯನ್ನು ಅಲ್ಲಿನ ಕಾನೂನುಗಳು ನಿರ್ಧರಿಸುತ್ತಿದ್ದರು ಎಂಬುದು ಸ್ಪಷ್ಟವಾಗುತ್ತದೆ. ಹೀಗೆ ಹೈದರ್ ಮತ್ತು ಟಿಪ್ಪು ಕಾಲಾವಧಿಯಲ್ಲಿ ಕೃಷಿ ನೀರಾವರಿ ವ್ಯವಸ್ಥೆಗೆ ವಿಶೇಷವಾದ ಮಹತ್ವವನ್ನು ನೀಡಿದ್ದರೆಂಬುದು ಗಮನಾರ್ಹ ಸಂಗತಿ. ವಿಜಯನಗರೋತ್ತರ ಕಾಲದ ಹೈದರ್ ಅಲಿ ಮತ್ತು ಟಿಪ್ಪು ಕಾಲದವರೆಗೆ ಕೃಷಿವ್ಯವಸ್ಥೆಯಲ್ಲಿ ಹಲವಾರು ಮಾರ್ಪಾಡುಗಳೊಂದಿಗೆ ಹೊಸದೊಂದು ಕೃಷಿ ನೀತಿಯ ಹುಟ್ಟಿಗೆ ಟಿಪ್ಪು ಕಾರಣನಾಗಿದ್ದಾನೆಂದರೆ ತಪ್ಪಾಗಲಾರದು.

ವಿಜಯನಗರೋತ್ತರ ಕಾಲದಲ್ಲಿ ಭೂಮಿಯ ಗೇಣಿ ಅಥವಾ ಹಿಡುವಳಿ ಪದ್ಧತಿಯಲ್ಲಿ ಇದ್ದು ಉಪಕಾರಿ ಮತ್ತು ಸೇವೆಗಾಗಿ ಕೊಟ್ಟ ಭೂಮಿಯನ್ನು ೨ ವಿಭಾಗ ಮಾಡಬಹುದು. ಉಪಕಾರಿ ಹಿಡುವಳಿಯಲ್ಲಿ ಬ್ರಹ್ಮದೇಯ ದೇವದೇಯ ಮತ್ತು ಮಠಾಪುರವೆಂಬ ಮೂರು ರೀತಿಗಳಿದ್ದವು.

ಬ್ರಹ್ಮದೇಯ ದೇವದಾಯಗಳ ಪರಿಕಲ್ಪನೆಯು ವಿಜಯನಗರೋತ್ತರ ಕಾಲದಲ್ಲಿ ಸ್ಥಿತ್ಯಂತರದ ಕಾಲವಾಗಿ ಕಂಡುಬರುತ್ತದೆ.

ಮಧುಗಿರಿ ಮಹಾನಾಡ ಪ್ರಭುಗಳು ತಮ್ಮ ಸಾಮ್ರಾಜ್ಯ ಸ್ಥಾಪಿಸುವಲ್ಲಿ ಅಲ್ಲಿನ ಭೌಗೋಳಿಕತೆ ಕಾರಣವಾಗಿದ್ದು ಅಲ್ಲಿನ ಅರಣ್ಯಸಂಪತ್ತು ಅವುಗಳ ಕುರಿತ ಮಾಹಿತಿಯನ್ನು ಒದಗಿಸುತ್ತದೆ. ಕೃಷಿಯು ಪ್ರಾಚೀನ ಕಾಲದಿಂದಲೂ ಸಾಮ್ರಾಜ್ಯದ ಆರ್ಥಿಕ ವ್ಯವಸ್ಥೆ ಬೆನ್ನೆಲುಬಾಗಿದ್ದು, ಮಧುಗಿರಿ ಮಹಾನಾಡ ಪ್ರಭುಗಳ ಕಾಲದಲ್ಲಿಯೂ ಸಾಮ್ರಾಜ್ಯದ ಆದಾಯದ ಮೂಲಗಳಲ್ಲಿ ಒಂದಾಗಿತ್ತು. ಕರ್ನಾಟಕಕ್ಕೆ ಬಂದ ಫ್ರಾನ್ಸಿಸ್ ಬುಕಾನನ್ ತನ್ನ ವರದಿಯಲ್ಲಿ ಮಧುಗಿರಿಯ ಪರಿಸರವು ಬೆಟ್ಟಗುಡ್ಡಗಳಿಂದ ಆವೃತ್ತವಾಗಿದೆ. ಕೆಲವು ಪ್ರದೇಶಗಳಲ್ಲಿ ಫಲವತ್ತತೆಯ ಭೂಮಿ ಕಂಡುಬರುತ್ತಿದ್ದು, ಕೃಷಿಯೋಗ್ಯವಾದ ಭೂಮಿಯಾಗಿದೆ. ಸಾಕಷ್ಟು ಒಳ್ಳೆಯ ಭೂಮಿ ಪಾಳು ಬಿದ್ದಿದೆ ಎಂದು ಹೇಳುತ್ತಾನೆ. ಇದರಿಂದ ಈ ಪ್ರದೇಶದ ಭೂಮಿಯು ಫಲವತ್ತತೆಯಿಂದ ಕೂಡಿದ್ದು, ಇಲ್ಲಿನ ಜನರು ಹೆಚ್ಚು ಕೃಷಿಯಲ್ಲಿ ತೊಡಗುತ್ತಿದ್ದರೆಂದು ಗುರುತಿಸಬಹುದಾಗಿದೆ.

ಮಧುಗಿರಿಯ ಮಹಾನಾಡ ಪ್ರಭುಗಳ ಆಳ್ವಿಕೆಗೆ ಒಳಪಟ್ಟಿರುವ ಗುಬ್ಬಿ, ತಿಪಟೂರು, ಚಿಕ್ಕನಾಯಕನಹಳ್ಳಿ ತಾಲೂಕುಗಳಲ್ಲಿ ದೊಡ್ಡ ದೊಡ್ಡ ತೆಂಗಿನ ತೋಟಗಳಿದ್ದವೆಂದು ಬುಕಾನನ್ ಹೇಳಿದ್ದಾನೆ. ಅಲ್ಲದೆ ಮದನನಾಡು ಎಂಬ ಒಂದು ಗ್ರಾಮವು ಎರಡು ಕೆರೆಗಳ ಮಧ್ಯವಿದ್ದು ಆ ಗ್ರಾಮದ ಸುತ್ತಮುತ್ತ ತೆಂಗಿನ ತೋಟಗಳಿದ್ದವು. ಆ ಕೆರೆಗಳ ನೀರನ್ನು ತೆಂಗಿನ ತೋಟಕ್ಕೆ ಮೀಸಲಾಗಿಟ್ಟಿದ್ದರು. ಅಲ್ಲಿ ಸುಮಾರು ನಲವತ್ತೆಂಟು ಸಾವಿರ ತೆಂಗಿನ ಮರಗಳಿದ್ದು, ಆ ನಂತರ ಪೂರ್ಣಯ್ಯನವರು ಅದರ ಅಭಿವೃದ್ಧಿಗಾಗಿ ಮೂರು ಸಾವಿರ ಪಗೋಡಗಳನ್ನು ಸರ್ಕಾರದಿಂದ ಮಂಜೂರು ಮಾಡಿದರು ಎಂದು ಹೇಳಿದ್ದಾನೆ(ಶ್ಯಾಮಲ, ೨೦೧೭:೪೫೫).

ಭೂಮಿಯಲ್ಲಿ ಉಳುಮೆ ಮಾಡುವವನ್ನು ಕೃಷಿಕ ಅಥವಾ ಒಕ್ಕಲಿಗನು ಭೂತಾಯಿ ಮಗನೆಂದು ಕರೆಯುತ್ತಿದ್ದರು(ಕಾವಲಮ್ಮ, ೨೦೦೫:೧೮೬). ಪ್ರಾಚೀನ ಕಾಲದಿಂದಲೂ ಕೃಷಿ ಉಳುಮೆ ಮಾಡುವವರು ಸಾಮಾನ್ಯ ದುಡಿಯುವ ಜನಾಂಗದವರೆಂದು ಸೂಚಿತವಾದಂತೆ ಇವರೇ ಒಕ್ಕಲುತನದ ಕಾರ್ಯದಲ್ಲಿ ತೊಡಗುತ್ತಿದ್ದರು. ಕೃಷಿಗೆ ಯೋಗ್ಯವಾದ ಭೂಮಿಯನ್ನು ಸಮಕಾಲೀನ ಆಧಾರಗಳಂತೆ ಎರೆಮಣ್ಣು, ಮರುಳು ಮಿಶ್ರಿತ ಕೆಂಪುಮಣ್ಣು ಮತ್ತು ಕಂದುಮಣ್ಣು ಎಂದು ವಿಭಾಗಿಸಿದ್ದರು.

ಹಿಕ್ಕಳ ಭೂಮಿ, ಪರೆಯ ಭೂಮಿ, ಬಿದಿರುಗಡದಡೆ, ಅಡಿಕೆ ತೋಟ ಮುಂತಾದ ಈ ಅಂಶಗಳ ಆಧಾರದ ಮೇಲೆ ಇವರು ಬಹುತೇಕ ಭೂಮಿಯನ್ನು ಕೃಷಿಭೂಮಿಯನ್ನಾಗಿ ಪರಿವರ್ತಿಸಿದ್ದರೆಂದು ಹೇಳಬಹುದು. ವಿಜಯನಗರ ಅಧೀನ ಪ್ರಭುಗಳಾಗಿದ್ದವರು ಸಾಮಂತರು ಸಾರ್ವಭೌಮರಾಗಿ ಮುಂದುವರಿದಿದ್ದರು. ವಿಜಯನಗರದ ಅವಧಿಯಲ್ಲಿದ್ದ ಬೀಜವರಿ ಪದ್ಧತಿಯನ್ನು ಮತ್ತು ಭೂಮಿಯನ್ನು ಅಳತೆ ಮಾಡುವ ಕ್ರಮವನ್ನು ಇವರು ಮುಂದುವರಿಸಿದ್ದರು.

ಹಿರೆ ಚಿಕ್ಕಪ್ಪಗೌಡ ಅಥವಾ ಮೊದಲ ಮುಮ್ಮಡಿ ಚಿಕ್ಕಪ್ಪಗೌಡರು ಬಿಜ್ಜವಾರದ ಬಳಿ ಕೆರೆಯನ್ನು ನಿರ್ಮಿಸಿ ಕೃಷಿಗೆ ಅನುಕೂಲ ಮಾಡಿಕೊಟ್ಟಿದ್ದರು. ಈ ಕೆರೆಯ ನಿರ್ಮಾಣ ಕುರಿತಂತೆ ಹಲವಾರು

ಕಥೆಗಳಿದ್ದು, ಹೊಯ್ಸಳ ಕಾಲದಲ್ಲಿಯೇ ಈ ಕೆರೆ ನಿರ್ಮಾಣದ ದಾಖಲೆಗಳು ದೊರೆಯುತ್ತವೆಂದು ಕಾವಲಮ್ಮ ಅವರು ತಿಳಿಸಿದ್ದಾರೆ. ಪುರುಷರಂತೆ ಮಹಿಳೆಯರು ಮಧುಗಿರಿ ಮಹಾನಾಡ ಪ್ರಭುಗಳ ಕಾಲದಲ್ಲಿಯೂ ಕೆರೆಗಳನ್ನು ನಿರ್ಮಿಸಿದ್ದರು. ಚಿಕ್ಕ ದೇವರಾಜ ಒಡೆಯರ ಧರ್ಮಪತ್ನಿ ಗೌರಮ್ಮಣ್ಣಿಯರು ಮಧುಗಿರಿಯಲ್ಲಿ ಸ್ವಲ್ಪಕಾಲ ನೆಲೆಸಿದ್ದು ಅಲ್ಲಿ ಗೋಪಾಲರಸ್ಸು ಎಂಬ ಕೊಳವನ್ನು, ಒಂದು ಕಟ್ಟೆಯನ್ನು ನಿರ್ಮಿಸಿದರೆಂದು ಬೃಂದಾವನದ ಶಾಸನ ತಿಳಿಸುತ್ತದೆ.(ಎ.ಕ.-೧೨, ಮ-೧೫).

ಮಧುಗಿರಿ ಮಹಾನಾಡ ಪ್ರಭುಗಳ ಕಾಲಾವಧಿಯಲ್ಲಿ ಊಟಿಕಾಲುವೆ ಅಥವಾ ತಲಪರಿಗೆ ಎಂಬ ಮತ್ತೊಂದು ಪ್ರಕಾರದ ನೀರಿನ ವ್ಯವಸ್ಥೆ ಕಂಡುಬರುತ್ತದೆ. ಈ ಕಾಲುವೆಯ ಅಂತರ್ಜಲವು ಬುಗ್ಗೆಯಾಗಿ ಚಿಮ್ಮುವ ನೀರಿನ ಚಿಲುಮೆಯಾಗಿದೆ. ಇಲ್ಲಿಂದ ಆಳವಾಗಿ ಅಗೆದು ತೋಡುವ ಕಾಲುವೆಗಳನ್ನು ನಿರ್ಮಿಸಿ ಅದರಿಂದ ಸಿದ್ಧಾಪುರ, ಮಧುಗಿರಿ, ಚೀಲಕನಹಳ್ಳಿ, ಹಂಪಾಪುರ, ಮಿಡಿಗೇರೆ ಕಸಾಪುರ, ರೆಡ್ಡಿಹಳ್ಳಿ ಮತ್ತು ಸತ್ತಿಗಾನದ ಭಾಗದಲ್ಲಿ ಈ ರೀತಿಯ ಕಾಲುವೆಗಳಿದ್ದವು ಎಂದು ಗುರುತಿಸಬಹುದು(ಕಾವಲಮ್ಮ,೨೦೦೫: ೧೯೧). ಹೀಗೆ ನಿಸರ್ಗದತ್ತವಾದ ಚಿಲುಮೆಯು ನೀರಾವರಿ ವ್ಯವಸ್ಥೆಗೆ ಪೂರಕವಾದ ಕೆಲಸವನ್ನು ನಿರ್ವಹಿಸಿರುವುದು ಸ್ಪಷ್ಟ. ಪ್ರಕೃತಿಯು ಒಂದು ಸಾಮ್ರಾಜ್ಯದ ಅಭಿವೃದ್ಧಿಗೆ ಯಾವ ರೀತಿ ಪೂರಕವಾಗಿದೆ ಎಂಬುದನ್ನು ಈ ಅಂಶಗಳ ಮೂಲಕ ಗಮನಿಸಲಾಗಿದೆ.

ಗುಡೇಕೋಟೆಯ ಪಾಳೆಯಗಾರರು ಕೃಷಿವ್ಯವಸ್ಥೆಯನ್ನು ಮೂಲಕಸುಬನ್ನಾಗಿಸಿದ್ದವರು. ವ್ಯವಸಾಯವೇ ಇವರ ಮುಖ್ಯ ಕಸುಬಾಗಿದ್ದು, ಕೃಷಿಯಿಂದ ಉತ್ಪಾದನೆಯಾಗುತ್ತಿದ್ದ ವಸ್ತುಗಳನ್ನು ಸಿದ್ಧವಸ್ತುಗಳನ್ನಾಗಿ ಮಾರ್ಪಡಿಸಿ ಕೃಷಿಯೇತರ ಉತ್ಪಾದನೆಯಲ್ಲಿ ಈ ಮನೆತನದ ನಾಯಕರು ಕಾರ್ಯ ನಿರ್ವಹಿಸುತ್ತಿದ್ದರು. ಗುಡೇಕೋಟೆ ತಾಲೂಕಿನಲ್ಲಿ ಎಲ್ಲ ಜನಾಂಗದವರಿದ್ದು ನೇಕಾರ, ಪಂಚಾಳ, ಕುಂಬಾರ, ನಾಯಿಂದರಿದ್ದರು. ಇವರು ತಮ್ಮ ಸಾಂಪ್ರದಾಯಿಕ ಕಸುಬುಗಳನ್ನು ನಿರ್ವಹಿಸುತ್ತಿದ್ದರು. ಲಿಂಗಾಯಿತ ಜನಾಂಗದವರು ವ್ಯಾಪಾರ ಮತ್ತು ಕೃಷಿಯಲ್ಲಿ ಪಾಲ್ಗೊಳ್ಳುತ್ತಿದ್ದರು (ಕೊಟ್ರೇಶ್ ೨೦೧೦:೯೪). ನೈಸರ್ಗಿಕವಾಗಿ ಕಾಡು/ಅರಣ್ಯಪ್ರದೇಶದಲ್ಲಿ ಗುಡೇಕೋಟೆ ಸಂಸ್ಥಾನವಿದ್ದು ದುರ್ಗದ ಮೇಲ್ಭಾಗದಲ್ಲಿ ಕೆಲವು ಕಣಜಗಳು ಕಂಡುಬರುತ್ತವೆ. ಅವು ಧಾನ್ಯ ಸಂಗ್ರಹಿಸುವ ಕಣಜಗಳು ಆಗಿದ್ದವೆಂದು ಗುರುತಿಸಬಹುದಾಗಿದೆ. ಸಾಂಪ್ರದಾಯಿಕವಾಗಿ ಇಲ್ಲಿನ ಜನರು ರಾಗಿ ಕಣಜ ಮತ್ತು ತುಪ್ಪದ ಕಣಜ ಎಂಬ ಎರಡು ಕಣಜಗಳಿವೆ ಎಂದು ಅಭಿಪ್ರಾಯಪಟ್ಟಿದ್ದಾರೆ. ಗುಡೇಕೋಟೆ ಪಾಳೆಯಗಾರರ ಕಾಲದಲ್ಲಿ ಕೃಷಿಗೆ ಪೂರಕವಾದ ಹಲವಾರು ಕೆರೆ ಕಾಲುವೆಗಳನ್ನು ಇವರು ನಿರ್ಮಿಸಿದ್ದರು. ಗುಡೇಕೋಟೆ ಪಾಳೆಯಗಾರರ ಕಾಲದಲ್ಲಿ ನಡೆದ ಲೋಕೋಪಯೋಗಿ ಕಾರ್ಯಗಳಿಂದ ಒಟ್ಟು ೪೩ ಕೆರೆಗಳು, ೫ ಕಾಲುವೆಗಳು, ೪೭ ಬಾವಿಗಳು ನಿರ್ಮಾಣವಾಗಿದ್ದವೆಂದು ತಿಳಿದುಬರುತ್ತದೆ(ಕೊಟ್ರೇಶ್ ೨೦೧೦:೯೩).

ಬಳ್ಳಾರಿ ಪರಿಸರದಲ್ಲಿ ಆಳ್ವಿಕೆ ಮಾಡಿದ ಹರಪನಹಳ್ಳಿ, ಸಂಡೂರು, ಕುರುಗೋಡು ಮೊದಲಾದ ಪಾಳೆಯಗಾರರ ಕಾಲದಲ್ಲಿ ಕೃಷಿ ಆರ್ಥಿಕ ವ್ಯವಸ್ಥೆಯನ್ನು ಕುರಿತಂತೆ ಕೃಷಿಭೂಮಿಯನ್ನು ಕೃಷಿಗೆ

ಯೋಗ್ಯವಾದ ಭೂಮಿ ಮತ್ತು ಬೀಳುಭೂಮಿ ಎಂದು ವಿಭಾಗಿಸಿದ್ದಾರೆ. ಬೀಳುಭೂಮಿಯೆಂದರೆ ಕೃಷಿಗೆ ಯೋಗ್ಯವಲ್ಲದ ಭೂಮಿ, ಹೊಸ ಊರುಗಳ ಸೃಷ್ಟಿಯೊಂದಿಗೆ ಅದರ ಸುತ್ತಮುತ್ತಲೂ ಕೃಷಿಗೆ ಯೋಗ್ಯವಾಗುವಂತೆ ಭೂಮಿಯನ್ನು ಮಾರ್ಪಡಿಸುತ್ತಿದ್ದರು. ಬೀಳುಭೂಮಿಯನ್ನು ಪಶುಪಾಲನೆಗಾಗಿ ಹುಲ್ಲುಗಾವಲುಗಳನ್ನು ನಿರ್ಮಿಸಿ ಮೇವಿಗೆ ಅದನ್ನು ಉಪಯೋಗಿಸುತ್ತಿದ್ದರು. ಒಂದು ವೇಳೆ ಬೀಳು ಭೂಮಿ ಇರದಿದ್ದರೆ, ನೂರು ಬಿಲ್ಲಳತೆಯ ಭೂಮಿಯನ್ನು ಹುಲ್ಲುಗಾವಲಿಗೆ ಕಾಯ್ದಿಡುತ್ತಿದ್ದರು(ಆರ್. ಶ್ಯಾಮಲ, ೨೦೧೭:೪೩೯).

ಕ್ರಿ.ಶ. ೧೫೨೮ರಲ್ಲಿ ಬಾಗುಳಿ ಕೃಷ್ಣನಾಯಕನು ದೊಡ್ಡ ಬಸವಣ್ಣದೇವ ಅಮೃತಪಡಿಗೆ ಭೂಮಿಯನ್ನು ದಾನ ಕೊಟ್ಟನು(ಕ.ವಿ.ವಿ.ಶಾ.ಸಂ ೧ ಹ:೧೯). ಹಂಡೇ ಹಿರೇ ರಾಮಪ್ಪನಾಯಕನು ತನ್ನ ಹಿರಿಯರಿಗೆ ಸುಕೃತವಾಗಬೇಕೆಂದು ಕೊಟ್ಟೂರು ಸ್ವಾಮಿಗೆ ತೊಲಮಾಮಿಡಿ, ಸಂಗನಕಲ್ಲು ಮತ್ತು ಚಾಗನೂರು ಗ್ರಾಮಗಳನ್ನು ದಾನ ನೀಡಿ ಈ ಊರುಗಳ ಭೂಮಿಗಳ ಉತ್ಪತ್ತಿಯನ್ನು ನಿಗದಿ ಮಾಡಿ ಆ ಉತ್ಪತ್ತಿಯಿಂದ ಬರುವ ಆದಾಯದಿಂದ ಕೊಟ್ಟೂರು ಮಠದಲ್ಲಿ ದಾಸೋಹ ನಡೆಸಬೇಕೆಂದು ಆದೇಶಿಸಿದ್ದನು(ಕ.ವಿ.ವಿ.ಶಾ.ಸಂ.೧.ಮಾ.ಗ.ಸ:೬). ಜರಿಮಲೆ ಪಾಳೆಯಗಾರರ ಆಳ್ವಿಕೆಯನ್ನು ಕುರಿತಂತೆ ಅವರ ಆಳ್ವಿಕೆಯನ್ನು ಬಿಂಬಿಸುವ ಯಾವುದೇ ಶಾಸನಗಳು ದೊರೆತಿಲ್ಲ, ಮೂಲತಃ ಬೇಡ ಸಮುದಾಯದ ಪಾಳೆಯಪಟ್ಟಾಗಿತ್ತು. ಆರಂಭದಿಂದಲೂ ವಿಜಯನಗರದ ಅರಸರಿಗೆ ವಿಧೇಯರಾಗಿ ಆಳ್ವಿಕೆ ಮಾಡಿದ ಇವರು ವಿಜಯನಗರೋತ್ತರ ಕಾಲದಲ್ಲಿ ಬಿಜಾಪುರ, ಬಹಮನಿ ಸುಲ್ತಾನರ ಘರ್ಷಣೆಯ ಸಂದರ್ಭದಲ್ಲಿ ಈ ಮನೆತನ ಅಷ್ಟಾಗಿ ಗುರುತಿಸಿಕೊಂಡಿಲ್ಲ. ಕಾರಣ ಆರ್ಥಿಕ ವ್ಯವಸ್ಥೆಯನ್ನು ಕುರಿತಂತೆ ಅಷ್ಟಾಗಿ ಗಮನ ಹರಿಸಲು ಸಾಧ್ಯವಾಗಿಲ್ಲವೆಂದು ಹೇಳಬಹುದು. ಈ ಮನೆತನದವರು ಇಂದಿಗೂ ಇದ್ದು, ಪ್ರಸ್ತುತ ಸಂದರ್ಭದಲ್ಲಿ ಇವರ ಆರ್ಥಿಕ ಪರಿಸ್ಥಿತಿ ಚೆನ್ನಾಗಿಲ್ಲ. ಕೂಲಿ ಮಾಡಿ ಈ ವಂಶಸ್ಥರು ಜೀವನ ಸಾಗಿಸುತ್ತಿದ್ದಾರೆ.

ವಿಜಯನಗರ ಸಾಮ್ರಾಜ್ಯದ ಅರ್ಥವ್ಯವಸ್ಥೆಯ ಜೊತೆ ಜೊತೆಯಲ್ಲಿಯೇ ಬಹಮನಿ ಸುಲ್ತಾನರ ಅರ್ಥವ್ಯವಸ್ಥೆಯು ಬೆಳೆದುಬಂದಿದ್ದು, ಗ್ರಾಮೀಣ ಅರ್ಥವ್ಯವಸ್ಥೆ ಮತ್ತು ನಗರ ಅರ್ಥವ್ಯವಸ್ಥೆ ಎಂಬ ಗ್ರಹಿಕೆಯಲ್ಲಿ ಗ್ರಾಮವು ಕೃಷಿ ಮಟ್ಟದಿಂದ ಆರಂಭಗೊಂಡರೆ ನಗರವು ವ್ಯಾಪಾರ ಮಟ್ಟದಿಂದ ತನ್ನ ಸ್ಥಿರತೆಯನ್ನು ಗುರುತಿಸಿಕೊಳ್ಳುತ್ತದೆ. ಈ ಕಾಲಘಟ್ಟದಲ್ಲಿ ಭೂಮಿಯನ್ನು ನಾಲ್ಕು ವರ್ಗಗಳಾಗಿ ವಿಂಗಡಿಸಿದ್ದರು. ವಾಸಯೋಗ್ಯ ಭೂಮಿ, ಕೃಷಿಯೋಗ್ಯ ಭೂಮಿ, ಬಂಜರು ಮತ್ತು ಗೋಮಾಳ ಎಂಬ ವಿಭಾಗಗಳಾಗಿ ವಿಂಗಡಿಸಿದ್ದರು(ಷೇಕ್ ಅಲಿ, ೨೦೧೮:೨೯೫). ವಾಸಯೋಗ್ಯ ಭೂಮಿಯೂ ಕೃಷಿಭೂಮಿಯ ಜೊತೆಯಲ್ಲಿದ್ದು ವಾಸಮಾಡುತ್ತಾ ಕೃಷಿಭೂಮಿಯನ್ನು ಅಭಿವೃದ್ಧಿ ಪಡಿಸುತ್ತಿದ್ದರು. ಕಾಡನ್ನು ಕಡಿದು ಕೃಷಿ ಭೂಮಿಯನ್ನಾಗಿಯೂ ಪರಿವರ್ತಿಸುತ್ತಿದ್ದರು. ಕೃಷಿಯಿಂದ ಪೋಷಣೆ ಪಡೆಯುತ್ತಿದ್ದ ವಿವಿಧ ಜಾತಿಗಳು ಮತ್ತು ಸಮುದಾಯಗಳೆಂದರೆ ಒಕ್ಕಲಿಗರು, ಕುರುಬರು ಮೊದಲಾದವರು ದೊಡ್ಡ ಭೂಹಿಡುವಳಿಗಳೆಂದರೆ ೩೦೦ ರಿಂದ ೫೦೦ ಎಕರೆಗಳವರೆಗೆ ಹಿಡುವಳಿಗಳು ಈ ಕಾಲದಲ್ಲಿ ಕಂಡುಬಂದಿವೆ.

ದಖ್ಖನಿನಲ್ಲಿ ನೀರಾವರಿ ಸೌಲಭ್ಯಗಳು ಹೆಚ್ಚಾಗಿದ್ದವು. ನದಿಗಳು, ಕಾಲುವೆಗಳು, ಕೆರೆಗಳು, ಕೊಳ್ಳಗಳು, ಸರೋವರಗಳು ಮತ್ತು ಬಾವಿಗಳ ಮೂಲಕ ನೀರಾವರಿ ಸೌಲಭ್ಯ ಒದಗುತ್ತಿತ್ತು. ಆದರೆ ನೆಲಮಟ್ಟದ ನೀರನ್ನು ವರ್ಷವಿಡೀ ಬಳಸಲು ಬರುತ್ತಿರಲಿಲ್ಲ. ಅದಕ್ಕೆ ಎರಡು ಕಾರಣಗಳು: ಮೊದಲನೆಯದಾಗಿ ನೆಲದ ಮೇಲಿನ ನೀರು ಮಳೆಯನ್ನು ಅವಲಂಬಿಸುತ್ತಿತ್ತು. ಎರಡನೆಯದು ನೆಲದ ತಗ್ಗುದಿಣ್ಣೆಗಳಿಂದಾಗಿ ಆವೃತವಾಗಿದ್ದರಿಂದ ನೀರನ್ನು ಹೆಚ್ಚುಕಾಲ ಹಿಡಿದಿಟ್ಟುಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ. ಗ್ರಾಮಿಣ ಅರ್ಥವ್ಯವಸ್ಥೆಯಲ್ಲಿ ಪಶುಪಾಲನೆಯ ಗೋ ಸಂಪತ್ತು ಉದ್ಯಮಕ್ಕೆ ಹಿರಿದಾಗಿದ್ದು, ಕೃಷಿ ಮತ್ತು ಸಾರಿಗೆ ವ್ಯವಸ್ಥೆಯಲ್ಲಿ ಜಾನುವಾರು ಪಾತ್ರವನ್ನು ಕಡೆಗಣಿಸುವಂತಿಲ್ಲ. ಗ್ರಾಮೀಣ ವ್ಯವಸ್ಥೆಯಲ್ಲಿ ಹಸು, ಎಮ್ಮೆ, ಎತ್ತು, ಕುರಿಗಳು, ಟಗರು, ಹಂದಿ, ಕುದುರೆ, ನಾಯಿಗಳು, ಕತ್ತೆ ಮತ್ತು ಆನೆಗಳ ಪಶುಪಾಲನೆಯಲ್ಲಿ ಸೇರಿದ್ದವು. ಪ್ರಾಚೀನ ಕಾಲದಲ್ಲಿ ಅವರ ಶ್ರೀಮಂತಿಕೆಯನ್ನು ಪ್ರತಿಬಿಂಬಿಸಬೇಕಾದರೆ ಗೋಸಂಪತ್ತೇ ಆಧಾರಸ್ತಂಭಗಳಾಗಿದ್ದವು.

ಕೃಷಿ ಮಾಡಲು ಮಳೆಯನ್ನು ಅವಲಂಬಿಸಲಾಗಿತ್ತು. ಇದು ವಾಯುಗುಣದ ವೈಪರೀತ್ಯದಿಂದಾಗಿ ಜೂಜಿನಂತಿದ್ದುದರಿಂದ ಸರಕಾರವು ಕೆರೆಗಳನ್ನು ನಿರ್ಮಿಸಲು ಹೆಚ್ಚಿನ ಆಸಕ್ತಿಯನ್ನು ತೋರುತ್ತಿತ್ತು. ಋತುಮಾನಕ್ಕೆ ತಕ್ಕಂತೆ ಬೇಸಾಯದ ಕಾರ್ಯಕ್ರಮವನ್ನು ರೂಪಿಸಿಕೊಳ್ಳುವ ಪರಿಪಾಟ ಜನಪದರಿಗೆ ತಿಳಿದಿತ್ತು. ನಮ್ಮ ರೈತರಿಗೆ ಗದ್ದೆಯಲ್ಲಿ ಅಥವಾ ಹೊಲದಲ್ಲಿ ಏನನ್ನು ಬಿತ್ತಬೇಕು, ಯಾವಾಗ ಕೆಲಸ ಆರಂಭಿಸಬೇಕು ಎಂಬ ವಿಚಾರಗಳು ತಿಳಿದಿದ್ದವು. ಸುಲ್ತಾನರು ನೀರಾವರಿ ವ್ಯವಸ್ಥೆಗಾಗಿ ಜಲಾಶಯವನ್ನು, ಕೆರೆಗಳನ್ನು ಮತ್ತು ಭಾವಿಗಳನ್ನು ನಿರ್ಮಿಸುತ್ತಿದ್ದರು. ಈ ಜಲಾಶಯಗಳಲ್ಲಿ ಮುಖ್ಯವಾದದ್ದು ೨ನೇ ಇಬ್ರಾಹಿಂ ಆದಿಲ್‌ಶಾಹನು ೧೬೨೦ರಲ್ಲಿ ಬಿಜಾಪುರದಿಂದ ಸುಮಾರು ಹನ್ನೆರಡು ಮೈಲು ದೂರದ ಕಮತಗಿಯಲ್ಲಿ ನಿರ್ಮಿಸಿದ್ದನು. ಮಹಮ್ಮದ್ ಆದಿಲ್‌ಶಾಹನು ೧೬೮೩ರಲ್ಲಿ ಬಿಜಾಪುರದಲ್ಲಿ ೨ ಜಲಾಶಯ ನಿರ್ಮಿಸಿದ್ದನು. ಸುಲ್ತಾನರ ಕಾಲದ ಕೃಷಿ ಉತ್ಪಾದನೆಯನ್ನು ಹೆಚ್ಚಿಸಲು ಈ ರೀತಿಯಾಗಿ ಜಲಾಶಯ, ಕೆರೆಗಳನ್ನು ನಿರ್ಮಿಸಿದ್ದನ್ನು ಗುರುತಿಸಬಹುದಾಗಿದೆ(ಷೇಕ್‌ಅಲಿ,(೪) ೨೦೧೮:೩೦೨).

ಕೃಷಿಯು ಸಾಂಪ್ರದಾಯಿಕ ಉಪಕರಣಗಳನ್ನು ಬಳಸುತ್ತಾ ಪ್ರಾಚೀನ ಕಾಲದ ಕೃಷಿ ವಿಧಾನದಲ್ಲೇ ಇತ್ತು. ಜನಸಂಖ್ಯೆಯ ಹೆಚ್ಚಳದಿಂದಾಗಿ ಭೂಹಿಡುವಳಿಗಳು ತುಂಡುತುಂಡಾಗಿ ಚಿಕ್ಕ ಘಟಕಗಳಾಗಿ ರಚನೆಯಾಗುತ್ತಿದ್ದವು. ಕೃಷಿ ಬೀಳು ಬಿಡುವ ಅಭ್ಯಾಸದಿಂದಾಗಿ ಸಾಕಷ್ಟು ಪ್ರಮಾಣದ ಭೂಮಿ ಬಂಜರಾಗಿತ್ತು. ಕೃಷಿಯು ಅಂದರೆ ಜನರ ಅತಿಮುಖ್ಯವಾದ ಕಸುಬಾದ ಕೃಷಿಯು ರೈತರು ಬದುಕಿರಲು ಎಷ್ಟು ಬೇಕೋ ಅಷ್ಟನ್ನು ಮಾತ್ರ ಕೃಷಿ ಮಾಡುತ್ತಿದ್ದರು. ಹೆಚ್ಚುವರಿ ಉತ್ಪಾದನೆಯಿಂದಾಗಿ ಆದಾಯ ಬರುತ್ತಿತ್ತು. ಆದ್ದರಿಂದ ಇವರಿಗೆ ಕೃಷಿಯು ಅವರಿಗೆ ಜೀವನಾಧಾರವಾಗಿತ್ತೆಂದು ಹೇಳಬಹುದು(ಷೇಕ್‌ಅಲಿ,(೩), ೨೦೧೮:೨೯೫). ಹೀಗೆ ವಿಜಯನಗರೋತ್ತರ ಕಾಲಾವಧಿಯಲ್ಲಿ ಕೃಷಿಯಲ್ಲಿ ಮಾರುಕಟ್ಟೆ ಧೋರಣೆಗಳು ಕೃಷಿಯ ಮೇಲೆ ಪ್ರಭಾವ ಬೀರಲಾರಂಭಿಸಿದೆ. ಈ ಕಾಲಾವಧಿಯು ಯುರೋಪಿಯನ್ನರ ಆಗಮನದ ಕಾಲಘಟ್ಟವಾಗಿದ್ದರಿಂದ ತಮ್ಮ ನಾಡಿನ

ಅವಶ್ಯಕತೆಗಳನ್ನು ಪೂರೈಸಲು ಇಲ್ಲಿ ಹಲವಾರು ರೀತಿಯ ಹೊಸ ಹೊಸ ಯೋಜನೆಗಳನ್ನು ಪ್ರಚಲಿತಕ್ಕೆ ತಂದು ಸುಧಾರಣೆಗಳನ್ನು ಮಾಡಲಾರಂಭಿಸಿದರು.

ಭಾರತದಲ್ಲಿ ಕೃಷಿಯನ್ನು ವಾಣಿಜ್ಯೀಕರಿಸುವುದರ ಜೊತೆಗೆ ಅವರು ಕೃಷಿ ವ್ಯಾಪಾರಕ್ಕೆ ಪೂರಕವಾದಂತಹ ಹಲವಾರು ಸೌಕರ್ಯಗಳನ್ನು ಸಾರಿಗೆಗೆ ನದಿಗಳ ಬಳಕೆಯನ್ನು ಹಾಗೂ ಅರಣ್ಯ ಪ್ರದೇಶಗಳನ್ನು ಕಡಿದು ರಸ್ತೆ ಮತ್ತು ರೈಲ್ವೆಮಾರ್ಗಗಳನ್ನು ರೂಪಿಸಿದರು. ನೂತನ ವಿಧಾನಗಳನ್ನು ರೂಪಿಸಿದ್ದರಿಂದ ಕೃಷಿಯು ಆವಿಷ್ಕಾರವಾಗಿರುವುದನ್ನು ಗಮನಿಸಬಹುದು. ಗ್ರಾಮೀಣ ಆರ್ಥಿಕತೆಯ ಪ್ರಮುಖ ಉದ್ಯೋಗವಾಗಿ ಗುರುತಿಸಿಕೊಂಡ ಕೃಷಿಯು ಒಂದು ಉದ್ಯಮವಾಗಿ ಬೆಳೆಯಲಾರಂಭಿಸಿತ್ತು. ಕೃಷಿಯಲ್ಲಿ ಆಹಾರಧಾನ್ಯಗಳನ್ನು ಹೆಚ್ಚು ಬೆಳೆಯುತ್ತಿದ್ದರು. ಜೊತೆಗೆ ವಾಣಿಜ್ಯ ಬೆಳೆಗಳ ಬೆಳವಣಿಗೆಗೆ ಅದು ಪರಿವರ್ತನೆಯಾಗುತ್ತಿತ್ತು. ಈ ಮೂಲಕ ವಸಾಹತು ಬಂಡವಾಳಶಾಹಿ ಬೆಳವಣಿಗೆಗೆ ಅವಕಾಶ ಮಾಡಿಕೊಟ್ಟ ಕಾಲವೆಂದು ಗುರುತಿಸಲಾಯಿತು.

ಕೃಷಿಯನ್ನು ವಾಣಿಜ್ಯೀಕರಿಸುವ ಬ್ರಿಟಿಷರ ನೀತಿ ಅವರ ಆಳ್ವಿಕೆಯುದ್ದಕ್ಕೂ ಮುಂದುವರಿಯಿತು. ಇದರಿಂದಾಗಿ ಕೃಷಿಯ ವಿಸ್ತರಣೆ ಕಂಡುಬಂತು. ಮುಖ್ಯ ಬೆಳೆಗಳನ್ನು ಗಮನದಲ್ಲಿಟ್ಟುಕೊಂಡು ಕೃಷಿಯನ್ನು ವಿಸ್ತರಿಸಲಾಯಿತು. ಕೃಷಿಯನ್ನು ವಿಸ್ತರಿಸುವ ಇವರ ಹಿಂದಿನ ಉದ್ದೇಶಗಳು ಕೇವಲ ಮುಖ್ಯ ಬೆಳೆಗಳಿಗೆ ಸೀಮಿತವಾಗಿರುವಂತದ್ದು(ರೈ, ೨೦೦೭:೧೯). ಈ ಮೂಲಕ ಹೊಸದೊಂದು ಕೃಷಿ ಅರ್ಥವ್ಯವಸ್ಥೆಯ ಹುಟ್ಟು ಪಡೆದುಕೊಂಡು ಎಸ್ಟೇಟ್ ರಾಜಕೀಯ ಹಿನ್ನೆಲೆಯ ಆರ್ಥಿಕತೆ ಉಗಮವಾಯಿತೆಂದು ಹೇಳಬಹುದು. ಕೃಷಿಯ ವಾಣಿಜ್ಯೀಕರಣದಿಂದ ಮಾರುಕಟ್ಟೆಕೇಂದ್ರಿತ ಮಾರುಕಟ್ಟೆ ಬಂಡವಾಳಶಾಹಿತ್ವದ ಪರಿಕಲ್ಪನೆಯು ಮೂಡಿಬಂದಿದೆ.

ಮೈಸೂರು ಒಡೆಯರು ಕೃಷಿಗೆ ವಿಶೇಷವಾದ ಪ್ರಾಮುಖ್ಯತೆಯನ್ನು ನೀಡಿದ್ದರು. ಚಿಕ್ಕದೇವರಾಜ ಒಡೆಯರ ಕಾಲಾವಧಿಯಲ್ಲಿ ಭೂಮಿ ಕೃಷಿಯೋಗ್ಯವಾಗುವಂತೆ ಸಿದ್ಧಪಡಿಸುವ ಸಲುವಾಗಿ ರೈತರಿಗೆ ಕೆಲವಾರು ಸೌಲಭ್ಯಗಳನ್ನು ನೀಡಲಾಗಿದ್ದಿತು. ಬಂಜರುಭೂಮಿಗಳನ್ನು ಹಸನುಪಡಿಸಿ ಹನ್ನೆರಡು ಹಣ ಮೌಲ್ಯದ ಬೆಳೆ ಬೆಳೆದರೆ, ಮೂರು ವರ್ಷದವರೆಗೆ ಫಸಲಿನ ಮೂರರಲ್ಲಿ ಒಂದಂಶವನ್ನು ರಾಜಭಾಗವಾಗಿ ಸಲ್ಲಿಸತಕ್ಕದೆಂದು ನಿರ್ಧರಿಸಲಾಗಿದ್ದಿತು. ಈ ಮೂಲಕವಾಗಿ ಕೃಷಿಗೆ ವಿಶೇಷವಾದ ಪ್ರಾಮುಖ್ಯತೆಯನ್ನು ಚಿಕ್ಕದೇವರಾಜ ಒಡೆಯರು ನೀಡಿದ್ದರು(ರಾವ್, ಕೇಶವಭಟ್ಟ, ೧೯೭೦:೯೩೮).

ಚಿಕ್ಕದೇವರಾಜ ಒಡೆಯರು ಗ್ರಾಮೀಣ ಕೃಷಿಗೆ ಪೂರಕವಾದಂತದ ಬಾರಬಲೂತಿ ಎಂದು ಕರೆಯಲಾಗುವ ಹೊಸದೊಂದು ಅರ್ಥವ್ಯವಸ್ಥೆಯನ್ನು ರೂಪಿಸಿದರು. ಈ ಅರ್ಥವ್ಯವಸ್ಥೆಯಲ್ಲಿ ಕಬ್ಬಿಣದವ, ಅಕ್ಕಸಾಲಿಗ, ಕುಂಬಾರ, ಅಗಸ, ಕೆಲಸಿ, ತಳವಾರ, ತೋಟಿ, ನೀರಗಂಟಿ, ಬಡಗಿ ಮೊದಲಾದವರಿದ್ದು ಇವರು ಕೃಷಿಯೇತರ ಆರ್ಥಿಕ ಚಟುವಟಿಕೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದರು. ಇದರಿಂದ ಕೃಷಿಕನಿಗೂ ಮತ್ತು ಕುಶಲಕರ್ಮಿಗೂ ಅವಿನಾಭಾವ ಸಂಬಂಧ ಬೆಳೆಯಿತು(ಶ್ಯಾಮರಾವ್, ೧೯೯೮:೩೦೫). ಮೆಕಂಜಿ ಸಂಗ್ರಹಿತ ಕೈಫಿಯತ್ತು ಒಂದರಲ್ಲಿ ಚಾಮರಾಜ ಒಡೆಯರ್ ಶ್ರೀರಂಗಪಟ್ಟಣದ ನದಿಗೆ ಅಡ್ಡಲಾಗಿ ಸೇತುವೆ ನಿರ್ಮಿಸಿದರೆಂದು ಹೇಳಲಾಗಿದೆ. ಈ ನಾಲೆಗಳ ಮೂಲಕ ನೀರಾವರಿ ಸೌಲಭ್ಯಗಳಿಂದ ಬೆಳೆಯುವ ಅಚ್ಚುಕಟ್ಟು ಪ್ರದೇಶವನ್ನು 'ಹೊಸಬಯಲು' ಎಂದು ಕರೆಯಲಾಗಿದೆ.

ಹಿರಿಯ ಬೆಟ್ಟದ ಚಾಮರಾಜ ಒಡೆಯರ್ ಚಾಮುಂಡಿ ಬೆಟ್ಟದ ದೇವಾಲಯದ ಹಿಂಭಾಗದಲ್ಲಿ ಹಿರೇಕೆರೆ ಎಂಬ ಒಂದು ತಟಾಕ(ಕೆರೆ) ನಿರ್ಮಿಸಿದನು. ೧೬೪೯ರಲ್ಲಿ ಹೊರಡಿಸಿದ ಪಟ್ಟಣ ಹೋಬಳಿ ವಿಚಾರದ ಚನ್ನಯ್ಯನಿಗೆ ನೀಡಿದ ನಿರೂಪದಲ್ಲಿ ತಿರುಮಲಿ ಸಾಗರದ ಅಗ್ರಹಾರಕ್ಕೆ ಸಲ್ಲುವ ಗ್ರಾಮಗಳಿಗೆ ಯಲ್ಲೆಗಟ್ಟಿ ನಿರ್ಮಿಸಿ ಕೆರೆ ಕಟ್ಟಿ ಕೃಷಿ ನೀರಾವರಿಗೆ ಹೆಚ್ಚಿನ ಪ್ರಾಮುಖ್ಯತೆ ನೀಡಿದ್ದನು. ಚಿಕ್ಕದೇವರಾಜ ಒಡೆಯರು ಹೋಬಳಿ ಇದು ಹೊಸದಾಗಿ ನಿರ್ಮಿಸಿದ ಹದಿನೆಂಟು ಇಲಾಖೆಗಳಲ್ಲಿ ಅಷ್ಟಗ್ರಾಮದ ಹೋಬಳಿಗಳಲ್ಲಿ ಮೈಸೂರು ಹೋಬಳಿಯೂ ಒಂದು. ಇದು ಹೊಸದಾಗಿ ನಿರ್ಮಿಸಿದ ದೇವರಾಜ ನಾಲೆಯ ವ್ಯಾಪ್ತಿಯ ಎಂಟು ಹೋಬಳಿಗಳನ್ನು ಒಳಗೊಂಡಂತೆ ರೂಪಿಸಲಾಗಿತ್ತು(ನಾಗರಾಜು, ೨೦೧೨:೪೧೦). ಈ ಮೂಲಕ ಹೆಚ್ಚು ಹೆಚ್ಚು ಕೆರೆ ಮತ್ತು ನಾಲೆಗಳನ್ನು ನಿರ್ಮಿಸುವ ಮೂಲಕ ಹೊಸದೊಂದು ಕೃಷಿ ಭೂಮಿಯನ್ನು ವಿಸ್ತರಣೆ ಮಾಡಿದಂತಾಗಿತ್ತು. ಇದರಿಂದ ರಾಜ್ಯಕ್ಕೆ ಹೆಚ್ಚಿನ ಆದಾಯ ಬರುವಂತಾಯಿತು.

ನೀರಾವರಿ ಚೌಕಟ್ಟಿನಲ್ಲಿ ನೀರಿನ ವಿತರಣೆ ಬಗ್ಗೆ ಬಾರಬಲೂತಿ ಪದ್ಧತಿ ಸಾಕ್ಷಿಯಾಗಿದ್ದು, ಚಿಕ್ಕದೇರಾಜ ಒಡೆಯರ ಕಾಲದಲ್ಲಿ ಬಾರಾಬಲೂತಿಯಲ್ಲಿ ನೀರಗಂಟಿಯೂ ಒಬ್ಬನಾಗಿದ್ದ. ಇವನು ಕೆರೆಯ ನೀರನ್ನು ಕಾಲುವೆಗಳ ಮುಖಾಂತರ ಅಚ್ಚುಕಟ್ಟಿನ ಭಾಗಗಳಿಗೆ ನಿಯಮಿತವಾಗಿ ಸರದಿಯಂತೆ ಹರಿಸುವ ಗುರುತರ ಜವಾಬ್ದಾರಿ ನಿರ್ವಹಿಸುತ್ತಿದ್ದನು. ಅದಕ್ಕೆ ಅವನಿಗೆ ಪ್ರತಿ ಅಚ್ಚುಕಟ್ಟುದಾರನು ಒಂದು ಹೊರೆ ಹುಲ್ಲು(ಭತ್ತದ ತೆನೆಭರಿತ) ಮತ್ತು ಒಂದು ಕೊಳಗ ಧಾನ್ಯವನ್ನು ನೀಡಬೇಕಾಗಿತ್ತು. ಈ ಮೂಲಕ ಚಿಕ್ಕದೇವರಾಜ ಒಡೆಯರು ವಿಶೇಷವಾದ ಅವಕಾಶಗಳನ್ನು ಸಂಸ್ಥಾನದಲ್ಲಿ ನೀಡಿದ್ದರು. ಸೇಲಂ ಜಿಲ್ಲೆಯ ಕಟ್ಟೆಯ ಮೇಲುಗಡೆಯ ಕ್ರಿ.ಶ.೧೬೭೨ರ ಶಾಸನವೊಂದರಲ್ಲಿ ಚಿಕ್ಕದೇವರಾಜನ ದಳವಾಯಿ ಕುಮಾರಯ್ಯ ಎಂಬುವನು ಕಟ್ಟೆಯೊಂದನ್ನು ನಿರ್ಮಿಸಿದ್ದನ್ನು ದಾಖಲಿಸುತ್ತದೆ(ನಾಗರಾಜಯ್ಯ, ೨೦೧೨:೪೧೨). ಕಟ್ಟೆಯೆಂದರೆ ಕೆರೆಯ ಹಿನ್ನೆಲೆಯಲ್ಲಿ ಹೇಳಲಾಗಿದೆ. ಇದರ ಮೂಲಕ ಒಣಭೂಮಿ ನೀರಾವರಿ ವ್ಯವಸ್ಥೆಗೆ ಒಳಗಾದ ಬಗೆಯನ್ನು ಚಿತ್ರಿಸುತ್ತದೆ.

ಮೈಸೂರು ಒಡೆಯರ ಆರಂಭಿಕ ಕಾಲಘಟ್ಟದಲ್ಲಿ ನೀರಾವರಿ ಕುರಿತಂತೆ ಪಾರಂಪರಿಕ ನೀತಿ ಮುಂದುವರಿದಿರುವುದು ಕಂಡುಬರುತ್ತದೆ. ಕೆರೆ, ಕಟ್ಟೆ ಮುಂತಾದ ನೀರಾವರಿ ಕಾಮಗಾರಿಗಳನ್ನು ನಿರ್ಮಿಸಿರುವುದು, ದುರಸ್ತಿಗೊಳಿಸಿರುವುದು, ನಿರ್ವಹಣೆಯಂತದ ಕಾಮಗಾರಿಗಳನ್ನು ಕೈಗೊಳ್ಳುವುದು ಪುಣ್ಯದ ಕೆಲಸವೆಂದು ನಂಬಿದ್ದರು.

ಮೈಸೂರು ಒಡೆಯರ ಕಾಲದಲ್ಲಿ ಸಾಗುವಳಿ ಪ್ರದೇಶವು ಶೇ.೮೫ ಭಾಗ ಒಣಬೇಸಾಯಕ್ಕೆ ಒಳಗಾದ್ದರಿಂದ ಕೃಷಿಯು ಆಹಾರ ಪೂರೈಕೆಯ ಮುಖ್ಯ ಮೂಲವನ್ನು ಹೊಂದಿತ್ತು.

ಮೈಸೂರು ಒಡೆಯರ ಕಾಲಾವಧಿಯಲ್ಲಿ ನೀರಾವರಿಯ ವ್ಯವಸ್ಥೆಯನ್ನು ಕಾರ್ಯರೂಪಕ್ಕೆ ತರುವುದಕ್ಕೆ ವಿವಿಧ ಮೂಲಗಳನ್ನು ಉಪಯೋಗಿಸುತ್ತಿದ್ದರು.

೧. ಕೆರೆಗಳು ಮಳೆಯಾಶ್ರಿತ ಅಥವಾ ನದಿಗಳಿಂದ ನೀರನ್ನು ಪೂರೈಸಿ ಕೃಷಿ ಕೆಲಸ ಕಾರ್ಯಗಳನ್ನು ನಿರ್ವಹಿಸುತ್ತಿದ್ದರು.

೨. ಅನುಕೂಲಕರ ಸ್ಥಳಗಳಲ್ಲಿ ಅಣೆಕಟ್ಟುಗಳನ್ನು ನಿರ್ಮಿಸುತ್ತಿದ್ದರು. ಈ ಮೂಲಕ ನದಿಯ ಕೆಳಗಿರುವ ಜಮೀನುಗಳಿಗೆ ಕಾಲುವೆಗಳ ಮೂಲಕ ನೀರನ್ನು ರವಾನಿಸುತ್ತಿದ್ದರು.

೩. ಭೂಗತವಾಗಿರುವ ನೀರನ್ನು ಸಂಗ್ರಹಿಸಿ ನೀರಾವರಿಗೆ ಒಳಪಡಿಸುವುದು. ಹಾಸನ, ತುಮಕೂರು ಮತ್ತು ಕೋಲಾರಗಳಲ್ಲಿ ಈ ಮೂಲಕವಾದ ನೀರಾವರಿ ಸೌಲಭ್ಯ ಒದಗಿಸಿದ್ದರು.

೪. ಬಾವಿಗಳ ಮೂಲಕ ನೀರಾವರಿ ಸೌಲಭ್ಯಗಳನ್ನು ಒದಗಿಸುವುದು. ತುಮಕೂರು, ಕೋಲಾರ ಮತ್ತು ಬೆಂಗಳೂರು ಜಿಲ್ಲೆಗಳಲ್ಲಿ ಈ ರೀತಿಯ ಏತ ನೀರಾವರಿ ಇತ್ತು.

ಇಲ್ಲಿ ಬಾವಿ, ಹೊಂಡಗಳಿದ್ದು ಇವು ಮೂರರಿಂದ ಎಂಟು ಎಕರೆ ಭೂಮಿಗೆ ನೀರನ್ನು ಒದಗಿಸಿ ಕೃಷಿಯೋಗ್ಯ ಭೂಮಿಯನ್ನಾಗಿ ಪರಿವರ್ತಿಸಿದ್ದರು(ಹಯವದನ ರಾವ್, ೧೯೨೭:೧೩.)

ರಾಜ್ಯದ ಆರ್ಥಿಕ ಸ್ಥಿತಿ ದೃಢವಾಗಿಲ್ಲದೆ ಹೋದರೆ ಸರ್ಕಾರದ ಕೆಲಸಗಳು ಸುಗಮವಾಗಿ ನಡೆಯಲಾರವು. ಮಧ್ಯಕಾಲೀನ ಪಾಳೆಯಗಾರರು ಈ ವಿಚಾರವನ್ನು ಮನಗಂಡು ಕೃಷಿ ನೀರಾವರಿಗಾಗಿ ವಿಶೇಷವಾದ ಯೋಜನೆಗಳನ್ನು ರೂಪಿಸಿದ್ದರು.

ಚಿಕ್ಕದೇವರಾಜ ಒಡೆಯರು ಜಮೀನನ್ನು ಉತ್ತಮ, ಮಧ್ಯಮ ಹಾಗೂ ಕನಿಷ್ಠ ಕೆಳಮಟ್ಟದ್ದು ಎಂದು ಮೂರು ವಿಭಾಗಳಾಗಿ ವಿಭಾಗಿಸಿದ್ದರು. ಈ ವಿಧಾನವು ವಿಜಯನಗರ ಕಾಲಾವಧಿಯಲ್ಲಿದ್ದ ವಿಧಾನವನ್ನು ಮೈಸೂರಿನ ಒಡೆಯರು ಮುಂದುವರಿಸಿದರು. ಕಪ್ಪುಮಣ್ಣಿನ ನೆಲ, ತೋಟಗಳು, ಬಂಜರುಭೂಮಿ, ಹಿತ್ತಲು, ಉಪ್ಪುಮಣ್ಣಿನ ನೆಲ ಈ ಎಲ್ಲ ನೆಲವನ್ನು ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಪರೀಕ್ಷಿಸಿ ಕಂದಾಯ ನಿಗದಿ ಪಡಿಸುತ್ತಿದ್ದರು(ಷೇಕ್ ಅಲಿ.೨೦೧೮:೨೪೫). ಭೂಮಿಯ ಗುಣಮಟ್ಟವನ್ನು ಆಧಾರಿಸಿ ಕಂದಾಯ ನಿಗದಿ ಮಾಡುವ ಪರಿಕಲ್ಪನೆ ಪ್ರಾಚೀನ ಕಾಲದಿಂದಲೂ ಇದ್ದು ಹಾಗೆಯೇ ಮುಂದುವರಿದಿದೆ.

ಚಿಕ್ಕದೇವರಾಜ ಒಡೆಯರು ರೈತರಿಗೆ ಬೇಕಾದಷ್ಟು ತೆರಿಗೆ ವಿನಾಯಿತಿಯನ್ನು ನೀಡಿದ್ದರು. ಬಂಜರುಭೂಮಿಯನ್ನು ಸಾಗುವಳಿಗೆ ಒಳಪಡಿಸುವ ಯೋಜನೆ ರೂಪಿಸಿದರು. ಇಂತಹ ಭೂಮಿಗೆ ಉತ್ತು ಹನ್ನೆರಡು ಹಣಕ್ಕೆ ಸಮನಾಗುವಷ್ಟು ಫಸಲನ್ನು ಪಡೆದರೆ ಅಂತಹ ರೈತರಿಂದ ಚಿಕ್ಕದೇವರಾಜ ಒಡೆಯರು ಮುಂದಿನ ಮೂರು ವರ್ಷಗಳ ಕಾಲ ಉತ್ಪನ್ನದ ೧/೩ ಪಾಲನ್ನು ಸರ್ಕಾರದ ಭಾಗವಾಗಿ ಪಡೆದುಕೊಳ್ಳುತ್ತಿದ್ದರು. ಬಂಜರುಭೂಮಿಯು ಹಸನುಗೊಳಿಸಲು ಈ ನಿಯಮ ರೂಪಿಸಿದ್ದರು.

ಮಧ್ಯಮವರ್ಗದ ಜಮೀನು ೧೬ ಹಣ ಉತ್ಪನ್ನವನ್ನು ನೀಡುತ್ತಿದ್ದರೆ, ೫ ವರ್ಷಗಳ ಕಾಲ ೧/೪ ಭಾಗವನ್ನು ಕಂದಾಯವಾಗಿ ಪಾವತಿಸಬೇಕಾಗಿತ್ತು. ನಂತರ ಬೇರೆ ಕೃಷಿಭೂಮಿಗೆ ಕೊಡುವಷ್ಟು ತೆರಿಗೆಯನ್ನು ಈ ಭೂಮಿ ಹೊಂದಿದವರು ಕೊಡಬೇಕಾಗಿತ್ತು(ಷೇಕ್‌ಅಲಿ, ೨೦೧೮:೨೪೯).

ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಬೆಳೆದ ಭಾಗಗಳಲ್ಲಿ ಕೃಷಿಯ ವೆಚ್ಚಕ್ಕೆ ಒಂದು ಭಾಗವನ್ನು ವಿಭಾಗಿಸಿದ್ದನು. ಹಾಗೆಯೇ ನೀರಾವರಿ ಜಮೀನುಗಳಲ್ಲಿ ಬಹುತೇಕ ಭತ್ತವೇ ಬೆಳೆಯುವಂತೆ ಗಮನ ಹರಿಸಲಾಗುತ್ತಿದ್ದಿತು. ಭತ್ತವು ಆ ವೇಳೆಗೆ ಪ್ರಮುಖ ನೀರಾವರಿ ಬೆಳೆಯಾಗಿದ್ದು, ಇವರ ಆಳ್ವಿಕೆಯ ವೇಳೆಗೆ ಭತ್ತದ ಬೆಳೆಗಳಲ್ಲಿ ಹಲವಾರು ಹೊಸ ತಳಿಗಳು ಪರಿಚಯವಾದವು.

ವಿಜಯನಗರೋತ್ತರ ಕಾಲಾವಧಿಯಲ್ಲಿ ತೆರಿಗೆರಹಿತವಾದ ಭೂಮಿಯನ್ನು ಕೊಡುವ ಸಂಪ್ರದಾಯ ಬೆಳೆದುಬಂದಿರುವುದನ್ನು ಗಮನಿಸಬಹುದು. ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ೧೬೬೦ರಲ್ಲಿ ಹಂಗಳದ ಗಂಗೆ ಬಸವೇಗೌಡ ಎಂಬುವವನಿಗೆ ತೆರಿಗೆರಹಿತವಾಗಿ ಭೂಮಿಯನ್ನು ದಾನ ನೀಡಿದ್ದರು. ಈ ಮೂಲಕ ಗ್ರಾಮಾಂತರ ಪ್ರದೇಶದಲ್ಲಿ ಭೂಮಾಲೀಕವರ್ಗವೊಂದು ಸೃಷ್ಟಿಯಾಯಿತು. ಈ ಮೂಲಕ ಹೈದರ್ ಮತ್ತು ಟಿಪ್ಪು ಕಾಲದವರೆಗೂ ಬ್ರಾಹ್ಮಣರಿಗೆ ಅಗ್ರಹಾರ ಮತ್ತು ಭೂದಾನಗಳನ್ನು ಕೊಡುವ ಪರಿಕಲ್ಪನೆ ಹೆಚ್ಚಾಗಿತ್ತು. ಆದರೆ ಇವರು ಆಳ್ವಿಕೆ ಮಾಡಲಾರಂಭಿಸಿದಾಗಿನಿಂದ ಅಗ್ರಹಾರ ಮತ್ತು ಬ್ರಹ್ಮದೇಯ, ದೇವದಾಯಗಳ ಪರಿಕಲ್ಪನೆಯ ಕುಂಠಿತಗೊಂಡಿರುವುದನ್ನು ಗಮನಿಸಬಹುದಾಗಿದೆ. ವಿಜಯನಗರೋತ್ತರ ಕಾಲದ ಕೃಷಿವ್ಯವಸ್ಥೆಯು ಯುರೋಪಿಯನ್ನರ ಆಗಮನದಿಂದ ಹಂತದಿಂದ ಹಂತಕ್ಕೆ ಹಲವಾರು ಬದಲಾವಣೆಗೆ ಒಳಪಟ್ಟಿರುವ ಕಾಲವಾಗಿದೆ. ಕೃಷಿಯಲ್ಲಿ ಯುರೋಪಿಯನ್ನರು ಹಲವಾರು ಬದಲಾವಣೆಗಳನ್ನು ತಂದರು.

ಹಾಗಲವಾಡಿ ಸಂಸ್ಥಾನದಲ್ಲಿ ಎಲ್ಲ ರೀತಿಯ ಕೃಷಿಭೂಮಿಗಳು ಇದ್ದವು ಎಂಬುದಕ್ಕೆ ಉದಾಹರಣೆಯಾಗಿ ಗದ್ದೆ, ಹೊಲ, ಬೆದ್ದಲು, ತೋಟತುಡಿಕೆ, ಕಾಡಾರಂಭ, ನೀರಾರಂಭ ಎಂದು ವಿಂಗಡಿಸಿದ್ದಾರೆ(ಯೋಗೀಶ್ವರಪ್ಪ, ೧೯೯೯:೭೭). ಈ ವಿಧಾನ ವಿಂಗಡಣೆಯ ಜೊತೆಗೆ ಕೂಲದು ಗದ್ದೆ ಅಥವಾ ಕೊಲದ ಗದ್ದೆ, ಛಳಿಮರದ ಗದ್ದೆ, ಕೆರೆ ಹಿಂದಿನ ಗದ್ದೆ, ಎರೆ ಗದ್ದೆ, ಜೀರಿಗೆ ಮೇಡು ಗದ್ದೆ ಎಂದು ಶಾಸನ ಉಲ್ಲೇಖಗಳನ್ನು ಡಿ.ಎನ್.ಯೋಗೀಶ್ವರಪ್ಪನವರು ವಿವರಿಸಿದ್ದಾರೆ.

ಪ್ರಾಚೀನ ಕಾಲದಿಂದಲೂ ಭೂಹಿಡುವಳಿಯನ್ನು ನಿರ್ಧರಿಸುವುದಕ್ಕೆ ಗಡಿ ಭಾಗಗಳನ್ನು ಗುರುತಿಸುವುದಕ್ಕೆ ವಾಮನ ಮುದ್ರೆಯ ಕಲ್ಲು, ಲಿಂಗಮುದ್ರೆ ಕಲ್ಲುಗಳನ್ನು ನಿಲ್ಲಿಸುತ್ತಿದ್ದರು. ಈ ವಿಧಾನವು ವಿಜಯನಗರೋತ್ತರ ಕಾಲದಲ್ಲಿಯೂ ಮುಂದುವರಿದಿರುವುದನ್ನು ಗಮನಿಸಲಾಗಿದೆ. ಆದರೆ ಆಧುನಿಕ ಸಂದರ್ಭದಲ್ಲಿ ತಮ್ಮ ತಮ್ಮ ಹೊಲಗಳಿಗೆ ಗಡಿ ಗುರುತಿಸುವುದಕ್ಕೆ ಮಣ್ಣು ಕಲ್ಲು ಮಿಶ್ರಿತ ಮೇರೆಗಳನ್ನು ನಿರ್ಮಿಸುತ್ತಿದ್ದರು. ಇದಕ್ಕೆ ಸ್ಪಷ್ಟ ಕಾರಣ ತಮ್ಮ ಹೊಲಗಳ ಫಲವತ್ತತೆ ಮಳೆ ನೀರಿನಿಂದ ಇನ್ನೊಂದು ಕಡೆ ಹೋಗಬಾರದೆಂಬ ಪೂರ್ವಪ್ರಜ್ಞೆಯಿಂದ ಈ ರೀತಿಯ ವ್ಯವಸ್ಥೆಯನ್ನು ಮಾಡಿಕೊಂಡಿದ್ದರು. ಈ ವಿಧಾನವು ಗಡಿಮೇರೆ ಗುರುತಿಸುವ ವಿಧಾನವನ್ನು ಎಲ್ಲ ಮನೆತನದವರು ಅಳವಡಿಸಿಕೊಂಡಿದ್ದರು. ಹಾಗಲವಾಡಿನಾಯಕರು ಸಹ ಕೆರೆ ನೀರಾವರಿಗೆ ವಿಶೇಷವಾದ ಪ್ರಾಧಾನ್ಯತೆಯನ್ನು ನೀಡಿದ್ದರು. ಬೇರೆ ಭಾಗದ ಕೆರೆ ನಿರ್ಮಾಣಕ್ಕೂ ಹಾಗಲವಾಡಿ ನಾಯಕರ ಕೆರೆ ನಿರ್ಮಾಣಕ್ಕೂ ಕೆಲವು ವ್ಯತ್ಯಾಸಗಳಿರುವುದನ್ನು, ಗಮನಿಸಬಹುದಾಗಿದ್ದು ಇವರ ಕೆರೆಗಳು ಚಿಕ್ಕ ಗಾತ್ರದವುಗಳಾಗಿದ್ದವು. ಕೇಶವಯ್ಯ ದೇವ ಅರಸುಗಳು ದಂಡಿನಶಿವರ ಹೋಬಳಿಯಲ್ಲಿ ಕಲ್ಲುಕೆರೆಯನ್ನು ನಿರ್ಮಿಸಿದ್ದರು. ರಾಮಪ್ಪನಾಯಕನ ಪತ್ನಿಯಾದ ಕಲ್ಲವ್ವ ಎಂಬುವವಳು ಗಳಿಗೆಕೆರೆ ಎಂಬ ಊರಿನಲ್ಲಿ ಕೆರೆಯೊಂದನ್ನು ನಿರ್ಮಿಸಿದ್ದಳು. ಹಾಗಲವಾಡಿನಾಯಕರ ಕಾಲದಲ್ಲಿ ಕೆರೆಗೆ ನೀರು ತುಂಬಲು ಅಥವಾ ಕೆರೆಯ ಅಣೆಕಟ್ಟು ನಿಲ್ಲಲು ಕೆರೆಗೆ ಬಲಿ ಕೊಡುವ ಪದ್ಧತಿಯಿತ್ತು. ಚಿಕ್ಕನಾಯಕನಹಳ್ಳಿ ತಾಲೂಕಿನ ಹುಲಿಯೂರು ಕೆರೆಗೆ ಒಂದು ಜಾನಪದ ಕಥೆಯಿದ್ದು, ಹುಲಿಯೂರು ಕೆಂಚಮ್ಮ

ಎಂಬುವಳನ್ನು ಕೆರೆ ಒಡೆಯದೆ ನಿಲ್ಲಲ್ಲು ಊರಿನ ಮುಖಂಡನು ತನ್ನ ಸೊಸೆ ಕೆಂಚಮ್ಮಳನ್ನು ಬಲಿ ಕೊಟ್ಟ ವಿವರವನ್ನು ಆ ಕಥೆ ಹೇಳುತ್ತದೆ(ಹಳಕಟ್ಟಿ ಫ.ಗು.,೧೯೪೩:೨೫೬).

ಕೆಳದಿಯ ರಾಜ್ಯವು ಉತ್ತಮ ಕೃಷಿ ಪದ್ಧತಿಯಿಂದ ಸುಭಿಕ್ಷವಾಗಿತ್ತು. ಇಲ್ಲಿನ ಉತ್ಪನ್ನಗಳಿಗೆ ಇಡೀ ರಾಷ್ಟ್ರವಲ್ಲದೇ ಹೊರ ರಾಷ್ಟ್ರಗಳಲ್ಲಿಯೂ ಬೇಡಿಕೆಯಿತ್ತು. ಆದ್ದರಿಂದಲೇ ವಿದೇಶಿ ಪ್ರವಾಸಿಗನಾದ ಜಾಕೋಬಸ್ ಕೌಂಟರ್ ಬಿದನೂರು ರಾಜ್ಯವನ್ನು 'ದಕ್ಷಿಣ ಭಾರತದ ಕಣಜ' ಎಂದು ಕರೆದಿದ್ದಾನೆ. ಹೀಗೆ ಕೆಳದಿಯ ನಾಯಕರ ಕಾಲದಲ್ಲಿ ಕೃಷಿ ಮತ್ತು ಕೃಷಿ ಉತ್ಪನ್ನಗಳಿಗೆ ವಿಶೇಷವಾದ ಪ್ರಾಮುಖ್ಯತೆಯನ್ನು ನೀಡಿದ್ದರು. ೧೮ನೇ ಶತಮಾನದಲ್ಲಿ ಕವಲೇದುರ್ಗ ಪ್ರದೇಶವು ಕೃಷಿ ಮಾರುಕಟ್ಟೆಯ ಕೇಂದ್ರಪ್ರದೇಶವಾಗಿತ್ತು. ಕೆಳದಿಯ ನಾಯಕರು ವಿಜಯನಗರದ ಸಾಮಂತರಾಗಿ ಆಳ್ವಿಕೆ ಮಾಡಿ ವಿಜಯನಗರದ ಕೃಷಿ ವ್ಯಾಪಾರ ವಾಣಿಜ್ಯವನ್ನು ಅವರಂತೆಯೇ ಮುಂದುವರಿಸಿದರು. ವಿಜಯನಗರದ ಕೃಷಿ ವಿಸ್ತರಣೆಯ ಜೊತೆ ನೀರಾವರಿ ವ್ಯವಸ್ಥೆ ಕುರಿತಂತೆ ಸುಧಾರಣೆಗಳನ್ನು ಮಾಡಿ ಸಾಮ್ರಾಜ್ಯವು ಆರ್ಥಿಕವಾಗಿ ಬಲಿಷ್ಠವಾಗಿರುವಂತೆ ನೋಡಿಕೊಂಡರು.

ಕೆಳದಿ ನಾಯಕರ ಕಾಲದಲ್ಲಿ ಸಾರ್ವಜನಿಕರೂ ಸಹ ಜನಪರ ಕಾರ್ಯಗಳನ್ನು ಮಾಡುತ್ತಿದ್ದರು ಎಂಬುದಕ್ಕೆ ವೆಂಕಟಪ್ಪನಾಯಕನ ಕಾಲದಲ್ಲಿ ಹತ್ತಿ ಮತ್ತೂರಿನ ಸೇನಬೋವ ಕಾಮದೇವಭಟ್ಟನ ಮಗನಾದ ಕೋನಪ್ಪನು ಗೋವರ್ಧನಗಿರಿಯ ಗೇರುಸೊಪ್ಪೆ ಮಾರ್ಗದಲ್ಲಿ ಒಂದು ಕೆರೆಯನ್ನು ಕಟ್ಟಿಸಿದನೆಂದು ತಿಳಿಯುತ್ತದೆ(ಎ.ಕ.೮,ಸಾ:೫೪). ಸೋಮಶೇಖರನಾಯಕನ ಕಾಲದ ಕ್ರಿ.ಶ. ೧೬೭೨ರ ಶಾಸನವು ವಿರಕ್ತಮಠಕ್ಕಾಗಿ ಹರಕೇರಿಯ ಹಯನೂರು ಎಂಬಲ್ಲಿ ಬಸವನ ಒಡ್ಡು ಎಂಬ ಒಂದು ಅಣೆಕಟ್ಟು ಕಟ್ಟಲಾಗಿತ್ತು(ಎ.ಕ.೮, ಶಿ:೭).

ಕೆಳದಿ ನಾಯಕರು ರೈತರಿಗೆ ಮುಂಗಡವಾಗಿ ಹಣವನ್ನು ನೀಡಿ ಕೃಷಿ ಉತ್ತೇಜನಕ್ಕೆ ನೆರವು ನೀಡುತ್ತಿದ್ದರು. ಅಲ್ಲದೆ ಕೆರೆಗಳನ್ನು ನಿರ್ಮಿಸಿ, ಒಡ್ಡುಗಳನ್ನು ರಿಪೇರಿ ಮಾಡಿಸಿ ಬೀಳುಭೂಮಿಯ ಸಾಗುವಳಿಗೆ ಪ್ರೋತ್ಸಾಹಿಸುತ್ತಿದ್ದರು. ರೈತರು ನೆರೆಹಾವಳಿಗೆ ಒಳಗಾದಾಗ ಕಂದಾಯವನ್ನು ಮನ್ನಾ ಮಾಡುತ್ತಿದ್ದರು. ೧೬೬೪ರ ಒಂದು ಶಾಸನದಂತೆ ತೂದೂರು ಗ್ರಾಮದ ಒಬ್ಬ ರೈತನ ನೀರಾವರಿ ಭೂಮಿಯು ಅನಿರೀಕ್ಷಿತವಾಗಿ ಹಾಳಾದಾಗ ಸರ್ಕಾರವು ೪/೨ ಗದ್ಯಾಣವನ್ನು ಪರಿಹಾರವಾಗಿ ನೀಡಿತ್ತು(ಎ.ಕ.ನಂ.೮, ತೀ:೧೮೫). ಕೆಳದಿ ನಾಯಕರ ಕಾಲದಲ್ಲಿ ಕೃಷಿಭೂಮಿಗೆ ವಿಧಿಸುತ್ತಿದ್ದ ಕಂದಾಯದ ಸ್ವರೂಪ ನೀರಾವರಿ ಹಾಗೂ ಒಣಭೂಮಿಗೆ ವಸೂಲು ಮಾಡುತ್ತಿದ್ದ ಕಂದಾಯದ ವ್ಯತ್ಯಾಸವನ್ನು ಇಲ್ಲಿ ದೊರೆತ ಶಾಸನ, ಸಾಹಿತ್ಯಾಧಾರಗಳಿಂದ ತಿಳಿಯಬಹುದು. ಈ ಮೂಲಕ ಕೆಳದಿಯ ಅರಸರು ನೀರಾವರಿ ಸೌಕರ್ಯವನ್ನು ಹೆಚ್ಚಿಸಿ ಹೆಚ್ಚು ಉತ್ಪನ್ನ ಬರುವಂತೆ ಮಾಡಿ ರೈತರ ಜೀವನಮಟ್ಟವು ಉತ್ತಮಗೊಳಿಸಲು ಶ್ರಮಿಸಿದರು ಹಾಗೂ ಸರ್ಕಾರದ ಆದಾಯವೂ ಹೆಚ್ಚುವಂತೆ ಮಾಡಿದರು. ಹೀಗೆ ಕೆಳದಿ ನಾಯಕರು ನೀರಾವರಿ ಸೌಕರ್ಯವನ್ನು ಹೆಚ್ಚಿಸಿದಾಗಲೂ ಇದೇ ಪದ್ಧತಿಯನ್ನು ಅನುಸರಿಸುತ್ತಿದ್ದರು. ಗಿಡಮರಗಳನ್ನು ಬೆಳೆಸಲು ಮತ್ತು ತೋಟವನ್ನು ಮಾಡಲು ನೀಡಿದ ಮುಂಗಡ ಹಣವನ್ನು ಕಂದಾಯದ ರೂಪದಲ್ಲಿ ವಸೂಲಿ ಮಾಡಲಾಗುತ್ತಿತ್ತು.

ತೀರ್ಥಹಳ್ಳಿ ಬಳಿಯ ಗ್ರಾಮಗಳಲ್ಲಿ ಈ ಸೌಕರ್ಯವನ್ನು ನೀಡಲಾಗಿತ್ತೆಂದು ಕ್ರಿ.ಶ.೧೭೩೦ರ ಶಾಸನವು ಹೇಳುತ್ತದೆ. ಹೀಗೆ ಕೆಳದಿ ನಾಯಕರು ಕೃಷಿ ನೀರಾವರಿಗೆ ಸೌಲಭ್ಯವನ್ನು ಒದಗಿಸಿದ್ದರೆಂದು ಹೇಳಬಹುದು.

ಚಿತ್ರದುರ್ಗ ನಾಯಕರ ಆಳ್ವಿಕೆಯ ಕಾಲದಲ್ಲಿ ವ್ಯವಸಾಯದಲ್ಲಿ ಒಣಭೂಮಿ ಮತ್ತು ನೀರಾವರಿ ಎಂಬ ಎರಡು ಭಾಗಗಳಾಗಿ ವಿಭಾಗಿಸಿದ್ದರು(ದೇಶಪಾಂಡೆ,೧೯೭೯:೧೦೩). ಒಣಭೂಮಿಯೂ ಮಳೆಯಾಶ್ರಿತ ಭೂಮಿಯಾಗಿತ್ತು. ನೀರಾವರಿ ಭೂಮಿಯು ಕೆರೆ ಕಾಲುವೆಗಳಿಂದ ನೀರನ್ನು ಹಾಯಿಸುವ ಭೂಮಿಯಾಗಿತ್ತು. ಹಾಗೆಯೇ ಮಣ್ಣಿನ ಗುಣವನ್ನು ಆಧರಿಸಿ ಎರೆಭೂಮಿ, ಕೆಂಗಲುಭೂಮಿ, ಮರಳುಭೂಮಿ, ಕಲ್ಲುಭೂಮಿ ಎಂಬುದಾಗಿ ವರ್ಗೀಕರಿಸಲಾಗಿತ್ತೆಂದು ಬುಕಾನನ್ ತಿಳಿಸುತ್ತಾನೆ. ೧೬೫೩ರ ಒಂದು ಶಾಸನದಲ್ಲಿ ಭೂಮಿಯ ವರ್ಗೀಕರಣದಲ್ಲಿ ಈ ರೀತಿಯಾದ ಮಾಹಿತಿ ದೊರೆತಿದೆ. ವಿಜಯನಗರೋತ್ತರ ಚಿತ್ರದುರ್ಗದ ನಾಯಕರು ಕೃಷಿಗೆ ವಿಶೇಷವಾದ ಪ್ರಾಮುಖ್ಯತೆಯನ್ನು ನೀಡಿದ್ದು, ಗ್ರಾಮೀಣ ಆರ್ಥಿಕತೆಯ ಸ್ವರೂಪವನ್ನು ಈ ಕಾಲಘಟ್ಟದಲ್ಲಿ ಗಮನಿಸಬಹುದಾಗಿದೆ. ವಿಜಯನಗರೋತ್ತರ ಕಾಲದಲ್ಲಿ ಕಂಡುಬಂದ ಕನಕಗಿರಿ ನಾಯಕರು ಕೃಷಿ ನೀರಾವರಿಗೆ ವಿಶೇಷವಾದ ಪ್ರೋತ್ಸಾಹವನ್ನು ನೀಡಿದ್ದರು. ಈ ನಾಯಕರು ಕೃಷಿ ನೀರಾವರಿಯನ್ನು ನಿರ್ವಹಿಸುವುದಕ್ಕೆ ಬಾವಿಗಳನ್ನು ತೋಡಿ ಏತ ಅಥವಾ ಕಪಿಲೆ ಮುಂತಾದ ಸಾಧನಗಳಿಂದ ನೀರನ್ನು ಮೇಲಕ್ಕೆ ಎತ್ತಿ ಹೊಲಗಳಿಗೆ ಸಾಗಿಸುತ್ತಿದ್ದರು. ಹಾಗೆ ಕನಕಗಿರಿ ನಾಯಕರ ಆಳ್ವಿಕೆಯ ಕಾಲದಲ್ಲಿ ರಾಣಿಯರು ಹೆಚ್ಚಿನ ಕೆರೆಗಳನ್ನು ನಿರ್ಮಿಸಿ ನೀರಾವರಿಗೆ ಅವಕಾಶ ನೀಡಿರುವುದು ಕಂಡುಬರುತ್ತದೆ(ತಾರೀಹಳ್ಳಿ, ೨೦೧೬:೪೨,೪೩).

ಕೃಷಿಯು ರಾಜ್ಯದ ಆರ್ಥಿಕ ವ್ಯವಸ್ಥೆಯನ್ನು ನಿರ್ಧರಿಸುತ್ತದೆ. ಕೃಷಿ ಆಧಾರಿತ ಸಮಾಜವು ಪ್ರಾಚೀನ ಕಾಲದಿಂದಲೂ ಮುಂದುವರಿಯುವಂತದ್ದು. ಮಧ್ಯಕಾಲೀನ ಭಾರತ ಮತ್ತು ಕರ್ನಾಟಕ ಚರಿತ್ರೆ ಬರವಣಿಗೆಯಲ್ಲಿ ಕೃಷಿ ಜೀತದಾಳುಗಳನ್ನು, ಕೆಳಜಾತಿಗೆ ಸೇರಿದ, ಆರ್ಥಿಕವಾಗಿ ದುಸ್ಥಿತಿಯಲ್ಲಿರುವ ಬಹುತೇಕ ಜನರನ್ನು ಕೃಷಿ ಕೂಲಿಯಾಳುಗಳನ್ನಾಗಿ ನೇಮಿಸಿಕೊಂಡಿದ್ದರು. ಮಧ್ಯಕಾಲಿನ ಕರ್ನಾಟಕದ ಆರ್ಥಿಕ ಚರಿತ್ರೆಯಲ್ಲಿ ಕೃಷಿವ್ಯವಸ್ಥೆಯಲ್ಲಿ ಕೂಲಿಕಾರ್ಮಿಕ ಸಮುದಾಯಗಳನ್ನು ಕುರಿತು ಅಧ್ಯಯನ ಮಾಡುವ ಪ್ರಮುಖ ವಿಷಯ ವಸ್ತುವಾಗಿದೆ. ದುಡಿಯುವುದು ಪ್ರಾಚೀನ ಕಾಲದಿಂದಲೂ ನಡೆದುಕೊಂಡು ಬಂದಿರುವ ಪದ್ಧತಿ. ರೈತರು, ಕೂಲಿ ಕಾರ್ಮಿಕರು, ಕೆಳಸಮುದಾಯಗಳು ಜೀವನ ನಿರ್ವಹಣೆಗೆ ಮಾಲೀಕರನ್ನು ಅವಲಂಬಿಸುವಂತಹ ಪದ್ಧತಿ ಹಿಂದೆ ಇತ್ತು. ಈ ವ್ಯವಸ್ಥೆ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಮರೆಯುವಂತಿಲ್ಲ(ದೇವರಾಜ, ೨೦೧೩:೧೮೩). ಈ ಮೂಲಕ ಕೃಷಿ, ಕೂಲಿಕಾರ್ಮಿಕರು ಪ್ರಾಚೀನ ಕಾಲದಿಂದಲೂ ಕೃಷಿಯಲ್ಲಿ ತೊಡಗಿದ್ದು, ಸಮಾಜದ ಉತ್ಪಾದನಾಂಗದ ಪ್ರಮುಖ ಆಧಾರ ಸ್ತಂಭವಾಗಿದ್ದಾರೆ ಎಂದರೆ ತಪ್ಪಾಗಲಾರದು.

ಭಾರತದ ಆರ್ಥಿಕ ಚರಿತ್ರೆಯಲ್ಲಿ ಬಂಡವಾಳಶಾಹಿ ಬೆಳವಣಿಗೆಯನ್ನು ವಸಾಹತುಶಾಹಿಯು ಸಾಮಾನ್ಯವಾಗಿ ಮೂರು ಹಂತಗಳಲ್ಲಿ ಭಾರತದಲ್ಲಿ ಈ ವ್ಯವಸ್ಥೆಯನ್ನು ಶೋಷಿಸಿತು ಎನ್ನಬಹುದು. ಈ ಹಂತದಲ್ಲಿ ಕರ್ನಾಟಕದಲ್ಲಿ ಬೃಹತ್ ಸಾಮ್ರಾಜ್ಯವೆನಿಸಿದ ವಿಜಯನಗರ ಸಾಮ್ರಾಜ್ಯವು ಅವನತಿಯ

ಹಾದಿಯಲ್ಲಿತ್ತು. ರಾಜಕೀಯ ಅತಂತ್ರ ಪರಿಸ್ಥಿತಿಯಿಂದ ಕೂಡಿದ ಈ ಸಮಯವನ್ನು ಸದುಪಯೋಗಪಡಿಸಿಕೊಂಡ ಯುರೋಪಿಯನ್ ಕಂಪನಿಗಳು ದೇಶದ ರಾಜರಿಂದ ಕಂದಾಯ ವಸೂಲಿಯನ್ನು ಮಾಡಿ ಅದರಿಂದ ಬಂದ ಹಣವನ್ನು ಕಂಪನಿಯ ಖಾಸಗಿ ಬಂಡವಾಳವಾಗಿ ಮಾಡಿದರು. ಹಲವು ನೀತಿಗಳ ಮೂಲಕ ಇಲ್ಲಿನ ರಾಜರು, ನವಾಬರು ಕೂಡಿಸಿಟ್ಟಿದ್ದ ದೇಶದ ಸಂಪತ್ತನ್ನು ಕೊಳ್ಳೆ ಹೊಡೆದರು. ಹೆಚ್ಚಿನ ಕಂದಾಯ ವಸೂಲಿ ಮಾಡಿ ಇಂಗ್ಲೆಂಡಿಗೆ ಸಾಗಿಸುವ ಆತುರದಲ್ಲಿ ಕೃಷಿಗೆ ಧಕ್ಕೆ ತಂದರು(ಚಂದ್ರಪ್ಪ, ೨೦೧೨:೨೭). ಭಾರತದಲ್ಲಿ ಕೃಷಿಯನ್ನು ವಾಣಿಜ್ಯೀಕರಿಸಿ ಭಾರತದಲ್ಲಿ ಸಾಂಬಾರ್ ಪದಾರ್ಥಗಳು, ಹತ್ತಿ ಮತ್ತು ನೀಲಿ ಬೆಳೆಗಳಿಗೆ ಬೆಂಬಲವನ್ನು ಕೊಡುವ ಮೂಲಕ ಭಾರತದಲ್ಲಿ ಈ ಬೆಳೆಗಳೇ ಹೆಚ್ಚು ಬೆಳೆಯುವುದಕ್ಕೆ ಅವಕಾಶ ಮಾಡಿಕೊಟ್ಟು ಪ್ರೋತ್ಸಾಹಿಸಿದರು. ಹೀಗೆ ಹಲವಾರು ಹೊಸ ವಿಧಾನಗಳನ್ನು ಅಳವಡಿಸುವ ನೆಪದಲ್ಲಿ ದೇಶದ ಸಾಂಪ್ರದಾಯಿಕ ಕೃಷಿ ಮತ್ತಿತರ ಆರ್ಥಿಕ ವಿಚಾರಗಳ ಮೇಲೆ ಪ್ರಭಾವ ಬೀರಿಯೂ ಕೂಡ ಬಂಡವಾಳ ವ್ಯವಸ್ಥೆಯನ್ನು ಅಳವಡಿಸಿಕೊಂಡು ದೇಶದ ಸಂಪತ್ತು ವಿದೇಶಗಳಿಗೆ ರವಾನಿಸುವಂತೆ ಮಾಡಿದರು.

ಭಾರತದಲ್ಲಿ ಬ್ರಿಟಿಶರು ತಮ್ಮ ವ್ಯವಸ್ಥೆಗೆ ಪೂರಕವಾದ ವಾತಾವರಣವನ್ನು ನಿರ್ಮಿಸುವ ಉದ್ದೇಶವನ್ನು ಹೊಂದಿದ್ದರು. ಈ ಹಿನ್ನೆಲೆಯಲ್ಲಿ ಭಾರತದಲ್ಲಿ ಅಗತ್ಯಕ್ಕೆ ಪೂರಕವಾದ ವಸ್ತುಗಳನ್ನು ವಾಣಿಜ್ಯ ಬೆಳೆಗಳನ್ನು ಬೆಳೆಯಲು ಅವಕಾಶ ಮಾಡಿಕೊಟ್ಟರು. ಇಲ್ಲಿ ಬೆಳೆದ ಕಚ್ಚಾವಸ್ತುಗಳನ್ನು ತೆಗೆದುಕೊಂಡು ಸಿದ್ಧವಸ್ತುಗಳನ್ನಾಗಿ ಮಾರ್ಪಡಿಸಿ ಭಾರತವನ್ನು ಮಾರುಕಟ್ಟೆಯಾಗಿ ಬೆಳೆಸಿ, ಮಾರುಕಟ್ಟೆ ಕೇಂದ್ರಿತ ಹೊಸ ಅರ್ಥವ್ಯವಸ್ಥೆಯೊಂದರ ಹುಟ್ಟಿಗೂ ಕಾರಣರಾದರು. ಕರ್ನಾಟಕದ ಮಟ್ಟಿಗೆ ಬ್ರಿಟಿಶರ ಹೊಸ ನೀತಿಗಳು ಅಲ್ಪ ಪ್ರಮಾಣದಲ್ಲಿ ಬಳಕೆಯಾದವೆಂದು ಹೇಳಬಹುದು.

ಕೃಷಿಯನ್ನು ವಾಣಿಜ್ಯೀಕರಿಸುವ ಬ್ರಿಟಿಷರ ನೀತಿಯು ಅವರ ಆಳ್ವಿಕೆಯುದ್ದಕ್ಕೂ ಮುಂದುವರಿಯಿತು. ಇದರಿಂದ ಕೃಷಿಯ ವಿಸ್ತರಣೆ ಕಂಡುಬಂತು. ಮುಖ್ಯ ಬೆಳೆಗಳನ್ನು ಗಮನದಲ್ಲಿಟ್ಟುಕೊಂಡು ಕೃಷಿಯನ್ನು ವಿಸ್ತರಣೆಗೊಳಿಸಲಾಯಿತು(ರೈ೨೦೦೭:೧೮). ಪ್ರಸ್ತುತ ಅಧ್ಯಯನದ ಕಾಲಮಿತಿಯು ಬ್ರಿಟಿಶರ ಆರ್ಥಿಕ ನೀತಿಯ ಅಳವಡಿಕೆಯ ಕಾಲವಲ್ಲದ್ದರಿಂದ ಅಗತ್ಯಕ್ಕೆ ತಕ್ಕಂತೆ ವಿಶ್ಲೇಷಿಸಲಾಗಿದೆ. ಕರ್ನಾಟಕದಲ್ಲಿ ಬ್ರಿಟಿಶರ ವಾಣಿಜ್ಯ ಕೃಷಿಯ ಪ್ರಯತ್ನಗಳಿಗೆ ಬಲ ಬಂದದ್ದು ೧೮೬೧ರ ನಂತರ. ಪಶ್ಚಿಮ ಘಟ್ಟಗಳ ಕಾಡುಗಳಲ್ಲಿ ಕಾಫಿ ಮತ್ತು ಏಲಕ್ಕಿ ಬೆಳೆಯಲು ಭೂಮಿಯ ತಾಕುಗಳನ್ನು ಹರಾಜು ಮಾಡಲಾಯಿತು. ಈ ಮೂಲಕ ಕರ್ನಾಟಕದಲ್ಲಿ ಕೃಷಿಯನ್ನು ವಾಣಿಜ್ಯೀಕರಿಸಿ ಆಡಳಿತ ಮಾಡಲಾರಂಭಿಸಿದರು. ಪ್ರಸ್ತುತ ಈ ಕಾಲಘಟ್ಟದಲ್ಲಿ ಕೃಷಿವ್ಯವಸ್ಥೆಯಲ್ಲಿ ಹಲವಾರು ಮಹತ್ವದ ಬದಲಾವಣೆಗಳು ಕಂಡುಬಂದಿದ್ದು, ಕೃಷಿ ಉತ್ಪನ್ನಗಳಲ್ಲಿ ಆಹಾರದ ಉತ್ಪನ್ನಗಳನ್ನು ಹೆಚ್ಚು ಬೆಳೆಯುತ್ತಿದ್ದು ವಸಾಹತು ಕಾಲದಲ್ಲಿ ಭಾರತವು ವಾಣಿಜ್ಯ ಬೆಳೆಗಳಿಗೆ ಮುಖ ಮಾಡುವಂತಾಯಿತು. ಮೆಕ್ಕೆ ಜೋಳ, ಭತ್ತದ ಹೊಸ ತಳಿಗಳು ಪಪ್ಪಾಯಿ, ಕಾಫಿ, ಟೀ, ಹತ್ತಿ, ಸಾಂಬಾರ ಪದಾರ್ಥಗಳ ಬೆಳೆಗಳ ಕಡೆ ಹೊಂದಿಕೊಳ್ಳುವಂತೆ ಮಾಡಿತು. ಕರಾವಳಿ ಕರ್ನಾಟಕದಲ್ಲಿ ಗದ್ದೆ ಬೆಳೆಗೆ ಹೆಚ್ಚಿನ ಮಹತ್ವವಿದ್ದರಿಂದ ಆ ಭಾಗದಲ್ಲಿ ವಿವಿಧ ರೀತಿಯ ಭತ್ತದ ಬೆಳೆಗಳನ್ನು ಪರಿಚಯಿಸುವುದರ ಮೂಲಕ ಬಸ್ರೂರು ಸುತ್ತಲಿನ ಪ್ರದೇಶದಲ್ಲಿ ಭತ್ತ

ಬೆಳೆಯುವ ಪರಿಪಾಟವನ್ನು ಅಳವಡಿಸಿಕೊಂಡರು. ಪ್ರಸ್ತುತ ಕರ್ನಾಟಕದಲ್ಲಿ ಮೆಕ್ಕೆಜೋಳ ಬೆಳೆಯು ಪ್ರಮುಖ ವಾಣಿಜ್ಯ ಬೆಳೆಯಾಗಿ ಗುರುತಿಸಿಕೊಂಡಿದ್ದು ಯುರೋಪಿಯನ್ನರಾದ ಪೋರ್ಚುಗೀಸ್‌ರಿಂದಲೇ ಎಂದು ಹೇಳಬಹುದು. ಪೋರ್ಚುಗೀಸರು ಪರಿಚಯಿಸಿದ ಪಪ್ಪಾಯಿ ಬೆಳೆಯು ಇಂದಿಗೂ ಕಂಡುಬರುತ್ತದೆ. ಬ್ರಿಟಿಶರು ಕಾಫಿ, ಟೀಯನ್ನು ಪರಿಚಯಿಸುವ ಮೂಲಕ ಪ್ಲಾಂಟೇಷನ್ ಆರ್ಥಿಕತೆಯನ್ನು ಕರ್ನಾಟಕದಲ್ಲಿ ಪರಿಚಯಿಸಿದರು. ಚಿಕ್ಕಮಗಳೂರು, ಕೊಡಗು, ಮಡಿಕೇರಿ ಪ್ರದೇಶಗಳಿಗೆ ಇಂದಿಗೂ ತೋಟದ ಬೆಳೆಯಾಗಿ ಇವು ಗುರುತಿಸಿಕೊಂಡಿವೆ. ಈ ಮೂಲಕ ವಿಜಯನಗರೋತ್ತರ ಕಾಲಾವಧಿಯು ಕೃಷಿವಿಸ್ತರಣೆಯ ಕಾಲವೆಂದು ಪರಿಗಣಿಸಬಹುದಾಗಿದೆ. ಕೃಷಿಗೆ ಪೂರಕವಾಗಿ ಪ್ರಾಚೀನ ಕಾಲದಿಂದಲೂ ಅವಿನಾಭಾವ ಸಂಬಂಧವನ್ನು ಹೊಂದಿರುವಂತಹದ್ದು ಗೋಸಂಪತ್ತು. ಕೃಷಿಯನ್ನೊಳಗೊಂಡು ಕುರಿ, ಮೇಕೆ, ಆಡು, ಹಸು ಮೊದಲಾದವುಗಳನ್ನು ಕುರಿತಂತೆ ವಿವರಿಸಲಾಗಿದೆ. ಗೋವುಗಳು ಮೇಯಿಸುವುದಕ್ಕೆ ಗೋಮಾಳಗಳನ್ನು ನಿರ್ಮಿಸುತ್ತಿದ್ದರು. ಉತ್ತರ ಕರ್ನಾಟಕದ ತೇರದಾಳ ಮತ್ತು ರಾಯಭಾಗ ಮತ್ತು ಪೇಠ ಹುಕ್ಕೇರಿ, ಬಾಜೆ ದೇಹಾಯ ಮೊಲುಮ ಬಾದ ಸುಯಾರ ಸನ್ ಸಲಾಸ ಸಮಾದೀನ ಆಲಫ ಬಾದೇ ಕರಾರು ಪತ್ರ ಹೀಗೆದೆ, ಸಾ। ಆಡಗಳು ಎಂಬ ಚೇರೆ ಪ್ರದೇಶದಲ್ಲಿ ಪ್ರತಿ ಗ್ರಾಮದ ಹಲವು ಎತ್ತುಗಳನ್ನು ತಂದು ಮೇಯಲು ಬಿಡಲಾಗುತ್ತಿತ್ತು. ತನ್ನ ಹಕ್ಕು ಎಂದು ಭಾವಿಸಿ ಮೇಯಲು ಬಿಡುತ್ತಿದ್ದ. ಆದ್ದರಿಂದ ಸರ್ಕಾರದ ಆದಾಯ ಮುಳುಗುತ್ತಿತ್ತು ಎಂದು ತಿಳಿದುಬಂತು. ಈ ವಿಷಯದ ಖಾತ್ರಿ ಮಾಡಿಕೊಂಡಾಂಗ ನಿಮಗೆ ಕರಾರುಪತ್ರ ಕಳುಹಿಸಲಾಗಿದೆ(ಚಂದ್ರಕಾಂತ ಪೋಕಳೆ.೧೫, ೨೦೧೬:೯೯). ಎಂದು ಉಲ್ಲೇಖಗೊಂಡಿದೆ. ಗಮನಿಸುವ ಅಂಶವೆಂದರೆ ಗೋಸಂಪತ್ತು ಮುಖ್ಯವಾಗಿದ್ದು ಸರ್ಕಾರ ಇವುಗಳ ಮೇಲೆ ನಿಯಂತ್ರಣವನ್ನು ಹೊಂದಿತ್ತು ಎಂಬುದು ಸ್ಪಷ್ಟವಾಗುತ್ತದೆ. ದಳವಾಯಿ ಮತ್ತು ಮೈಸೂರು ಸುಲ್ತಾನರ ಕಾಲದಲ್ಲಿ ಕೃಷಿಗೆ ಪೂರಕವಾಗಿ ಪಶುಸಂಗೋಪನೆಯನ್ನು ಕೈಗೊಂಡಿದ್ದು. ದಳವಾಯಿಗಳ ಕಾಲದಲ್ಲಿ ಹಸುಗಳನ್ನು ಮೇಯಿಸುವುದಕ್ಕೆ ಗೋಮಾಳಗಳ ಉಲ್ಲೇಖವು ದೊರೆಯುತ್ತದೆ. ಚಿತ್ರದುರ್ಗ, ಹರಪನಹಳ್ಳಿ ನಾಯಕರು ಕೃಷಿಯ ಜೊತೆ ಕುರಿಸಾಕಾಣಿಕೆಯನ್ನು ಕೈಗೊಂಡಿರುವ ಕುರಿತ ಮಾಹಿತಿ ಬುಕಾನನ್ ವರದಿಯಲ್ಲಿ ತಿಳಿಸಿದ್ದಾನೆ. ಚಿತ್ರದುರ್ಗ ಪರಿಸರವು ಬುಡಕಟ್ಟು ಸಂಸ್ಕೃತಿಯನ್ನು ಹೊಂದಿದ್ದು, ಈ ಬುಡಕಟ್ಟು ಜನರು ಹಸು ಮತ್ತು ಕುರಿಸಾಕಣಿಕೆಯನ್ನು ಅವರ ವೃತ್ತಿಯನ್ನಾಗಿಸಿದ್ದರು. ಮೈಸೂರು ಒಡೆಯರ ಕಾಲದಲ್ಲಿ ಕುರಿ ಹಸುಗಳಿಂದ ಬಂದ ತುಪ್ಪ ಮತ್ತು ಬೆಣ್ಣೆಯನ್ನು ಸಂಗ್ರಹಿಸುವುದಕ್ಕೆ ೧೮ ಚಾವಡಿಗಳಲ್ಲಿ ಒಂದು ತುಪ್ಪದ ಚಾವಡಿ ಇತ್ತು. ಇದರಿಂದ ಅಲ್ಲಿ ಪಶುಸಂಗೋಪನೆ ಎಷ್ಟು ಸಮೃದ್ಧವಾಗಿತ್ತೆಂದು ತಿಳಿಯುತ್ತದೆ. ಚಿತ್ರದುರ್ಗ ಮತ್ತು ಗುಡೇಕೋಟೆಯಲ್ಲಿ ತುಪ್ಪದ ಕೊಳ್ಳದ ಉಲ್ಲೇಖವಿದ್ದು. ಇದರಿಂದ ತಿಳಿಯುವ ಅಂಶವೆಂದೇ ಗೋಸಂಪತ್ತು ಮುಖ್ಯವಾಗಿತ್ತು. ಅದರ ಉತ್ಪನ್ನವನ್ನು ಸಂಗ್ರಹಿಸಲು ಈ ರೀತಿಯ ತುಪ್ಪದ ಕೊಳಗಳಿದ್ದಿರಬಹುದು. ಕೃಷಿ ಆರ್ಥಿಕತೆಯಲ್ಲಿ ಪಶುಸಂಗೋಪನೆಯು ಮುಖ್ಯ ಆರ್ಥಿಕ ಚಟುವಟಿಕೆಯಾಗಿತ್ತು. ಎತ್ತಿನ ಬಂಡಿಯು ಭೂಮಿಯ ಉಳುಮೆ, ನೀರನ್ನು ಎಳೆಯಲು ಮತ್ತು ಸಾರಿಗೆಯಲ್ಲಿ ಪ್ರಮುಖ ಪಾತ್ರ ವಹಿಸಿತ್ತು. ಹಸು, ಎತ್ತು,

ಕುರಿ, ಮೇಕೆ, ಎಮ್ಮೆ, ಕುದುರೆ, ಆನೆ, ನಾಯಿ, ಕೋತಿಗಳನ್ನು ಸಾಕುತ್ತಿದ್ದರು. ಹಸು ಮತ್ತು ಎಮ್ಮೆ ಹಾಲಿನ ಉತ್ಪನ್ನಗಳಿಗೆ ಬಳಸುತ್ತಿದ್ದರು(ಸತ್ಯನಾರಾಯಣ, ೧೯೯೬:೧೬೪). ಈ ಮೂಲಕ ವಿಜಯನಗರೋತ್ತರ ಕಾಲದಲ್ಲಿ ಕೃಷಿಗೆ ಪೂರಕವಾದ ಗೋಸಂಪತ್ತನ್ನು ಹೊಂದಿದ್ದರೆಂದು ಹೇಳಬಹುದು. ಕೆಳದಿ ನಾಯಕರ ಕಾಲದಲ್ಲಿ ಪಶುಸಂಗೋಪನೆ ಇತ್ತೆಂದು ಹೇಳಬಹುದು. ಅವರ ಶಾಸನಗಳಲ್ಲಿ ಎತ್ತಿಗೆ ಮಾನ್ಯ ಬಿಟ್ಟ ಮಾಹಿತಿಯೂ ಅನೇಕ ಶಾಸನಗಳಿಂದ ತಿಳಿಯುತ್ತದೆ.

ಕೃಷಿ ನೀರಾವರಿ ವ್ಯವಸ್ಥೆಗೆ ಸಂಬಂಧಿಸಿದಂತೆ ಹಲವಾರು ಆಚರಣೆ ಸಂಪ್ರದಾಯಗಳು ರೂಢಿಯಲ್ಲಿದ್ದವು. ಯುಗಾದಿ ಹಬ್ಬವು ರೈತರ ಬಿಡುವಿನ ಕಾಲದಲ್ಲಿ ಬರುವಂತದ್ದು ಅಥವಾ ವಿರಾಮದ ಕೊನೆ ಮತ್ತು ದುಡಿಮೆಯ ಆರಂಭ ಇವೆರಡರ ನಡುವಿನ ಹಬ್ಬವಾಗಿತ್ತು. ಆದ್ದರಿಂದಲೇ ಈ ಹಬ್ಬದಲ್ಲಿ ಬೇವು ಬೆಲ್ಲದ ಮಿಶ್ರಣವಿರುತ್ತದೆ. ಈ ಸಂದರ್ಭದಲ್ಲಿ ಭೂಮಿತಾಯಿ ಫಲವಂತಿಕೆ ಹೊಂದುವಳು ಎಂದು ರೈತರು ನಂಬಿದ್ದರು. ಈ ಮೂಲಕ ಕೃಷಿಗೆ ಪೂರಕವಾಗಿ ಈ ಹಬ್ಬವನ್ನು ಆಚರಿಸುತ್ತಿದ್ದರೆಂದು ಹೇಳಬಹುದು. ಕೃಷಿಗೆ ಪೂರಕವಾದ ಆಚರಣೆ ಸಂಪ್ರದಾಯವನ್ನು ಕುರಿತಂತೆ ಪ್ರತಿಯೊಂದು ಹಂತದಲ್ಲಿ ಒಂದೊಂದು ಆಚರಣೆ ನಡೆಸುತ್ತಿದ್ದರು. ಗುಗ್ಗರಿಹಬ್ಬ, ಕಾರಹುಣ್ಣಿಮೆ ಇವೆಲ್ಲ ಕೃಷಿಗೆ ಪೂರಕ ಹಬ್ಬಗಳಾಗಿವೆ.

ಕೃಷಿಯಲ್ಲಿ ಮುಂಗಾರಿನ ಆರಂಭದಿಂದ ಹಿಡಿದು ಬೆಳೆಗಳನ್ನು ಕಟಾವು ಮಾಡಿ ಕಣದಲ್ಲಿ ಅವುಗಳನ್ನು ರಾಶಿ ಹಾಕುವವರೆಗೂ ಈ ರೀತಿಯ ಆಚರಣೆಗಳನ್ನು ಮಾಡುತ್ತಿದ್ದರು. ಕೃಷಿಯಲ್ಲಿ ಮಳೆ, ಬೆಳೆ, ಕೊಯ್ಯಲು ರಾಶಿಪೂಜೆ ಮೊದಲಾದ ವಿಚಾರಗಳ ಕುರಿತಂತೆ ವಿಶೇಷವಾದ ಆಚರಣೆಗಳನ್ನು ಮಾಡುತ್ತಿದ್ದರು. ಹಾಗೆಯೇ ನೀರಾವರಿ ವ್ಯವಸ್ಥೆಯಲ್ಲಿಯೂ ಕೆರೆ, ಬಾವಿ, ಸಾಗರಗಳ ಅಣೆಕಟ್ಟುಗಳ ನಿರ್ಮಾಣ ಮೊದಲಾದ ಸಂದರ್ಭದಲ್ಲಿ ಕಟ್ಟಡ ನಿಲ್ಲದಿದ್ದಾಗ ಅವುಗಳ ರಕ್ಷಣೆಗೆ ಊರಿನ ಮುಖಂಡನ ಸಂಬಂಧಿಗಳನ್ನು ಬಲಿ ಕೊಡುವ ಸಂಪ್ರದಾಯವು ಪ್ರಾಚೀನ ಕಾಲದಲ್ಲಿತ್ತು. ಅದು ವಿಜಯನಗರೋತ್ತರ ಕಾಲದಲ್ಲಿಯೂ ಕಂಡುಬರುತ್ತದೆ.

ಸಂತೆಬೆನ್ನೂರು ನಾಯಕರು ಮಲೆನಾಡಿನ ಆರ್ಥಿಕ ವ್ಯವಸ್ಥೆಯನ್ನು ಅಳವಡಿಸಿಕೊಂಡಿದ್ದರು. ಈ ನಾಯಕರ ಕೃಷಿವ್ಯವಸ್ಥೆಯನ್ನು ಕೃಷಿಭೂಮಿಯ ವಿಂಗಡಣೆಯನ್ನು ಕುರಿತಂತೆ ಶಾಸನಗಳು ಮುಂದಿನಂತೆ ಸೂಚಿಸುತ್ತವೆ.

ಹಾಳಾದ ಹೊಲ(ಇ.ದರ್ಶ.ಸಂ.೨೦),

ಎರೆ ಬಯಲಗದ್ದೆ(ಎ.ಕ.೧೧, ಹೊ:೧೧೫),

ತೋಟ(ಎ.ಕ.ಚಿ:೧೯),

ಗದ್ದೆ(ಎ.ಕ.ಚಿ:೧೯),

ಬೆದ್ದಲು

ಗದ್ದೆ(ಎ.ಕ.೬,ತ:೨೧),

ಈ ರೀತಿಯಾಗಿ ಸಂತೆಬೆನ್ನೂರು ನಾಯಕರು ಕೃಷಿಭೂಮಿಯನ್ನು ವಿಂಗಡಿಸಿ ಕೃಷಿ ಕಾರ್ಯವನ್ನು ನಿರ್ವಹಿಸುತ್ತಿದ್ದರು.

ಹೈದರಾಬಾದ್ ನಿಜಾಮನ ಕೃಷಿ ನೀತಿಯನ್ನು ಕುರಿತಂತೆ ೧೭೨೪ರಿಂದ ೧೮೦೦ರವರೆಗಿನ ಅವಧಿಯನ್ನು ಪರಿಗಣಿಸಿ ಅಧ್ಯಯನ ಮಾಡಲಾಗಿದೆ. ಇವರು ಕೃಷಿ ವ್ಯಾಪಾರ ಮತ್ತು ವಾಣಿಜ್ಯ ಉದ್ದಿಮೆಗಳಲ್ಲಿ ಮಹತ್ವದ ಬದಲಾವಣೆಯನ್ನು ತರುವುದರ ಮೂಲಕ ತಮ್ಮದೇ ಆರ್ಥಿಕ ನೀತಿಯನ್ನು ರೂಪಿಸಿದ್ದರು. ಸಹಾಯಕ ಸೈನ್ಯಪದ್ಧತಿಗೆ ಒಳಪಡುವ ಪೂರ್ವದಲ್ಲಿ ಹೈದರಾಬಾದ್ ಸಂಸ್ಥಾನದ ನಿಜಾಮನು ಮೊಗಲರ ಆರ್ಥಿಕ ನೀತಿಯ ಮೇಲೆ ಪ್ರಭಾವಗೊಂಡಿದ್ದರು. ಆದ್ದರಿಂದ ತನ್ನ ಆಡಳಿತ ಕಾಲದಲ್ಲಿ ಅದೇ ನೀತಿಯನ್ನು ಮುಂದುವರಿಸಿರುವುದನ್ನು ಗಮನಿಸಬಹುದು.

ಮೊಗಲರ ಆರ್ಥಿಕ ವ್ಯವಸ್ಥೆಯಂತೆ ಅವರು ಕೃಷಿಗೆ ವಿಶೇಷವಾದ ಪ್ರಾಮುಖ್ಯತೆಯನ್ನು ನೀಡಿದ್ದರು. ಉತ್ಪನ್ನಗಳನ್ನು ಅಭಿವೃದ್ಧಿಪಡಿಸಲು ಹೊಸ ಪದ್ಧತಿಯನ್ನು ಅಳವಡಿಸಿಕೊಂಡಿದ್ದರು. ಮೊಗಲರ ಕಾಲದಲ್ಲಿ ಬಹುಪಾಲು ರೈತಾಪಿ ವರ್ಗವೇ ಪ್ರಮುಖವಾಗಿತ್ತು. ಕೃಷಿ ಉತ್ತೇಜನಕ್ಕೆ ಸಾಮ್ರಾಜ್ಯದಲ್ಲಿದ್ದ ಪಾಳುಭೂಮಿಯನ್ನು ಕೃಷಿಭೂಮಿಯನ್ನಾಗಿ ಪರಿವರ್ತನೆ ಮಾಡಲಾಯಿತು. ಕೃಷಿಭೂಮಿ ವಿಸ್ತರಿಸಲು ಪಾಳುಬಿದ್ದ ಭೂಮಿಯ ಮೇಲೆ ವಿಧಿಸಿದ್ದ ತೆರಿಗೆಯಲ್ಲಿ ವಿನಾಯ್ತಿ ನೀಡಿ ರೈತರನ್ನು ಕೃಷಿಯಲ್ಲಿ ಹೆಚ್ಚು ಹೆಚ್ಚು ತೊಡಗಿಸಲಾಯಿತು(ಮಜುಂದಾರ್ (೧೫.)೨೦೦೪,೨೪೬-೨೪೮). ಬ್ರಿಟಿಶರ ಆಳ್ವಿಕೆಯ ಆರ್ಥಿಕ ನೀತಿಯು ನಿಜಾಮನ ಆಳ್ವಿಕೆಯ ಮೇಲೆ ಪ್ರಭಾವ ಬೀರಿದ್ದು, ಕೃಷಿ ಉತ್ಪಾದನೆಯಲ್ಲಿ ಇಳುವರಿ ಹೆಚ್ಚಿಸಲು ಬ್ರಿಟಿಷ್ ಮಾದರಿಯ ಮಣ್ಣಿನ ಫಲವತ್ತತೆ ಪರೀಕ್ಷೆ ಮತ್ತು ಅದಕ್ಕೆ ಅನುಗುಣವಾಗಿ ಉಳುಮೆ ಮಾಡುವ ಕ್ರಮವನ್ನು ಪ್ರೋತ್ಸಾಹಿಸಲಾಯಿತು. ಮಳೆಯಾಧಾರಿತ ಕೃಷಿಯಲ್ಲಿ ಉತ್ಪಾದನೆಯ ಪ್ರಮಾಣ ಕಡಿಮೆಯಿತ್ತು. ನೀರಾವರಿ ಮೂಲಕ ಉತ್ಪಾದನೆಯನ್ನು ಹೆಚ್ಚಿಸಲು ಸಂಸ್ಥಾನದ ಪ್ರದೇಶದಲ್ಲಿ ಹರಿಯುವ ನದಿಗಳಿಗೆ ಅಣೆಕಟ್ಟು ಕಟ್ಟಿಸುವ ಪ್ರಯತ್ನ ಮಾಡಲಾಯಿತು. ನೀರಾವರಿ ಭೂಪ್ರದೇಶವನ್ನು ವಿಸ್ತರಿಸಲು ಕೆರೆ ನಿರ್ಮಾಣ ಮತ್ತು ಬಾವಿಗಳನ್ನು ತೋಡಿಸುವ ಕಾರ್ಯಗಳಿಗೆ ಹೆಚ್ಚಿನ ಆದ್ಯತೆ ನೀಡಲಾಯಿತು.

ಹೈದರಾಬಾದ್ ನಿಜಾಮನು ತಮ್ಮ ಕೃಷಿ ಭೂಮಿಯನ್ನು ದಿವಾನಿ, ಜಹಗೀರಿ ಮತ್ತು ಸರ್ಫೆ-ಏ-ಖಾಸ್ ಎಂದು ಮೂರು ಭಾಗಗಳಲ್ಲಿ ವಿಂಗಡಿಸಿಕೊಂಡಿದ್ದನು(ತಿಪ್ಪಣ್ಣ, ೨೦೧೭:೨೫೫). ದಿವಾನಿ ಭೂಮಿಯು ಸರ್ಕಾರದ ಭೂಮಿಯಾಗಿದ್ದು, ಇದರ ಕಂದಾಯ ವಿಧಿಸುವ ಸಂಪೂರ್ಣ ಜವಾಬ್ದಾರಿಯು ಸರ್ಕಾರಕ್ಕೆ ಸೇರಿತ್ತು. ಈ ಭೂಮಿಯ ಶೇ.೬೦ ಭಾಗ ಸರ್ಕಾರ ಕಂದಾಯ ವಿಧಿಸುತ್ತಿದ್ದ ಭೂಮಿಯಾಗಿತ್ತು. ನಿಜಾಮನ ಖಾಸಗಿ ಜೀವನಕ್ಕೆ ನೀಡಿದ್ದ ಭೂಮಿ ಸರ್ಫೆ-ಏ-ಖಾಸ್ ಭೂಮಿ. ಇದು ಅವನ ಜೀವನಕ್ಕೆ ವೈಯಕ್ತಿಕಕ್ಕೆ ಸಂಬಂಧಿಸಿದ ಭೂಮಿಯಾಗಿತ್ತು.

ಭೂಮಿಯನ್ನು ಜಹಗೀರ್ ನೀಡುವ ಪದ್ಧತಿಯು ಆರಂಭದಿಂದಲೂ ಕಂಡುಬಂದಿದ್ದು, ಬಿಜಾಪುರದ ಆದಿಲ್‌ಷಾಹಿಗಳು, ಮೊಗಲರ ಕಾಲದಲ್ಲಿಯೂ ಅಸ್ತಿತ್ವದಲ್ಲಿದ್ದು ಹೈದರಾಬಾದ್ ನಿಜಾಮನ ಆಳ್ವಿಕೆಯ ಕಾಲದಲ್ಲಿಯೂ ಮುಂದುವರಿದಿರುವುದನ್ನು ಗುರುತಿಸಲಾಗಿದೆ. ಮಳೆಯಾಧಾರಿತ ಕೃಷಿ ವಿಧಾನದಲ್ಲಿ ಇಳುವರಿ ಕಡಿಮೆ ಇದ್ದು ಆಗಾಗ ಬರಗಾಲಕ್ಕೆ ತುತ್ತಾಗುತ್ತಿದ್ದದ್ದು ಸಾಮಾನ್ಯವಾಗಿತ್ತು. ಮಳೆಯಾಧಾರಿತ ಕೃಷಿಭೂಮಿಗೆ ನೀರಾವರಿ ಕಲ್ಪಿಸಿದರೆ ಮಾತ್ರ ಕೃಷಿಯಿಂದ ರಾಜ್ಯದ ಆದಾಯ

ವೃದ್ಧಿಗೊಳ್ಳುತ್ತದೆ ಎಂಬ ಹಿನ್ನೆಲೆಯಲ್ಲಿ ಈ ಪ್ರದೇಶದಲ್ಲಿ ನೀರಾವರಿಗೆ ಹೆಚ್ಚಿನ ಆದ್ಯತೆ ಅವಕಾಶ ನೀಡಿದಂತೆ ಕಂಡುಬರುತ್ತದೆ.

ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ಮಧ್ಯ ಕರ್ನಾಟಕದಲ್ಲಿ ಕಂಡುಬಂದಂತಹ ಕೆರೆ ನೀರಾವರಿ ವ್ಯವಸ್ಥೆಯು ಕಂಡುಬರುವುದಿಲ್ಲ. ಅಂದರೆ ಈ ರೀತಿಯ ವಿಧಾನವು ಈ ಕಾಲಾವಧಿಯಲ್ಲಿ ಹೆಚ್ಚಾಗಿ ಜಾರಿಗೆ ಬಂದಂತೆ ಕಂಡುಬರುವುದಿಲ್ಲ. ಬಿಜಾಪುರದ ಆದಿಲ್‌ಶಾಹಿಗಳ ಅವಧಿಯಲ್ಲಿ ಬಾವಿ ನೀರಾವರಿ ಅಸ್ತಿತ್ವದಲ್ಲಿತ್ತು. ಹೈದರಾಬಾದಿನ ನಿಜಾಮರು ಅತಿ ಹೆಚ್ಚು ಬಾವಿ ನೀರಾವರಿಗೆ ಅವಕಾಶವನ್ನು ನೀಡಿದ್ದರು. ಈ ಭಾಗದಲ್ಲಿ ಕೃಷ್ಣ, ತುಂಗಭದ್ರಾ, ಭೀಮಾ ನದಿಗಳು ಹರಿಯುವುದರಿಂದ ನದಿಗಳ ಮೂಲಕ ನೀರಾವರಿ ವ್ಯವಸ್ಥೆಯನ್ನು ಕಲ್ಪಿಸಲಾಗಿತ್ತು(ತಿಪ್ಪಣ್ಣ, ೨೦೧೭:೨೬೧). ಆದ್ದರಿಂದ ಕೆರೆ ನೀರಾವರಿ ನಿರ್ಮಾಣವು ಈ ಭಾಗದಲ್ಲಿ ಹೆಚ್ಚು ಕಂಡುಬಂದಿಲ್ಲ.

ಈ ಮೂಲಕ ಹೈದರಾಬಾದ್ ಸಂಸ್ಥಾನದಲ್ಲಿ ತಮ್ಮದೇ ಆದ ಕೃಷಿ ನೀರಾವರಿಯನ್ನು ಅಳವಡಿಸಿಕೊಂಡು ಸಂಸ್ಥಾನದ ಸಮಗ್ರ ಅಭಿವೃದ್ಧಿಗೆ ಶ್ರಮಿಸಿದರು. ಹೀಗೆ ವಿಜಯನಗರೋತ್ತರ ಕಾಲಾವಧಿಯು ಹಲವಾರು ಸಾಂಸ್ಕೃತಿಕ ಸ್ಥಿತ್ಯಂತರಕ್ಕೆ ಒಳಪಡುವ ಕಾಲವಾಗಿದೆ. ಯುರೋಪಿಯನ್ನರ ಮಾರುಕಟ್ಟೆಕೇಂದ್ರಿತ ಹೊಸ ಅರ್ಥವ್ಯವಸ್ಥೆಯೊಂದರ ಉಗಮವಾಗಿದ್ದು, ಕೃಷಿ ಉತ್ಪನ್ನಗಳನ್ನು ಮಾರುಕಟ್ಟೆಗಳ ಮೂಲಕ ವ್ಯಾಪಾರ ಮಾಡಿ ಅತಿಹೆಚ್ಚಿನ ಲಾಭಾಂಶವನ್ನು ಮಧ್ಯವರ್ತಿಗಳು ಪಡೆಯುತ್ತಿದ್ದರು. ಕೃಷಿ ಉತ್ಪಾದನೆಯಲ್ಲಿ ತೊಡಗಿದ್ದ ರೈತನಿಗೆ ಯಾವುದೇ ರೀತಿಯ ಲಾಭಾಂಶವು ದೊರೆಯುತ್ತಿರಲಿಲ್ಲ. ಈ ರೀತಿಯಾದ ಸಂದಿಗ್ಧತೆಯ ಪರಿಸ್ಥಿತಿಯು ವಿಜಯನಗರೋತ್ತರ ಕಾಲದಲ್ಲಿ ಕಂಡುಬರುತ್ತದೆ.

### ೪.೨. ಕೃಷಿ ಉತ್ಪನ್ನಗಳು

ಕೃಷಿ ಉತ್ಪನ್ನಗಳು ಆರ್ಥಿಕತೆಯ ಮೂಲಗಳಾಗಿವೆ. ಈ ಕಾಲಘಟ್ಟದ ವ್ಯಾಪಾರ-ವಾಣಿಜ್ಯ ಕುಶಲಕರ್ಮಿಗಳು ಮೊದಲಾದವರನ್ನು ಅಧ್ಯಯನ ಮಾಡಿದಾಗ ಅಲ್ಲಿನ ಕೃಷಿ ಉತ್ಪನ್ನಗಳ ಮಾಹಿತಿ ದೊರೆಯುತ್ತದೆ. ಪ್ರಾಚೀನ ಕಾಲದ ನಾಗರಿಕತೆಗಳ ಉಗಮಕಾಲದಿಂದಲೂ ಅಸ್ತಿತ್ವದಲ್ಲಿದ್ದ ಬೆಳೆಗಳು ಕೆಲವು ಬದಲಾವಣೆಗಳೊಂದಿಗೆ ಕೃಷಿ ಉತ್ಪನ್ನಗಳು ಅಧಿಕಗೊಂಡಿದ್ದರಿಂದ ಕೃಷಿಯೇತರ ಚಟುವಟಿಕೆಗಳು ಬೆಳವಣಿಗೆಯಾಗಲಾರಂಭಿಸಿದವು. ಕೃಷಿ ಬೆಳವಣಿಗೆಯೆಂದರೆ ಅದು ರಾಜ್ಯದ ಬೆಳವಣಿಗೆಯೂ ಹೌದು. ಹಾಗಾಗಿ ರಾಜರು ಕೃಷಿ ಮತ್ತು ಕೃಷಿ ಉತ್ಪನ್ನಗಳನ್ನು ಸುಧಾರಿಸುವ ಪ್ರಯತ್ನವನ್ನು ಮಾಡಿದರು. ಕೃಷಿಯ ವಿಸ್ತರಣೆಯ ಪರಿಣಾಮವಾಗಿ ಕೃಷಿಯಲ್ಲಿ ಬಳಸುವ ಉಪಕರಣಗಳು ಬದಲಾವಣೆಯಾಗಿ ಅದು ಕೃಷಿ ಉತ್ಪಾದನೆಯ ಮೇಲೆ ಮಹತ್ವದ ಪರಿಣಾಮವನ್ನು ಬೀರಿತು. ಈ ಮೂಲಕವಾಗಿ ಸಮಾಜವು ಹಲವಾರು ಮಾರ್ಪಾಡುಗಳಾಗಿರುವುದನ್ನು ಗುರುತಿಸಬಹುದು. ಫಲವತ್ತಾದ ಭೂಮಿ ಹಾಗೂ ನೀರು ಪೂರೈಕೆ ಇರುವ ಪ್ರದೇಶಗಳಲ್ಲಿ ಬೆಳೆಗಳನ್ನು ಬೆಳೆಯಲಾಗುತ್ತಿತ್ತು. ಪ್ರಾಚೀನ ಕಾಲದಿಂದಲೂ ಬೆಳೆಯುವ ಕೃಷಿ ಉತ್ಪನ್ನಗಳು ಕೆಲವು ಬದಲಾವಣೆಗಳೊಂದಿಗೆ ಅದೇ ಬೆಳೆಗಳು ಕರ್ನಾಟಕದ ಅರಸುಮನೆತನಗಳ ಕಾಲದಲ್ಲಿಯೂ ಮುಂದುವರಿದಿವೆ. ಫಲವತ್ತತೆ ಮತ್ತು

ಅಲ್ಲಿನ ಭೌಗೋಳಿಕ ಪರಿಸರದ ಆಧಾರದ ಮೇಲೆ ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶದಲ್ಲಿ ಬೆಳೆಯುವ ಬೆಳೆಯಲ್ಲಿ ಭಿನ್ನತೆಯನ್ನು ಗುರುತಿಸಬಹುದಾಗಿದ್ದು, ರಾಜಮನೆತನಗಳು ಪ್ರಸ್ತುತ ಸಂದರ್ಭಕ್ಕೆ ಬೇಡಿಕೆ ಇರುವ ಕೃಷಿ ಉತ್ಪನ್ನಗಳನ್ನು ಅವಶ್ಯಕತೆಗೆ ಅನುಗುಣವಾಗಿ ಉತ್ಪನ್ನ ಮಾಡುತ್ತಿದ್ದರು. ಈ ಉತ್ಪನ್ನವು ಹೆಚ್ಚಾದಾಗ ವ್ಯಾಪಾರದ ಪ್ರಾಮುಖ್ಯತೆಯನ್ನು ಪಡೆದು ಸ್ಥಳೀಯ ಮಾರುಕಟ್ಟೆಗಳ ಮೂಲಕ ಸಂತೆಗಳಲ್ಲಿ ಪರಸ್ಪರ ವಿನಿಮಯ ಅಥವಾ ಆಯಾ ಸಂದರ್ಭದಲ್ಲಿ ಅಸ್ತಿತ್ವದಲ್ಲಿದ್ದ ನಾಣ್ಯಗಳಿಂದ ವಿನಿಮಯ ಮಾಡುತ್ತಿದ್ದರು. ಇದು ಸ್ಥಳೀಯ ಗ್ರಾಮೀಣ ಆರ್ಥಿಕತೆಯನ್ನು ತೋರ್ಪಡಿಸುತ್ತದೆ. ವಿಜಯನಗರೋತ್ತರ ಕಾಲಘಟ್ಟವು ಯುರೋಪಿಯನ್ನರ ಆಗಮನದ ಕಾಲವಾದ್ದರಿಂದ ಹಲವಾರು ಹೊಸ ಕೃಷಿ ಉತ್ಪನ್ನಗಳು ಕರ್ನಾಟಕಕ್ಕೆ ಪರಿಚಯವಾದವು.

ಭಾರತವು ಕೃಷಿಪ್ರಧಾನ ದೇಶವಾಗಿದ್ದು, ಒಕ್ಕಲುತನಕ್ಕೆ ಪ್ರಾಧಾನ್ಯತೆಯನ್ನು ಕೊಟ್ಟಿರುವುದನ್ನು ಅಲ್ಲಿನ ಶಾಸನ, ಸಾಹಿತ್ಯ ಕೃತಿಗಳಿಂದ ತಿಳಿಯಬಹುದು. ಕೃಷಿಯ ಮೂಲಕ ಮಾನವನು ತನ್ನ ದಿನ ನಿತ್ಯದ ಅವಶ್ಯಕತೆಗಳನ್ನು ಪೂರೈಸುವ ಸಲುವಾಗಿ ಹಲವಾರು ಉತ್ಪನ್ನಗಳನ್ನು ಉತ್ಪಾದಿಸತೊಡಗಿದನು. ಪ್ರಾಚೀನ ಕಾಲದ ಭಾರತದ ಚರಿತ್ರೆಯಲ್ಲಿ ಕೃಷಿ ಉತ್ಪನ್ನಗಳನ್ನು ಉತ್ಪಾದಿಸುವ ಪರಿಕಲ್ಪನೆಯು ಇಲ್ಲದಿದ್ದಾಗ ಅಲ್ಲಿಯ ಪ್ರಾಣಿಗಳನ್ನು ಕೊಂದು ಮಾಂಸವನ್ನು ಸಂಗ್ರಹಿಸಿ ತಮ್ಮ ಅವಶ್ಯಕತೆಯನ್ನು ಪೂರೈಸಿಕೊಳ್ಳುತ್ತಿದ್ದನು. ಆದರೆ ಹಂತದಿಂದ ಹಂತಕ್ಕೆ ಬೆಳವಣಿಗೆಯಾದ ನಂತರ ಕೃಷಿ ವಿಧಾನವನ್ನು ಅಳವಡಿಸಿಕೊಂಡು ತನಗೆ ಅಗತ್ಯವಾದ ವಸ್ತುಗಳನ್ನು ತಾನೇ ಉತ್ಪಾದಿಸತೊಡಗಿದನು. ಉತ್ಪಾದಿತ ವಸ್ತುಗಳು ಉಳಿದಾಗ ಅಥವಾ ಬೇರೆ ವ್ಯಕ್ತಿಗಳಿಗೆ ಅವಶ್ಯಕ ವಸ್ತುಗಳು ಬೇಕಾದಾಗ ಮಾರುವ ಮತ್ತು ಕೊಳ್ಳುವ ಪ್ರಕ್ರಿಯೆಗಳು ಉಗಮವಾದವು. ಹೀಗೆ ಆರಂಭದಲ್ಲಿ ವಸ್ತುಗಳಿಗೆ ಬದಲಾಗಿ ಮತ್ತೊಂದು ವಸ್ತುವಿನ ರೂಪದಲ್ಲಿ ವಿನಿಮಯ ಮಾಡಿಕೊಳ್ಳಲಾರಂಭಿಸಿದರು. ಕಾಲಾಂತರದಲ್ಲಿ ಆ ಕಾಲದಲ್ಲಿ ಚಲಾವಣೆಯಲ್ಲಿದ್ದ ಹಣವನ್ನು ಸಂದಾಯ ಮಾಡಿಕೊಳ್ಳುತ್ತಿದ್ದರು. ಹೀಗೆ ಕೃಷಿ ಉತ್ಪನ್ನಗಳು ಹೆಚ್ಚಾದಾಗ ವ್ಯಾಪಾರದ ಪರಿಕಲ್ಪನೆಯು ಬೆಳೆಯಲಾರಂಭಿಸಿತು.

ಕೆಳದಿ ನಾಯಕರು ವಿಜಯನಗರೋತ್ತರ ಕಾಲದಲ್ಲಿ ಪ್ರಮುಖವಾಗಿ ಗುರುತಿಸಿಕೊಂಡವರಾಗಿದ್ದರು. ಇವರು ಕೃಷಿಗೆ ವಿಶೇಷವಾದ ಪ್ರಾಮುಖ್ಯತೆಯನ್ನು ನೀಡಿದ್ದರು. ಆದ ಕಾರಣ ಇವರ ಸಾಮ್ರಾಜ್ಯದಲ್ಲಿ ಕರ್ನಾಟಕದ ಇತರೇ ಸಾಮ್ರಾಜ್ಯಗಳಲ್ಲಿರುವ ಬೆಳೆಯುವಂತೆ ಇವರ ಕಾಲದಲ್ಲಿಯೂ ಅದೇ ರೀತಿಯ ಕೃಷಿ ಉತ್ಪನ್ನಗಳನ್ನು ಅಭಿವೃದ್ಧಿಪಡಿಸಿದರು. ಮಾರಾಟದ ವಸ್ತುಗಳಾದ ಭತ್ತ, ಅಕ್ಕಿ, ರಾಗಿ, ಉಪ್ಪು, ಹುಣಸೆಹಣ್ಣು, ಬೇಳೆಕಾಳು, ತೆಂಗಿನಕಾಯಿ, ಈರುಳ್ಳಿ, ಜೀರಿಗೆ, ಖರ್ಜೂರ, ಅರಿಶಿಣ ಮೊದಲಾದ ಕೃಷಿ ಉತ್ಪನ್ನಗಳನ್ನು ಬೆಳೆಯಲಾರಂಭಿಸಿದರು(ಷೇಕ್ ಆಲಿ(೨).೨೦೧೮:೨೪೨). ಕೆಳದಿನಾಯಕರ ಆಳ್ವಿಕೆಯ ಕೃಷಿ ಉತ್ಪನ್ನಗಳಲ್ಲಿ ಮುಖ್ಯವಾದ ವಸ್ತುಗಳೆಂದರೆ ಸಂಬಾರ ಪದಾರ್ಥಗಳಾಗಿದ್ದವು. ಈ ಸಂಬಾರ ಪದಾರ್ಥಗಳಿಗೆ ವಿದೇಶದಲ್ಲಿ ಭಾರಿ ಬೇಡಿಕೆ ಇತ್ತು. ಕಾಳುಮೆಣಸಿಗೆ ರಾಜ್ಯದಲ್ಲಿ ಅಪಾರ ಬೇಡಿಕೆ ಇದ್ದು, ಇದರಿಂದ ರಾಜ್ಯಕ್ಕೆ ಹೆಚ್ಚಿನ ಆದಾಯ ಬರುತ್ತಿತ್ತು. ಕರಾವಳಿ ಕರ್ನಾಟಕ ಭಾಗಗಳಲ್ಲಿ ಶಿವಮೊಗ್ಗ, ಸಾಗರ ಹಾಗೂ ಗೇರುಸೊಪ್ಪೆಗಳಲ್ಲಿ

ಹೆಚ್ಚಿನ ಕರಿಮೆಣಸನ್ನು ಉತ್ಪಾದಿಸುತ್ತಿದ್ದರು. ಗೇರುಸೊಪ್ಪೆಯ ರಾಣಿ ಚನ್ನಭೈರಾದೇವಿ ಮೆಣಸಿನ ರಾಣಿಯೆಂದು ಕರೆಸಿಕೊಂಡಿದ್ದಳು.

ವಿಜಯನಗರೋತ್ತರ ಕಾಲಾವಧಿಯ ವೇಳೆಗೆ ಹಳ್ಳಿಯ ಪರಿಕಲ್ಪನೆಯು ಸಂಪೂರ್ಣವಾಗಿ ಬೆಳೆದಿತ್ತು. ಈ ಗ್ರಾಮವು ಸ್ವಯಂಪೂರ್ಣವಾಗಿದ್ದು ಜೀವನದ ಅಗತ್ಯಗಳನ್ನೆಲ್ಲ ತಾನೇ ಪೂರೈಸಿ ಕೊಳ್ಳುತ್ತಿತ್ತು. ಗ್ರಾಮಮಟ್ಟದಲ್ಲಿ ತಮ್ಮ ಉತ್ಪನ್ನಗಳನ್ನು ತಾವೇ ಬೆಳೆದು ಅಗತ್ಯವಿರುವಷ್ಟು ಶೇಖರಿಸಿ ಹೆಚ್ಚಿನದನ್ನು ಮಾರಾಟ ಮಾಡುವ ಪರಿಕಲ್ಪನೆಯು ಬೆಳವಣಿಗೆಯಾಗಿತು. ಕೆಳದಿ ನಾಯಕರು ಕೃಷಿ ಉತ್ಪನ್ನದಲ್ಲಿ ಮೆಣಸಿನ ಉತ್ಪನ್ನಕ್ಕೆ ಕೊಟ್ಟ ಮಹತ್ವವನ್ನು ಅಡಿಕೆ ಬೆಳೆಗೂ ಕೊಟ್ಟಿದ್ದರು. ಪಶ್ಚಿಮ ಕರಾವಳಿ ತೀರದಲ್ಲಿ ಪೋರ್ಚುಗೀಸರು ಸುಧಾರಿತ ರೀತಿಯ ತೆಂಗಿನ ಬೆಳೆಗೆ ಪ್ರಾಮುಖ್ಯತೆ ನೀಡಿದ್ದರು. ಕೃಷಿ ಭೂಮಿಯಲ್ಲಿ ತೋಟದ ಬೆಳೆಗಳನ್ನು ಅಭಿವೃದ್ಧಿಪಡಿಸಿ ಗೋವಾದಿಂದ ಕ್ರಿಶ್ಚಿಯನ್ನರನ್ನು ಈ ಬೆಳೆ ಬೆಳೆಯುವುದಕ್ಕೆ ಕರಾವಳಿಗೆ ಆಹ್ವಾನಿಸಿದ್ದರು(ಶಾಸ್ತ್ರಿ, ೧೯೭೨:೨೯). ಕ್ರಿ.ಶ.೧೬೮೧ರ ಕೊಡ್ಲಾಡಿಯ ಶಾಸನ ಹೇಳುವಂತೆ ಪಡುಕೋಣೆ, ಗಂಗೊಳ್ಳಿ ಪರದೇಶಗಳಲ್ಲಿ ನಷ್ಟವುಂಟಾಗದಾಗ ಈ ನಷ್ಟವನ್ನು ಹೋಗಲಾಡಿಸಲು ಕೆಳದಿ ರಾಣಿ ಚೆನ್ನಮ್ಮಾಜಿ ತೆಂಗಿನ ಕೃಷಿಯನ್ನು ಉತ್ತೇಜಿಸಿದ್ದಳು(ಅಸೆಟೊಂಸ್ಸ್, ೧, ಪುಟ-೯೯). ಈ ಮೂಲಕವಾಗಿ ಕರಾವಳಿ ಭಾಗದಲ್ಲಿ ಆರಂಭವಾದ ಕೃಷಿ ಉತ್ಪನ್ನದ ತೆಂಗಿನ ಬೆಳೆಯು ಕರ್ನಾಟಕ ಎಲ್ಲ ಭಾಗಗಳಲ್ಲಿ ಹೆಚ್ಚಾಗಿ ಗುರುತಿಸಬಹುದಾಗಿದ್ದು, ದಕ್ಷಿಣ ಕನ್ನಡ, ಉತ್ತರ ಕನ್ನಡ, ಮಂಡ್ಯ ಮತ್ತು ಮೈಸೂರು ಭಾಗಗಳಲ್ಲಿ ಅಡಿಕೆ ತೋಟದ ಬೆಳೆಯನ್ನು ಗುರುತಿಸಬಹುದು. ಅಡಿಕೆ ಬೆಳೆಯನ್ನು ಕುರಿತಂತೆ ಶಿವಪ್ಪನಾಯಕನು ಪ್ರತಿದಿನ ಊರ ಮುಂದಿರುವ ಗುಡ್ಡವನ್ನೇರಿ ಕೆಳಗೆ ವಿಸ್ತಾರವಾಗಿ ಹಬ್ಬಿರುವ ಅಡಿಕೆ ತೋಟದತ್ತ ದೃಷ್ಟಿಯನ್ನು ಹಾಯಿಸುತ್ತಿದ್ದರು. ಅಡಿಕೆ ಮರಗಳಿಗೆ ಹಬ್ಬಿ ಬೆಳೆದ ವೀಳ್ಯದ ಎಲೆಗಳ ಬೆಳೆಗಳನ್ನು ವೀಕ್ಷಿಸುವುದು ಅವನ ಕಾರ್ಯವಾಗಿತ್ತು(ತಿಪ್ಪೇರುದ್ರಸ್ವಾಮಿ೧೯೬೪:೯೨).

ತೋಟದ ಬೆಳೆಗಳಲ್ಲಿ ತೆಂಗು, ದ್ರಾಕ್ಷಿ, ಗಂಧದ ಮರ ಬೆಳೆಗಳು ಪ್ರಮುಖವಾಗಿವೆ. ಆಹಾರದ ಬೆಳೆಯಾಗಿ ಜೋಳ, ಭತ್ತ ಇನ್ನೂ ಹಲವು ಕೃಷಿ ಉತ್ಪನ್ನಗಳನ್ನು ಇವರು ಅಳವಡಿಸಿಕೊಂಡಿದ್ದರು. ಭತ್ತ ಗದ್ದೆಯ ನೀರಾವರಿ ಅಶ್ರಿತ ಬೆಳೆಯಾಗಿದ್ದು ಆರು ತಿಂಗಳಿಗೆ ಬೆಳೆಯುವ ಬೆಳೆಯಾಗಿದೆ. ಕರ್ನಾಟಕದಲ್ಲಿ ಎಲ್ಲ ಭಾಗಗಳಲ್ಲಿ ಬೆಳೆಯುವ ಭತ್ತವು ಮಲೆನಾಡಿನಿಂದ ಕರಾವಳಿ ಪ್ರದೇಶಕ್ಕೆ ರಫ್ತು ಆಗುತ್ತಿತ್ತು. ಪೋರ್ಚುಗೀಸರು ಕರ್ನಾಟಕದ ಭತ್ತದ ಬೆಳೆಯಲ್ಲಿ ಹೊಸ ತಳಿಗಳನ್ನು ಪರಿಚಯಿಸುವ ಮೂಲಕ ಭತ್ತವು ೧೬-ನೇ ಶತಮಾನದಲ್ಲಿ ಪ್ರಮುಖ ಬೆಳೆಯಾಗಿ ಗುರುತಿಸುವಂತೆ ಮಾಡಿದರು. ಕರ್ನಾಟಕದ ಕರಾವಳಿ ಭಾಗದಿಂದ ಗೋವಾಕ್ಕೆ ಅಕ್ಕಿಯು ಈ ಕಾಲಘಟ್ಟದಲ್ಲಿ ಪ್ರಮುಖ ಕೃಷಿ ಉತ್ಪನ್ನವಾಗಿ ಗುರುತಿಸಿಕೊಳ್ಳುತ್ತದೆ. ಕರಾವಳಿ ಭಾಗವು ಭತ್ತದ ಬೆಳೆಗೆ ಫಲವತ್ತಾದ ಭೂಮಿಯಾಗಿತ್ತು. ಬಸ್ರೂರು ಭತ್ತದ ಬೆಳೆಗೆ ಫಲವತ್ತಾದ ಭೂಮಿಯಾಗಿತ್ತು. ಬಸ್ರೂರು ಬಂದರನ್ನು ಭತ್ತದ ಮಾರುಕಟ್ಟೆಯ ಕೇಂದ್ರದ ವಾತಾವರಣವನ್ನು ಪೋರ್ಚುಗೀಸರು ನಿರ್ಮಿಸಿದ್ದರು. ರಾಗಿ ಬೆಳೆಯನ್ನು ಬೆದ್ದಲು ಭೂಮಿಯಲ್ಲಿ ಬೆಳೆಯುತ್ತಿದ್ದು ಗ್ರಾಮೀಣ ಜನರ ಮುಖ್ಯ ಆಹಾರದ ಬೆಳೆಯಾಗಿತ್ತು. ಅಕ್ಕಿ, ಭತ್ತ,

ರಾಗಿ, ಹುಣಸೆ, ಬೇಳೆ, ಬೆಲ್ಲ, ತೆಂಗು, ಹೊಗೆಸೊಪ್ಪು, ಖರ್ಜೂರ, ಇಂಗು, ಜೀರಿಗೆ, ಈರುಳ್ಳಿ, ಬೆಳ್ಳುಳ್ಳಿ, ಅರಿಶಿಣ, ಶುಂಠಿ, ಅಡಿಕೆ, ಮೆಣಸು, ವೀಳ್ಯದೆಲೆ, ಸಾಸಿವೆ, ಮೆಂತ್ಯ, ಏಲಕ್ಕಿ, ಗಂಧ, ಉತ್ತುತ್ತಿ, ಕಾಯಿಕತ್ತ, ಇವು ಕೆಳದಿ ನಾಯಕರ ಪ್ರಮುಖ ಕೃಷಿ ಉತ್ಪನ್ನಗಳಾಗಿದ್ದವು(ಜೋಯಿಸರು, ಕೆ.ಶಾ.ಸಾ.ಅ,೧೯೯೬:೨೦೮). ಕೆಳದಿ ನಾಯಕರು ಮಲೆನಾಡ ಭಾಗದಲ್ಲಿ ಆಳ್ವಿಕೆ ಮಾಡಿದ್ದರಿಂದ ಅಡಿಕೆ ಮತ್ತು ಸಾಂಬಾರು ಪದಾರ್ಥಗಳಿಗೆ ನೀಡಿದ ಮಹತ್ವವನ್ನು ಬೇರೆ ಕೃಷಿ ಉತ್ಪನ್ನಗಳಿಗೆ ಹೆಚ್ಚು ಆದ್ಯತೆ ನೀಡಲಿಲ್ಲ. ಕಾರಣ ಪೋರ್ಚುಗೀಸರು ಮತ್ತು ಇಂಗ್ಲಿಶರ ಕಂಪನಿಗಳು ಇಲ್ಲಿ ಸಂಬಾರು ಪದಾರ್ಥಗಳನ್ನು ಬೆಳೆಯಲು ಪ್ರೋತ್ಸಾಹವನ್ನು ನೀಡಿದ್ದರು. ಈ ಮೂಲಕ ಕರಾವಳಿ ಕರ್ನಾಟಕದಲ್ಲಿ ಕೃಷಿ ಭೂಮಿ ವಿಸ್ತರಣೆಯಾಗಿದೆ. ತುಳುನಾಡಿನಲ್ಲಿ ಕರಾವಳಿ ಭಾಗದಲ್ಲಿ ಬೆಳೆಯುತ್ತಿದ್ದ ಕರಿಮೆಣಸು ಉತ್ತಮ ದರ್ಜೆಯಿಂದ ಕೂಡಿದ್ದಾಗಿದ್ದು. ಯುರೋಪಿನಲ್ಲಿ ಈ ಮೆಣಸಿಗೆ ಅಪಾರ ಬೇಡಿಕೆ ಇತ್ತು. ಗೇರುಸೊಪ್ಪೆ ಬಂದರಲ್ಲಿ ಅತಿ ಹೆಚ್ಚು ಕರಿಮೆಣಸು ವ್ಯಾಪಾರವಾಗುತ್ತಿತ್ತು. ಆದ್ದರಿಂದ ಪೋರ್ಚುಗೀಸರು ಗೇರುಸೊಪ್ಪೆಯ ಮೇಲೆ ಕಣ್ಣು ಹಾಯಿಸಿದ್ದು ಚನ್ನ ಬೈರಾದೇವಿಯನ್ನು ಕರಿಮೆಣಸಿನ ರಾಣಿಯೆಂದೇ ಕರೆದರು.

ಮೆಣಸಿನ ಉತ್ಪನ್ನಕ್ಕೆ ರಾಜ್ಯದಲ್ಲಿ ಹೆಚ್ಚಿನ ತೆರಿಗೆಯನ್ನು ಹಾಕಲಾಗುತ್ತಿತ್ತು. ವಿಜಯನಗರ ಮತ್ತು ವಿಜಯನಗರೋತ್ತರ ಕಾಲಾವಧಿಯಲ್ಲಿ ಸಂಬಾರು ಪದಾರ್ಥಗಳು ಮತ್ತು ಕರಿಮೆಣಸಿಗೆ ಅಪಾರವಾದ ಬೇಡಿಕೆ ಇತ್ತು. ಭಾರತ ವಸಾಹತುವಾಗಿ ಮಾರ್ಪಾಟ್ಟ ಮೊದಲ ಹಂತದಲ್ಲಿ ಕರಿಮೆಣಸಿನ ವ್ಯಾಪಾರಕ್ಕೆ ಹೆಚ್ಚಿನ ಪ್ರೋತ್ಸಾಹವನ್ನು ನೀಡಿದ್ದರು. ಆದರೆ ಎರಡನೇ ಹಂತದ ಈಸ್ಟ್ ಇಂಡಿಯಾ ಕಂಪನಿಯ ಬೆಳವಣಿಗೆಯನ್ನು ಗಮನಿಸಿದರೆ ಹತ್ತಿ ಬೆಳೆಗೆ ಹೆಚ್ಚಿನ ಮಹತ್ವ ನೀಡಿದ್ದರು. ಕೆಳದಿಯ ನಾಯಕರ ಕಾಲದಲ್ಲಿ ಹತ್ತಿ ಬೆಳೆಯ ಉತ್ಪಾದನೆಯು ಅಸ್ತಿತ್ವದಲ್ಲಿದ್ದು ಆದರೆ ಭೌಗೋಳಿಕ ಪರಿಸರದ ಹಿನ್ನೆಲೆಯಲ್ಲಿ ಹತ್ತಿ ಬೆಳೆಯು ಅಲ್ಲಿ ಮಹತ್ವವನ್ನು ಪಡೆಯಲಿಲ್ಲ. ಭಾರತವನ್ನು ವಸಾಹತಾಗಿ ಮಾಡಿಕೊಂಡ ನಂತರ ಬಯಲುಸೀಮೆ ಪ್ರದೇಶದಿಂದ ಬೆಳೆದ ಹತ್ತಿಯನ್ನು ಕರಾವಳಿಗೆ ರಫ್ತು ಮಾಡುತ್ತಿದ್ದರು. ಹತ್ತಿ ಮಾರುಕಟ್ಟೆಯ ಕೇಂದ್ರವಾಗಿ ಗುರುತಿಸಿಕೊಂಡಿದೆಯೇ ವಿನಾ ಬೆಳೆಯಿಂದ ಪ್ರಾಮುಖ್ಯತೆ ಪಡೆದಿಲ್ಲ.

ಭತ್ತದ ಬೆಳೆಯು ಈ ಕಾಲದಲ್ಲಿ ಪ್ರಮುಖ ಬೆಳೆಯಾಗಿತ್ತು ಶಿವಪ್ಪನಾಯಕನು ಬೆಳೆದ ಬೆಳೆಯನ್ನು ಗದ್ದೆಗಳ ಅಂಚಿನಲ್ಲಿ ನಿಂತು ತುಂಬು ತೆನೆಗಳಿಂದ ಕೂಡಿದ ಬಾಗಿದ ಭತ್ತದ ಪೈರನ್ನು ನೋಡುತ್ತಾ ಮೈಮರೆತು ಬಿಡುತ್ತಿದ್ದನು(ತಿಪ್ಪೇರುದ್ರಸ್ವಾಮಿ, ೧೯೬೪:೯೨). ಕೆಳದಿ ನಾಯಕರ ಆಳ್ವಿಕೆಯ ಪ್ರದೇಶವು ಮಲೆನಾಡು ಮತ್ತು ಅರೆಮಲೆನಾಡು ಎರಡು ಪ್ರದೇಶವನ್ನು ಒಳಗೊಂಡಿದ್ದರಿಂದ ಅಲ್ಲಿಯ ಕೃಷಿ ಉತ್ಪನ್ನದಲ್ಲಿಯೂ ವ್ಯತ್ಯಾಸವಿತ್ತು. ಕಾರಣ ಮಲೆನಾಡಿನ ನಿಗದಿಪಡಿಸಿದ ಭೂಮಿಯಲ್ಲಿ ಹೆಚ್ಚಿನ ಆದಾಯ ಬಂದರೆ ಅರೆಮಲೆನಾಡಿನ ನಿಗದಿಪಡಿಸಿದ ಭೂಮಿಯಲ್ಲಿ ಕಡಿಮೆ ಆದಾಯ ಬರುತ್ತಿತ್ತು. ಆದ್ದರಿಂದ ರೈತರು ಬೆಳೆದ ಕೃಷಿ ಉತ್ಪನ್ನದಲ್ಲಿ ಯಾರಿಗೂ ತೊಂದರೆಯಾಗಬಾರದೆಂಬ ಅಭಿಮತದಿಂದ ಈ ರೀತಿಯ ವಿಧಾನವನ್ನು ಕೆಳದಿಯ ನಾಯಕರು ತಮ್ಮದೇ ಆದ ಕಂದಾಯ ನಿಗದಿ ಮತ್ತು ವಸೂಲಿಯನ್ನು ಅಳವಡಿಸಿಕೊಂಡಿದ್ದರು.

ಕೆಳದಿ ನಾಯಕರ ಕಾಲದಲ್ಲಿ ಈ ಉತ್ಪನ್ನಗಳನ್ನು ಮಾರಾಟ ಮಾಡಲು ಮಾರುಕಟ್ಟೆಗಳನ್ನು ಸ್ಥಾಪಿಸಿದ್ದರು. ೧೮ನೇ ಶತಮಾನದಲ್ಲಿ ಕವಲೇದುರ್ಗವು ಪ್ರಮುಖ ಕೃಷಿ ಉತ್ಪನ್ನಗಳ ಮಾರುಕಟ್ಟೆಯಾಗಿದ್ದಿತ್ತು. ಇಕ್ಕೇರಿಯಲ್ಲಿ ಭತ್ತದ ಪೇಟೆ ಇದ್ದು, ಅಲ್ಲಿ ಭತ್ತದ ವ್ಯಾಪಾರ ಪ್ರಮುಖವಾಗಿ ನಡೆಯುತ್ತಿತ್ತು. ಇಲ್ಲಿ ಗಮನಿಸಬೇಕಾದ ಒಂದು ಅಂಶವೆಂದು ಅಂದು ಯಾವ ಬೆಳೆ ಪ್ರಸಿದ್ಧವಾಗಿರುತ್ತದೆಯೋ ಅದೇ ಹೆಸರನ್ನು ಪೇಟೆಗೆ ಇಟ್ಟಿದ್ದಾರೆ. ಉತ್ತರ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಅಕ್ಕಿಯು ವಿಪುಲವಾಗಿ ಉತ್ಪಾದನೆಯಾಗುತ್ತಿತ್ತು. ಕಾರವಾರ, ಮಂಗಳೂರು, ಹೊನ್ನಾವರ, ಭಟ್ಕಳ ಬಂದರುಗಳಿಂದ ಈ ಅಕ್ಕಿ ವ್ಯಾಪಾರ ನಡೆಯುತ್ತಿತ್ತು. ಹಾಗೆಯೇ ಸಾಮಾನ್ಯ ಜನರು ಉಪಯೋಗಿಸುತ್ತಿದ್ದ ಒರಟಾದ ದಪ್ಪ ಅಕ್ಕಿಗೆ ೧೬ನೇ ಶತಮಾನದಲ್ಲಿ ಮಲಬಾರ್‌ಗೆ ಅಪಾರವಾಗಿ ಬೇಡಿಕೆ ಇತ್ತು. ಮಲಬಾರಿಗಳು ಮಿರ್ಜಾನ್‌ನಿಂದ ಆ ಅಕ್ಕಿಯನ್ನು ಒಯ್ಯುತ್ತಿದ್ದರು(ಷೇಕ್‌ಅಲಿ.ಶಿ, ೨೦೧೮:೩೧೧). ಈ ದಪ್ಪ ಅಕ್ಕಿಯ ಜೊತೆ ಪೋರ್ಚುಗೀಸರು ಹೊಸ ಅಕ್ಕಿಯ ತಳಿಗಳನ್ನು ಕರ್ನಾಟಕಕ್ಕೆ ಪರಿಚಯಿಸಿದರು. ಸಂಕಣ್ಣನಾಯಕನ ಆಳ್ವಿಕೆಯ ಕಾಲದ ಶಾಸನವೊಂದು ಎಂಟು ಮಂದಿ ಬ್ರಾಹ್ಮಣರಿಗೆ ಕೇಶವ ಅಧಿಕಾರಿಯು ೧೬೦ ಖಂಡುಗ ಭತ್ತ ಕೊಡುವ ಭೂಮಿಯನ್ನು ದಾನವಾಗಿ ನೀಡಿದ್ದನ್ನು ತಿಳಿಸುತ್ತದೆ(ವೆಂಕಟೇಶ್,೧೯೯೧:೧೪೪).

ಆಹಾರ ಬೆಳೆ ಮತ್ತು ವಾಣಿಜ್ಯ ಬೆಳೆ ಎಂದು ಎರಡು ರೀತಿಯ ಬೆಳೆಗಳನ್ನು ಈ ಕಾಲಾವಧಿಯಲ್ಲಿ ಬೆಳೆಯಲಾಗುತ್ತಿತ್ತು. ಆಹಾರಧಾನ್ಯದ ಬೆಳೆಗಳಿಗೆ ಸರ್ಕಾರದಿಂದ ವಿಶೇಷ ರೀತಿಯಾದ ಪ್ರಾಮುಖ್ಯತೆ ನೀಡಿದ್ದರು. ಆದರೆ ವಾಣಿಜ್ಯ ಬೆಳೆಗಳಿಗೆ ಹೆಚ್ಚಿನ ಕಂದಾಯವನ್ನು ವಿಧಿಸಿ ಸೂಕ್ತ ವಿಧಾನಗಳ ಮೂಲಕ ಬೆಳೆಯುತ್ತಿದ್ದರು. ಕಾರಣ ಕಂಪನಿಯಲ್ಲಿ ವಾಣಿಜ್ಯ ಬೆಳೆ ಬೆಳೆಯುವುದಕ್ಕೆ ಸೂಕ್ತ ಸಲಹೆ ಸೂಚನೆಗಳನ್ನು ನೀಡುತ್ತಿದ್ದರು. ಕೆಳದಿ ನಾಯಕರ ಆಳ್ವಿಕೆಯಲ್ಲಿ ಬೆಳೆಯುತ್ತಿದ್ದ ಕರಿಮೆಣಸಿಗೆ ಅಪಾರ ಬೇಡಿಕೆ ಇತ್ತು. ಆದ್ದರಿಂದ ವ್ಯಾಪಾರ ವಿದೇಶಗಳೊಂದಿಗೆ ನಡೆಯುತ್ತಿದ್ದು, ಕಾಳು ಮೆಣಸಿನ ಬೆಳೆಗೆ ಯುರೋಪಿಯನ್ನರ ಸಲಹೆ ದೊರೆಯುತ್ತಿತ್ತು. ಆದ್ದರಿಂದ ಸ್ಥಳೀಯ ರಾಜಮನೆತನಗಳು ಅವುಗಳನ್ನು ಅಳವಡಿಸಿಕೊಂಡಿದ್ದವು ಎಂಬುದನ್ನು ಅಲ್ಲಿನ ಸಾಹಿತ್ಯಾಧಾರ, ಶಾಸನಾಧಾರಗಳಿಂದ ತಿಳಿಯಬಹುದು. ಯುರೋಪಿಯನ್ನರು ಕೆಲವು ಹೊಸ ಬೆಳೆಗಳನ್ನು ಬೆಳೆಯುವುದರ ಜೊತೆಗೆ ಈಗಾಗಲೇ ಇರುವ ಬೆಳೆಗಳನ್ನು ಬೆಳೆಯಲೂ ಅವಕಾಶವನ್ನು ಒದಗಿಸಿದ್ದರು.

ವಿಜಯನಗರೋತ್ತರ ಕಾಲದಲ್ಲಿ ಅಸ್ತಿತ್ವಕ್ಕೆ ಬಂದ ಮನೆತನಗಳಲ್ಲಿ ಚಿತ್ರದುರ್ಗದ ನಾಯಕ ಮನೆತನವೂ ಒಂದು. ಕರ್ನಾಟಕದಲ್ಲಿ ಇತರೇ ಪ್ರದೇಶದಲ್ಲಿ ಬೆಳೆಯುವಂತೆ ಚಿತ್ರದುರ್ಗದ ಪ್ರದೇಶದಲ್ಲಿಯೂ ಆಹಾರದ ಬೆಳೆ, ವಾಣಿಜ್ಯದ ಬೆಳೆ ಮತ್ತು ತೋಟದ ಬೆಳೆಗಳನ್ನು ಬೆಳೆಯುತ್ತಿದ್ದರು. ತೋಟದ ಬೆಳೆಗೆ ಇವರು ಹೆಚ್ಚಿನ ಮಹತ್ವ ಕೊಟ್ಟಿದ್ದರು. ಮಾವಿನ ತೋಟ, ಬಾಳೆತೋಟ, ಹೂವಿನ ತೋಟ, ತೆಂಗಿನ ತೋಟ, ಅಡಿಕೆ ತೋಟ ಎಂದು ವಿಭಾಗಿಸಿದ್ದನ್ನು ಶಾಸನಗಳಿಂದ ತಿಳಿಯಬಹುದು(ಸಂತೋಷ, ೨೦೦೯:೭೯). ಚಿತ್ರದುರ್ಗ ಪರಿಸರದಲ್ಲಿ ನಾಯಕರ ಕಾಲದಿಂದಲೇ ಬೆಳವಣಿಗೆಯನ್ನು ಪಡೆದುಕೊಂಡಿದ್ದ ಹೂತೋಟದ ಬೆಳೆಯು ಸಂತೆ ಹೊಂಡದ ಹತ್ತಿರ ಪ್ರಸ್ತುತ

ವ್ಯಾಪಾರಿ ಮಾರುಕಟ್ಟೆಯಿದ್ದು, ಸುತ್ತಮುತ್ತಲಿನ ಪ್ರದೇಶಗಳಿಂದ ಹೂವಿನ ಬೆಳೆಯು ವ್ಯಾಪಾರಕ್ಕೆ ಚಿತ್ರದುರ್ಗ ಪ್ರದೇಶಕ್ಕೆ ಬರುತ್ತಿರುವುದನ್ನು ಗಮನಿಸಬಹುದಾಗಿದೆ. ಚಿತ್ರದುರ್ಗ ಪ್ರದೇಶದಲ್ಲಿ ಈ ತೋಟದ ಪರಿಕಲ್ಪನೆ ಇದ್ದಿದ್ದರಿಂದ ತೆಂಗು, ಬಾಳೆ, ಮಾವು, ಸೀಬೆ, ನಿಂಬೆ, ಅಡಿಕೆ, ಮುಂತಾದ ಬೆಳೆಗಳನ್ನು ಬೆಳೆಯುತ್ತಿದ್ದಿರು. ಚಿತ್ರದುರ್ಗ ಪ್ರದೇಶದ ಚಂದ್ರವಳ್ಳಿ ಸುತ್ತಮುತ್ತಲಿನ ಭಾಗಗಳು ಈಗಲೂ ತೆಂಗಿನ ಬೆಳೆಗೆ ಪ್ರಸಿದ್ಧಿಯನ್ನು ಪಡೆದಿವೆ. ಹೊಳಲ್ಕೆರೆ, ಚನ್ನಗಿರಿ ಹೊಸದುರ್ಗ ಮತ್ತು ಹಿರಿಯೂರು ಭಾಗಗಳಲ್ಲಿ ತೆಂಗಿನ ತೋಟಗಳು ಇಂದಿಗೂ ತಮ್ಮ ಉತ್ಪನ್ನಗಳನ್ನು ಬೆಳೆಯುತ್ತಿವೆ. ಕ್ರಿ.ಶ.೧೬೮೮ರಲ್ಲಿ ಚಿತ್ರದುರ್ಗವನ್ನಾಳಿದ ರಾಜ ಬಿಚ್ಚುಗತ್ತಿ ಭರಮಪ್ಪನಾಯಕನು ನೀರ್ಥಡಿಯ ಶ್ರೀರಂಗನಾಥ ಸ್ವಾಮಿಯ ದೇವಾಲಯ ಜೀರ್ಣೋದ್ಧಾರ ಮಾಡಿ ಆ ದೇವರಿಗೆ ಎರಡು ಮಮಸ್ತೆ ತೋಟವನ್ನು ದತ್ತಿ ಬಿಟ್ಟಿದ್ದನು. ಈ ಮೂಲಕ ಫಲವತ್ತತೆಯನ್ನು ಹೊಂದಿದ ತೋಟದ ಬೆಳೆಯು ಅಸ್ತಿತ್ವದಲ್ಲಿದ್ದು, ಈ ತೋಟಗಳ ಬೆಳವಣಿಗೆಗೆ ಸರ್ಕಾರದಿಂದಲೇ ಹೆಚ್ಚಿನ ಆದ್ಯತೆಯನ್ನು ನೀಡುತ್ತಿದ್ದರೆಂದು ಹೇಳಬಹುದು(ಎ.ಕ.೧೧, ದಾ.೬೪). ಆದರೆ ಈ ಶಾಸನದ ಯಾವ ತೋಟದ ಬೆಳೆ ಎಂದು ಸ್ಪಷ್ಟಪಡಿಸಿಲ್ಲ.

ರಾಗಿಯು ಈ ಕಾಲದ ಪ್ರಮುಖ ಆಹಾರ ಬೆಳೆಯಾಗಿದ್ದು. ಇದು ದಕ್ಷಿಣ ಕರ್ನಾಟಕದ ಮುಖ್ಯ ಆಹಾರದ ಬೆಳೆಯಾಗಿತ್ತು. ರಾಗಿಯ ಮಹತ್ವವನ್ನು ವಿಜಯನಗರ ಕಾಲದಲ್ಲಿ ದಾಸ ಸಾಹಿತ್ಯವಲ್ಲಿ ವಿವರವಾಗಿ ತಿಳಿಸಿದ್ದಾರೆ. ಕನಕದಾಸರು ತಮ್ಮ ರಾಮಧಾನ್ಯ ಚರಿತ್ರೆಯಲ್ಲಿ ಭತ್ತ ಹಾಗೂ ರಾಗಿಗಳ ವಾಗ್ವಾದದ ಮೂಲಕ ಭತ್ತ ಶ್ರೀಮಂತರ ಧಾನ್ಯ, ರಾಗಿ ಬಡವರ ಧಾನ್ಯ ಎಂಬುದನ್ನು ಹೇಳಿದ್ದಾರೆ. ರಾಗಿಯನ್ನು ಪೊಗಳಿದವರಲ್ಲಿ ಮುನಿವರರು(ಕನಕದಾಸರ ಕೀರ್ತನೆಗಳು :೧೩೬) ಹೀಗೆ ದಕ್ಷಿಣ ಕರ್ನಾಟಕದಲ್ಲಿ ರಾಗಿಯು ಮಹತ್ವವಾಗಿದ್ದು, ಚಿತ್ರದುರ್ಗವು ಕಡಿಮೆ ಮಳೆ ಬೀಳುವ ಪ್ರದೇಶವಾದ್ದರಿಂದ ಈ ಪ್ರದೇಶದಲ್ಲಿ ರಾಗಿಯನ್ನು ಹೆಚ್ಚಿನದಾಗಿ ಬೆಳೆಯುತ್ತಿದ್ದರು. ಪ್ರಸ್ತುತ ಸಂದರ್ಭದಲ್ಲಿ ಮಧ್ಯಕರ್ನಾಟಕದ ಭಾಗವಾದ ಚಿತ್ರದುರ್ಗದ ಪ್ರದೇಶದಲ್ಲಿ ರಾಗಿಯು ಪ್ರಮುಖ ಬೆಳೆಯಾಗಿ ಬೆಳೆಯುತ್ತಿದ್ದು, ಬುಡಕಟ್ಟು ಜನರೆ ಹೆಚ್ಚಾಗಿ ನೆಲೆಸಿರುವುದರಿಂದ ಇವರ ಮುಖ್ಯ ಆಹಾರವು ಇದಾಗಿದೆ.

ಚಿತ್ರದುರ್ಗದ ಪ್ರದೇಶವು ಕೆಂಪು, ಕಪ್ಪು ಮಿಶ್ರಿತ ಭೂಮಿಯಾಗಿದೆ. ಇಲ್ಲಿ ಹೊಲವನ್ನು ಉಳಲು ಭಾರೀ ಪ್ರಮಾಣದ ನೇಗಿಲು ಹಾಗೂ ಎಂಟರಿಂದ ಹನ್ನೆರಡು ಎತ್ತುಗಳನ್ನು ಬಳಸುತ್ತಾರೆ. ಈ ಪ್ರದೇಶದಲ್ಲಿ ಜೋಳ, ನವಣೆ, ರಾಗಿ, ಸಜ್ಜೆ, ಹತ್ತಿ ಬೆಳೆಯುತ್ತಾರೆ ಎಂದು ಬುಕಾನನ್ ತಿಳಿಸಿದ್ದಾರೆ(ಬುಕಾನಾನ್,(೩,)೨೦೧೦:೩೪೩).

ಇವರ ಆಳ್ವಿಕೆಯಲ್ಲಿ ಕೃಷಿ ಭೂಮಿಯ ವಿಂಗಡಣೆಯನ್ನು ಬೆಂಜಮಿನ್ ಮತ್ತು ದಿ ಸ್ಯಾಟಿಸ್ಟಿಕಲ್ ಪ್ರಾಂಗ್‌ಮೆಂಟ್ಸ್ ಆಫ್ ಮೈಸೂರು ವರದಿಯನ್ನು ಆಧರಿಸಿ ಕೃಷಿ ಭೂಮಿಯನ್ನು ಎಂಟು ವಿಭಾಗಗಳಲ್ಲಿ ವಿಂಗಡಿಸಿದ್ದರು. ಭೂಮಿಯ ಫಲವತ್ತತೆಯ ಆಧಾರದ ಮೇಲೆ ಬೆಳೆಯನ್ನು ಬೆಳೆಯಲಾಗುತ್ತಿತ್ತು. ಕಪ್ಪುಮಣ್ಣು ಫಲವತ್ತಾದ ಮಣ್ಣಾಗಿದ್ದು, ಇದನ್ನು ಎರೆಹೊಲ ಎಂದು ಕರೆಯುತ್ತಾರೆ.

ಈ ಎರೆಭೂಮಿಯಲ್ಲಿ ಸಜ್ಜೆ ಮತ್ತು ಹತ್ತಿಯನ್ನು ಬೆಳೆಯುತ್ತಿದ್ದರು. ಈ ಬೆಳೆಯ ಆಧಾರದ ಮೇಲೆ ವಾಣಿಜ್ಯ ಬೆಳೆಗಳನ್ನು ಉತ್ಪನ್ನ ಮಾಡುವುದಕ್ಕೆ ಪ್ರೋತ್ಸಾಹವನ್ನು ನೀಡಿದ್ದರೆಂಬುದು ಸ್ಪಷ್ಟವಾಗುತ್ತದೆ(ದೇಶಪಾಂಡೆ, ೧೯೭೯:೧೦೫). ಹತ್ತಿಯು ಈ ಭಾಗದ ಮುಖ್ಯ ವಾಣಿಜ್ಯ ಬೆಳೆಯಾಗಿದ್ದು, ಇಂಗ್ಲಿಶರು ಹತ್ತಿಯ ಉತ್ಪನ್ನಕ್ಕೆ ವಸಾಹತುಕಾಲಘಟ್ಟದಲ್ಲಿ ವಿಶೇಷವಾದ ಪ್ರೋತ್ಸಾಹವನ್ನು ನೀಡಿದ್ದರು. ಒಂದು ಕಾಲಘಟ್ಟದವರೆಗೂ ಕರ್ನಾಟಕದಲ್ಲಿ ಬೆಳೆಯುವ ಹತ್ತಿಗೆ ಅಪಾರವಾದ ಬೇಡಿಕೆ ಇದ್ದು ತಂದನಂತರ ಕಾಲದಲ್ಲಿ ಅವರ ಗಮನ ಇಂಡಿಗೋ ಬೆಳೆಗೆ ಪರಿವರ್ತನೆಯಾಗಿರುವುದನ್ನು ಗಮನಿಸಬಹುದಾಗಿದೆ. ಸಜ್ಜೆಯು ಔಷಧಿ ಉತ್ಪನ್ನಕ್ಕೆ ಪ್ರಮುಖವಾಗಿದ್ದು, ಇದನ್ನು ವಾಣಿಜ್ಯ ಬೆಳೆಯಾಗಿ ಪರಿಗಣಿಸಬಹುದಾಗಿದೆ. ಬಯಲುಸೀಮೆಯ ಪ್ರದೇಶವಾದ ಇಲ್ಲಿ ಕಡಿಮೆ ಮಳೆ ಬೀಳುವ ಪ್ರದೇಶವಾದ್ದರಿಂದ ಹತ್ತಿ ಬೆಳೆಯಲು ಯೋಗ್ಯ ಪ್ರದೇಶವಾಗಿದೆ.

ಬುಕಾನನ್ ಹೇಳುವಂತೆ ಧಾರಾಕಾರವಾದ ಮಳೆ ಬಂದ ನಂತರ ಯಾರೂ ಆ ಜಿಗುಟು ಮಣ್ಣಿನಲ್ಲಿ ಹೋಗಲು ಸಾಧ್ಯವಿಲ್ಲ. ಈ ಪ್ರದೇಶವು ಅಷ್ಟು ಗಡುಸಾಗಿದ್ದು ಉಳುಮೆ ಎರಡು ಮೂರು ವರ್ಷಕ್ಕೊಮ್ಮೆ ಮಾಡಬೇಕಾಗುತ್ತದೆ. ಈ ರೀತಿಯ ಭೂಮಿಗೆ ಯಾವುದೇ ಗೊಬ್ಬರದ ಅಗತ್ಯವಿಲ್ಲ. ಆದರೆ ಈ ಭಾಗದಲ್ಲಿ ಜೋಳ ಮತ್ತು ನವಣೆ ಬೆಳೆಯನ್ನು ಬೆಳೆಯುವುದಕ್ಕೆ ಅವಕಾಶವನ್ನು ಕೊಡುತ್ತಿದ್ದರು(ಬುಕಾನನ್, (೩:)೨೦೧೦:೪೩೯). ಈ ಮೂಲಕವಾಗಿ ಜೋಳ ಮತ್ತು ನವಣೆ ಬೆಳೆಯು ಪ್ರಮುಖ ಆಹಾರ ಬೆಳೆಯಾಗಿದ್ದು ಆರೋಗ್ಯಕರ ಆಹಾರಕ್ಕೆ ಈ ಕೃಷಿ ಉತ್ಪನ್ನಗಳನ್ನು ಬೆಳೆಯುತ್ತಿದ್ದರು. ಚಿತ್ರದುರ್ಗ ಪ್ರದೇಶದಲ್ಲಿ ಪ್ರಸ್ತುತ ದಿನಗಳಲ್ಲಿ ಪೋರ್ಚುಗೀಸರು ಪರಿಚಯಿಸಿದ ಮುಸುಕಿನ ಜೋಳವನ್ನು ಹೆಚ್ಚಾಗಿ ಬೆಳೆಯುತ್ತಿದ್ದಾರೆ.

ಚಿತ್ರದುರ್ಗದ ಪ್ರದೇಶವು ಬಯಲುಸೀಮೆಯ ಪ್ರದೇಶವಾಗಿದ್ದು ವಸಾಹತು ಕಾಲಘಟ್ಟದಲ್ಲಿ ವಾಣಿವಿಲಾಸ ಸಾಗರ ಅಣೆಕಟ್ಟು ನಿರ್ಮಾಣ ಬಿಟ್ಟರೆ ಯಾವುದೇ ಜೀವನದಿಗಳು ಇಲ್ಲಿ ಹರಿಯುವುದಿಲ್ಲ. ಹಾಗಾಗಿ ಈ ಭಾಗದಲ್ಲಿ ಭತ್ತದ ಬೆಳೆಯು ಕಡಿಮೆ ಪ್ರಮಾಣದಲ್ಲಿ ಕಂಡುಬರುತ್ತದೆ(ದೇಶಪಾಂಡೆ, ೧೯೭೯:೧೦೫). ಕಬ್ಬು ಮತ್ತು ಹತ್ತಿಯು ಈ ಪ್ರದೇಶದಲ್ಲಿ ಬೆಳೆಯುತ್ತಿದ್ದರೂ ಸಹ ಸೀಮಿತ ಪ್ರಮಾಣದಲ್ಲಿತ್ತೆಂದು ಹೇಳಬಹುದು. ಕಾರಣ ಬಯಲು ಸೀಮೆಯ ಮಳೆಯಾಶ್ರಿತ ಪ್ರದೇಶವಾಗಿರುವುದರಿಂದ ಈ ಭಾಗದಲ್ಲಿ ಒಣಭೂಮಿಯಲ್ಲಿ ಮಳೆಯಾಶ್ರಿತ ಕೃಷಿ ಉತ್ಪನ್ನಗಳನ್ನು ಹೆಚ್ಚಾಗಿ ಉತ್ಪಾದಿಸುತ್ತಿದ್ದರೆಂದು ಹೇಳಬಹುದು.

ಮಣ್ಣಿನ ಗುಣವನ್ನು ಆಧರಿಸಿ ಭೂಮಿಯನ್ನು ಐದು ಭಾಗಗಳಾಗಿ ವಿಭಾಗಿಸಿದ್ದಾರೆ.

೧. ಕಪ್ಪುಭೂಮಿ

೨. ಕೆರೆಭೂಮಿ

೩. ಮರಳು

೪. ಕಲ್ಲುಭೂಮಿ

೫. ಗದ್ದೆಭೂಮಿ(ದೇಶಪಾಂಡೆ,೧೯೭೯:೧೦೬),

ಐದನೆಯ ಭೂಮಿಯು ಕೃಷಿಯೋಗ್ಯವಾದ ನೀರಾವರಿ ಭೂಮಿಯಾಗಿದ್ದು, ಭತ್ತ ಬೆಳೆಯುವ ಭೂಮಿ ಎಂದು ಗುರುತಿಸಬಹುದು. ಭತ್ತವನ್ನು ಕೆರೆ ನೀರಾವರಿ ಆಶ್ರಿತ ಭಾಗದಲ್ಲಿ ಬೆಳೆಯುತ್ತಿದ್ದರು. ಕೃಷಿ ಉತ್ಪಾದನೆಗೆ ಚಿತ್ರದುರ್ಗದ ನಾಯಕರು ನೇಗಿಲನ್ನು ಬಳಸುತ್ತಿದ್ದರು. ನೇಗಿಲುಗಳ ಸಂಖ್ಯೆಯ ಆಧಾರದ ಮೇಲೆ ಅವರ ಭೂಹಿಡುವಳಿಯನ್ನು ಅಥವಾ ತೆರಿಗೆಯನ್ನು ಹಾಕುತ್ತಿದ್ದರು. ಚಿತ್ರದುರ್ಗದ ನಾಯಕರು ತಮ್ಮ ದಿನನಿತ್ಯದ ಅವಶ್ಯಕತೆಗಳಿಗೆ ಅನುಗುಣವಾಗಿ ಬೆಳೆಗಳನ್ನು ಬೆಳೆಯುವುದಕ್ಕೆ ಅವಕಾಶವನ್ನು ಕಲ್ಪಿಸಿದ್ದರು.

ಗುಡೇಕೋಟೆ, ಚಿತ್ರದುರ್ಗ, ಮತ್ತೋಡುಗಳಲ್ಲಿ ದೊಡ್ಡ ದೊಡ್ಡ ಹೌಜುಗಳಿವೆ(ಕಣಜಗಳು). ಪ್ರಸ್ತುತ ಸಂದರ್ಭದಲ್ಲಿಯೂ ಇಂತಹ ಹೌಜುಗಳನ್ನು ಸಂರಕ್ಷಿಸಿ ರಾಗಿಯನ್ನು ಸಂಗ್ರಹಿಸಿರುವುದನ್ನು ನೋಡಬಹುದು. ಇವರು ಗ್ರಾಮೀಣ ಆರ್ಥಿಕತೆಯನ್ನು ಮತ್ತು ಅಧಿಕಾರವನ್ನು ನಿರ್ವಹಿಸುವ ಹಾಗೂ ಕಂದಾಯವನ್ನು ಸಂಗ್ರಹಿಸುವ ನಾಡಿಗ ಎಂಬ ಅಧಿಕಾರಿಯಿದ್ದನು. ಇವನು ಕಂದಾಯವನ್ನು ಸಂಗ್ರಹಿಸುವ ಮತ್ತು ವ್ಯವಸ್ಥಿತವಾಗಿ ಕಾರ್ಯ ನಿರ್ವಹಿಸುವ ಅಧಿಕಾರಿಯಾಗಿದ್ದನು. ಈತನಿಗೆ ನಗದು ರೂಪದಲ್ಲಿ ಇಲ್ಲವೇ ದವಸಧಾನ್ಯ ರೂಪದಲ್ಲಿಯೂ ತೆರಿಗೆಯನ್ನು ಸಲ್ಲಿಸಬಹುದಾಗಿತ್ತು(ಶ್ಯಾಮಲ, ೨೦೧೭:೪೫೩). ಧಾನ್ಯ ರೂಪದಲ್ಲಿ ಪಡೆದ ತೆರಿಗೆಯನ್ನು ಸಂಗ್ರಹಿಸಲು ಈ ರೀತಿಯ ಕಣಜಗಳನ್ನು ಬಳಸುತ್ತಿದ್ದಿರಬಹುದು.

ಚಿತ್ರದುರ್ಗದ ನಾಯಕರ ಆಳ್ವಿಕೆಯ ಕಾಲದಲ್ಲಿ ತೋಟದ ಬೆಳೆಗಳು, ವಾಣಿಜ್ಯ ಬೆಳೆಗಳು, ಆಹಾರದ ಬೆಳೆಗಳು ಎಂದು ವಿಭಾಗಿಸಿದ್ದು, ಚಿತ್ರದುರ್ಗದ ನಾಯಕರು ವಾಣಿಜ್ಯ ಬೆಳೆಗಳಿಗೆ ಪ್ರೋತ್ಸಾಹವನ್ನು ನೀಡಿದ್ದರೆಂದು ಹೇಳಬಹುದು. ಚಿತ್ರದುರ್ಗದ ನಾಯಕರ ಕಾಲದಲ್ಲಿ ರಾಯ ರೇಖಾನಿಗದಿ ಪದ್ಧತಿ ಆಚರಣೆಯಲ್ಲಿತ್ತು. ಭತ್ತ ಬೆಳೆಗೆ ಈ ನಾಯಕರು ಪ್ರೋತ್ಸಾಹ ನೀಡಿರುವುದನ್ನು ಗಮನಿಸಬಹುದಾಗಿದೆ. ಚಿತ್ರದುರ್ಗದ ಪ್ರದೇಶದಲ್ಲಿ ಭತ್ತ ಬೆಳೆಯುವ ಜೊತೆಗೆ ಕಬ್ಬನ್ನೂ ಬೆಳೆಯುತ್ತಿದ್ದರು. ಪ್ರಾಚೀನ ಕಾಲದಿಂದಲೂ ದಿನನಿತ್ಯದ ಆಹಾರ ಪಾನೀಯಗಳಲ್ಲಿ ಬೆಲ್ಲ ಮುಖ್ಯವಾಗಿದ್ದು, ಈ ಆಧಾರದ ಮೇಲೆ ಚಿತ್ರದುರ್ಗದ ನಾಯಕರು ಈ ವಾಣಿಜ್ಯ ಬೆಳೆಗೂ ಬೆಂಬಲವನ್ನು ನೀಡಿದ್ದರು(ಷೇಕ್‌ಅಲಿ.(ಸಂ,), ೨೦೧೮:೪೨೦). ಹತ್ತಿ ಉತ್ಪಾದನೆ ಹೆಚ್ಚಾಗಿದ್ದು ಬಟ್ಟೆಯು ಇವರ ಕಾಲದಲ್ಲಿ ಪ್ರಾಮುಖ್ಯತೆಯನ್ನು ಪಡೆದಿತ್ತೆಂಬುದಕ್ಕೆ ಆ ಪ್ರದೇಶದಲ್ಲಿ ನೇಕಾರರ ಸಮುದಾಯಗಳು ಅಸ್ತಿತ್ವದಲ್ಲಿದ್ದವು. ರೇಷ್ಮೆ ಉತ್ಪನ್ನಗಳನ್ನು ಈ ಭಾಗದಲ್ಲಿ ಮಾಡುತ್ತಿದ್ದರು ಎಂಬುದಕ್ಕೆ ಮೊಳಕಾಲ್ಮೂರಿನ ರೇಷ್ಮೆ ಸೀರೆಗಳೇ ಆಧಾರವೆಂದು ಹೇಳಬಹುದು.

ಅಲ್ಲಿ ಯಾವ ಕೃಷಿ ಉತ್ಪನ್ನಗಳನ್ನು ಬೆಳೆಯುತ್ತಿದ್ದರೋ ಅದರ ಆಧಾರದ ಮೇಲೆ ಅಲ್ಲಿನ ವ್ಯಾಪಾರ ಅಭಿವೃದ್ಧಿಗೊಂಡಿತು. ಕರ್ನಾಟಕದಿಂದ ರಫ್ತಾಗುವ ಸರಕುಗಳನ್ನು ವಸ್ತುಗಳ ಆಧಾರದ ಮೇಲೆ ಅಂದಿನ ಸಂದರ್ಭದ ಕೃಷಿ ಉತ್ಪನ್ನಗಳನ್ನು ಪರಿಗಣಿಸಬಹುದಾಗಿದೆ. ಅಡಿಕೆ, ಮೆಣಸು, ಏಲಕ್ಕಿ, ದಾಲ್ಚಿನ್ನಿ, ಮರಾಟಿಮೊಗ್ಗು, ರೇಷ್ಮೆ, ಸಕ್ಕರೆ, ತೆಂಗು, ವೀಳ್ಯದೆಲೆ, ಹತ್ತಿ, ಸಣ್ಣನೆಲ್ಲು, ಶಿರಂಗನೆಲ್ಲು, ಕಾಮದಾರಿ, ಮರಸಣ್ಣನೆಲ್ಲು, ಕಬ್ಬು, ಗೋಧಿ, ಕಡ್ಲೆ, ಉದ್ದು, ಅಗಸಿ, ಎಳ್ಳು, ಜೋಳ,

ಇಂಗು, ಹೀಗೆ ಇನ್ನೂ ಮೊದಲಾದ ವಸ್ತುಗಳನ್ನು ಈ ಭಾಗದಲ್ಲಿ ಉತ್ಪಾದಿಸುತ್ತಿದ್ದರು. ಹೀಗೆ ವಿಜಯನಗರೋತ್ತರ ಕಾಲದಲ್ಲಿ ಕರ್ನಾಟಕದಿಂದ ಈ ವಸ್ತುಗಳನ್ನು ವಿದೇಶಕ್ಕೆ ಕೊಂಡೊಯ್ಯುತ್ತಿದ್ದರೆಂದು ಹೇಳಬಹುದು. ರಾಗಿಯನ್ನು ಈ ಪ್ರದೇಶದಲ್ಲಿ ಉಗ್ರಾಣಗಳಲ್ಲಿ ಸಂಗ್ರಹಿಸುತ್ತಿದ್ದರು ಎನ್ನುವುದಕ್ಕೆ ಗುಡೇಕೋಟೆಯ ಬೆಟ್ಟದ ಮೇಲೆ ರಾಗಿ ಕಣಜವಿದೆ. ಅದರಲ್ಲಿ ಐನೂರು ಚೀಲ ರಾಗಿ ಹಿಡಿಸುತ್ತಿತ್ತೆಂದು ಹೇಳುತ್ತಾರೆ. ಪ್ರಕೃತಿಯ ವಿಕೋಪ ಅಥವಾ ಮೊದಲಾದ ಸಂದರ್ಭದಲ್ಲಿ ಇದನ್ನು ಉಪಯೋಗಿಸುತ್ತಿದ್ದಿರಬಹುದು. ಇದರಿಂದ ಗುಡೇಕೋಟೆ ಪಾಳೆಯಗಾರ ಕಾಲದಲ್ಲಿಯೂ ಈ ಬೆಳೆಗೆ ಮಹತ್ವವಿತ್ತೆಂದು ತಿಳಿಯುತ್ತದೆ. ಸಾಮಾನ್ಯ ಜನರಿಂದ ಪಡೆದ ಈ ರೀತಿಯ ದಾನ್ಯಗಳನ್ನು ಶೇಖರಿಸಿ ಪ್ರಕೃತಿ ವಿಕೋಪ ಮೊದಲಾದ ಸಮಯದಲ್ಲಿ ಅದನ್ನು ಬಳಸುತ್ತಿದ್ದರು.

ಮೈಸೂರು ಒಡೆಯರ ಕಾಲಾವಧಿಯಲ್ಲಿ ಕೃಷಿ ಉತ್ಪನ್ನಗಳನ್ನು ಕುರಿತಂತೆ ಗಮನಿಸುವುದಾದರೆ ವಸಾಹತುಪೂರ್ವ ಕಾಲದ ಆರ್ಥಿಕತೆ ಮತ್ತು ವ್ಯಾಪಾರ–ವಾಣಿಜ್ಯದ ಬೆಳವಣಿಗೆಗೆ ಸಂಪೂರ್ಣವಾಗಿ ಸ್ಥಳೀಯ ಸಂಸ್ಥಾನಗಳ ತೆರಿಗೆ ವ್ಯವಸ್ಥೆಯನ್ನು ಅವಲಂಭಿಸಿತ್ತು(ಚಂದ್ರಶೇಖರ್, ರಾವ್,ಲ, ೨೦೧೬:೫೭). ಈ ಕಾಲಘಟ್ಟದಲ್ಲಿ ರಾಜ ಸಂಸ್ಥಾನಗಳನ್ನು ಕ್ರೋಢೀಕರಿಸಲು ಆರ್ಥಿಕ ಸಂಪನ್ಮೂಲಗಳನ್ನು ಬಳಸಿಕೊಂಡು ಆಯಾ ಸಂದರ್ಭದ ಕೃಷಿ ಉತ್ಪನ್ನಗಳಿಗೆ ಪ್ರಾಮುಖ್ಯತೆ ಕೊಟ್ಟಿರುವುದನ್ನು ಗಮನಿಸಬಹುದು. ಈ ಮೂಲಕವಾಗಿ ಅರ್ಥಿಕ ಸಂಪನ್ಮೂಲಗಳನ್ನು ಕ್ರೋಢೀಕರಿಸಿ ರಾಜ್ಯಕ್ಕೆ ಹೆಚ್ಚಿನ ಆದಾಯ ಬರುವಂತೆ ಮಾಡಿದರು. ಮೈಸೂರಿನ ಒಡೆಯರು ಇದೇ ನೀತಿಯನ್ನು ಅನುಸರಿಸಿದ್ದರು. ಆಯಾ ಕಾಲಘಟ್ಟದ ಕೃಷಿ ಉತ್ಪನ್ನಗಳಿಗೆ ಪ್ರಾಮುಖ್ಯತೆಯನ್ನು ನೀಡಿದ್ದರು. ಮೈಸೂರು ಒಡೆಯರ ಕಾಲದಲ್ಲಿ ಕೃಷಿ ಉತ್ಪನ್ನಗಳನ್ನು ಕುರಿತಂತೆ ವಿಶೇಷ ಪ್ರಾಮುಖ್ಯತೆಯನ್ನು ನೀಡಿದ್ದು ಇವರ ಕಾಲಘಟ್ಟದಲ್ಲಿ ಕಾಫಿ, ಕಬ್ಬು ಮತ್ತು ರೇಷ್ಮೆ ಬೆಳೆಗಳಿಗೆ ಹೆಚ್ಚಿನ ಆದ್ಯತೆ ನೀಡಿರುವುದು ಕಂಡುಬರುತ್ತದೆ.

ಮೈಸೂರು ಸಂಸ್ಥಾನ ಇಡೀ ದಕ್ಷಿಣ ಭಾರತದಾದ್ಯಂತ ತನ್ನದೇ ಆದ ಆರ್ಥಿಕ ಸಂಪರ್ಕ ಜಾಲವನ್ನು ಹೊಂದಿತ್ತು( ಚಂದ್ರಶೇಖರ್,ರಾವ್೨೦೧೬.:೫೮). ಈ ಮೂಲಕ ಇಡೀ ದಕ್ಷಿಣ ಕರ್ನಾಟಕದ ಕೃಷಿ ಉತ್ಪನ್ನಗಳು ಮೈಸೂರು ಸಂಸ್ಥಾನದ ವ್ಯಾಪ್ತಿಗೆ ಒಳಪಟ್ಟಿದ್ದವು. ಕರಿಮೆಣಸು, ಚಕ್ಕೆ, ಅರಿಶಿಣ ಇವು ಇಂದಿನ ಶಿವಮೊಗ್ಗ ಜಿಲ್ಲೆಯ ನಗರ ಪ್ರಾಂತ್ಯದಿಂದ ಬಾಲಾಘಾಟ್‌ಗೆ ರಫ್ತಾಗುತ್ತಿದ್ದವು. ಈ ಅಂಶಗಳ ಆಧಾರದಿಂದ ಮೈಸೂರು ಸಂಸ್ಥಾನದಲ್ಲಿ ಸಂಬಾರು ಪದಾರ್ಥಗಳ ಬೆಳೆಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿದ್ದರೆಂಬುವುದು ಸ್ಪಷ್ಟವಾಗುತ್ತದೆ. ವಾಣಿಜ್ಯ ಬೆಳೆಗಳಿಗೆ ಈ ಸಂಸ್ಥಾನದಲ್ಲಿ ವಿಶೇಷ ಗಮನ ಹರಿಸಿದ್ದರು. ನೀರಾವರಿಯನ್ನು ಅಭಿವೃದ್ಧಿಗೊಳಿಸುವುದಕ್ಕೆ ಕೆರೆಯನ್ನು ವಿಸ್ತರಿಸಿ ಭತ್ತದ ಭೂಮಿಯನ್ನು ಶ್ರೀರಂಗಪಟ್ಟಣದ ರಂಗನಾಥಸ್ವಾಮಿಗೆ ದಾನವಾಗಿ ನೀಡಲಾಗಿತ್ತು. ಈ ಮೂಲಕ ನದಿ ಉಗಮ ಸ್ಥಾನವಾದ ಈ ಭಾಗದಲ್ಲಿ ನೀರಾವರಿಗೆ ವಿಶೇಷವಾದ ಪ್ರಾಮುಖ್ಯತೆಯನ್ನು ನೀಡಿದ್ದರು. ಮಂಗಳೂರಿನ ವ್ಯಾಪಾರ ಮತ್ತು ವರ್ತಕರನ್ನು ಗಮನಿಸಿ ಮೈಸೂರು ಒಡೆಯರ ಕಾಲದಲ್ಲಿ ಕೃಷಿ ಉತ್ಪನ್ನಗಳನ್ನು ನಿರ್ಧರಿಸಬಹುದಾಗಿದ್ದ ಕಾರಣ ಮಂಗಳೂರು, ಮೈಸೂರು

ಒಡೆಯರು ಮತ್ತು ಹೈದರ್ ಮತ್ತು ಟಿಪ್ಪು ಕಾಲದಲ್ಲಿ ವಿದೇಶಿ ವ್ಯಾಪಾರದ ಪ್ರಮುಖ ಕೇಂದ್ರವಾಗಿತ್ತು. ಈ ಭಾಗದಿಂದ ವಿದೇಶಕ್ಕೆ ಅಕ್ಕಿ, ಕರಿಮೆಣಸು, ತೆಂಗು, ಶ್ರೀಗಂಧ, ಏಲಕ್ಕಿ, ಕಬ್ಬು ಉತ್ಪನ್ನಗಳು ಯುರೋಪಿಗೆ ಹೋಗುತ್ತಿದ್ದವು. ಕಬ್ಬು ಬೆಳೆಯು ಈ ಕಾಲದ ಒಂದು ಪ್ರಮುಖ ವಾಣಿಜ್ಯ ಬೆಳೆಯಾಗಿತ್ತು.(ಚಂದ್ರಶೇಖರ್,ರಾವ್,೨೦೧೬:೭೮). ಇದರಿಂದ ರಾಜ್ಯಕ್ಕೆ ಹೆಚ್ಚಿನ ಆದಾಯ ಬರುತ್ತಿತ್ತು. ಇಂದಿಗೂ ಮೈಸೂರು ಭಾಗದಲ್ಲಿ ನೀರಾವರಿ ಬೆಳೆಯಲ್ಲಿ ಹೆಚ್ಚಿನ ಮಹತ್ವವಿರುವ ಬೆಳೆ ಕಬ್ಬು ಆಗಿದೆ. ಮಂಡ್ಯ, ಮೈಸೂರು ಭಾಗದಲ್ಲಿ ಕಬ್ಬಿನ ಗದ್ದೆಗಳು ಹೆಚ್ಚಾಗಿ ಕಂಡುಬರುತ್ತದೆ. ಆಧುನಿಕ ಕರ್ನಾಟಕದಲ್ಲಿ ಕಬ್ಬು ಬೆಳೆಗಾರರಿಗೆ ನಿಗದಿತ ಬೆಲೆ ದೊರಕದ ಕಾರಣ ಬೆಂಬಲ ಬೆಲೆ ನಿಗದಿಯ ಕುರಿತಂತೆ ಹಲವಾರು ಹೋರಾಟಗಳು ನಡೆಯುತ್ತಿವೆ. ಮೈಸೂರು ಸಂಸ್ಥಾನದಲ್ಲಿ ಹತ್ತಿ ಬೆಳೆಗೆ ವಿಶೇಷ ಪ್ರಾಮುಖ್ಯತೆ ನೀಡಿದ್ದರು. ಮೈಸೂರು ಸಂಸ್ಥಾನದ ವ್ಯಾಪ್ತಿಯಲ್ಲಿದ್ದ ಆದವಾನಿಯಲ್ಲಿ ಹತ್ತಿಯನ್ನು ಹೇರಳವಾಗಿ ಬೆಳೆಯುತ್ತಿದ್ದರು. ಹತ್ತಿ ಬಟ್ಟೆಯು ಧರ್ಮಾವರಂ, ತಾಡಪತ್ರಿ, ಆದವಾನಿ, ಗುತ್ತಿ, ಬಳ್ಳಾರಿಯಲ್ಲಿ ಉಣ್ಣೆಯ ಹೊದಿಕೆ, ಚಿತ್ರದುರ್ಗ, ಜರಿಮಲೆಗಳಲ್ಲಿ ರೇಷ್ಮೆಯ ವಸ್ತ್ರವನ್ನು ಉತ್ಪಾದಿಸುತ್ತಿದ್ದರು(ವೆಂಕಟರಮಣಯ್ಯ,೧೯೩೫: ೨೭೫). ಹತ್ತಿ ಬಟ್ಟೆ ಕೈಗಾರಿಕೆಯು ಚಿತ್ರದುರ್ಗ ಮತ್ತು ಮಂಗಳೂರು ಭಾಗಗಳಲ್ಲಿ ನೋಡಬಹುದು.

ಚಿಕ್ಕದೇವರಾಜ ಒಡೆಯರು ತೋಟದ ಬೆಳೆಗೆ ವಿಶೇಷ ಮಹತ್ವವನ್ನು ನೀಡಿದ್ದರು. ತೋಟಗಳಿಗೆ ಬೆಳೆಗಳ ಉತ್ಪನ್ನವನ್ನು ಆಧರಿಸಿ ಕಂದಾಯವನ್ನು ವಿಧಿಸಲಾಗುತ್ತಿತ್ತು. ತೆಂಗು ಮತ್ತು ಅಡಿಕೆ ತೋಟಗಳಲ್ಲಿ ಸರ್ಕಾರ ಉತ್ಪನ್ನದ ಅರ್ಧಭಾಗವನ್ನು ಪಡೆಯುತ್ತಿತ್ತು ಮೈಸೂರು ಸಂಸ್ಥಾನದಲ್ಲಿ ನೀರಾವರಿ ಬೆಳೆಗಳು, ಒಣಭೂಮಿ ಬೆಳೆಗಳು ಹಾಗೂ ತೋಟದ ಬೆಳೆಗಳು ಎಂದು ವರ್ಗೀಕರಿಸಿದ್ದರು(ರೈಸ್, ೧೮೯೭:೧೦೨-೧೦೩). ಚಿಕ್ಕದೇವರಾಜ ಒಡೆಯರು ತೋಟದ ಬೆಳೆಯನ್ನು ಅಭಿವೃದ್ಧಿಗೊಳಿಸುವುದಕ್ಕೆ ಅವರು ವಿಧಿಸಿದ ತೆರಿಗೆಯ ಸ್ವರೂಪದಿಂದ ತಿಳಿಯಬಹುದು. ಯಾವ ಭಾಗದಲ್ಲಿ ತೆಂಗಿನ ಮರಗಳು ಗುರಿಯಾಗುತ್ತಿದ್ದವೋ ಆ ಕಡೆ ಅಡಿಕೆ ಮರಗಳ ಮೇಲೆಯೂ ತೆರಿಗೆ ವಿಧಿಸುತ್ತಿದ್ದರು. ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಜಾರಿಗೆ ತಂದ ಖುಷ್ಕಿ ಭೂಮಿಗಳಲ್ಲಿ ಬೆಳೆಯುವ ಹುಣಿಸೆ ಮತ್ತು ಹಲಸಿನ ಮೇಲೆ ಮರಕ್ಕೆ ಎರಡು ಹಣದಂತೆ ಕಂದಾಯ ಕೊಡಬೇಕಾಗಿದ್ದಿತು(ಕೇಶವಭಟ್ಟ, ಕೃಷ್ಣರಾವ್,೧೯೭೦:೪,೯೩೭). ಚಿಕ್ಕದೇವರಾಜ ಒಡೆಯರು ಸಂಸ್ಥಾನದಲ್ಲಿ ಮೊಗಲ್ ಮಾದರಿಯ ಕಂದಾಯವನ್ನು ಚಿಕ್ಕದೇವರಾಜ ಒಡೆಯರು ರೂಪಿಸಿದ್ದರು. ಹೀಗೆ ಈ ಸಂಸ್ಥಾನದಲ್ಲಿ ಒಡೆಯರ ಕಾಲದಿಂದ ದಳವಾಯಿಗಳ ಕಾಲದವರೆಗೂ ಇದೇ ರೀತಿಯ ವಿಂಗಡಣೆಗಳಿವೆ. ಟಿಪ್ಪು ಕಾಲದ ನಂತರ ಬೇರೆ ಬೇರೆ ವಿಧಾನಗಳನ್ನು ಕೃಷಿಯಲ್ಲಿ ಬಳಸಿಕೊಂಡು ೧೮೦೦ರ ನಂತರ ಕರ್ನಾಟಕದ ಆರ್ಥಿಕ ಚರಿತ್ರೆಯೇ ಭಿನ್ನವಾಗಿದೆ. ವಿವಿಧ ಆಹಾರ ಬೆಳೆಗಳು ಆರ್ಥಿಕ ಬೆಳೆಗಳು, ದ್ವಿದಳ ಧಾನ್ಯಗಳು, ತರಕಾರಿ, ವೈವಿಧ್ಯಮಯವಾದ ಹಣ್ಣುಗಳನ್ನು ಮೈಸೂರು ಸಂಸ್ಥಾನದಲ್ಲಿ ವ್ಯಾಪಕವಾಗಿ ಬೆಳೆಯಲಾಗುತ್ತಿತ್ತು(ಬುಕಾನನ್,(೧)೧೮೦೭: ೮೩-೮೮). ಕಬ್ಬು ಈ ಸಂಸ್ಥಾನದಲ್ಲಿ ಹೆಚ್ಚಾಗಿ ಬೆಳೆಯುತ್ತಿದ್ದು, ಅಲ್ಲಿಯೇ ಬೆಲ್ಲವನ್ನು ತಯಾರಿಸುವ ಆಲೆಮನೆಗಳಿದ್ದವೆಂದು

ಹೇಳಲಾಗಿದೆ. ಬೆಲ್ಲ ಪ್ರತಿಯೊಂದು ಸಿಹಿ ಪದಾರ್ಥಕ್ಕೆ ಅವಶ್ಯಕವಾಗಿದ್ದು, ಸಂಸ್ಥಾನದಲ್ಲಿ ಹೆಚ್ಚಾಗಿ ಇದನ್ನು ಬಳಸುತ್ತಿದ್ದರು. ಶ್ರೀರಂಗಪಟ್ಟಣ ಮತ್ತಿತರ ಭಾಗದಲ್ಲಿ ಮಳೆಗಾಲದಲ್ಲಿ ಕೆರೆಕಟ್ಟೆಗಳಲ್ಲಿ ನೀರನ್ನು ಸಂಗ್ರಹಿಸಿಟ್ಟು ಅದನ್ನು ಬೇಸಿಗೆಯಲ್ಲಿ ಉಪಯೋಗಿಸಿ ಕೃಷಿ ಮಾಡುತ್ತಿದ್ದರೆಂದು ಬುಕಾನನ್‌ನು ಅಭಿಪ್ರಾಯ ಪಡುತ್ತಾನೆ. ದ್ವಿದಳ ಧಾನ್ಯಗಳಾದ ಉದ್ದು, ಹೆಸರು, ಹುರುಳಿ, ಅವರೆ ಮುಂತಾದ ಕಾಳುಗಳನ್ನು ಹೆಚ್ಚಾಗಿ ಇಲ್ಲಿ ಬೆಳೆಯುತ್ತಿದ್ದರು. ಕಾರಣ ಈ ಬೆಳೆಗಳಿಗೆ ಹೆಚ್ಚಿನ ನೀರಿನ ಅವಶ್ಯಕತೆ ಇರಲಿಲ್ಲವೆಂದು ಅಂದಾಜಿಸಬಹುದು. ಹಾಗೆಯೇ ಮೈಸೂರು ಸಂಸ್ಥಾನದಲ್ಲಿ ಇತರೇ ರಾಜಮನೆತನಗಳಲ್ಲಿಯೂ ಇರುವಂತೆ ಬೀಜವನ್ನು ಬಿತ್ತುವ ಮುನ್ನ ತಮ್ಮ ಗ್ರಾಮದಲ್ಲಿದ್ದ ಜ್ಯೋತಿಷಿ ಹತ್ತಿರ ಯಾವ ಸಂದರ್ಭದಲ್ಲಿ ಬಿತ್ತಬೇಕು ಮತ್ತು ಯಾವಾಗ ಬೆಳೆಯನ್ನು ಕಟಾವು ಮಾಡಬೇಕೆಂದು ಶಾಸ್ತ್ರ ಕೇಳಿಸುತ್ತಿದ್ದರು.

೧೬ನೇ ಶತಮಾನದಲ್ಲಿ ನೈಸರ್ಗಿಕ ಮತ್ತು ಕೃತಕ ನೀರಾವರಿ ಎಂಬ ಎರಡು ರೀತಿಯ ನೀರಾವರಿ ವ್ಯವಸ್ಥೆಯನ್ನು ಹೊಂದಿದ್ದರು. ಕೃತಕ ನೀರಾವರಿ ಎಂದರೆ ಬಾವಿಗಳನ್ನು ತೋಡಿಸಿ ನೀರು ಸಂಗ್ರಹಿಸುವಂತೆ ಮಾಡುವುದು. ಏತಗಳ ಮೂಲಕ ಬಾವಿಯಿಂದ ನೀರನ್ನು ಮೇಲೆತ್ತುವ ಸಂಪ್ರದಾಯಗಳನ್ನು ಗಮನಿಸಬಹುದು. ಮೈಸೂರು ಸಂಸ್ಥಾನದಲ್ಲಿ ಪ್ರಾಚೀನ ಕಾಲದಿಂದ ಇಂದಿನ ಆಧುನಿಕ ಕಾಲದರೆಗೂ ವಿವಿಧ ರೀತಿಯ ಭತ್ತಗಳನ್ನು ವ್ಯಾಕಕವಾಗಿ ಬೆಳೆಯುತ್ತಿದ್ದರು. ಕಂಠೀರವ ನರಸರಾಜ ವಿಜಯದಲ್ಲಿ ಮತ್ತು ಚಿಕ್ಕದೇವರಾಜ ವಂಶಾವಳಿ ಕೃತಿಯಲ್ಲಿ ವಿವಿಧ ರೀತಿಯ ಭತ್ತದ ವಿವರಣೆಗಳನ್ನು ನೀಡಲಾಗಿದೆ.

ಭತ್ತ ಬೆಳೆಯುವ ವಿಧಾನ ಏಕ ರೀತಿಯದಾಗಿರಲಿಲ್ಲ. ಪರಿಸ್ಥಿತಿಗೆ ಅನುಗುಣವಾಗಿ ಭತ್ತ ಬೆಳೆಯುತ್ತಿರುವುದನ್ನು ಗಮನಿಸಹುದು. ಬರಭತ್ತ, ಮೊಳಭತ್ತ ಮತ್ತು ನಾಟಿ ವಿಧಾನಗಳನ್ನು ಬಳಸಿಕೊಂಡು ಭತ್ತ ಬೆಳೆಯುತ್ತಿದ್ದರು(ಸುಧಾಮಣಿ, ೨೦೧೯:೮೯). ಬರಭತ್ತ ವಿಧಾನದಲ್ಲಿ ಮೊಳಕೆ ಬಂದ ಬೀಜವನ್ನೇ ಕೃಷಿ ಭೂಮಿಯಲ್ಲಿ ಸಾಲಾಗಿ ಬಿತ್ತುತ್ತಿದ್ದರು. ಆದರೆ ನಾಟಿ ವಿಧಾನವು ಇದಕ್ಕಿಂತ ಸ್ವಲ್ಪಮಟ್ಟಿಗೆ ಭಿನ್ನವಾಗಿತ್ತು. ಕೃಷಿಭೂಮಿಯ ಒಂದು ಭಾಗದಲ್ಲಿ ನೆಲವನ್ನು ಹದ ಮಾಡಿ ಬೀಜದ ಭತ್ತವನ್ನು ದಟ್ಟವಾಗಿ ಹರಡಿ, ನೀರು ಹಾಯಿಸಿ ಪೈರು ಸ್ವಲ್ಪ ಉದ್ದ ಬೆಳೆದ ನಂತರ ಅದನ್ನು ಕಿತ್ತು ಉಳುಮೆ ಮಾಡಿ ಗೊಬ್ಬರ ಮತ್ತು ನೀರು ಹಾಕಿ ಹದ ಮಾಡಿದ ಭೂಮಿಗೆ ನೆಡುತ್ತಿದ್ದರು. ಈ ನಾಟಿ ವಿಧಾನವೇ ಆಧುನಿಕ ಸಂದರ್ಭದಲ್ಲಿಯೂ ಅಸ್ತಿತ್ವದಲ್ಲಿರುವುದನ್ನು ನೋಡಬಹುದು. ಈ ವಿಧಾನವನ್ನು ಅನುಸರಿಸಿ ನದಿ ಮುಖಜ ಭೂಮಿ ಇರುವ ಕಡೆ ಹೆಚ್ಚು ಭತ್ತವನ್ನು ಬೆಳೆಯುತ್ತಾರೆ.

ಮೈಸೂರು ಸಂಸ್ಥಾನದಲ್ಲಿ ಟಿಪ್ಪು ಪಟ್ಟಣಗಳು ಮತ್ತು ಅಷ್ಟಗ್ರಾಮಗಳು ಎಂಬ ಆಯ್ದ ಪ್ರದೇಶಗಳಲ್ಲಿ ಒಟ್ಟು ೧೫ ಜಾತಿಯ ವಿವಿಧ ಹಣ್ಣಿನ ತಳಿಗಳು, ೩೪ ಬಗೆಯ ವಿವಿಧ ತರಕಾರಿ ಬೆಳೆಗಳನ್ನು ಜಾರಿಗೊಳಿಸಿದನು(ಜಗದೀಶ,೨೦೧೯:೫೬). ಅಷ್ಟಗ್ರಾಮಗಳಲ್ಲಿ ನಾಲ್ಕು ಉದ್ಯಮಗಳಿದ್ದವು. ಮೊದಲನೆಯವು ತರಕಾರಿ ತೋಟ, ಎರಡನೆಯದು ತೆಂಗಿನ ತೋಟ, ಮೂರನೆಯದು ಎಲೆತೋಟ,

ನಾಲ್ಕನೆಯದು ಹೂವಿನ ತೋಟ, ಶ್ರೀರಂಗಪಟ್ಟಣದ ಬಳಿ ತರಕಾರಿತೋಟ ಮತ್ತು ತೆಂಗಿನ ತೋಟ ಎರಡೂ ಬೆಳೆಯುತ್ತಿದ್ದರು. ಪ್ರಸ್ತುತ ಸಂದರ್ಭದಲ್ಲಿ ಶ್ರೀರಂಗಪಟ್ಟಣದ ಸುತ್ತಲಿನ ಪ್ರದೇಶದಲ್ಲಿ ಈ ರೀತಿಯಾದ ತೋಟಗಳನ್ನು ಗಮನಿಸಬಹುದಾಗಿದೆ. ಬೆಂಗಳೂರು ನಗರದ ಲಾಲ್‌ಬಾಗ್ ಸೇರಿದಂತೆ ಔಷಧೀಯ ಸಸ್ಯ, ಗಿಡಮೂಲಿಕೆಯ ಬೇರುಗಳು ಮೊದಲಾದ ಆಲಂಕಾರಿಕ ಸಸ್ಯಗಳು ಬೆಳೆದಿರುವುದನ್ನು ಗಮನಿಸಬಹುದಾಗಿದೆ(ಜಗದೀಶ,೨೦೧೯:೫೬). ಟಿಪ್ಪು ಪರಿಚಯಿಸಿದ ಈ ಸಸ್ಯರಾಶಿಯು ಪ್ರಸ್ತುತ ಲಾಲ್‌ಬಾಗ್‌ನಲ್ಲಿ ನೋಡಬಹುದು.

ಕರ್ನಾಟಕಕ್ಕೆ ಪೋರ್ಚುಗೀಸರು ಕೆಲವು ಹೊಸ ಕೃಷಿ ಉತ್ಪನ್ನಗಳನ್ನು ಪರಿಚಯಿಸಿದರು. ಕರಾವಳಿಯ ಜನಕ್ಕೆ ಕೃಷಿ, ಪಶುಸಂಗೋಪನೆ ಮತ್ತು ಸುಧಾರಿತ ವಿಧಾನಗಳನ್ನು ಕಲಿಸಿದರು. ವಿಲಾಯಿತಿ ಹಂದಿ, ಕುಕ್ಕುಟಗಳ ತಳಿಗಳನ್ನು ಜನಪ್ರಿಯಗೊಳಿಸಿದರು. ಬಸಳೆ, ಪಪ್ಪಾಯಿ, ಅನಾನಸು, ಬಟಾಟೆ, ತಂಬಾಕು, ಗೋಡಂಬಿ, ಮುಸುಕಿನ ಜೋಳಗಳನ್ನು ಭಾರತಕ್ಕೆ ಪರಿಚಯಿಸಿದ್ದು ಪೋರ್ಚುಗೀಸರು(ಕರ್ನಾಟಕ ಪರಂಪರೆ, ೨:೧೮೨). ಈ ಮೂಲಕವಾಗಿ ಕರ್ನಾಟಕಕ್ಕೆ ಪರಿಚಯಿಸಿದ ಪಪ್ಪಾಯಿ ಹಣ್ಣು ಅಂದಿನಿಂದ ಇಂದಿನವರೆಗೂ ಒಂದು ಪ್ರಮುಖ (ತೋಟದ) ಬೆಳೆಯಾಗಿ ಕರ್ನಾಟಕದಲ್ಲಿದೆ. ಇನ್ನು ಮುಸುಕಿನ ಜೋಳವನ್ನು ಕರ್ನಾಟಕದ ಎಲ್ಲ ಭಾಗಗಳಲ್ಲಿ ಬೆಳೆಯುತ್ತಾರೆ. ಗೋಡಂಬಿ ಬೆಳೆಯನ್ನು ಕರ್ನಾಟಕದ ಕರಾವಳಿ ಭಾಗದಲ್ಲಿ ಇಂದಿಗೂ ಬೆಳೆಯುತ್ತಿದ್ದಾರೆ. ಕರ್ನಾಟಕದಲ್ಲಿ ಬೆಳೆಯುವ ಅಕ್ಕಿ, ಸಕ್ಕರೆ, ಕೊಬ್ಬರಿ, ಕರಿಮೆಣಸುಗಳನ್ನು(ಸಂಬಾರು ಪದಾರ್ಥಗಳನ್ನು) ವಿಶೇಷವಾಗಿ ಪೋರ್ಚುಗೀಸರು ಕೊಳ್ಳುತ್ತಿದ್ದರು. ಆದರೆ ೧೫೬೫ರ ವಿಜಯನಗರದ ತಾಳಿಕೋಟೆಯ ಯುದ್ಧದ ನಂತರ ಗೋವಾದ ವ್ಯಾಪಾರ ಕ್ಷೀಣಿಸಲಾರಂಭಿಸಿದ್ದರಿಂದ ಇವರಿಗೆ ಪೈಪೋಟಿಯಾಗಿ ಬಂದ ಇಂಗ್ಲಿಶರು ತಮ್ಮದೇಯಾದ ಆರ್ಥಿಕ ನೀತಿಗಳ ಮೂಲಕ ಕೃಷಿ ಉತ್ಪನ್ನಗಳ ಬೆಳೆಯುವ ವಿಧಾನದಲ್ಲಿ ಪ್ಲಾಂಟೇಷನ್ ಆರ್ಥಿಕತೆಯ ಹುಟ್ಟಿಗೆ ಕಾರಣರಾದರು. ಈ ಪ್ಲಾಂಟೇಷನ್ ಆರ್ಥಿಕತೆಯ ಮೂಲಕ ಬಂಡವಾಳಶಾಹಿತ್ವದ ಪರಿಕಲ್ಪನೆಯ ಹುಟ್ಟಿಗೂ ಕಾರಣವಾಯಿತು. ಕರಾವಳಿ ಕರ್ನಾಟಕದ ಬಸ್ರೂರು ಪಟ್ಟಣದ ಒಳನಾಡಿನಲ್ಲಿ ಅಕ್ಕಿ, ತೆಂಗು, ಕರಿಮೆಣಸು, ಕಬ್ಬು, ಶುಂಠಿ, ಲವಂಗ, ದಾಲ್ಚಿನ್ನಿ ಮುಂತಾದ ಕೃಷಿ ಉತ್ಪನ್ನಗಳನ್ನು ಬೆಳೆಯಲಾಗುತ್ತಿತ್ತು(ರೈ,೨೦೧೭:-೨೯). ಟಿಪ್ಪು ಮಾವಿನ ತೋಟಗಳ ಅಭಿವೃದ್ಧಿಗೆ ವಿಶೇಷ ಗಮನ ಹರಿಸಿದನು. ಪ್ರತಿಯೊಂದು ಗ್ರಾಮಗಳಲ್ಲಿಯೂ ಸುಮಾರು ೨೦೦ ಮಾವಿನ ಹಾಗೂ ಇತರೆ ಹಣ್ಣಿನ ಮರಗಳನ್ನು ಬೆಳೆಸಲು ಸೂಚಿಸಿದನು.

ತುಮಕೂರು ಪ್ರದೇಶದಲ್ಲಿ ಗುಬ್ಬಿ, ತಿಪಟೂರು, ಚಿಕ್ಕನಾಯಕನಹಳ್ಳಿ ತಾಲೂಕುಗಳಲ್ಲಿ ದೊಡ್ಡ ದೊಡ್ಡ ತೆಂಗಿನ ತೋಟಗಳಿದ್ದವೆಂದು ಬುಕಾನನ್ ಹೇಳುತ್ತಾರೆ. ಪ್ರಸ್ತುತ ವರ್ತಮಾನ ಸಂದರ್ಭದಲ್ಲಿಯೂ ಈ ಭಾಗದಲ್ಲಿ ತೆಂಗಿನ ತೋಟಗಳನ್ನು ಅಭಿವೃದ್ಧಿಪಡಿಸಿರುವುದನ್ನು ಕಾಣಬಹುದು. ತೆಂಗು ಬೆಳೆಯುವುದರಲ್ಲಿ ತಿಪಟೂರು ಕರ್ನಾಟಕದಲ್ಲಿಯೇ ಮೊದಲನೇ ಸ್ಥಾನದಲ್ಲಿರುವುದು ಇದಕ್ಕೆ ಸಾಕ್ಷಿಯಾಗಿದೆ. ಮದನಮಡು ಎಂಬ ಒಂದು ಗ್ರಾಮವು ಎರಡು ಕೆರೆಗಳ ಮಧ್ಯವಿದ್ದು, ಆ ಗ್ರಾಮದ ಸುತ್ತಮುತ್ತ ತೆಂಗಿನ ತೋಟಗಳಿದ್ದವು. ಆ ಕೆರೆಗಳ ನೀರನ್ನು ತೆಂಗಿನ ತೋಟಕ್ಕೆ

ಮೀಸಲಿರಿಸಿದ್ದರೆಂದು ಕಂಡುಬರುತ್ತದೆ. ಈ ಭಾಗದಲ್ಲಿ ನೀರಾವರಿ ಭೂಮಿಯಿಂದ ಕೂಡಿದ್ದು ತೋಟದ ಬೆಳೆಗೆ ಇಲ್ಲಿ ವಿಶೇಷವಾದ ಪ್ರಾಮುಖ್ಯತೆಯನ್ನು ನೀಡಿದ್ದರು. ಯಲಹಂಕನಾಡ ಪ್ರಭುಗಳು ಬೆಂಗಳೂರು, ಮಾಗಡಿಯನ್ನು ಕೇಂದ್ರ ಸ್ಥಳವನ್ನಾಗಿ ಮಾಡಿಕೊಂಡು ಆಡಳಿತ ನಿರ್ವಹಿಸಿದರು. ಈ ವಂಶಸ್ಥರು ಕೆರೆ, ಕಟ್ಟೆ ನಿರ್ಮಾಣಕ್ಕೆ ಹೆಚ್ಚಿನ ಪ್ರೋತ್ಸಾಹವನ್ನು ನೀಡಿದ್ದರು. ಈ ಭಾಗದಲ್ಲಿ ನದಿಗಳು ಕಂಡುಬಂದರೂ ಶಾಶ್ವತ ನೀರನ್ನು ಒದಗಿಸದ ಕಾರಣ ಕೆರೆ, ಕಟ್ಟೆಗಳ ನಿರ್ಮಾಣಕ್ಕೆ ವಿಶೇಷವಾದ ಪ್ರೋತ್ಸಾಹವನ್ನು ನೀಡಿದ್ದರು. ಈ ಪ್ರದೇಶದಲ್ಲಿ ಬೆಳೆಯುವ ಬೆಳೆಗಳಾದ ರಾಗಿ, ಜೋಳ, ಸಜ್ಜೆ, ನವಣೆ, ತೊಗರೆ, ಅವರೆಕಾಯಿ ಮೊದಲಾದ ಬೆಳೆಗಳನ್ನು ಬೆಳೆಯುತ್ತಿದ್ದರು. ಇವರ ಕಾಲದಲ್ಲಿ ನೀರಾರಂಭ, ತೋಟಾರಂಭ ಎಂಬ ಎರಡು ವಿಧದ ಬೆಳೆಗಳನ್ನು ಬೆಳೆಯುತ್ತಿದ್ದರು. ಹಿರೇ ಕೆಂಪೇಗೌಡನು ತೋಟದ ಬೇಸಾಯಕ್ಕೆ ವಿಶೇಷ ಪ್ರೋತ್ಸಾಹವನ್ನು ಕೊಟ್ಟಿದ್ದನು. ಕರ್ನಾಟಕದ ಇತರೇ ಭಾಗದಲ್ಲಿರುವಂತೆಯೇ ಯಲಹಂಕ ನಾಡಪ್ರಭುಗಳ ಕಾಲದಲ್ಲಿ ಕೃಷಿವ್ಯವಸ್ಥೆಯನ್ನು ಮುಂದುವರಿಸಿರುವುದನ್ನು ನೋಡಬಹುದು.

ಗ್ರಾಮೀಣ ಆರ್ಥಿಕ ವ್ಯವಸ್ಥೆಯಲ್ಲಿ ಕೃಷಿ ಉತ್ಪನ್ನಗಳನ್ನು ಮುಖ್ಯವಾಗಿ ಪರಿಗಣಿಸಬೇಕಾಗುತ್ತದೆ. ಬಹಮನಿ ಸಾಮ್ರಾಜ್ಯದ ನಂತರ ಅಧಿಕಾರಕ್ಕೆ ಬಂದ ಬಿಜಾಪುರದ ಸುಲ್ತಾನರು ಕೃಷಿಗೆ ಪ್ರಾಮುಖ್ಯತೆಯನ್ನು ನೀಡಿದ್ದರು. ಕಬ್ಬು ಮತ್ತು ಭತ್ತವನ್ನು ಒಂದೇ ರೀತಿಯ ಮಣ್ಣಿನ ಗುಣಗಳಿರುವ ಕಡೆ ಬೆಳೆಯುತ್ತಿದ್ದರು. ಒಂದೇ ಭೂಮಿಯಲ್ಲಿ ಕುಳೆ ಬದಲಾಯಿಸುವ ಪದ್ಧತಿಯಂತೆ ಒಂದು ಕಾಲದಲ್ಲಿ ಕಬ್ಬು ಬೆಳೆದ ಭೂಮಿಯಲ್ಲಿ ಇನ್ನೊಂದು ಬೆಳೆ ಭತ್ತವನ್ನು ಬೆಳೆಯುತ್ತಿದ್ದರು. ಬೇಳೆ ಕಾಳುಗಳು, ಎಣ್ಣೆ ಬೀಜಗಳು, ಹತ್ತಿ ಮೊದಲಾದವನ್ನು ಬೆಳೆಯುತ್ತಿದ್ದರು. ದಖ್ಖನಿನಲ್ಲಿ ಮುಖ್ಯವಾಗಿ ಬೆಳೆಯಲಾಗುತ್ತಿದ್ದ ಜೋಳ, ಮೆಕ್ಕೆಜೋಳ ಬೇಳೆಕಾಳು, ಹತ್ತಿ, ಎಣ್ಣೆ ಬೀಜಗಳು, ಕಬ್ಬು, ತರಕಾರಿಗಳು, ಹಣ್ಣುಗಳು ವೈದ್ಯಕೀಯ ಗಿಡಮೂಲಿಕೆಗಳ ಬೆಳೆಗಳನ್ನು ಬೆಳೆಯುತ್ತಿದ್ದರು(ಷೇಕ್ ಅಲಿ,೨೦೧೮:೨೯).

ಹಾಗೆಯೇ ಮಾವು, ಬಾಳೆ, ದ್ರಾಕ್ಷಿ, ನಿಂಬೆ ಜಾತಿಯ ಹಣ್ಣುಗಳು, ತೆಂಗು, ಅಡಿಕೆ ಇತ್ಯಾದಿಗಳನ್ನು ಬೆಳೆಯುತ್ತಿದ್ದರು. ವಾಣಿಜ್ಯ ಬೆಳೆಗಳಾದ ಮೆಣಸು, ಏಲಕ್ಕಿ, ಹುಣಸೆ, ಶುಂಠಿ, ವೀಳ್ಯದೆಲೆ, ಹಿಪ್ಪುನೇರಳೆ, ತೆಂಗು ಮತ್ತು ಅಡಿಕೆಗಳು ದೊಡ್ಡ ಪ್ಲಾಂಟೇಷನ್‌ಗಳಲ್ಲಿ ಬೆಳೆಯುತ್ತಿದ್ದರು. ಈ ಪ್ಲಾಂಟೇಷನ್ ಆರ್ಥಿಕತೆಯು ಇಂಗ್ಲಿಶರಿಂದ ಪರಿಚಯಿಸಲ್ಪಟ್ಟಿತ್ತು. ಬಂಡವಾಳಶಾಹಿತ್ವದ ಪರಿಕಲ್ಪನೆಯನ್ನು ಬೆಳೆಸಿ ಕೂಲಿ ಕಾರ್ಮಿಕರು ಮತ್ತು ಬಂಡವಾಳಗಾರರ ಮಧ್ಯೆ ಹೆಚ್ಚಿನ ಅಂತರ ಕಾಯ್ದುಕೊಳ್ಳುವಂತೆ ಮಾಡಿತು. ಈ ಮೂಲಕವಾಗಿ ವಿಜಾಪುರದ ಸುಲ್ತಾನರ ಕಾಲದಲ್ಲಿ ಕೃಷಿ ನೀರಾವರಿಯು ಅಭಿವೃದ್ಧಿಗೊಂಡಿದ್ದು, ನೀರನ್ನು ನದಿ ಮತ್ತು ಕಾಲುವೆ, ಕೆರೆಗಳಲ್ಲಿ ಹರಿಸುವ ಮೂಲಕ ನೀರಿನ ಮೂಲಗಳನ್ನು ಅಭಿವೃದ್ಧಿಗೊಳಿಸಿದರು. ಈ ಮೂಲಕ ಕೃಷಿ ನೀರಾವರಿಗೆ ಪ್ರೋತ್ಸಾಹವನ್ನು ನೀಡಿದರು. ತಂಬಾಕನ್ನು ಬಿಜಾಪುರದ ಆದಿಲ್‌ಶಾಹಿಗಳು ಪ್ರೋತ್ಸಾಹಿಸಿದ್ದರು. ಈ ಬೆಳೆಯು ರಾಜ್ಯಕ್ಕೆ ಹೆಚ್ಚಿನ ಆದಾಯ ತರುತ್ತಿತ್ತು.

ಮೈಸೂರು ಒಡೆಯರು ಗ್ರಾಮೀಣ ಮತ್ತು ನಗರ ಆರ್ಥಿಕತೆಯನ್ನು ರೂಪಿಸಿದ್ದರು. ಗ್ರಾಮೀಣ ಆರ್ಥಿಕತೆಯಲ್ಲಿ ಕೃಷಿ ಉತ್ಪನ್ನಗಳಾಗಿ ಧಾನ್ಯಗಳಲ್ಲಿ ಹುರುಳಿ, ಅವರೆ, ತೊಗರಿ ಪ್ರಮುಖವಾಗಿದ್ದವು. ಅರಣ್ಯ ಉತ್ಪನ್ನಗಳನ್ನು ಬೆಳೆಯುತ್ತಿದ್ದು ಅಂಟು ಮತ್ತು ಶ್ರೀಗಂಧಗಳು ಅರಣ್ಯ ಉತ್ಪನ್ನಗಳಾಗಿದ್ದವು. ಈ ಮೂಲಕ ಗ್ರಾಮೀಣ ಆರ್ಥಿಕತೆಯಲ್ಲಿ ಹಳ್ಳಿಯವರು ಸ್ವಯಂಪರಿಪೂರ್ಣತೆಯಿಂದ ಸ್ವಾವಲಂಬನೆಯನ್ನು ಸಾಧಿಸಿದ್ದರು(ಚಂದ್ರಶೇಖರ್,ರಾವ್.ಲ, ೨೦೧೬:೩೧). ಕರ್ನಾಟಕದಲ್ಲಿ ಬೆಳೆಯುವ ಶ್ರೀಗಂಧದ ಮರಕ್ಕೆ ವಿದೇಶದಲ್ಲಿ ಭಾರಿ ಬೇಡಿಕೆ ಇದ್ದು ಟಿಪ್ಪು ಕಾಲದಲ್ಲಿ ಈ ಉತ್ಪನ್ನಕ್ಕೆ ಹೆಚ್ಚು ಪ್ರೋತ್ಸಾಹ ನೀಡಿದ್ದನು. ಪೋರ್ಚುಗೀಸರು ಭಾರತಕ್ಕೆ ಬಂದಾಗ ಅರಣ್ಯ ಉತ್ಪನ್ನಗಳಿಗೆ ಬೇಡಿಕೆ ಇದ್ದು ಮರದ ಆಲಂಕಾರಿಕ ವಸ್ತುಗಳ ತಯಾರಿಕೆಗೆ ಪ್ರೋತ್ಸಾಹವನ್ನು ನೀಡುತ್ತಿದ್ದರು. ಟಿಪ್ಪು ಸುಲ್ತಾನ ಇವುಗಳ ನಿರ್ಮಾಣಕ್ಕೆ ಪ್ರಾಮುಖ್ಯತೆ ನೀಡಿದ್ದನು.

ಕೆಂಪೇಗೌಡನ ಆಳ್ವಿಕೆಯಲ್ಲಿ ಕೃಷಿಯ ಜೊತೆ ಜೊತೆಯಲ್ಲಿಯೇ ಅದಕ್ಕೆ ಪೂರಕವಾಗಿ ತೋಟಗಾರಿಕೆಯ ಬೆಳೆಗೆ ಸರ್ಕಾರದ ವತಿಯಿಂದ ವಿಶೇಷವಾದ ಬೆಂಬಲವನ್ನು ನೀಡಿದ್ದರು. ಬೆಂಗಳೂರು ಪ್ರದೇಶವು ಆರಂಭದಿಂದಲೂ ವ್ಯಾಪಾರಕೇಂದ್ರವಾಗಿದ್ದು, ನಗರೀಕರಣ ಪ್ರಕ್ರಿಯೆಗೆ ಒಳಪಟಿತ್ತು. ಯಲಹಂಕ ನಾಡಪ್ರಭುಗಳು ಬೆಂಗಳೂರನ್ನು ಕೇಂದ್ರಸ್ಥಾನವನ್ನಾಗಿ ಮಾಡಿಕೊಂಡು ಆ ಭಾಗದಲ್ಲಿ ಕೆರೆ ಕಟ್ಟೆಗಳ ನಿರ್ಮಾಣದ ಜೊತೆ ನಾಗರಿಕರಿಗೆ ಅವಶ್ಯಕವಾದ ಆಹಾರ ಧಾನ್ಯಗಳನ್ನು ಪೂರೈಕೆ ಮಾಡುತ್ತಿದ್ದರು. ಹೂವು, ಹಣ್ಣು, ತರಕಾರಿಗಳನ್ನು ಬೆಳೆದು ಈ ಭಾಗದ ಜನರಿಗೆ ಒದಗಿಸುತ್ತಿದ್ದರೆಂದು ಹೇಳಬಹುದು. ಬೆಂಗಳೂರಿನಲ್ಲಿ ಪ್ರಸ್ತುತ ಪ್ರವಾಸಿತಾಣವಾದ ಲಾಲ್‌ಬಾಗ್ ಎಂದು ಕರೆಯುವ ಇದಕ್ಕೆ ಯಲಹಂಕ ನಾಡಪ್ರಭುಗಳು ಮತ್ತು ಟಿಪ್ಪುಸುಲ್ತಾನನು ವಿಶೇಷವಾದ ಪ್ರೋತ್ಸಾಹವನ್ನು ನೀಡಿದ್ದರು. ಮೈಸೂರು ಸಂಸ್ಥಾನ ಮತ್ತು ಯಲಹಂಕ ನಾಡಪ್ರಭು ಕೆಂಪೇಗೌಡನ ಆಳ್ವಿಕೆಯಲ್ಲಿ ಮಾವಿನ ತೋಟಗಳ ಅಭಿವೃದ್ಧಿಗೆ ವಿಶೇಷವಾದ ಪಾಮುಖ್ಯತೆಯನ್ನು ನೀಡಿದ್ದರು. ಈ ಭಾಗದಲ್ಲಿ ಮಾವಿನಹಳ್ಳಿ ಎಂಬ ಹೆಸರಿನ ಒಂದು ಗ್ರಾಮವಿದೆ. ಇಲ್ಲಿ ಮಾವಿನ ತೋಟಗಳಿದ್ದುದರಿಂದ ಈ ಹೆಸರು ಬಂದಿದೆ ಎಂದು ಹೇಳಬಹುದು. ಕಾರಣ ಈ ಹಳ್ಳಿಯಿಂದ ಕಸಿ ಮಾಡಿದ ಸಸಿಗಳು ಯಲಹಂಕ, ಮಾಗಡಿ, ಕೋಲಾರ, ತಮಿಳುನಾಡಿನ ಕಡೆ ರವಾನೆಗೊಂಡು ಈ ಎಲ್ಲ ಪ್ರದೇಶಗಳಲ್ಲಿಯೂ ಮಾವಿನದ ಬೆಳೆ ಹೆಚ್ಚಾಗಿ ಕಂಡುಬರುತ್ತದೆ(ಚಂದ್ರಶೇಖರ, ರಾವ್, ೨೦೧೬:೩೧). ಮಾವಿನ ಹೊಸ ಹೊಸ ತಳಿಗಳನ್ನು ಟಿಪ್ಪು ಪರಿಚಯಿಸಿದನು.

ರಾಗಿ, ಜೋಳ, ನವಣೆ, ಭತ್ತ ಇವರ ಪ್ರಮುಖ ಕೃಷಿ ಉತ್ಪನ್ನಗಳಾಗಿದ್ದು, ಹರಪನಹಳ್ಳಿ ಪ್ರದೇಶವು ಬಯಲುಸೀಮೆಯನ್ನು ಹೊಂದಿದ್ದರಿಂದ ಅನೇಕ ಕೆರೆ ಕಾಲುವೆಗಳನ್ನು ಈ ನಾಯಕರು ನಿರ್ಮಿಸಿದ್ದು ಕಂಡುಬರುತ್ತದೆ. ಭತ್ತ ಇವರ ಪ್ರಮುಖ ಬೆಳೆಯಾಗಿತ್ತು. ಕೆರೆ ನೀರಾವರಿಯನ್ನು ಅವಲಂಬಿಸಿ ಈ ಬೆಳೆಯನ್ನು ಬೆಳೆಯುತ್ತಿದ್ದರು. ಹರಪನಹಳ್ಳಿ ಪಾಳೆಯಗಾರರು ಕೃಷಿ ನೀರಾವರಿಯ ಜೊತೆಗೆ ಕುರಿ ಸಾಕಣೆಯ ಉದ್ಯಮಕ್ಕೆ ಪ್ರೋತ್ಸಾಹವನ್ನು ನೀಡಿದ್ದರೆಂಬುದು ಅವರ ಕಾಲದ ಶಾಸನಗಳಿಂದ ತಿಳಿಯಬಹುದು.

ಬಳ್ಳಾರಿ ಪ್ರದೇಶದಲ್ಲಿ ಏಲಕ್ಕಿ, ಸೇಂಗಾ, ತಂಬಾಕು, ಪುಂಡಿ, ಸೆಣಬು ನಾರುಗಳನ್ನು ಬೆಳೆಯುತ್ತಿದ್ದರೆಂದು ಕಂಡುಬರುತ್ತದೆ(ಷೇಕ್ ಅಲಿ, ೨೦೧೮:೪೫೬). ಹಾಗಲವಾಡಿ ಭಾಗದಲ್ಲಿ ಎಳ್ಳು, ಗುರೆಳ್ಳು, ಕುಸುಬೆಯಂತಹ ಎಣ್ಣೆಕಾಳುಗಳನ್ನು ಬೆಳೆಯುತ್ತಿದ್ದದರಿಂದ ಈ ಭಾಗದಲ್ಲಿ ಎಣ್ಣೆ ತೆಗೆಯುವ ಗಾಣಗಳು ಇದ್ದವು. ಔಡಲ, ಹೊಂಗೆ, ಬೇವು, ಕಡಲೇಕಾಯಿ ಮೊದಲಾದ ಎಣ್ಣೆ ತೆಗೆಯುವ ತೈಲ ಬೆಳೆಗಳನ್ನು ಬೆಳೆಯುತ್ತಿದ್ದರು. ಕರ್ನಾಟಕದ ಎಲ್ಲ ಭಾಗಗಳಲ್ಲಿಯೂ ಈ ರೀತಿಯ ಬೆಳೆಯನ್ನು ಬೆಳೆಯುತ್ತಿದ್ದರು. ಕರಾವಳಿ ಕರ್ನಾಟಕದ ಭಾಗವನ್ನು ಹೊರತುಪಡಿಸಿದರೆ ಬೇರೆ ಕಡೆಯಲ್ಲಿ ಒಂದೇ ರೀತಿಯಾದಂತಹ ಬೆಳೆಗಳನ್ನು ಗುರುತಿಸಬಹುದು.

ಸಂತೆಬೆನ್ನೂರು ನಾಯಕರ ಕುಂದೂರು ತಾಮ್ರಶಾಸನದಲ್ಲಿ ರಾಗಿಯ ಉಲ್ಲೇಖವಿದೆ (ಸಾಮಕ. ಇತಿ ದರ್ಶ:೧೬೦). ಈ ಮೂಲಕ ಕರ್ನಾಟಕ ಬಯಲುಸೀಮೆ ಮತ್ತು ದಕ್ಷಿಣ ಕರ್ನಾಟಕದ ಭಾಗದಲ್ಲಿ ರಾಗಿಯು ಪ್ರಮುಖ ಬೆಳೆಯೆಂದು ಪರಿಗಣಿಸಬದಾಗಿದೆ. ಕಾರಣ ಕರ್ನಾಟಕದ ಈ ಭಾಗದಲ್ಲಿ ರಾಗಿಯು ಆಹಾರ ಬೆಳೆಯಾಗಿ ಪರಿಗಣಿಸಿದ್ದರು. ಬಯಲುಪ್ರದೇಶದಲ್ಲಿ ಹತ್ತಿಯು ಈ ಭಾಗದಲ್ಲಿ ಪ್ರಮುಖ ವಾಣಿಜ್ಯ ಬೆಳೆಯಾಗಿತ್ತೆಂದು ಪ್ರಸ್ತುತ ವರ್ತಮಾನದಲ್ಲಿಯೂ ಇದೇ ರೀತಿಯ ಬೆಳೆಗಳನ್ನು ಈ ಭಾಗದಲ್ಲಿ ಬೆಳೆಯುತ್ತಿರುವುದನ್ನು ಗಮನಿಸಬಹುದು. ಕರ್ನಾಟಕವನ್ನಾಳಿದ ಈ ಪಾಳೆಯಪಟ್ಟುಗಳು ಹೆಚ್ಚು ಕಡಿಮೆ ಒಂದೇ ರೀತಿಯ ಬೆಳೆಯನ್ನು ಬೆಳೆಯುತ್ತಿದ್ದರೆಂದು ಕಂಡುಬರುತ್ತದೆ.

ಮೈಸೂರು ಸಂಸ್ಥಾನದಲ್ಲಿ ರೇಷ್ಮೆ ಉದ್ಯಮವನ್ನು ಅಭಿವೃದ್ಧಿಪಡಿಸಬೇಕೆಂಬ ಉತ್ಸುಕತೆಯಿಂದ ಹಿಪ್ಪುನೇರಳೆ ಕೃಷಿಯನ್ನು ಟಿಪ್ಪು ಪ್ರೋತ್ಸಾಹಿಸಿದ್ದನು. ಆರಂಭದಲ್ಲಿ ಗಸಗಸೆ, ಇಂಡಿಗೋ ಇವು ವಾಣಿಜ್ಯ ಬೆಳೆಗಳಾಗಿದ್ದು, ಇವುಗಳನ್ನು ಬ್ರಿಟಿಶರು ಭಾರತಕ್ಕೆ ಪರಿಚಯಿಸಿದಾಗ ಭಾರತದಲ್ಲಿ ಇಂತಹ ಬೆಳೆಗಳಿಗೆ ಟಿಪ್ಪು ಸಹ ಪ್ರೋತ್ಸಾಹವನ್ನು ನೀಡಿದ್ದನು(ಷೇಕ್ ಅಲಿ೨೦೧೮:೬೫೪). ಟಿಪ್ಪು ಗಸಗಸೆ ಮತ್ತು ತಂಬಾಕು ಬೆಳೆಯನ್ನು ಆಸ್ಥಾನದಲ್ಲಿ ನಿಷೇಧಿಸಿದ್ದನು. ಮಲಬಾರ್ ತೀರದಲ್ಲಿ ಡಚ್-ಇಂಗ್ಲಿಶ-ಪೋರ್ಚುಗೀಸರು ವ್ಯಾಪಾರಿ ಕೋಠಿಗಳನ್ನು ಹೊಂದಿದ್ದರು. ತೇಗದ ಮರ ಮತ್ತು ಶ್ರೀಗಂಧದ ಮರಗಳು ಅರಣ್ಯ ಉತ್ಪನ್ನಗಳಾಗಿದ್ದು, ಇವುಗಳನ್ನು ಚೀನಾಕ್ಕೆ ಹೆಚ್ಚಿನ ಪ್ರಮಾಣದಲ್ಲಿ ರಫ್ತು ಮಾಡಲಾಯಿತು(ಚಂದ್ರಶೇಖರ್, ರಾವ್,(ಲ).೨೦೧೬:೬೩). ಹಾಗೆಯೇ ಕರ್ನಾಟಕದಲ್ಲಿ ಬೆಳೆಯುವ ಲವಂಗ ಬೆಳೆಗೆ ಡಚ್ ಮತ್ತು ಅರಬ್ ತೀರದ ಮಾರುಕಟ್ಟೆಗಳಲ್ಲಿ ಹೆಚ್ಚಿನ ಬೇಡಿಕೆ ವಸ್ತುಗಳಾಗಿದ್ದವು. ಟಿಪ್ಪು ಸುಲ್ತಾನ್ ಅರಬರೊಂದಿಗೆ ವ್ಯಾಪಾರ ಸಂಬಂಧವನ್ನು ಹೊಂದಿದ್ದರಿಂದ ಲವಂಗದ ಉತ್ಪಾದನೆಗೆ ವಿಶೇಷ ಮಹತ್ವ ನೀಡಿದ್ದನು. ಇಂಗ್ಲಿಶರು ಕರಿಮೆಣಸನ್ನು ಮಾತ್ರ ಇಂಗ್ಲೆಂಡಿಗೆ ರಫ್ತು ಮಾಡುತ್ತಿದ್ದು ಇಂಗ್ಲಿಶರು ಈ ಬೆಳೆಗೆ ಮಹತ್ವವನ್ನು ನೀಡಿದ್ದರು. ಇಂಗ್ಲಿಶರು ಮತ್ತು ಪೋರ್ಚುಗೀಸರು ಭಾರತದಲ್ಲಿ ಹಲವಾರು ಕೃಷಿ ಉತ್ಪನ್ನಗಳನ್ನು ತೋಟದ ಬೆಳೆಗಳನ್ನು ಬೆಳೆಯಲು ಕೃಷಿತಜ್ಞರನ್ನು ಕರೆಸಿ ವಾಣಿಜ್ಯಬೆಳೆಗಳನ್ನು ಬೆಳೆಯಲು ಮುಂದಾದರು.

ಕರಾವಳಿ ಕರ್ನಾಟಕದ ಕೃಷಿ ಉತ್ಪನ್ನಗಳು ಹೆಚ್ಚಿನದಾಗಿ ಕಾಫಿ, ಭತ್ತ, ಗೋಡಂಬಿ, ಮೆಣಸು, ಸಂಬಾರು ಪದಾರ್ಥಗಳು ಈ ಭಾಗದ ಜನರಿಗೆ ಅವಶ್ಯಕವಾಗಿದ್ದವು. ಸಕ್ಕರೆಯಲ್ಲದೆ ಘಟ್ಟದ

ಮೇಲಿನಿಂದ ತರುತ್ತಿದ್ದ ಬೇರೆ ವಸ್ತುಗಳೆಂದರೆ ಅಕ್ಕಿ, ಗೋಧಿ, ಕಡಲೆ, ಉದ್ದು, ಹೆಸರು, ಎಳ್ಳು, ಕಬ್ಬು, ಮೆಂತ್ಯ, ತುಪ್ಪ, ಬೆಲ್ಲ, ಈ ರೀತಿಯಾದ ಉತ್ಪನ್ನಗಳನ್ನು ಬಯಲುಸೀಮೆಯ ಮಧ್ಯಕರ್ನಾಟಕ ಮತ್ತು ಉತ್ತರ ಕರ್ನಾಟಕ ಭಾಗಗಳಿಂದ ಕರಾವಳಿ ಭಾಗಕ್ಕೆ ರಫ್ತಾಗುತ್ತಿದ್ದು ಅಲ್ಲಿಂದಲೇ ಕೆಲವು ವಸ್ತುಗಳು ವಿದೇಶಗಳಿಗೆ ಕಳುಹಿಸಿಕೊಡಲಾಗುತ್ತಿತ್ತು.

ಕರಾವಳಿ ಕರ್ನಾಟಕದಲ್ಲಿ ಬ್ರಿಟಿಶರು ಪ್ರಥಮ ಬಾರಿಗೆ ೧೬೩೭ರಲ್ಲಿ ಕಾರವಾರದಲ್ಲಿ ವ್ಯಾಪಾರ ಮಳಿಗೆ ಸ್ಥಾಪಿಸಿದರು. ಈ ಮೂಲಕವಾಗಿ ಭಾರತದಲ್ಲಿ ಬೆಳೆಯುವ ಸಾಂಬಾರು ಪದಾರ್ಥಗಳ ಬೇಡಿಕೆಯಿಂದ ಕರಿಮೆಣಸು ಮೊದಲಾದ ವಸ್ತುಗಳನ್ನು ಸ್ಥಳೀಯರು ಉತ್ಪಾದಿಸುತ್ತಿದ್ದರು. ಯುರೋಪಿನ ದೇಶಗಳಲ್ಲಿ ಹತ್ತಿ ಉತ್ಪಾದನೆಯಲ್ಲಿ ತೊಂದರೆ ಉಂಟಾದಾಗ ಇಂಗ್ಲೆಂಡಿಗೆ ಭಾರತದಿಂದ ಹತ್ತಿಯನ್ನು ಸರಬರಾಜು ಮಾಡುವ ಅನಿವಾರ್ಯ ಉಂಟಾಯಿತು. ಮುಂಬೈ ಪ್ರಾಂತ್ಯಕ್ಕೆ ಸಂಬಂಧಪಟ್ಟ ಧಾರವಾಡ, ಹುಬ್ಬಳ್ಳಿಗಳಿಂದ ಹತ್ತಿಯನ್ನು ಕಾರಾವಾರ ಬಂದರಿನ ಮೂಲಕ ರವಾನಿಸಿಕೊಳ್ಳುತ್ತಿದ್ದರು. ಈ ಮೂಲಕವಾಗಿ ಕರ್ನಾಟಕದ ವಾಣಿಜ್ಯೋದ್ಯಮದಲ್ಲಿ ಕರಾವಳಿ ಭಾಗದಲ್ಲಿ ಹತ್ತಿ ಬೆಳೆಯುವುದಕ್ಕೆ ಕಾರಣವಾಯಿತು. ಅಂದಿನ ಕರ್ನಾಟಕದ ಕೆಲವು ಭಾಗಗಳ ಮೂಲಕ ಕರಾವಳಿ ಪ್ರದೇಶವು ವಿಭಜನೆಗೊಂಡು ಉತ್ತರ ಕನ್ನಡ ಪ್ರೆಸಿಡೆನ್ಸಿಗೂ, ದಕ್ಷಿಣ ಕನ್ನಡ ಮದ್ರಾಸ್ ಪ್ರೆಸಿಡೆನ್ಸಿಗೂ ಸೇರಿಕೊಂಡಿತ್ತು. ಬಾಂಬೆ ಪ್ರೆಸಿಡೆನ್ಸಿಯನ್ನು ಹತ್ತಿ ವಲಯವನ್ನಾಗಿ ಅಭಿವೃದ್ಧಿಪಡಿಸುವ ಯೋಜನೆಯನ್ನು ರೂಪಿಸಲಾಯಿತು(ರೈ, ೨೦೧೬:೧೦). ಈ ಮೂಲಕ ಬ್ರಿಟಿಶರು ಕರ್ನಾಟಕದಲ್ಲಿ ಹತ್ತಿ ಬೆಳೆಯ ಆಧಾರದ ಮೇಲೆ ವಿಭಜನೆ ಮಾಡಿ ರಾಜಕೀಯ ಕಾರ್ಯವನ್ನು ನಿರ್ವಹಿಸಿದರು ಎಂದರೆ ತಪ್ಪಾಗಲಾರದು. ಕರಿಮೆಣಸಿನ ವ್ಯಾಪಾರದ ನಂತರ ಬೆಳೆಗಳ ಮೂಲಕ ಬ್ರಿಟಿಶರ ಆರ್ಥಿಕ ನೀತಿಗಳು ಗಟ್ಟಿಗೊಂಡವು.

"ಕರ್ನಾಟಕದ ವಿವಿಧ ಭಾಗಗಳಲ್ಲಿ ಬೆಳೆದ ಹತ್ತಿಯನ್ನು ಕಾರವಾರ ಮತ್ತು ಕುಮುಟಾ ಬಂದರುಗಳ ಮೂಲಕ ರವಾನಿಸುತ್ತಿದ್ದರು. ಬ್ರಿಟಿಶರು ಈ ಅವಧಿಯಲ್ಲಿ ಬಂಡವಾಳಕೇಂದ್ರಿತ ಆರ್ಥಿಕ ನೀತಿ ಕೃಷಿಯ ಹಾಗೆಯೇ ಇರಗೊಡುವ ಬದಲು ಲಾಭದಾಯಕ ಉದ್ದಿಮೆಯನ್ನಾಗಿ ಪರಿವರ್ತಿಸುವ ಪ್ರಯತ್ನ ಮಾಡಿ ಯಶಸ್ವಿಯಾದರು. ವಾಣಿಜ್ಯ ಬೆಳೆಗಳಿಗೆ ಪ್ರೋತ್ಸಾಹ ನೀಡಿ ಇಂಗ್ಲೆಂಡಿನ ಮಿಲ್‌ಗಳ ಕಚ್ಚಾಸಾಮಗ್ರಿಗಳ ಕೊರತೆಯನ್ನು ನೀಗಿಸಿಕೊಂಡರು. ಇಂಗ್ಲೆಂಡಿನ ಕೈಗಾರೀಕರಣಕ್ಕೆ ಭಾರತ ಕೃಷಿಪ್ರಧಾನ ರಾಷ್ಟ್ರವಾಗಿ ಉಳಿಯಬೇಕಾದುದು ಬ್ರಿಟನ್ ಸರ್ಕಾರದ ಸ್ಪಷ್ಟ ಧೋರಣೆಯಾಗಿತ್ತು(ರೈ, ೨೦೧೦:೪). ಬ್ರಿಟಿಶರು ಭಾರತದ ಜೀವನಾವಶ್ಯಕ ಆಹಾರದ ಬೆಳೆಗಳ ಕೃಷಿಯನ್ನು ಮೂಲೆಗುಂಪು ಮಾಡಿದ್ದರಿಂದ ವಾಣಿಜ್ಯ ಬೆಳೆಗಳ ತೋಟಗಳೂ ಹೊಸ ಹೊಸ ಪ್ಲಾಂಟರ್‌ಗಳು ಈ ಅವಧಿಯಲ್ಲಿ ಬೆಳೆದುಬಂದವು. ಈ ಮೂಲಕ ಬ್ರಿಟಿಶರ ವಾಣಿಜ್ಯೀಕರಣ ಧೋರಣೆಯನ್ನು ಇಲ್ಲಿ ಗಮನಿಸಬಹುದಾಗಿದೆ.

ಕರಾವಳಿ ಕರ್ನಾಟಕದಿಂದ ರಫ್ತಾಗುತ್ತಿದ್ದ ವಸ್ತುಗಳಲ್ಲಿ ಅಕ್ಕಿ ಅತ್ಯಂತ ದೊಡ್ಡ ಪ್ರಮಾಣದಲ್ಲಿತ್ತು. ಇದನ್ನು ಮಸ್ಕತ್, ಮುಂಬೈ, ಗೋವಾ, ಮತ್ತು ಮಲಬಾರ್‌ಗೆ ರಫ್ತು ಮಾಡಲಾಗುತ್ತಿತ್ತು. ರಫ್ತಿನಲ್ಲಿ

ಅಕ್ಕಿಯ ನಂತರ ಅಡಿಕೆ ಪ್ರಮುಖ ಸ್ಥಾನ ಹೊಂದಿತ್ತು. ಇದೇ ರೀತಿಯ ಸಂಬಾರು ಪದಾರ್ಥಗಳಾದ ಕರಿಮೆಣಸು, ಏಲಕ್ಕಿ, ದಾಲ್ಚಿನ್ನಿಗಳು ದೊಡ್ಡ ಪ್ರಮಾಣದಲ್ಲಿ ರಫ್ತಾಗುತ್ತಿತ್ತು(ಬುಕಾನನ್, ೩:೧೮೭೦:೨೪೩). ಈ ಮೂಲಕ ಕರ್ನಾಟಕದಲ್ಲಿ ಅಕ್ಕಿ ಅಡಿಕೆ ಮತ್ತು ಸಂಬಾರು ಪದಾರ್ಥಗಳಿಗೆ ಅಪಾರ ಬೇಡಿಕೆ ಇರುವುದನ್ನು ಗಮನಿಸಬಹುದಾಗಿದೆ. ಕ್ರಿ.ಶ.೧೯ನೇ ಶತಮಾನದಲ್ಲಿ ಕಾರವಾರವು ಪ್ರಮುಖ ಕೃಷಿ ಸಂಬಂಧಿತ ವ್ಯಾಪಾರಕೇಂದ್ರವಾಗಿ ರೂಪುಗೊಂಡಿತು. ಕಾರವಾರವು ಬ್ರಿಟನ್‌ನೊಂದಿಗೆ ನೇರ ವ್ಯಾಪಾರ ಸಂಬಂಧವನ್ನು ಹೊಂದಿತ್ತು. ಕಾರವಾರಕ್ಕೆ ಬರುವ ಪ್ರಮುಖ ಕೃಷಿ ಉತ್ಪನ್ನಗಳೆಂದರೆ ಅಕ್ಕಿ, ಕರಿಮೆಣಸು, ಏಲಕ್ಕಿ, ತೆಂಗಿನಕಾಯಿ ಮುಂತಾದವು. ಕಾರವಾರ ಪ್ರದೇಶದಲ್ಲಿ ಬೆಳೆಯುವ ಕರಿಮೆಣಸಿಗೆ ಯುರೋಪಿನ ದೇಶಗಳಲ್ಲಿ ಅತ್ಯಂತ ಹೆಚ್ಚಿನ ಬೇಡಿಕೆಯಿತ್ತು. ಪಂಚಗಂಗಾವಳಿ ನದಿಯು ಅರಬ್ಬೀಸಮುದ್ರಕ್ಕೆ ಸೇರುವ ಪ್ರದೇಶದಲ್ಲಿರುವ ಗಂಗೊಳ್ಳಿಯ ಕೃಷಿ ಉತ್ಪನ್ನಗಳಾದ ಅಕ್ಕಿ, ಕಬ್ಬು, ತೆಂಗು, ವೀಳ್ಯದೆಲೆ, ಗೇರುಬೀಜ ಮುಂತಾದವುಗಳ ವ್ಯಾಪಾರಕೇಂದ್ರವಾಗಿತ್ತು(ರೈ, ೨೦:೪೪)

ಕೊಡಗಿನ ಹಾಲೇರಿ ಮನೆತನವು ಮೈಸೂರು ಸಂಸ್ಥಾನದ ಜೊತೆ ಜೊತೆಯಲ್ಲಿ ಕರ್ನಾಟಕದಲ್ಲಿ ಗುರುತಿಸಿಕೊಂಡ ಪ್ರಮುಖ ಮನೆತನವಾಗಿದೆ. ಮಾನವನಿರ್ಮಿತ ಕೆರೆಗಳು ಮತ್ತು ನಿಸರ್ಗ ನಿರ್ಮಿತ ಕೆರೆಗಳು ಈ ಕಾಲಘಟ್ಟದಲ್ಲಿದ್ದು, ಈ ಪನ್ಯ ಜಮೀನುಗಳು ಹಾಲೇರಿ ಅರಸರ ಕಾಲದಲ್ಲಿ ರಾಜನ ಖಾಸಗಿ ಜಮೀನುಗಳಲ್ಲಿ ಭತ್ತ ಬೆಳೆಯುತ್ತಿದ್ದರು. ವೀರರಾಜನ ಕಾಲಕ್ಕೆ ಇಂತಹ ಜಮೀನುಗಳಿದ್ದು ವಿಪುಲವಾಗಿ ಭತ್ತ ಬೆಳೆಯಲಾಗುತ್ತಿತ್ತು(ನಾಗರಾಜಯ್ಯ ೨೦೦೪:೧೧೫). ಈ ಮನೆತನದ ಕಾಲದಲ್ಲಿ ಬೇರೆ ಬೆಳೆಗಳಿಗಿಂತ ಹೆಚ್ಚಾಗಿ ಭತ್ತವನ್ನು ಬೆಳೆಯುತ್ತಿದ್ದು, ಕೆಂಪು, ಬಿಳಿ, ಭತ್ತ ಎಂದು ವಿಭಾಗಿಸಿದ್ದರು.

ಭತ್ತ ಮುಖ್ಯ ಕೃಷಿ ಬೆಳೆಯಾಗಿದ್ದು, ಮೆಣಸು ತೋಟದಲ್ಲಿ ಬೆಳೆಯುವ ಆರ್ಥಿಕ ಬೆಳೆಯಾಗಿತ್ತು. ಭೂಮಿಯ ಫಲವತ್ತತೆಯನ್ನು ಹೆಚ್ಚಿಸಲು ಕೆಲವು ವರ್ಷದ ಕೆಲ ಅವಧಿಯಲ್ಲಿ ಕಬ್ಬು, ತರಕಾರಿಗಳನ್ನು ರೈತರು ಬೆಳೆಯುತ್ತಿದ್ದರು. ಜಮ್ಮಾಮಲೆಗಳಲ್ಲಿ ಏಲಕ್ಕಿಯನ್ನು ಬೆಳೆಯುತ್ತಿದ್ದರು. ಯುರೋಪಿಯನ್ನರ ಮೂಲಕ ಕೊಡಗಿಗೆ ಮೊದಲು ಕಾಫಿ ಬೆಳೆ ಕಾಲಿಟ್ಟಿದ್ದು ಈ ಕಾಲದಲ್ಲಿ. ನಾಲ್ಕುನಾಡಿನ ಇಬ್ಬರು ಮಾಪಿಳ್ಳೆಗಳು ಮಲೆಯಾಳದಿಂದ ಕಾಫಿ ಬೀಜವನ್ನು ತಂದು ತಮ್ಮ ಹಿತ್ತಲಲ್ಲಿ ಬೆಳೆಯಲಾರಂಭಿಸಿದರು. ಈ ಮೂಲಕ ಕರ್ನಾಟಕದಿಂದಲೇ ಕಾಫಿಯನ್ನು ಉತ್ಪಾಧಿಸಲಾರಂಭಿಸಿದರು. ಪಶ್ಚಿಮಘಟ್ಟ ಮತ್ತು ಪೂರ್ವಘಟ್ಟ ಭಾಗಗಳಲ್ಲಿ ಕಾಫಿಯನ್ನು ಆಧುನಿಕ ಸಂದರ್ಭದಲ್ಲಿಯೂ ಬೆಳೆಯುತ್ತಿದ್ದು, ಮಡಿಕೇರಿ ಮತ್ತು ಕೊಡಗಿನ ಭಾಗದಲ್ಲಿ ಅತಿ ಹೆಚ್ಚು ಕಾಫಿ ಎಸ್ಟೇಟ್‌ಗಳು ಹುಟ್ಟಿಕೊಂಡು ಅಭಿವೃದ್ಧಿ ಹೊಂದಿದವು. ಹೊಸ ಬೆಳೆಗಳು ಪರಿಚಿತವಾಗುತ್ತಿದ್ದವೋ ಆ ಬೆಳೆಯಲ್ಲಿ ಪರಿಚಿತವಾದ ಜನಾಂಗಗಳು ಕರ್ನಾಟಕಕ್ಕೆ ಬಂದು ನೆಲೆಸಲಾರಂಭಿಸಿದವು.

ಪೋರ್ಚುಗೀಸರು ಅಮೆರಿಕದ ಖಂಡಗಳಿಂದ ಮುಸುಕಿನ ಜೋಳ, ಹೊಗೆಸೊಪ್ಪು, ನೆಲಗಡಲೆ, ಆಲೂಗಡ್ಡೆ, ಮೆಣಸಿನಕಾಯಿ ಮತ್ತು ಟೊಮಾಟೋಗಳನ್ನು ಭಾರತಕ್ಕೆ ತಂದು ಪರಿಚಯಿಸಿದರು. ಇಂದಿನ ಆಧುನಿಕ ಸಂದರ್ಭದಲ್ಲಿ ಮಳೆಯಾಶ್ರಿತ ಭೂಮಿಯಲ್ಲಿ ಮುಸುಕಿನ ಜೋಳ, ನೆಲಗಡಲೆಯನ್ನು ಬೆಳೆಯುತ್ತಿದ್ದಾರೆ. ಆಲೂಗಡ್ಡೆ ಮತ್ತು ಟೊಮಾಟೋವು ಔಷಧೀಯ ಮತ್ತು ಆಹಾರ ಬೆಳೆಗಳಾಗಿ

ಪ್ರತಿಯೊಂದು ಅಡುಗೆಗೂ ಇದನ್ನು ಬಳಸುತ್ತಾರೆ. ಕರಾವಳಿ ಮೂಲಕ ಭಾರತದಲ್ಲಿ ಇವು ಪರಿಚಿತವಾಗಿ ಕರ್ನಾಟಕಕ್ಕೆ ಬಂದವು. ಬ್ರಿಟಿಶರು ಭಾರತದ ಮುಂಬೈ ಕರ್ನಾಟಕಕ್ಕೆ ಅಮೆರಿಕದ ನೀಳ ಎಳೆಯ ಹತ್ತಿಯನ್ನು ತಂದು ಕರ್ನಾಟಕದಲ್ಲಿ ಈ ಬೆಳೆಗೆ ಹೆಚ್ಚಿನ ಬೆಂಬಲವನ್ನು ನೀಡಿದರು. ೧೯ನೇ ಶತಮಾನದಲ್ಲಿ ಬ್ರಿಟಿಶರು ದೊಡ್ಡ ಪ್ರಮಾಣದಲ್ಲಿ ಕಾಫಿ ತೋಟಗಳನ್ನು ಬೆಳೆಸಿದರು(ಕರ್ನಾಟಕ ಕೈಪಿಡಿ, ೮೬).

ಕಾಫಿ ಬೆಳೆಯು ಭಾರತದಲ್ಲಿಯೇ ಅತ್ಯಂತ ಪ್ರಮುಖ ಬೆಳೆಯಾಗಿದೆ. ಕಾಫಿ ಉತ್ಪಾದಕ ರಾಜ್ಯ ಕರ್ನಾಟಕ. ಕ್ರಿ.ಶ.೧೬೭೦ರಲ್ಲಿ ಬಾಬಾಬುಡನ್ ಎಂಬ ಮುಸ್ಲಿಂ ಸಂತರು ಇಥಿಯೋಪಿಯಾದಿಂದ ಕರ್ನಾಟಕಕ್ಕೆ ಕಾಫಿಯನ್ನು ತಂದು ಪರಿಚಯಿಸಿದರು. ಕರ್ನಾಟಕದಲ್ಲಿ ಹೆಚ್ಚು ಕಾಫಿ ತೋಟಗಳು ಚಿಕ್ಕಮಗಳೂರು, ಹಾಸನ, ಕೊಡಗು ಹಾಗೂ ಮೈಸೂರಿನ ಬಿಳಿಗಿರಿರಂಗನ ಬೆಟ್ಟಗಳಲ್ಲಿವೆ(ಕರ್ನಾಟಕ ಕೈಪಿಡಿ:೧೦೩). ಕರ್ನಾಟಕದಲ್ಲಿ ಪ್ರಸ್ತುತ ಕಾಫಿ ಬೆಳೆಯುವ ಪ್ರದೇಶ ೧.೨೧ ಲಕ್ಷ ಹೆಕ್ಟರ್‌ಗಳು. ಈ ಮೂಲಕ ಕರ್ನಾಟಕದಲ್ಲಿ ಕಾಫಿಯನ್ನು ಭಾರತಕ್ಕೆ ಪರಿಚಯಿಸಿದ್ದು ಬ್ರಿಟೀಷರು ಯುರೋಪಿಯನ್ನರು ಕರ್ನಾಟಕದಲ್ಲಿ ಅದರಲ್ಲಿಯೂ ನೀಳಹತ್ತಿಯನ್ನು ಭಾರತಕ್ಕೆ ಪರಿಚಯಿಸುವ ಮೂಲಕ ಭಾರತದಾದ್ಯಂತ ವಾಣಿಜ್ಯ ಬೆಳೆಗಳಿಗೆ ವಿಶೇಷ ಒತ್ತನ್ನು ನೀಡುವುದರ ಮೂಲಕ ಭಾರತವನ್ನು ಕೃಷಿ ವಾಣಿಜ್ಯೀಕರಣಕ್ಕೆ ಒಳಪಡಿಸಿ ಭಾರತವನ್ನು ಒಂದು ಕೃಷಿಪ್ರಧಾನ ದೇಶವನ್ನಾಗುವಂತೆ ಮಾಡಿದರೆಂದರೆ ತಪ್ಪಾಗಲಾರದು.

**೪.೩. ಭೂಹಿಡುವಳಿಗಳು**

ಯುರೋಪಿನಲ್ಲಿ ಅಸ್ತಿತ್ವದಲ್ಲಿದ್ದ ಊಳಿಗಮಾನ್ಯ ವ್ಯವಸ್ಥೆಯಂತೆ ಭಾರತದಲ್ಲಿ ಕ್ರಿ.ಶ.೫ನೇ ಶತಮಾನದಿಂದ ೧೮ನೇ ಶತಮಾನದವರೆಗೂ ಇರುವುದನ್ನು ಗುರುತಿಸಬಹುದಾಗಿದೆ. ಆರ್ಥಿಕ ವ್ಯವಸ್ಥೆಯ ಜೊತೆ ಜೊತೆಗೆ ಊಳಿಗಮಾನ್ಯತೆಯು ಬೆಸೆದುಕೊಂಡು ಬಂದ ಕೊಂಡಿಯಾಗಿದೆ. ಮಧ್ಯಕಾಲೀನ ಕರ್ನಾಟಕದಲ್ಲಿ ಆಳ್ವಿಕೆ ಮಾಡಿದ ವಿಜಯನಗರ, ವಿಜಯನಗರೋತ್ತರ ಕಾಲಘಟ್ಟದಲ್ಲಿ ಈ ಊಳಿಗಮಾನ್ಯವ್ಯವಸ್ಥೆಯು ಇದ್ದ ಬಗೆಯನ್ನು ಗುರುತಿಸಬಹುದು. ಈ ಪದ್ಧತಿ ಆರ್ಥಿಕ ಮತ್ತು ರಾಜಕೀಯ ಅಂಶಗಳೊಂದಿಗೆ ಸಂಬಂಧವನ್ನು ಬೆಸೆದುಕೊಂಡಿರುತ್ತದೆ. ಭೂಮಿಯು ಊಳಿಗಮಾನ್ಯ ಪದ್ಧತಿ ಆರ್ಥಿಕ ವ್ಯವಸ್ಥೆಯ ತಳಹದಿಯಾಗಿದ್ದು, ಗ್ರಾಮೀಣ ಆರ್ಥಿಕತೆಯ ಕೃಷಿಯ ಉತ್ಪಾದನೆಯಿಂದ ನಗರಪ್ರದೇಶದ ಕೈಗಾರಿಕೆ ಸ್ಥಾಪನೆಯವರೆಗಿನ ವಿವಿಧ ಹಂತಗಳಲ್ಲಿ ಈ ಊಳಿಗಮಾನ್ಯತೆಯನ್ನು ಗುರುತಿಸಬಹುದು. ಭಾರತದಲ್ಲಿ ಗುಪ್ತರ ಕಾಲದಿಂದ ಈ ಊಳಿಗಮಾನ್ಯ ವ್ಯವಸ್ಥೆಯನ್ನು ದಾಖಲಿಸುವ ಪರಿಪಾಟ ಆರಂಭವಾಯಿತು. ಭೂಹಿಡುವಳಿ ವ್ಯವಸ್ಥೆಯು ಕರ್ನಾಟಕ ಚರಿತ್ರೆಯಲ್ಲಿ ಶಾತವಾಹನರ ಕಾಲದಿಂದಲೇ ಗುರುತಿಸಬೇಕಾಗುತ್ತದೆ. ಶಾತವಾಹನರು ಬ್ರಾಹ್ಮಣರಿಗೆ ಭೂದಾನಗಳನ್ನು ಕೊಡಲು ಆರಂಭಿಸಿದಂದಿನಿಂದ ಈ ವ್ಯವಸ್ಥೆಯು ವಿವಿಧ ಪ್ರಭುತ್ವಗಳ ಕಾಲಘಟ್ಟದಲ್ಲಿ ತನ್ನ ಅಸ್ತಿತ್ವ ಪಡೆದುಕೊಂಡಿತು. ಊಳಿಗಮಾನ್ಯತೆ ಎಂಬುದು ಮಿಲಿಟರಿ ಮತ್ತು ಭೂಹಿಡುವಳಿಗಳ ಸಮ್ಮಿಶ್ರಣವಾಗಿದೆ. ಅಧಿಕಾರ ವಿಕೇಂದ್ರೀಕರಿಸುವಂತಹ ಸಂದರ್ಭದಲ್ಲಿ ರಾಜನಿಂದ ಗ್ರಾಮದ ಮುಖಂಡನವರೆಗೂ

ಅಧಿಕಾರವು ವಿಕೇಂದ್ರೀಕರಣಗೊಂಡಿದ್ದು, ಈ ಆಧಾರದ ಮೇಲೆ ಊಳಿಗಮಾನ್ಯತೆಯ ಅಂಶಗಳನ್ನು ಗುರುತಿಸಬಹುದು. ಇದನ್ನು ಸಮಾಜದ ಶ್ರೇಣೀಕೃತ ವ್ಯವಸ್ಥೆ ಎಂಬ ಹಿನ್ನೆಲೆಯಲ್ಲಿ ವಿವರಿಸಬಹುದು.

ಕರ್ನಾಟಕದಲ್ಲಿ ಮೌರ್ಯರ ಆಡಳಿತದ ಅನಂತರ ನೇಗಿಲಿನ ಆವಿಷ್ಕಾರವಾದದ್ದೇ ಕೃಷಿ ಉತ್ಪಾದನೆಯ ಮೂಲವಾಗಿದ್ದು, ಈ ಪ್ರದೇಶದಲ್ಲಿ ಕೃಷಿ ಪ್ರಾಧಾನ್ಯದ ಹಂತವನ್ನು ಉದ್ಘಾಟಿಸಿತು. ಅವರಿಂದಾಗಿ ಸಮಾಜದಲ್ಲಿ ೨ ವರ್ಗಗಳು ರೂಪಗೊಂಡವು. ೧. ಶೋಷಣೆ ಮಾಡುವ ವರ್ಗ, ೨. ಶೋಷಿತವರ್ಗ. ಈ ಬೆಳವಣಿಗೆಯ ಫಲವಾಗಿ ದೈಹಿಕ ಮತ್ತು ಮಾನಸಿಕ ದುಡಿಮೆಗಳ ನಡುವೆ ಖಚಿತವಾದ ಒಂದು ಅಂತರ ಕಂಡುಬಂದು ಇದು ಪ್ರಭುತ್ವಗಳ ವ್ಯವಸ್ಥೆಯ ಉದಯಕ್ಕೆ ಕಾರಣವಾಯಿತು. ರಾಜ್ಯಾಡಳಿತದ ಯುಗ ಆರಂಭವಾಗಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ವರ್ಣಗಳು ಅವರವರ ಹಿತಾಸಕ್ತಿಗಳನ್ನು ಈಡೇರಿಸುವ ಸಲುವಾಗಿ ವರ್ಣಗಳು ಉದಯಿಸಿದವು. ಈ ವರ್ಣಗಳು ರಾಜಾಶ್ರಯದ ಬೆಳವಣಿಗೆಯಲ್ಲಿ ದಾನ ದತ್ತಿಗಳನ್ನು ಪಡೆದವು. ಈ ನಿರಂತರವಾದ ಪ್ರಕ್ರಿಯೆ ಮುಂದೆ ಬ್ರಹ್ಮದೇಯ ದೇವದೇಯ ಮಠಾಪುರಗಳ ಹುಟ್ಟಿಗೂ ಕಾರಣವಾಗಿರಬಹುದು.(ಸಾಕಿ,೧, ೧೯೯೮:೯೬)

ಪ್ರಾಚೀನ ಕಾಲದಿಂದಲೂ ಪ್ರಭುತ್ವವು ಬ್ರಾಹ್ಮಣರಿಗೆ ವಿಶೇಷಾಧಿಕಾರವನ್ನು ನೀಡಿದಂತೆ ಮಧ್ಯಕಾಲೀನ ಊಳಿಗಮಾನ್ಯದಲ್ಲಿಯೂ ಅವರಿಗೆ ಸ್ಥಾನಮಾನ ದೊರೆತಿದೆ. ಊಳಿಗಮಾನ್ಯ ವ್ಯವಸ್ಥೆಯಲ್ಲಿ ವಿಕೇಂದ್ರೀಕರಣದ ಸ್ವರೂಪದಲ್ಲಿ ಮೇಲಿನ ಪ್ರಭುತ್ವಗಳಿಗೆ ನಿಷ್ಠೆಯನ್ನು ತೋರುವುದು ಒಂದು ಪರಿಕಲ್ಪನೆಯಾಗಿದೆ. ವಿಜಯನಗರ ಮತ್ತು ಅವರ ಸಾಮಂತರ ಚರಿತ್ರೆಯಲ್ಲಿ ಈ ವ್ಯವಸ್ಥೆ ಪ್ರತಿಫಲಿಸಿರುವುದನ್ನು ಗಮನಿಸಬಹುದು. ವಿಜಯನಗರದಿಂದ ನಾಯಕತನವನ್ನು ಪಡೆದ ಪ್ರತಿಯೊಂದು ಮನೆತನವು ಅವರಿಗೆ ಪ್ರತಿಹಂತದಲ್ಲಿಯೂ ನಿಷ್ಠೆಯನ್ನು ತೋರಿಸುತ್ತಿದ್ದರು. ಹಾಗೆಯೇ ಅಮರತ್ವ ಪಡೆದು ಈ ನಾಯಕರು ಭೂಹಿಡುವಳಿಗಳ ಅಧಿಕಾರಿಗಳಾಗಿ ಕಾರ್ಯ ನಿರ್ವಹಿಸಿದರು. ತೆರಿಗೆ ಸಂಗ್ರಹಿಸುವ ಅಧಿಕಾರಿಗಳಾಗಿ ಸೈನ್ಯ ಸಂಘಟಿಸುವ ಕಾರ್ಯವನ್ನು ನಿರ್ವಹಿಸುತ್ತಿದ್ದರು. ಹೀಗೆ ಇವರು ಮೇಲಿನವರಿಗೆ ತೋರಿಸಿದ ನಿಷ್ಠೆಯನ್ನು ಅವರ ಕೆಳಗಿನವರು ತಮಗೆ ತೋರಿಸಬೇಕೆಂಬ ಹಂಬಲದಿಂದ ಅವರ ಮೇಲೆ ಅಧಿಕಾರ ಚಲಾಯಿಸುತ್ತಿದ್ದರು. ಹೀಗೆ ಭಾರತದ ಊಳಿಗಮಾನ್ಯತೆಯ ವಿಕೇಂದ್ರೀಕರಣವನ್ನು ಗಮನಿಸಲಾಗಿದೆ.

ಭಾರತದ ಊಳಿಗಮಾನ್ಯ ವ್ಯವಸ್ಥೆಯ ಹುಟ್ಟಿಗೆ ಪ್ರಮುಖ ಕಾರಣವೆಂದರೆ ಬ್ರಾಹ್ಮಣರು, ಧಾರ್ಮಿಕ ಸಂಘ ಸಂಸ್ಥೆಗಳು ಹಾಗೂ ಸರ್ಕಾರಿ ಅಧಿಕಾರಿಗಳಿಗೆ ನೀಡುತ್ತಿದ್ದ ಮಿತಿಮೀರಿದ ಭೂದಾನಗಳು(ರೈ, ೨೦೧೭:೪೩), ಮಧ್ಯಕಾಲೀನ ಕರ್ನಾಟಕದ ಭೂ ಹಿಡುವಳಿವ್ಯವಸ್ಥೆಯಲ್ಲಿ ಊಳಿಗಮಾನ್ಯವ್ಯವಸ್ಥೆಯ ಲಕ್ಷಣಗಳು ಇದು ವಿಜಯನಗರೋತ್ತರ ಕಾಲದ ಎಲ್ಲ ಸಾಮಂತ ಪ್ರಭುತ್ವಗಳು ಊಳಿಗಮಾನ್ಯವ್ಯವಸ್ಥೆಯಿಂದ ಬಂದಂತಹವುಗಳು. ಭೂಮಿಯ ಊಳಿಗಮಾನ್ಯಿಕರಣದಲ್ಲಿ ರಾಜ್ಯ ಪ್ರಮುಖ ಪಾತ್ರ ವಹಿಸುತ್ತದೆ. ಭೂಮಿಯ ಒಡೆಯ ರಾಜನಾಗಿದ್ದು, ರಾಜ್ಯವು ಈ

ಕಾರ್ಯದಲ್ಲಿ ಗುರುತಿಸಿಕೊಳ್ಳುತ್ತದೆ. ಕೃಷಿಯೋಗ್ಯವಲ್ಲದ ಭೂಮಿಯನ್ನು ಕೃಷಿಯೋಗ್ಯ ಭೂಮಿಯನ್ನಾಗಿಸುವ ಹಂತದಲ್ಲಿ ರಾಜ್ಯದ ಆದಾಯದಿಂದ ಹಣ ಬರಿಸುತ್ತಿದ್ದರು.

ಬರ್ಟನ್‌ಸ್ಟೈನ್ ಅವರು ವಿಜಯನಗರೋತ್ತರ ಕಾಲದ ತಮಿಳುನಾಡಿನ ನಾಯಕಮನೆತನದ ಆಧಾರದಿಂದ ಎಲ್ಲ ಕೃಷಿ ಭೂಮಿಯಲ್ಲಿ ನಾಯಕರು ೭೫%ಕ್ಕಿಂತ ಹೆಚ್ಚು ಭೂಮಿಯನ್ನು ಹೊಂದಿದ್ದಾರೆ. ೧೭೬೧ರ ವೇಳೆಗೆ ಕರ್ನಾಟಕದಲ್ಲಿ ಬ್ರಾಹ್ಮಣಮುಕ್ತ ಹಿಡುವಳಿದಾರರ ವರ್ಗವಿತ್ತೆಂದು ಹೇಳಿದ್ದಾರೆ. ಅಂದರೆ ಇದುವರೆಗೂ ಭೂಹಿಡುವಳಿಗಳು ಬ್ರಾಹ್ಮಣರಿಗೆ ಮೀಸಲಾಗಿದ್ದು ವಿಜಯನಗರೋತ್ತರ ಕಾಲದಲ್ಲಿ ಸಾಮಂತರಾಗಿದ್ದ ಎಲ್ಲರಿಗೂ ಭೂಹಿಡುವಳಿಗಳು ದೊರೆತಿವೆ ಎಂದು ಹೇಳುತ್ತಾರೆ. ೧೫೬೫ರ ನಂತರ ಸಾಮಂತ ಪ್ರಭುತ್ವಗಳು ಸಾರ್ವಭೌಮ ಮನೆತನಗಳಾಗಿ ತಮ್ಮ ಸ್ಥಾನವನ್ನು ಭದ್ರಪಡಿಸಿಕೊಂಡಿದ್ದರು. ವಿಜಯನಗರೋತ್ತರ ಕಾಲಘಟ್ಟದಲ್ಲಿ ಧಾರ್ಮಿಕ ಸಂಘರ್ಷದಿಂದ ಈ ಹಿಡುವಳಿಗಳು ತಮ್ಮ ಸ್ವರೂಪವನ್ನು ಬದಲಾಯಿಸಿಕೊಂಡವು.

ಊಳಿಗಮಾನ್ಯ ವ್ಯವಸ್ಥೆ ಈ ಕುರಿತಂತೆ ಬರ್ಟನ್‌ಸ್ಟೈನ್ ಮತ್ತು ನೀಲಕಂಠಶಾಸ್ತ್ರಿ ಅವರ ಕೇಂದ್ರೀಕೃತ ಮತ್ತು ವಿಕೇಂದ್ರೀಕೃತ ಅಂಶಗಳನ್ನು ಕುರಿತಂತೆ ಅನೇಕ ಚರ್ಚೆಗಳು ಇಂದಿಗೂ ಪ್ರಸ್ತುತವೆನಿಸುತ್ತವೆ. ಈ ಹಿನ್ನೆಲೆಯಲ್ಲಿ ವಿಜಯನಗರವು ಕೇಂದ್ರೀಕೃತ ಆಡಳಿತವನ್ನು ಹೊಂದಿದ್ದು, ರಾಜನಿಂದ ಗ್ರಾಮದ ಮುಖಂಡ ಅಮರ ಮಾಗಣಿ ಪಡೆಯುವ ಸಾಮಂತನವರೆಗೂ ಅಧಿಕಾರವು ವಿಕೇಂದ್ರೀಕರಣಗೊಂಡಿದೆ. ಈ ಮೂಲಕ ಸಾಮಾಜಿಕ ರಚನೆಯಲ್ಲಿ ಉನ್ನತವರ್ಗವೆನಿಸಿದ ಬ್ರಾಹ್ಮಣರು ಬಂಡವಾಳಗಾರರಾದರು ರೈತರು ಗ್ರಾಮೀಣ ಆರ್ಥಿಕತೆಯಲ್ಲಿ ಕೂಲಿಕಾರ್ಮಿಕರಾಗಿ ಗುರುತಿಸಿಕೊಂಡರೆಂದರೆ ತಪ್ಪಾಗಲಾರದು. ಈ ಮೂಲಕ ಭಾರತೀಯ ಊಳಿಗಮಾನ್ಯತೆಯಲ್ಲಿ ಭೂಮಾಲೀಕ ಮಧ್ಯವರ್ತಿಗಳಿಂದ ರೈತರು ತಮ್ಮ ಅಸ್ತಿತ್ವ ಕಳೆದುಕೊಂಡರು.

ಊಳಿಗಮಾನ್ಯ ಪದ್ಧತಿಯ ರಾಜಕೀಯ ಸಾರವು ಭೂಮಿಯ ತಳಹದಿಯ ಮೇಲೆ ಆಡಳಿತ ಪದ್ಧತಿಯನ್ನು ವ್ಯವಸ್ಥೆಗೊಳಿಸುವುದರಲ್ಲಿದೆ ಎಂದು ನಮಗೆ ಯುರೋಪಿನ ಅನುಭವ ತಿಳಿಸುತ್ತದೆ. ಯುರೋಪಿನಲ್ಲಿ ಕಂಡುಬರುವ ಗುಲಾಮಗಿರಿ ಪದ್ಧತಿಯಿಂದ ಸಾಮಾನ್ಯ ಜನರು ಭೂ ಹಿಡುವಳಿಗಳನ್ನು ಹೊಂದದೆ ಶ್ರಮಿಕವರ್ಗವಾಗಿ ಗುರುತಿಸಿಕೊಂಡಿದೆ. ಈ ಪದ್ಧತಿಯಲ್ಲಿ ಬೇಸಾಯಗಾರರು ರಾಜ ಮತ್ತು ಭೂಮಿಯನ್ನುಉಳುವವರು ಹಾಗೂ ಇವರಿಬ್ಬರ ನಡುವಿನ ಮಧ್ಯವರ್ತಿಗಳು ಹೊಂದಿದ ಭೂಮಿಗೆ ಸೇರಿದ್ದಾಗಿರುತ್ತದೆ(ಶರ್ಮ,೨೦೦೭:೧).

ಮಧ್ಯಕಾಲೀನ ದಕ್ಷಿಣ ಭಾರತದಲ್ಲಿ ಕೇಂದ್ರಪ್ರಭುತ್ವ ಮತ್ತು ವಿಕೇಂದ್ರಪ್ರಭುತ್ವ ಈ ಚರ್ಚೆಗಳ ಹಿನ್ನೆಲೆಯಲ್ಲಿ ಅಲ್ಲಿನ ವ್ಯಾಪಾರದ ಭಿನ್ನತೆ, ಕೃಷಿ, ಸ್ಥಳೀಯ ನಾಯಕರ ಕರ್ತವ್ಯ, ಸಾರ್ವಭೌಮರಾಗುವ ಪರಿಕಲ್ಪನೆ, ಉತ್ಪಾದನಾ ವಲಯದಲ್ಲಿ ಕಂಡುಕೊಂಡ ಪಲ್ಲಟಗಳನ್ನು ಗುರುತಿಸಬಹುದು. ಸಾಮಂತರಾದ ನಾಯಕರು ಸಾರ್ವಭೌಮರಾಗಿ ಗ್ರಾಮದಿಂದ ರಾಜ್ಯದ ನಾಯಕನವರೆಗೂ ತಮ್ಮದೇ ಆದ ಅಥವಾ ಹಳೆಯ ವ್ಯವಸ್ಥೆಯ ಪುನರ್‌ನಿರ್ಮಾಣದೊಂದಿಗೆ ಹೊಸಹುಟ್ಟು ಪಡೆದುಕೊಂಡು ಕೃಷಿಯೇತರ ಉತ್ಪಾದನೆಯಿಂದ ವ್ಯಾಪಾರದಲ್ಲಿ ವಿದೇಶಗಳೊಂದಿಗೆ ಕೈಜೋಡಿಸಿ ತಮ್ಮ ನೆಲೆ ಕಂಡುಕೊಳ್ಳುವವರೆಗಿನ ಅಂಶಗಳನ್ನು ತಿಳಿಯಬಹುದು.

* **ಊಳಿಗಮಾನ್ಯತೆ**

ವಿಜಯನಗರ ಅಧೀನದಲ್ಲಿ ನಾಯಕರಿಗೆ ನಿರ್ದಿಷ್ಟ ಪ್ರದೇಶದ ಭೂಮಿಯನ್ನು ಅಮರಂ ಭೂಮಿ ಎಂದು ನೀಡುತ್ತಿದ್ದರು. ಹೀಗೆ ಮಿಲಿಟರಿ ಅಧಿಕಾರಿಗಳಂತೆ ಈ ನಾಯಕರು ರಾಜ್ಯಕ್ಕೆ ಸಂದಿಗ್ಧ ಪರಿಸ್ಥಿತಿಯಲ್ಲಿ ಸೇವೆ ಸಲ್ಲಿಸಬೇಕಾಗಿತ್ತು. ನಾಯಕರು ಎಷ್ಟು ಭೂಮಿಯನ್ನು ಪಡೆದಿರುತ್ತಿದ್ದರೋ ಅದರ ಆಧಾರದ ಮೇಲೆ ಅವರ ಮಿಲಿಟರಿ ಸೈನ್ಯ ನಿರ್ಧರಿತವಾಗುತ್ತಿತ್ತು. ಪ್ರತಿಯೊಂದು ಹಂತದಲ್ಲಿಯೂ ಕೇಂದ್ರ ಪ್ರಭುತ್ವಕ್ಕೆ ಈ ನಾಯಕರು ಸಿದ್ಧರಿರಬೇಕಾಗಿತ್ತು. ಕೆಳದಿಯ ನಾಯಕರು ನಿಗದಿಯಾದ ಕಪ್ಪಕಾಣಿಕೆಯನ್ನು ಕೊಡುವ ಮೂಲಕ ಇಲ್ಲವೇ ಅವಶ್ಯಕ ಸಂದರ್ಭದಲ್ಲಿ ಸೈನ್ಯವನ್ನು ಒದಗಿಸುವ ಮೂಲಕ ಇವರು ವಿಜಯನಗರದೊಂದಿಗೆ ತಮ್ಮ ನಿಷ್ಠೆಯನ್ನು ಉಳಿಸಿಕೊಂಡಿದ್ದರು.

ಕೆಳದಿಯ ರಾಜ್ಯ ಸ್ಥಾಪಿಸಿದ ಚೌಡಪ್ಪನು ಮೂಲತಃ ಕೃಷಿಕನಾಗಿದ್ದನು. ಶ್ರಮದಿಂದ ರಾಜ್ಯವನ್ನು ಕಟ್ಟಿ ವಿಜಯನಗರದ ರಾಜರ ಗಮನವನ್ನು ಸೆಳೆದು ಎಂಟು ಗ್ರಾಮಗಳ ಅಮರಮಾಗಣಿ ಪಡೆದುಕೊಂಡನು. ಚಂದ್ರಗಿರಿ, ಕೆಳದಿ, ಇಕ್ಕೇರಿ, ಪೆರ್ಬಯಿಲು, ಎಲಿಗಳಲೆ ಮೊದೂರು, ಕರಸೆ, ಲತವಾಡಿ ಈ ಗ್ರಾಮಗಳನ್ನು ಪಡೆದು ತನ್ನ ಸ್ಥಾನವನ್ನು ಭದ್ರಪಡಿಸಿಕೊಂಡನು. ಈ ಮೂಲಕ ಸಂಸ್ಥಾನವನ್ನು ಸ್ಥಾಪಿಸಿ ಬೆಳೆಸಿದ ವಿಜಯನಗರದ ಅರಸ ಕೃಷ್ಣದೇವರಾಯನಿಗೆ ನಿಷ್ಠೆಯನ್ನು ತೋರಿದರು. ಕೆಳದಿ ರಾಜ್ಯವು ಒಂದು ಅಮರ ಮಾಗಣಿಯಾಗಿ ವಿಜಯನಗರದ ಸಾಮಂತ ರಾಜ್ಯವಾಯಿತು(ಷೇಕ್ ಅಲಿ.ಬಿ, ೨೦೧೮ :೯೮). ಈ ಮೂಲಕ ವಿಜಯನಗರದವರಿಗೆ ನಿಷ್ಠೆಯನ್ನು ತೋರಿಸುತ್ತಾ ವಿಜಯನಗರ ಅವನತಿಯ ನಂತರ ಸಾರ್ವಭೌಮ ಮನೆತನದವರಾದರು. ಇಲ್ಲಿ ಮಿಲಿಟರಿ ಹಿನ್ನೆಲೆಯಲ್ಲಿ ಊಳಿಗಮಾನ್ಯ ವ್ಯವಸ್ಥೆಯ ಸ್ಪಷ್ಟ ಅಂಶಗಳನ್ನು ಗ್ರಹಿಸಬಹುದು. ಸದಾಶಿವನಾಯಕನು ವಿಜಯನಗರದ ಅರಸರಿಗೆ ನಿಷ್ಠೆಯನ್ನು ತೋರಿ ಅಧಿಕಾರವನ್ನು ಪಡೆದಿದ್ದು ೧೫೫೧-೧೫೬೭ರ ಅವಧಿಯಲ್ಲಿ. ಈ ಸಂದರ್ಭದಲ್ಲಿ ಊಳಿಗಮಾನ್ಯದ ಅಂಶಗಳನ್ನು ಗುರುತಿಸಬಹುದು. ಈ ವೇಳೆಯಲ್ಲಿ ಆಳುತ್ತಿದ್ದ ರಾಮರಾಯನ ಆಜ್ಞೆಯ ಮೇರೆಗೆ ಕಲ್ಯಾಣ, ಕಲಬುರ್ಗಿ, ಬಿಜಾಪುರ ಮತ್ತು ಅಹಮದ್‌ನಗರದ ಪ್ರದೇಶಗಳನ್ನು ಗೆಲ್ಲಲು ಸೈನಿಕ ಸಹಾಯ ಮಾಡಿ ಈ ಪ್ರದೇಶಗಳನ್ನು ರಾಯರಿಗೆ ಒಪ್ಪಿಸಿದನು. ಇದರಿಂದ ಇವನಿಗೆ ಗುತ್ತಿ, ಬಾರಕೂರು, ಮಂಗಳೂರನ್ನು ಕೊಟ್ಟು ರಾಮನಾಯಕ ಎಂಬ ಬಿರುದು ನೀಡಿ ಗೌರವಿಸಿದರು. ಈ ಮೂಲಕ ನಿಷ್ಠೆಯಿಂದ ತನ್ನ ಊಳಿಗಮಾನ್ಯತೆಯ ಅಂಶಗಳನ್ನು ಗಟ್ಟಿಗೊಳಿಸಿಕೊಂಡನು. ಸುಮಾರು ಹದಿನೈದಕ್ಕೂ ಹೆಚ್ಚು ಬಾರಿ ತನ್ನ ಸೈನಿಕ ನೆರವು ನೀಡುವ ಮೂಲಕ ತಮ್ಮ ಸಾಮಂತ ಪ್ರಭುವಿಗೆ ನಿಷ್ಠೆಯನ್ನು ತೋರಿಸಿದ(ಕಲಬುರ್ಗಿ, ರಾಮಭಟ್ಟ, ೧೯೯೮:೨೮೮).

ದೊಡ್ಡಸಂಕಣ್ಣ ನಾಯಕನು ವಿಜಯನಗರದ ಅರಸರಿಗೆ ನಿಷ್ಠೆಯನ್ನು ತೋರಿದನು. ಈ ವೇಳೆಯು ವಿಜಯನಗರದ ಪತನದ ಹಂತದಲ್ಲಿ ವಿಜಯನಗರಕ್ಕೆ ವಿಶಿಷ್ಟವಾದ ಮಿಲಿಟರಿ ಸೇವೆಯನ್ನು ಸಲ್ಲಿಸಿ ಮಹಾದೇವಪುರವನ್ನು ಬಳುವಳಿಯಾಗಿ ಪಡೆದು ತಮ್ಮ ನಿಷ್ಠೆ ತೋರಿಸಿದ. ಆದರೆ ಅವರ ನಿಯಮದ ಪ್ರಕಾರ ವಿಜಯನಗರದ ಅಧೀನ ರಾಜರ ಜೊತೆ ಯುದ್ಧ ಮಾಡುವ ಹಾಗಿರಲಿಲ್ಲ.

ಆದರೆ ಸಂಕಣ್ಣನು ಕಾರ್ಕಳದ ಬೈರರಸನ ಜೊತೆ ಯುದ್ಧ ಮಾಡಿದನು. ಇದರಿಂದ ನಮಗೆ ತಿಳಿಯುವ ಅಂಶವೆಂದರೆ ತಾಳಿಕೋಟೆ ಯುದ್ಧದಲ್ಲಿ ಸೋತ ವಿಜಯನಗರದಿಂದ ಸಂಪೂರ್ಣ ಸ್ವತಂತ್ರವನ್ನು ಪಡೆದುಕೊಂಡರೆಂದು ಹೇಳಬಹುದು. ವಿಜಯನಗರದ ಅರಸರು ಆನೆಗೊಂದಿ ಸಂಸ್ಥಾನದಿಂದ ಅಧಿಕಾರ ಮುಂದುವರಿಸಿದರೂ ಅವರಿಗೆ ಅಷ್ಟಾಗಿ ನಿಷ್ಠೆಯನ್ನು ಇವರು ತೋರಿಸಲಿಲ್ಲ.

ಶಿವಪ್ಪನಾಯಕನು ಕೆಳದಿಯ ನಾಯಕನಾಗುವ ವೇಳೆಗೆ ತಮ್ಮ ಸಂಪೂರ್ಣ ಸ್ವತಂತ್ರವನ್ನು ಪಡೆದಿದ್ದನು ಹಾಗೂ ತಮ್ಮ ಪೂರ್ವಮಾರ್ಯದೆಯನ್ನು ಮುಂದುವರಿಸಿ ಊಳಿಗಮಾನ್ಯತೆಯನ್ನು ಪ್ರತಿಬಿಂಬಿಸಿದರೆಂದರೆ ತಪ್ಪಾಗಲಾರದು. ರಾಯದುರ್ಗ, ಹರಪನಹಳ್ಳಿ, ಸೌಂದೆ, ತರೀಕೆರೆ ಮೊದಲಾದ ಪಾಳೆಯಗಾರ ಮನೆತನಗಳನ್ನು ಹತ್ತಿಕ್ಕಿ ಸಾಮಂತರನ್ನಾಗಿಸಿಕೊಳ್ಳುವ ಮೂಲಕ ಕೆಳದಿಯ ನಾಯಕರು ತಮ್ಮ ಊಳಿಗಮಾನ್ಯತೆಯನ್ನು ಕಂಡುಕೊಂಡರು.

ಕೆಳದಿಯ ನಾಯಕರಂತೆಯೇ ಯಲಹಂಕ ನಾಡಪ್ರಭುಗಳು ೧ನೇ ಕೆಂಪೇಗೌಡನ ಆಳ್ವಿಕೆಯ ಕಾಲದಿಂದ ವಿಜಯನಗರಕ್ಕೆ ನಿಷ್ಠೆಯನ್ನು ತೋರಿಸಿದರು. ೧೫೩೭ರಲ್ಲಿ ಅಚ್ಯುತರಾಯನು ಯಲಹಂಕ ನಾಡಿನ ಕೆಂಪೇಗೌಡನಿಗೆ ಹಳೆಯ ಬೆಂಗಳೂರು, ವರ್ತೂರು, ಯಲಹಂಕ ಮೊದಲಾದ ಪ್ರದೇಶಗಳನ್ನು ಅಮರ ಮಾಗಣಿಯಾಗಿ ನೀಡಿದ್ದು ಈ ಪ್ರದೇಶಗಳಲ್ಲಿ ೧೨ ಹೋಬಳಿಗಳಿಂದ ಬರುತ್ತಿದ್ದ ೩೦,೦೦೦ ಪಗೋಡಗಳ ಆದಾಯವನ್ನು ಕೆಂಪೇಗೌಡನಿಗೆ ನೀಡಿದ್ದನು(ರಾಮಾನುಜ, ೨೦೧೩:೨೦). ಆದರೆ ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಕೆಂಪೇಗೌಡನು ಸ್ವತಂತ್ರನಾಗಬೇಕೆಂದು ಟಂಕಸಾಲೆ ಮತ್ತು ನಾಣ್ಯ ಟಂಕಿಸಿದ ವಿಚಾರವನ್ನು ತಿಳಿದ ವಿಜಯನಗರದ ಅರಸರು ಅವನನ್ನು ಆನೆಗುಂದಿಯಲ್ಲಿ ಬಂಧನದಲ್ಲಿಡುತ್ತಾರೆ. ಈ ಮೂಲಕ ತಿಳಿಯುವ ಅಂಶವೆಂದರೆ ೧೫೬೫ರ ರಕ್ಕಸಗಿ ತಂಗಡಗಿ ಯುದ್ಧದ ನಂತರದ ಪರಿಸ್ಥಿತಿಯು ಸಂಪೂರ್ಣ ರಾಜಕೀಯ ಚಿತ್ರಣ ಬದಲಾಗಿತ್ತು. ವಿಜಯನಗರದ ಅರಸರು ತಮ್ಮ ಪ್ರಭುತ್ವದ ಅಧಿಕಾರವನ್ನು ಅವರ ಮೇಲೆ ಹೇರಿದ್ದರು. ಈ ಅಂಶಗಳನ್ನು ಗಮನಿಸಿದರೆ ಸಾಮಂತ ಕೇಂದ್ರವಾಗಿ ಯಲಹಂಕನಾಡಿನ ಉಗಮ ಮತ್ತು ಬೆಳವಣಿಗೆಯನ್ನು ಇದು ಸೂಚಿಸುತ್ತದೆ. ಸಾಮಾನ್ಯ ರೈತ ಕುಟುಂಬವೊಂದು ಸ್ವಂತ ಪರಿಶ್ರಮದಿಂದ ಊಳಿಗಮಾನ್ಯ ಸಂಸ್ಥಾನವನ್ನು ಕಟ್ಟಿದ್ದರೆಂದು ಕೆ.ಎಸ್.ಶಿವಣ್ಣ ಅವರು ಅಭಿಪ್ರಾಯಪಡುತ್ತಾರೆ(ಷೇಕ್ ಅಲಿ, ೨೦೧೮:೧೦೭).

ಚಿತ್ರದುರ್ಗದ ನಾಯಕರು ವಿಜಯನಗರೋತ್ತರ ಕಾಲದಲ್ಲಿ ಪ್ರಮುಖರಾಗಿ ಗುರುತಿಸಿಕೊಳ್ಳುತ್ತಾರೆ. ತಿಮ್ಮಣ್ಣನಾಯಕನು ವಿಜಯನಗರದ ಅರಸರಿಗೆ ನಿಷ್ಠೆಯಾಗಿದ್ದರಿಂದ ೧೪೩೫ರಲ್ಲಿ ಹೊಳಲ್ಕೆರೆಯ ಅಮರನಾಯಕನಾಗಿ ಬಡ್ತಿ ನೀಡಿ ಪುರಸ್ಕರಿಸಿದರು(ಷೇಕ್ ಅಲಿ,೩,೨೦೧೮:೮೯). ಚಿತ್ರದುರ್ಗದ ನಾಯಕರು ಬಹು ವಿಶಾಲವಾದ ಭೂಹಿಡುವಳಿಗಳನ್ನು ಹೊಂದಿದ್ದರು. ಈ ಪ್ರದೇಶವು ಮಧ್ಯಕರ್ನಾಟಕದ ಬಯಲು ಸೀಮೆಯನ್ನು ಹೊಂದಿದ್ದರಿಂದ ಯುದ್ಧೋಪಕರಣಗಳ ರಕ್ಷಣೆಗೆ, ಸೈನಿಕರ ಸಂಘಟನೆಗೆ ಈ ಪ್ರದೇಶದ ನಾಯಕರನ್ನು ಸಾಮಂತರನ್ನಾಗಿಸುವ ಉದ್ದೇಶವನ್ನು ಹೊಂದಿದ್ದರು. ಅಮರ ಮಾಗಣಿಯನ್ನು ಪಡೆದ ನಾಯಕರು ತಮ್ಮ ಆಡಳಿತ ಪ್ರದೇಶಗಳಲ್ಲಿ

ಸ್ವತಂತ್ರವಾಗಿ ಆಡಳಿತ ನೀತಿಗಳನ್ನು ಹಾಗೂ ಕಪ್ಪ ಕಾಣಿಕೆ ನೀಡಿದ್ದರು. ಅಂತಹ ನಾಯಕರನ್ನು ಬಂಧಿಸುವ, ಶಿಕ್ಷಿಸುವ ಪ್ರವೃತ್ತಿಯು ಪ್ರಚಲಿತದಲ್ಲಿತ್ತು. ಹೆಚ್ಚಿನ ಭೂಹಿಡುವಳಿಗಳು ಈ ಪ್ರದೇಶದಲ್ಲಿ ನೆಲೆಗೊಂಡಿದ್ದವು. ಆದರೆ ತಮ್ಮೆಲ್ಲ ನಾಯಕರನ್ನು ಮತ್ತು ೧ನೇ ಕೆಂಪೇಗೌಡನನ್ನು ಈ ಅರಸರು ಬಂಧಿಸಿ ತಮ್ಮ ಸಾರ್ವಭೌಮತ್ವವನ್ನು ಒಪ್ಪಿಕೊಳ್ಳಲು ತಿಳಿಸುತ್ತಿದ್ದರೆಂದು ಹೇಳಬಹುದು. ಈ ಸಂಬಂಧವನ್ನು ಒಪ್ಪದಿದ್ದಾಗ ಅವನನ್ನು ಶಿಕ್ಷಿಸುತ್ತಿದ್ದರೆಂದು ಮೇಲ್ನೋಟಕ್ಕೆ ತಿಳಿಯುತ್ತದೆ.

ಚಿತ್ರದುರ್ಗದ ನಾಯಕರ ಊಳಿಗಮಾನ್ಯತೆಯ ಲಕ್ಷಣವನ್ನು ಕೇಶವನಾಯ್ಕ ಅವರು ನಾಲ್ಕು ಅಂಶಗಳಲ್ಲಿ ಗುರುತಿಸಿದ್ದಾರೆ.

೧. ಚಿತ್ರದುರ್ಗದ ನಿಷ್ಠೆಯು ವಿಜಯನಗರದ ಪ್ರೋತ್ಸಾಹದಿಂದ ಆರಂಭವಾಯಿತು.

೨. ಊಳಿಗಮಾನ್ಯ ಮನೆತನದ ಸ್ಥಾಪಕ ಅಮರನಾಯಕ. ಆದರೆ ಅವನು ಸ್ವಂತ ಕೋಟೆಯನ್ನು ನಿರ್ಮಿಸಲು ಅವಕಾಶವಿದ್ದು ಮೊದಲ ವರ್ಗದವರಾಗಿದ್ದವರಿಗೆ.

೩. ನಿಷ್ಠಾವಂತ ಗುತ್ತಿಗೆದಾರನಾಗಿ ಅವನು ಪರಮಾಧಿಕಾರದ ಹಿತಾಸಕ್ತಿಯನ್ನು ರಕ್ಷಿಸಿದ್ದನು.

೪. ಅವನ ವೃತ್ತಿಜೀವನ ಗುತ್ತಿಗೆದಾರರಿಂದ ಮಾಡಿದ ಅದ್ಭುತ ಸೇವೆಯೆಂದು ದೃಢಪಡಿಸುತ್ತದೆ. ಅವನ ಸ್ಥಾನವು ಯಾವಾಗಲೂ ಸರ್ವೋಚ್ಚ ಅಧಿಕಾರದ ವಿನಮ್ರ ಅಧೀನ ಸೇವಕನ ಸ್ಥಾನದಲ್ಲಿರಬೇಕು.

ಈ ಮೂಲಕ ಚಿತ್ರದುರ್ಗ ನಾಯಕರು ಆರಂಭದಿಂದ ವಿಜಯನಗರದ ಅರಸರಿಗೆ ವಿನಮ್ರತೆಯನ್ನು ತೋರಿದರು(ಕೇಶವನಾಯಕ್, ೧೯೯೮:೨೯).

ಜರಿಮಲೆ ಪಾಳೆಯಗಾರರು ವಿಜಯನಗರದ ಸಾಮಂತರಾಗಿದ್ದು, ಪೆನ್ನಪ್ಪನಾಯಕನು ತನಗೆ ಬಳುವಳಿಯಾಗಿ ಬಂದ ಗ್ರಾಮಕ್ಕೆ ಒಡೆಯನಾಗಿದ್ದನು. ಇವನಿಗೆ ವಿಜಯನಗರದ ತುಳುವ ವೀರನರಸಿಂಹನು ಗುಡೇಕೋಟೆ ಭೂಸಮುದ್ರ ಗ್ರಾಮಗಳನ್ನು ಉಡುಗೊರೆಯಾಗಿ ನೀಡಿ ಪುರಸ್ಕರಿಸಿದ್ದನು(ಕೊಟ್ರೇಶ್, ೨೦೧೦:೫೬). ಈ ಮೂಲಕ ಕಿರಿಯ ಸಂಸ್ಥಾನಗಳು ವಿಜಯನಗರದ ಅರಸರಿಗೆ ಸಾಮಂತರಾಗಿದ್ದು, ಯುದ್ಧ ಸಂದರ್ಭದಲ್ಲಿ ಸಹಕರಿಸುತ್ತಿದ್ದರೆಂಬ ಅಂಶ ತಿಳಿಯುತ್ತದೆ. ಅಚ್ಯುತರಾಯನ ಕಾಲದಲ್ಲಿ ಜರಿಮಲೆ ಪಾಳೆಯಗಾರರು ೧೫,೩೦೦ ಮಹಮ್ಮದ್‌ಶಾಹಿ ಪಗೋಡ ಆದಾಯ ಬರುವ ನಾಲ್ಕು ಗ್ರಾಮಗಳನ್ನು ಪಡೆದುಕೊಂಡರು. ನಂತರ ಅಚ್ಯುತರಾಯನು ಜರಿಮಲೆಯ ಪೆನ್ನಪ್ಪನಾಯಕನಿಗೆ ೫೦೦ ಅಶ್ವದಳ ಮತ್ತು ೩೦೦೦ ಕಾಲಾಳುಪಡೆ ಇಟ್ಟುಕೊಳ್ಳಲು ಅನುಮತಿ ಕೇಳಿದಾಗ ಅದನ್ನು ಪೂರೈಸುವ ಷರತ್ತಿನ ಮೇರೆಗೆ ೩೫೧೫೦ ಮಹಮ್ಮದ್‌ಶಾಹಿ ಪಗೋಡ ಆದಾಯವಿರುವ ಮತ್ತೆರಡು ಮಾಗಣಿಗಳನ್ನು ನೀಡಿದನು, ಈ ಮೂಲಕ ಜರಿಮಲೆಯ ನಾಯಕರು ತಮ್ಮ ಪ್ರಭುತ್ವಕ್ಕೆ ಯುದ್ಧ ಸಂದರ್ಭದ ಸೈನ್ಯ ಒದಗಿಸುತ್ತಾ ನಿಷ್ಠೆಯನ್ನು ತೋರಿಸುತ್ತಿದ್ದರು.

ಜರಿಮಲೆ ಪಾಳೆಯಗಾರರು ವಿಜಯನಗರಕ್ಕೆ ನಿಷ್ಠೆಯನ್ನು ತೋರಿದಂತೆ ಬಿಜಾಪುರದ ಸುಲ್ತಾನರಿಗೂ ತಮ್ಮ ನಿಷ್ಠೆಯನ್ನು ತೋರಿಸುತ್ತಿದ್ದರು. ಬಿಜಾಪುರದ ಸುಲ್ತಾನನ ಕುದುರೆಯನ್ನು ಪಳಗಿಸಿ ನಾಲ್ಕು ಮಾಗಣಿಗಳು ಮತ್ತು ೩೦೦೦ ಕಾಣಿಕೆಗಳನ್ನು ಪಡೆದಿದ್ದರು ಹಾಗೂ ಸಂಸ್ಥಾನದಲ್ಲಿ ಕಾಲಾಳು, ಅಶ್ವಗಳನ್ನು ಇಟ್ಟುಕೊಳ್ಳಲು ಒಪ್ಪಿದ್ದರು. ಇದರಿಂದ ತಿಳಿಯುವ ಅಂಶವೇನೆಂದರೆ ತಮ್ಮ

ಸಾಹಸವನ್ನು ಮೆಚ್ಚಿ ಬಂದಿರುವ ಕೊಡುಗೆಯನ್ನು ಸ್ವೀಕರಿಸುವುದು ಕರ್ತವ್ಯವಾಗಿರುವುದು ಕಂಡುಬರುತ್ತದೆ.

ಟಿಪ್ಪು ಸುಲ್ತಾನನು ಜರಿಮಲೆ ನಾಯಕರಿಗೆ ಹಿರೇ ಕೊಟ್ಟೂರು ಸಾಮಂತರಿಗೆ ಸೇರಿದ ಹರದನಹಳ್ಳಿ ಮತ್ತು ಯಡೆತೊರೆ ಗ್ರಾಮಗಳನ್ನು ದತ್ತಿ ನೀಡಿದ್ದನು. ಪಾಳೆಯಗಾರರನ್ನು ನಾಶಪಡಿಸಬೇಕೆಂಬ ಬಯಕೆಯನ್ನು ಹೊಂದಿದ್ದ ಇವನ ಒಳಾರ್ಥವನ್ನು ಅರಿಯದೆ ಅವನ ಮಾತಿಗೆ ಬಲಿಯಾದರು. ಈ ಮೂಲಕ ಟಿಪ್ಪು ಭೂಹಿಡುವಳಿಯನ್ನು ನಾಶಗೊಳಿಸಬೇಕೆಂಬ ಉದ್ದೇಶಗಳಲ್ಲಿ ಇದು ಒಂದಂಶವಾಗಿದೆ. ೧೭೯೯ರಲ್ಲಿ ನಿಜಾಮನ ಆಳ್ವಿಕೆಗೆ ಈ ಪ್ರದೇಶ ಒಳಪಟ್ಟಿತು. ೧೮೦೮ರಲ್ಲಿ ಈಸ್ಟ್ ಇಂಡಿಯಾ ಕಂಪನಿಗೆ ಸೇರಿತು. ಟಿಪ್ಪು ಮೈಸೂರು ಸಂಸ್ಥಾನದಲ್ಲಿ ಸಂಪೂರ್ಣ ಭೂಹಿಡುವಳಿಗಳನ್ನು ನಾಶಪಡಿಸಬೇಕೆಂಬ ಉದ್ದೇಶದಿಂದ ಅವನ ವ್ಯಾಪ್ತಿಯ ಎಲ್ಲ ಪ್ರದೇಶಗಳನ್ನು ತನ್ನ ಆಳ್ವಿಕೆಗೆ ಒಳಪಡಿಸಿದ್ದನು.

ವಿಜಯನಗರ ಕಾಲಘಟ್ಟದಲ್ಲಿ ಅಸ್ತಿತ್ವದಲ್ಲಿದ ಸಂಡೂರು ಪಾಳೆಯಗಾರರು ೧೫೧೩ರಲ್ಲಿ ವಿಜಯನಗರದ ಕೃಷ್ಣದೇವರಾಯರಿಗೆ ಯುದ್ಧದ ಸಂದರ್ಭದಲ್ಲಿ ಸೈನಿಕ ಸಹಾಯ ನೀಡಿದ್ದರು. ಈ ವಂಶದ ಬೊಮ್ಮಂತರಾಜ ಮರಳ ಎಂಬುವವನಿಗೆ ನಾಡಿನ ತಳವಾರಿಕೆಯನ್ನು ನೀಡಿ ಕುಡತಿನಿ, ಸಂಡೂರು, ಬಾಣರಾವಿ, ಉಜ್ಜನಿ, ಗುಡೇಕೋಟೆ, ಜರಿಮಲೆ ಮತ್ತು ವಡ್ಡು, ದರೋಜಿಗಳನ್ನು ಜಹಗೀರಿಯಾಗಿ ಕೊಟ್ಟನು. ಇದರಿಂದ ಅಲ್ಲಿನ ಭೂಮಿಯು ಬೊಮ್ಮಂತರಾಜನ ಅಧೀನದಲ್ಲಿದ್ದು, ಆ ಹಿಡುವಳಿಗಳ ಸಂಪೂರ್ಣ ಜವಾಬ್ದಾರಿಯು ಈ ನಾಯಕನಿಗೆ ಸೇರಿದ್ದಾಗಿತ್ತು. ಇದರಿಂದ ಈ ಸಂಸ್ಥಾನದಲ್ಲಿ ಆಸ್ತಿತ್ವದಲ್ಲಿದ್ದ ಊಳಿಗಮಾನ್ಯತೆಯನ್ನು ಗುರುತಿಸಬಹುದು(ಶ್ಯಾಮಲ, ೨೦೧೭:೬೩).

ಬಳ್ಳಾರಿ ಜಿಲ್ಲೆಯಲ್ಲಿ ಪಾಳೆಯಗಾರರ ಕುಟುಂಬಗಳಿಗೆ ಬ್ರಿಟಿಶರು ಘೋಷಿಸಿದ ಸವಲತ್ತುಗಳ ಬಗ್ಗೆ ಜೆ.ಸಿ. ದುವಾ ವಿವರವಾಗಿ ಬರೆಯುತ್ತಾರೆ. ಪಾಳೆಯಗಾರರಿಗೆ ಕೊಡಲಾಗುತ್ತಿದ್ದ ಪಿಂಚಣಿ ಎಷ್ಟು ನಿರಂತರವಾಗಿತ್ತೆಂದರೆ ಸ್ವಾತಂತ್ರ್ಯ ಬಂದ ಎರಡು ದಶಕಗಳ ನಂತರ ೧೯೬೫ರಲ್ಲಿ ತಹಸೀಲ್ದಾರ್ ಕಛೇರಿಗೆ ಭೇಟಿ ಕೊಟ್ಟಾಗ ಪಾಳೆಯಗಾರರ ವಂಶಸ್ಥರು ಸರ್ಕಾರದಿಂದ ಇನ್ನೂ ಪಿಂಚಣಿ ಪಡೆಯುತ್ತಿದ್ದ ವಿಷಯ ತಿಳಿಯಿತು(ಸಾಕಿ,(೨), ೧೯೯೮:೪೨). ಕರ್ನಾಟಕದಲ್ಲಿ ವಸಾಹತು ಕೇಂದ್ರವನ್ನಾಗಿ ಮಾಡಿಕೊಂಡ ಎಲ್ಲ ಪಾಳೆಯುಗಾರರನ್ನು ಅವರ ಆಸ್ತಿಪಾಸ್ತಿಯುನ್ನು ಹಿಂದಿರುಗಿಸಲಾಯಿತು. ಕಾರ್ನ್‌ವಾಲೀಸ್ ಜಾರಿಗೆ ತಂದ ಖಾಯಂ ಜಮೀನ್ದಾರಿ ಪದ್ಧತಿ ಸ್ಥಳೀಯ ಪ್ರಭುತ್ವಗಳ ಮೇಲೆ ಆರ್ಥಿಕ ಹೊರೆಯನ್ನು ಏರಿ ಕಪ್ಪ ಕಾಣಿಕೆಯನ್ನು ಒಪ್ಪಿಸಬೇಕಿತ್ತು. ಬ್ರಿಟಿಶರು ನೇಮಿಸಿದ ಹಕ್ಕುಗಳನ್ನು ಅವರೇ ನೇಮಿಸಿಕೊಳ್ಳುವಂತೆ ಮಾಡಿದರು(ಸಾಕಿ,(೨), ೧೯೯೮:೪೪).

ಸಂತೆಬೆನ್ನೂರು ನಾಯಕರು ವಿಜಯನಗರದ ಅರಸರಿಗೆ ಸಾಮಂತರಾಗಿದ್ದರು. ಈ ವಂಶದ ಹನುಮಪ್ಪನಾಯಕ ವಿಜಯನಗರದ ಅರಸರ ಬಳಿ ದಳಪತಿಯಾಗಿ ಕೆಲಸ ನಿರ್ವಹಿಸುತ್ತಿದ್ದನು. ಇದಕ್ಕೆ ಪ್ರತಿಯಾಗಿ ರಾಮರಾಯ ಉತ್ತಂಗಿ ವೇಂಟಕ್ಕೆ ಸಲ್ಲುವ ಮದಕರಿನಾಡಿನ ಈ ಸಂತೆಬೆನ್ನೂರು ಸೀಮೆಯನ್ನು ಅಮರ ಮಾಗಣಿಯಾಗಿ ನೀಡಿದನು(ನಾಡಿಗ, ೨೦೧೪:೧). ಮಧುಗಿರಿ ಮಹಾನಾಡ

ಪ್ರಭುಗಳು ಸಹ ವಿಜಯನಗರದ ಸಾಮಂತರಾಗಿದ್ದು ಭಾರತೀಯ ಊಳಿಗಮಾನ್ಯದ ಲಕ್ಷಣಗಳನ್ನು ಇಲ್ಲಿಯೂ ಕಾಣಬಹುದಾಗಿದೆ. ೧ನೇ ವೆಂಕಟಪತಿರಾಯನು ವಿಜಯನಗರದಲ್ಲಿ ಆಳ್ವಿಕೆ ಮಾಡುತ್ತಿದ್ದಾಗ ಬಿಜ್ಜಾವರ ಎಂಬಲ್ಲಿ ವಿಜಯನಗರದ ಒಪ್ಪಿಗೆ ಪಡೆದು ಕೋಟೆಯನ್ನು ನಿರ್ಮಿಸುತ್ತಾನೆ. ಅಂದರೆ ಸಾರ್ವಭೌಮರು ತಮ್ಮ ರಾಜಕೀಯ ಅಸ್ತಿತ್ವ ಕಳೆದುಕೊಂಡಿದ್ದರೂ ಅವರಿಗೆ ತೋರಿದ ನಿಷ್ಠೆಯನ್ನು ಇಲ್ಲಿ ಸ್ಮರಿಸಬಹುದಾಗಿದೆ.

ವಿಜಯನಗರದ ಬಲಿಷ್ಠ ರಾಜನಾದ ಕೃಷ್ಣದೇವರಾಯನು ಮರಣಿಸಿದಾಗ, ಅಲ್ಲಿ ಸಿಂಹಾಸನಕ್ಕಾಗಿ ಕಲಹವಾಯಿತು. ಪೆನುಗೊಂಡೆಯ ಅರಸ ಸಾಲಿನಾಯಕ ಹಾಗಲವಾಡಿ ನಾಯಕರ ಬೆಂಬಲವನ್ನು ಕೇಳಿದಾಗ ಇವರು ಸೈನಿಕ ನೆರವನ್ನು ನೀಡಿದರು. ಇದಕ್ಕೆ ಪ್ರತಿಯಾಗಿ ವಿಜಯನಗರದ ಅರಸರು ಹೊನ್ನವಳ್ಳಿ, ತುರುವೇಕೆರೆ ಮತ್ತು ನೊಣವಿನ ಕೆರೆಗಳನ್ನು ನೀಡಿ ಗೆದ್ದು ವಿಜಯನಗರದ ಪತನಾನಂತರ ಸ್ವತಂತ್ರ ಸಂಸ್ಥಾನವಾಯಿತು(ಷೇಕ್ ಅಲಿ, ೨೦೧೮:೧೨೨).

ವಿಜಯನಗರದ ಸಾಮಂತ ಸಂಸ್ಥಾನಗಳು ತಮ್ಮ ನಿಷ್ಠೆ ಪ್ರಮಾಣಿಕತೆಗಳನ್ನು ತೋರಿಸುತ್ತಾ ಮಿಲಿಟರಿ ಅಧಿಕಾರಿಗಳಾಗಿ ಸೈನ್ಯಕ್ಕೆ ಸೇರಿಕೊಂಡು ಭೂಹಿಡುವಳಿಗಳನ್ನು ಪಡೆಯುವುದರ ಮೂಲಕ ಸ್ವತಂತ್ರ ಸಂಸ್ಥಾನಗಳಾಗಿ ರೂಪುಪಡೆದವು. ಇವರ ಮಿಲಿಟರಿ ಸೇವೆಯಲ್ಲಿ ಭಾರತೀಯ ಊಳಿಗಮಾನ್ಯತೆಯ ಸ್ವರೂಪಗಳು ಸ್ಪಷ್ಟವಾಗಿದ್ದು, ಪ್ರತಿಯೊಂದು ಸಾಮಂತ ಪ್ರಭುತ್ವಗಳು ಅಧಿಕಾರವನ್ನು ವಿಕೇಂದ್ರೀಕರಿಸಿ ನಾಯಕನ ನಂತರ ಪಾರುಪತ್ಯಗಾರನೆಂಬ ಅಧಿಕಾರಿಯು ಕೇಂದ್ರದಲ್ಲಿದ್ದರೆ ಗ್ರಾಮಮಟ್ಟದಲ್ಲಿ ಗೌಡ ಗ್ರಾಮದ ಮುಖಂಡನಾಗಿರುತ್ತಾನೆ.

ಕರ್ನಾಟಕದಲ್ಲಿ ಮರಾಠರ ಆಳ್ವಿಕೆಯನ್ನು ಗುರುತಿಸಿ ಮರಾಠರು ಊಳಿಗಮಾನ್ಯ ಆಡಳಿತದ ಮಧ್ಯಸ್ಥಗಾರರಾಗಿ ಉತ್ತರ ಕರ್ನಾಟಕ ಭಾಗದಲ್ಲಿ ದೇಸಾಯಿ ಮತ್ತು ದೇಶಮುಖ ಎಂಬ ತೆರಿಗೆ ವಸೂಲಿಗಾರ ಅಧಿಕಾರಿಗಳಿದ್ದರು. ಇವರ ರೈತ ಕಾರ್ಮಿಕರ ವಿರೋಧದ ನಡುವೆಯೂ ಊಳಿಗಮಾನ್ಯ ಪದ್ಧತಿಯು ಸುಭದ್ರವಾಗಿತ್ತು. ಈ ಮೂಲಕ ಕರ್ನಾಟಕದಲ್ಲಿ ಮರಾಠರ ಅಧೀನದಲ್ಲಿಯೂ ಭೂಮಿಯಿದ್ದು ಇವರು ಭೂಹಿಡುವಳಿದಾರರಾಗಿ ಕಾರ್ಯ ನಿರ್ವಹಿಸಿದರು. ಭಾರತದ ಊಳಿಗಮಾನ್ಯ ವ್ಯವಸ್ಥೆ ನಾಶವಾಗಿ ಬಂಡವಾಳಶಾಹಿ ಅಸ್ತಿತ್ವಕ್ಕೆ ಬಂತೆಂದು ಮೇಲ್ನೋಟಕ್ಕೆ ಕಂಡುಬಂದರೆ ವಾಸ್ತವ ಪರಿಸ್ಥಿತಿಯೇ ಬೇರೆ ಇತ್ತೆಂದು ಹೇಳಬಹುದು. ಬ್ರಿಟಿಶರು ಭೂಮಾಲೀಕರೊಂದಿಗೆ ಮೃದುತ್ವದ ಧೋರಣೆಯನ್ನು ನಿರ್ವಹಿಸಿ ವಸಾಹತು ನೀತಿಯು ಹಿಗ್ಗುವಂತೆ ಮಾಡಿದರು. ಇದಕ್ಕೆ ಉತ್ತಮ ಉದಾಹರಣೆಯೆಂದರೆ ಖಾಯಂ ಜಮೀನ್ದಾರಿ ಪದ್ಧತಿಯೆಂದು ಹೇಳಬಹುದು. ಜಮೀನ್ದಾರರು ಭಾರತದ ಚರಿತ್ರೆಯಲ್ಲಿ ಉನ್ನತ ವರ್ಗದವರಾಗಿದ್ದು, ಇವರನ್ನು ತಮ್ಮ ಕಡೆ ಸೆಳೆದುಕೊಂಡರೆ ತಮ್ಮ ಆಡಳಿತ ಸುಭದ್ರವಾಗಬಹುದೆಂಬ ಕಲ್ಪನೆ ಅವರದಾಗಿತ್ತು.

೧೭ನೇ ಶತಮಾನದಲ್ಲಿ ಬ್ರಿಟನ್ನಿನ ಮಧ್ಯಮವರ್ಗದ ಹೋರಾಟದ ಮಾದರಿಯಲ್ಲಿ ಕರ್ನಾಟಕದಲ್ಲಿ ಬ್ರಿಟಿಶ್ ಬಂಡವಾಳ ಊಳಿಗಮಾನ್ಯ ಪದ್ಧತಿಯ ಜೊತೆ ಸಂಬಂಧ ಬೆಳೆಸಿಕೊಂಡು ಊಳಿಗಮಾನ್ಯ ವ್ಯವಸ್ಥೆಯ ಕೊಳೆಯುವಿಕೆಯಿಂದ ಜೀವಂತಿಕೆಯತ್ತ ಹೊರಳಿತು. ಅಂದರೆ ಊಳಿಗಮಾನ್ಯ ಸ್ವರೂಪದಿಂದ

ಬಂಡವಾಳ ಸ್ವರೂಪವನ್ನು ಪಡೆದುಕೊಂಡು ಅದು ತನ್ನ ಹೊಸ ಹುಟ್ಟನ್ನು ಪಡೆದುಕೊಂಡಿತ್ತು. ಈ ವಿಚಾರವನ್ನು ಕುರಿತಂತೆ ರಾಂಡೆ ಹಿಲ್ಟನ್ ಎಂಬುವವರು ಊಳಿಗಮಾನ್ಯತೆ ಬಂಡವಾಳಶಾಹಿಯತೆಗೆ ಸಾಗಿದ ವಿಚಾರವನ್ನು ಮಾರ್ಕ್ಸ್‌ವಾದದ ಹಿನ್ನೆಲೆಯಲ್ಲಿ ವಿವರಿಸಿದ್ದಾರೆ. ಊಳಿಗಮಾನ್ಯ ವ್ಯವಸ್ಥೆಯಿಂದ ಕೃಷಿಯು ವಾಣಿಜ್ಯೀಕರಣವಾಗಿ ಉತ್ಪಾದನಾ ಸಂಬಂಧಗಳು ಯಾವ ರೀತಿ ಕಾರ್ಯ ನಿರ್ವಹಿಸುತ್ತವೆ ಎಂಬುದನ್ನು ಕುರಿತಂತೆ ವಿವರಿಸುತ್ತಾರೆ.

"೧೭೯೯ರಲ್ಲಿ ಮೈಸೂರು ಸಂಸ್ಥಾನವನ್ನು ಇಂಗ್ಲಿಶರು ತಮ್ಮ ವಸಾಹತುವನ್ನಾಗಿ ಮಾಡಿಕೊಂಡಾಗ, ಕರ್ನಾಟಕದಲ್ಲಿರುವ ಸ್ಥಳೀಯ ಸಂಸ್ಥಾನಗಳನ್ನು ಜಾಗರೂಕತೆಯಿಂದ ನೋಡಿಕೊಳ್ಳಬೇಕೆಂದು ಬಳ್ಳಾರಿಯ ಕಲೆಕ್ಟರ್ ಆಗಿ ಬಂದ ಮನ್ರೋ ಪ್ರಸ್ತಾಪಿಸುತ್ತಾ, ಊಳಿಗಮಾನ್ಯತೆ ಬೇರೂರಿರುವ ಈ ವ್ಯವಸ್ಥೆಯ ಒಳಚೌಕಟ್ಟನ್ನು ಹಿಡಿದಿಡುವ ರಾಜಕಾರಣದ ವಸ್ತುಗಳಾಗಿ ಪ್ರತಿ ಹಳ್ಳಿಯ ಪಟೇಲರು ಮತ್ತು ಶಾನುಭೋಗರು ಸರ್ಕಾರಕ್ಕೆ ತುಂಬಾ ಉಪಯುಕ್ತ ಎಂದು ತಿಳಿಸುತ್ತಾರೆ. ಸಾಕಿಯವರು ಬ್ರಿಟಿಶರ ಒಳನೀತಿಯು ಬ್ರಿಟಿಶ್ ವಸಾಹತು ಬಂಡವಾಳಶಾಹಿ ನೀತಿಯನ್ನು ಮುದ್ದಿಸುವ ಹಿಂದಿನ ಬಯಕೆಯು ಕಂಡುಬರುತ್ತದೆ(ಸಾಕಿ,೧೯೯೮:೬೩). ಈ ಮೂಲಕ ಟಿಪ್ಪು ನಿರ್ಮೂಲನೆ ಮಾಡಿದ ಭೂ ಮಾಲೀಕತ್ವವನ್ನು ಬ್ರಿಟಿಷರು ಪುನಃ ಅವರ ಅವಶ್ಯಕತೆಗಾಗಿ ಆರಂಭಿಸಿದರೆಂದೇ ಹೇಳಬಹುದು.

ಮನ್ರೋ ಜಮೀನ್ದಾರರು ಮತ್ತು ಊಳಿಗಮಾನ್ಯ ಪದ್ಧತಿಯ ಉಳಿಯುವಿಕೆಯ ಬಗ್ಗೆ ಸ್ಪಷ್ಟವಾಗಿ ಮಾತನಾಡುತ್ತಾರೆ. ಈ ಊಳಿಗಮಾನ್ಯತೆಯಲ್ಲಿ ವಿಜಯನಗರ ಸಾಮಂತ ರಾಜ್ಯವಾಗಿ ಸ್ವತಂತ್ರವಾದ ಸಂಡೂರು ಸಂಸ್ಥಾನವನ್ನು ಸ್ಮರಿಸಬಹುದು. ಸಂಡೂರಿನ ಸಂತೃಪ್ತ ಘೋರ್ಪಡೆಗಳು ಮರಾಠರೊಂದಿಗೆ ಅವರ ಸಂಬಂಧಗಳನ್ನು ಬದಲಿಸಿದರು. ಮನ್ರೋನನ್ನು ಬೆಂಬಲಿಸುತ್ತಾ ತಮ್ಮ ಬಂದೂಕುಗಳನ್ನು ಮಾಜಿ ಗುರುಗಳಾದ ಪೇಶ್ವೆಯರ ಕಡೆಗೆ ತಿರುಗಿಸಿದರು. ಹಾಗೆಯೇ ಬಳ್ಳಾರಿ ಜಿಲ್ಲೆಯನ್ನು ಗೆದ್ದು ಸಂಡೂರು ಸಂಸ್ಥಾನವನ್ನು ತಮ್ಮದಾಗಿಸಿಕೊಂಡ ನಂತರ ಘೋರ್ಪಡೆಗಳು ವರ್ತಕರಾಗಿ ಮತ್ತು ಆಯಕಟ್ಟಿನ ಜಾಗಗಳಲ್ಲಿ ಅಧಿಕಾರಿಗಳಾಗಿ ದೊರೆಯಾಗಿ ಇದ್ದರು. ಅವರು ಕುಳಿತ ಆರಾಮ ಖುರ್ಚಿಯು ಮೂರುಕಾಲೀನ ಮೇಲೆ ಸಮತೋಲನ ಸಾಧಿಸಿತ್ತು. ಒಂದು ಕಾಲು ಊಳಿಗಮಾನ್ಯತೆ, ಒಂದು ವ್ಯಾಪಾರ, ಮತ್ತೊಂದು ಅಧಿಕಾರಶಾಹಿತನ. ಈ ಮೂಲಕ ಕರ್ನಾಟಕದಲ್ಲಿ ಬಂಡವಾಳ ಸ್ವರೂಪದಲ್ಲಿರುವ ಬ್ರಿಟಿಶ್ ವಸಾಹತು ನೀತಿಯನ್ನು ಗ್ರಹಿಸಬಹುದಾಗಿದೆ. ಘೋರ್ಪಡೆಗಳು ವಸಾಹತು ಕರ್ನಾಟಕದಲ್ಲಿ ವ್ಯಾಪಾರ ಮಾಡುವ ವರ್ತಕರಾಗಿ ಕಂಡುಬರುವುದು ವಿಶೇಷ.

*** ಬ್ರಹ್ಮದೇಯ ಹಾಗೂ ದೇವದೇಯ ಮತ್ತು ಮಠಪುರಗಳು**

ಭೂಹಿಡುವಳಿಗಳ ಪರಿಕಲ್ಪನೆಯ ಇನ್ನೊಂದು ದೃಷ್ಟಿಯಲ್ಲಿ ಗಮನಿಸಿದರೆ ಅವುಗಳ ಸ್ವರೂಪವೇನೆಂದು ತಿಳಿಯುತ್ತದೆ. ಬ್ರಾಹ್ಮಣರಿಗೆ, ದೇವರಿಗೆ, ಮಠಗಳಿಗೆ, ಸೇವೆಗಾಗಿ ಕೊಟ್ಟ ಭೂಮಿಯನ್ನು ಹಿಡುವಳಿಗಳೆಂದು ಕರೆಯುತ್ತಿದ್ದು, ವಿವಿಧ ಉದ್ದೇಶಗಳಿಗೆ ದಾನ ನೀಡುತ್ತಿದ್ದರು. ವಂಶಸ್ಥರ ಒಳಿತಿಗೆ, ತಂದೆ-ತಾಯಿಯ ಹೆಸರಿನಲ್ಲಿ ಆ ಊರುಗಳನ್ನು ಗ್ರಾಮದ ಆದಾಯಕ್ಕಾಗಿ ದಾನ ಬಿಟ್ಟ ವಿವರಗಳು ಅಲ್ಲಿನ ಶಾಸನ ಮತ್ತು ಸಾಹಿತ್ಯಾಧಾರಗಳಿಂದ ತಿಳಿಯುತ್ತವೆ. ವಿಜಯನಗರೋತ್ತರ

ಕಾಲದ ಊಳಿಗಮಾನ್ಯ ಪದ್ಧತಿಯು ಹೊಸ ಆರ್ಥಿಕ ಲಕ್ಷಣಗಳನ್ನು ಉಳಿಸಿಕೊಂಡಿದೆ. ಈ ವೇಳೆಯಲ್ಲಿ ಸರಕು ಉತ್ಪಾದನೆಯ ಬಳಕೆ, ಹಣದ ಸಂಬಂಧಗಳ ಬೆಳವಣಿಗೆ, ಕೃಷಿಯ ಮೇಲೆ ಅವುಗಳ ಪ್ರಭಾವ, ಕುಶಲಕರ್ಮಿಗಳ ಉತ್ಪಾದನೆ ಬೆಳವಣಿಗೆ ಮತ್ತು ಕರಾವಳಿಯಲ್ಲಿ ವ್ಯಾಪಾರ ಮತ್ತು ಉತ್ಪಾದನೆಯ ಏರಿಕೆ ಜಾಗೃತ ಯುರೋಪಿಯನ್ ಮಾರುಕಟ್ಟೆಯ ಬೇಡಿಕೆಯನ್ನು ಪೂರೈಕೆ ಮಾಡುತ್ತದೆ(ಸಾಕಿ-೧, ೧೯೯೮:೩೩೨). ಈ ಅಂಶಗಳು ವಿಜಯನಗರೋತ್ತರ ಕಾಲದಲ್ಲಿ ಪ್ರತಿಧ್ವನಿಸಿದವು ಎಂದು ಹೇಳಬಹುದು. ಪ್ರತಿಧ್ವನಿಸಿದ ಅಂಶಗಳಲ್ಲಿ ಮಠಪುರಗಳು ಮುಖ್ಯವಾದ ಪಾತ್ರವನ್ನು ವಹಿಸುತ್ತವೆ.

ಭೂಹಿಡುವಳಿಗಳು ಭಾರತದ ಚರಿತ್ರೆಯಲ್ಲಿ ಹೆಚ್ಚಾಗಿದ್ದು, ಕರ್ನಾಟಕದ ಚರಿತ್ರೆಯು ಇದಕ್ಕೆ ಹೊರತಾಗಿಲ್ಲ. ಕರ್ನಾಟಕವನ್ನಾಳಿದ ಅರಸುಮನೆತಗಳು ಶಿಕ್ಷಣದ ಅಭಿವೃದ್ಧಿಗೆ ಹೊಸ ಅಗ್ರಹಾರಗಳನ್ನು ಸ್ಥಾಪಿಸುವುದು, ಹಳೆಯ ಅಗ್ರಹಾರಕ್ಕೆ ದಾನ ಹೀಗೆ ಬ್ರಾಹ್ಮಣರಿಗೆ ದಾನ ನೀಡುತ್ತಿದ್ದರು. ಈ ಮೂಲಕ ಬ್ರಹ್ಮದೇಯಗಳು ಪ್ರಾಚೀನ ಪ್ರಭುತ್ವದಿಂದ ಸಾಮಂತ ಪ್ರಭುತ್ವದವರೆಗೂ ಪ್ರತಿ ಹಂತದಲ್ಲಿಯೂ ಗುರುತಿಸಬಹುದು. ಕೃಷಿಭೂಮಿ, ಹಣ, ಚಿನ್ನ, ಬೆಳ್ಳಿ ಹಾಗೂ ದೈನಂದಿನ ಉಪಯೋಗದ ವಸ್ತುಗಳನ್ನು ದಾನ ರೂಪದಲ್ಲಿ ಕೊಡಲಾಗುತ್ತಿತ್ತು. ಹೆಚ್ಚುವರಿ ಉತ್ಪಾದನೆ ಅರಸ ಹಾಗೂ ಪ್ರತಿಷ್ಠಿತ ವರ್ಗಗಳಲ್ಲಿ ಮಾತ್ರ ಕ್ರೋಢೀಕೃತವಾಗಿರುತ್ತಿತ್ತು. ಯಾರೂ ತಮ್ಮ ಸ್ವಂತದ ಭೂಮಿ ಇಲ್ಲವೇ ವಸ್ತುಗಳನ್ನು ದಾನದ ರೂಪದಲ್ಲಿ ಕೊಡಲು ಮುಂದೆ ಬರುತ್ತಿರಲಿಲ್ಲ. ಹಾಗಾಗಿ ರಾಜನು ಪ್ರಭುತ್ವದ ಅಧೀನದಲ್ಲಿರುವ ಭೂಮಿಯನ್ನು ಕೃಷಿ ವಿಸ್ತರಣೆಗೆ ಐದು ವರ್ಷಗಳು ಕಂದಾಯ ಮುಕ್ತವಾಗಿ ಕೊಡುತ್ತಿದ್ದನು. ಇಲ್ಲವೇ ಪಾಳುಭೂಮಿಯನ್ನು ದೇವಾಲಯಕ್ಕೆ, ದೇವರ ಸೇವೆಗೆ ದಾನ ನೀಡುತ್ತಿದ್ದನು. ರಾಜ್ಯದ ಭೂಸಂಪತ್ತಿನಲ್ಲಿ ಒಂದು ಭಾಗ ರಾಜನ ವೈಯಕ್ತಿಕ ಆಸ್ತಿಪಾಸ್ತಿಗಳನ್ನು ಒಳಗೊಂಡಿತ್ತು. ರಾಜನ ಭೂಮಿಯನ್ನು ವಿಶೇಷಾಧಿಕಾರಿಗಳು ನೋಡಿಕೊಳ್ಳುತ್ತಿದ್ದರು. ಈ ಭೂಮಿಯ ಕೆಲಸವನ್ನು ಕೂಲಿಕಾರ್ಮಿಕರು ಗೇಣಿ ರೈತರು ನೋಡಿಕೊಳ್ಳುತ್ತಿದ್ದರು(ಸಂತೋಷ ೨೦೦೯:೧೬೫).

ಗ್ರಾಮೀಣ ಅರ್ಥವ್ಯವಸ್ಥೆಯಲ್ಲಿ ಅಗ್ರಹಾರಗಳು ಪ್ರಮುಖ ಪಾತ್ರ ವಹಿಸುತ್ತವೆ. ಈ ಅಗ್ರಹಾರಗಳು ಬ್ರಾಹ್ಮಣರ ನೆಲೆಯಾದರೂ ಅಂದಿನ ಶಿಕ್ಷಣ ಕೇಂದ್ರಗಳಾಗಿ, ಧಾರ್ಮಿಕ ಕೇಂದ್ರಗಳಾಗಿ ಸಮಾಜದ ಸಾಮರಸ್ಯ ಮತ್ತು ಸಾಮಾಜಿಕ ವರ್ಣತಾರತಮ್ಯವನ್ನು ಪ್ರತಿನಿಧಿಸುವಂತಹ ಕೆಲಸವನ್ನು ಮಾಡುತ್ತಿದ್ದವು. ಗೇಣಿದಾರ ವರ್ಗ ಮತ್ತು ಕಸಬುದಾರ ವರ್ಗಗಳು ಅಗ್ರಹಾರಗಳಲ್ಲಿ ನೆಲೆಸಿದ್ದು, ಈ ಗ್ರಾಮಗಳ ಭೂಮಿಯು ಬ್ರಾಹ್ಮಣರ ಕೈಯಲ್ಲಿದ್ದು ಕಂದಾಯದಿಂದ ಮುಕ್ತಿಯನ್ನು ಪಡೆದಿರುತ್ತಿದ್ದವು.

೧೭೨೨ರ ಚಿತ್ರದುರ್ಗದ ನಾಯಕ ಅರಸರು ಭೂಮಿಯನ್ನು ಕೊಂಡು ಬ್ರಾಹ್ಮಣರಿಗೆ ದತ್ತಿ ನೀಡಿದ್ದಾಗಿ ಅತ್ತಿಗುಪ್ಪೆ ಗ್ರಾಮದ ಕೈಫಿಯತ್ತು ತಿಳಿಸುತ್ತದೆ(ಕಲಬುರ್ಗಿ, ೧೯೯೪:೩೪-೩೭). ಅಗ್ರಹಾರಗಳನ್ನು ಸ್ಥಾಪಿಸಲು ರಾಜರು ಹೊಸದಾಗಿ ಹಳ್ಳಿಗಳನ್ನು ನಿರ್ಮಿಸಿದ್ದರು. ೧೬೫೩ರಲ್ಲಿ ಚನ್ನಗಿರಿಯ ಶಾಸನವೊಂದು ಉಲ್ಲೇಖಿಸಿರುವಂತೆ ಬಸವಾಪಟ್ಟಣದ ನಾಡಿಗರು ಮತ್ತು ಸೆಟ್ಟಿಗಳ ಕೋರಿಕೆಯ ಮೇರೆಗೆ ಅಲ್ಲಿನ ಅರಸ ಮಲ್ಲಿಕೆಯ ತನ್ನ ಹೆಸರಿನಲ್ಲಿ ಮಲ್ಲಿಕಪುರವೆಂಬ ಗ್ರಾಮ

ನಿರ್ಮಿಸಿ ಸರೋವರವೆನಿಸುವಂತೆ ಕೆರೆಯನ್ನು ನಿರ್ಮಿಸಿ ಜನಸಮುದಾಯಗಳಿಗೆ ದಾನ ನೀಡಿ ಅನುಕೂಲ ಮಾಡಿಕೊಟ್ಟನು(ಎ.ಕ.೬ ಚನ್ನಗಿರಿ, ೪೩). ನಿಡುಗಲ್ಲಿನ ನಾಯಕನು ಕ್ರಿ.ಶ.೧೫೬೪ರಲ್ಲಿ ಕಾಲುವೆ ಕೆಳಗಿನ ಭೂಮಿಯನ್ನು ದೇವರ ಸೇವಾರ್ಥವಾಗಿ ಆ ಗ್ರಾಮದ ಸೆಟ್ಟಿಯರು ಮತ್ತು ಗೌಡರುಗಳಿಗೆ ದಾನ ನೀಡಿದನು.

೧೭೦೮ರಲ್ಲಿ ಬಿಚ್ಚುಗತ್ತಿ ಭರಮಣ್ಣನಾಯಕ ಹೊನ್ನಾಳಿ ಸಿಂಗಣ್ಣ ಜೋಯಿಸರ ಪುತ್ರರಾದ ಕಾಶೀವಾಸಿ ನಾರಾಯಣಭಟ್ಟ, ಶಂಕರಭಟ್ಟ, ಶಿವಭಟ್ಟರಿಗೆ ಕೊಡಗನೂರು, ಸೀಮೆಯ ಕೋಲುಕುಂಟೆ ಗ್ರಾಮವನ್ನು ನೀಡಿದ್ದನು(ಎ.ಕ.೧೧, ದಾ:೧೩೧). ೧೭೨೮ರಲ್ಲಿ ಹಿರೇಮದಕರಿ ನಾಯಕನು ವಶಿಷ್ಠಗೋತ್ರದ ಅಶ್ವಲಾಯನ ಸೂತ್ರದ ಬಲದೇವಗಳ ಶಾಮಚಾರ್ಯರಿಗೆ ಕೊಡಗನೂರು ಸೀಮೆಯ ಮಲ್ಲೇನಹಳ್ಳಿಯನ್ನು ಮದಕರಿಪುರವೆಂದು ನಾಮ ನಿರ್ದೇಶನ ಮಾಡಿದ್ದಾಗ ಅಗ್ರಹಾರ ಮಾಡಿಕೊಟ್ಟನು(ಎ.ಕ.ಸಂ–೧೧,ದಾ:೧೫೭).

"ರುದ್ರಯ್ಯನ ಮಗ ಚನ್ನಯ್ಯ ಎಂಬುವವನು ಹನುಮಂತದೇವರ ಹೆಸರಿನಲ್ಲಿ ಒಂದು ದೇವಾಲಯ ನಿರ್ಮಿಸಿ ಅದಕ್ಕೆ ರುದ್ರಪ್ಪ ಭೂಮಿಯನ್ನು ದಾನ ನೀಡುತ್ತಾನೆ. ಓಬಣ್ಣ ನಾಯಕನ ಮಗ ಪುಟ್ಟಣ್ಣನಿಗೆ ನೀಡಿದ ಕಾಡಾರಂಭ ಕೃಷಿ, ಮೊದಲಾದವುಗಳನ್ನು ಬಾಗೂರುಭಟ್ಟ ಎಂಬುವನಿಗೆ ನೀಡಿದನು(ದೇಶಪಾಂಡೆ, ೧೯೭೯:೯೮).

ಚಿತ್ರದುರ್ಗದ ತಿಮ್ಮಣನಾಯಕನ ಆಳ್ವಿಕೆಯಲ್ಲಿ ವಿಜಯನಗರದ ಆನೆಗುಂದಿ ಸಂಸ್ಥಾನದಿಂದ ದಾಳಿಯಾದಾಗ ವಿರೂಪಾಕ್ಷ ಜೋಯಿಸನ ಮಗ ಪರಶುರಾಮಪ್ಪನು ಹರಿಯದ ಹಚ್ಚಡ ಮುರಿಯದ ಒಡವೆ ಕೊಡಿಸಬೇಕೆಂದು ಕೇಳಿಕೊಂಡ ಪ್ರಕಾರ ಆ ಪಾಳೆಯಗಾರನು ಆತನ ಮಕ್ಕಳಿಗೆ ಶಾನುಭೋಗತನವನ್ನು ನೇಮಕ ಮಾಡಿ ಅವನಿಗೆ ರೈತರಿಂದ ಆಯ ಮೊದಲಾದದ್ದು ಸಲ್ಲಿಸಬೇಕೆಂದು ನಿಗದಿ ಮಾಡಿದ(ಪುಟ್ಟಣ್ಣ, ೧೯೫೭:೩). ಈ ಮೇಲಿನ ಅಂಶಗಳಿಂದ ತಿಳಿದುಬರುವುದೇನೆಂದರೆ ಜೋಯಿಸರು ಆಯಗಾರರಲ್ಲಿ ಪ್ರಮುಖವಾಗಿದ್ದಾರೆ. ಅವರಿಗೆ ತೆರಿಗೆರಹಿತ ಭೂಮಿ ಮತ್ತು ಊರಿನ ಆಡಳಿತವನ್ನು ಅಥವಾ ಕಂದಾಯವನ್ನು ವಸೂಲಿ ಮಾಡುವ ಜವಾಬ್ದಾರಿ ಇವರಿಗೆ ನೀಡಿರುವುದು ಕಂಡುಬರುತ್ತದೆ. ಹೀಗೆ ಬ್ರಹ್ಮದೇಯ ಮತ್ತು ದೇವದಾಯಗಳು ಮಠಪುರಗಳು ಮಧ್ಯಕಾಲೀನ ಸಂದರ್ಭದಲ್ಲಿ ಪ್ರಮುಖ ಕಾರ್ಯ ನಿರ್ವಹಿಸುತ್ತಿದ್ದವು.

೧೭೧೧ರಲ್ಲಿ ಶ್ರೀರಂಗದೇವ ಮಹಾರಾಯರ ಆಳ್ವಿಕೆ ನಡೆಯುತ್ತಿದ್ದಾಗ ಅರಮನೆ ಪುರೋಹಿತರಾದ ಶ್ರೀ ನಾಗದೇವಭಟ್ಟರಿಗೆ ಅಲಗಿಲವಾಡದಲ್ಲಿ ವಕ್ಕಳ ಗದ್ದೆಯನ್ನು ದಾನ ನೀಡಿದ ಶಾಸನವಿದೆ(ಮಲ್ಲಿಕಾರ್ಜುನಪ್ಪ, ೨೦೧೬:೧೧೬). ಈ ಶಾಸನದ ಮಾಹಿತಿಯ ಪ್ರಕಾರ ಹೊಸ ಅಗ್ರಹಾರ ನಿರ್ಮಿಸದೇ ಅದರ ಅಭಿವೃದ್ಧಿಗೆ ಗದ್ದೆಯನ್ನು ದಾನ ನೀಡಿದ್ದರು. ೧೭೧೨ ಬಾಗಳಿ ಬಸಪ್ಪನಾಯಕ ಸೋಮಶೇಖರ ನಾಯಕನು ಅಶ್ವಲಾಯನ ಸೂತ್ರದ ಭಾರದ್ವಾಜ ಗೋತ್ರದ ವಿಠಲಯ್ಯನಿಗೆ ಬರೆಸಿಕೊಟ್ಟ ಭೂದಾನವೇ ಮೈದೂರು ಅಗ್ರಹಾರ. ಇದರ ಎರೆಹೊಲ, ಬೀಜವರಿ ಹತ್ತು ಗಿದ್ದನಕ್ಕೆ ಪಡಲಿ, ನಲವತ್ತು ಪಡಿಹೊಲ ಸರ್ವಮಾನ್ಯವಾಗಿ ನೀಡಿದರು(ಸಂತೋಷ,

೨೦೦೯:೧೯೫). ಹರಪನಹಳ್ಳಿ ಪಾಳೆಯಗಾರರು ಯಾವುದೇ ಹೊಸ ಅಗ್ರಹಾರಗಳನ್ನು ಸ್ಥಾಪಿಸದೆ, ಇರುವ ಅಗ್ರಹಾರಗಳನ್ನೇ ಅಭಿವೃದ್ಧಿಗೊಳಿಸಲು ಭೂಮಿಗಳನ್ನು ದಾನ ನೀಡಿದರು. ವಿಜಯನಗರೋತ್ತರ ಕಾಲಘಟ್ಟದಲ್ಲಿ ಪಾಳೆಯಗಾರ ಮನೆತನಗಳು ಪ್ರಭುತ್ವಗಳನ್ನು ಸ್ಥಾಪಿಸಿದ ನಂತರ ಬ್ರಾಹ್ಮಣರ ಅಸ್ತಿತ್ವ ಕ್ಷೀಣಿಸಲಾರಂಭಿಸಿತ್ತೆಂದು ಹೇಳಬಹುದು. ದಾನವು ಧಾರ್ಮಿಕ ಹಿನ್ನೆಲೆಯ ಪ್ರಭಾವದಿಂದ ಪ್ರಾಮುಖ್ಯತೆ ಪಡೆಯಿತು. ಮತ್ತಿ ತಿಮ್ಮಣ್ಣನಾಯಕ ಚಿತ್ರದುರ್ಗದಲ್ಲಿ ಹನುಮಂತದೇವರ ಗುಡಿ, ಏಕನಾಥಮ್ಮನ ಗುಡಿಯನ್ನು ಕಟ್ಟಿಸಿದನು(ಪುಟ್ಟಣ್ಣ, ೧೯೯೭:೧೭). ಹೀಗೆ ದೇವಾಲಯಗಳು, ಅಗ್ರಹಾರಗಳು ಪ್ರಾಚೀನ ಕಾಲದಿಂದ ಧಾರ್ಮಿಕ ಕೇಂದ್ರಗಳಾಗಿ, ಶಿಕ್ಷಣ ಕೇಂದ್ರಗಳಾಗಿ, ವ್ಯಾಪಾರ ಕೇಂದ್ರಗಳಾಗಿ ತಮ್ಮ ಅಸ್ತಿತ್ವವನ್ನು ಕಂಡುಕೊಂಡು ಪ್ರಭುತ್ವದ ಆರ್ಥಿಕತೆಯಲ್ಲಿ ಮುಖ್ಯವಾದ ಪಾತ್ರವನ್ನು ನಿರ್ವಹಿಸುತ್ತಿದ್ದವು.

ಹಂಡೆ ಹಿರೇರಾಮಪ್ಪನಾಯಕ ಹಿರಿಯರಿಗೆ ಸುಕೃತವಾಗಲೆಂದು ಕೊಟ್ಟೂರು ಸ್ವಾಮಿಗೆ ತೊಲಮಾಮಿಡಿ, ಸಂಗನಕಲ್ಲು ಮತ್ತು ಚಾಗನೂರು ಗ್ರಾಮಗಳನ್ನು ದಾನ ನೀಡಿದನು. ಈ ಊರುಗಳಲ್ಲಿನ ಭೂಮಿಗಳ ಉತ್ಪತ್ತಿಯನ್ನು ನಿಗಧಿ ಮಾಡಿ, ಆ ಉತ್ಪತ್ತಿಯನ್ನು ಕೊಟ್ಟೂರು ಮಠದಲ್ಲಿ ನಡೆಯುವ ದಾಸೋಹಕ್ಕೆ ನೀಡಬೇಕೆಂದು ಆದೇಶಿಸಿದ್ದನು(ಕ.ವಿ.ವಿ.ಶಾ.ಸಂ.ಮಾ.೧.ಹೊಸ–೬).

ಕಾಮಗೇತಿ ಕಸ್ತೂರಿ ರಂಗಪ್ಪನಾಯಕ, ದಳವಾಯಿ ಭರಮಪ್ಪನು ಜಗಳೂರಿನ ಲಿಂಗಾಯಿತ ಪಂಥದ ಮಠಕ್ಕೆ ಮಾನ್ಯ ನೀಡಿದನು(ಶ್ಯಾಮಲ, ೨೦೧೭:೪೪೪). ಕರಿಯಪ್ಪನಾಯಕನು ಕಾಮಗೇತಿ ಕಸ್ತೂರಿ ರಂಗಪ್ಪನಾಯಕನಿಗೆ ಪುಣ್ಯವಾಗಲೆಂದು ಗಾದರಿಪಾಲನಾಯಕ ಸ್ವಾಮಿಗೆ ಗಂಜಿಗಟ್ಟೆ ಗ್ರಾಮವನ್ನು ನೀಡಿದ್ದರು(ಎ.ಕ.೧೧, ಹಿ:೭೫).

ತರೀಕೆರೆಯ ಹನುಮಪ್ಪನಾಯಕನು ಬ್ರಾಹ್ಮಣರಿಗೆ ೧೫೮೪ರಲ್ಲಿ ಮಾಗಳಿ ಗ್ರಾಮವನ್ನು ಅಗ್ರಹಾರವನ್ನಾಗಿ ಮಾಡಿದ ಹನುಮಪ್ಪನಾಯಕನು ಕಟ್ಟೆ ಗ್ರಾಮವನ್ನು ಅಗ್ರಹಾರವಾಗಿ ಜೀರ್ಣೋದ್ಧಾರ ಮಾಡಿ ಭೂಮಿಯನ್ನು ದಾನ ನೀಡಿದನು(ಪುಟ್ಟಸ್ವಾಮಿ, ೨೦೧೨:೧೭೪,೧೭೫).

ಮಠಗಳು ಮಧ್ಯಕಾಲೀನ ಆರ್ಥಿಕ ಚಟುವಟಿಕೆಯಲ್ಲಿ ಪ್ರಮುಖ ಪಾತ್ರ ವಹಿಸಿದ್ದು, ಚಿತ್ರದುರ್ಗದ ಸಂಸ್ಥಾನದಲ್ಲಿ ಮೈಸೂರು, ಕೆಳದಿ, ಯಲಹಂಕ ಇನ್ನು ಕೆಲವು ಸಂಸ್ಥಾನಗಳು ಮಠಗಳ ಜೊತೆ ತಮ್ಮ ಸಂಬಂಧಗಳನ್ನು ಮುಂದುವರಿಸಿಕೊಂಡು ಪ್ರಭುತ್ವದ ಜೊತೆ ಗುರುತಿಸಿಕೊಂಡಿವೆ. ಇಂತಹ ಮಠಗಳಿಗೆ ಅಲ್ಲಿನ ಪ್ರಭುತ್ವವು ಪ್ರೋತ್ಸಾಹವನ್ನು ನೀಡಿತ್ತು ಹಾಗೂ ಭೂಮಿಯನ್ನು ದಾನ ನೀಡುತ್ತಿದ್ದರು. ವಿಜಯನಗರೋತ್ತರ ಕಾಲದಲ್ಲಿ ಗುರುತಿಸಿಕೊಂಡ ಹೆಚ್ಚು ಮಠಗಳು ವೀರಶೈವ ಮಠಗಳಾಗಿದ್ದು, ಇಲ್ಲಿ ವೀರಶೈವಧರ್ಮವು ಮುಖ್ಯವಾಗಿ ಗುರುತಿಸಿಕೊಳ್ಳುತ್ತದೆ. ಇಂತಹ ಮಠಗಳು ಆಧುನಿಕ ಸಂದರ್ಭದಲ್ಲಿ ಬೃಹತ್ ಬಂಡವಾಳವನ್ನು ಹೊಂದಿ ಶಿಕ್ಷಣಕೇಂದ್ರಗಳಾಗಿ ಕಾರ್ಯವನ್ನು ನಿರ್ವಹಿಸುತ್ತವೆ.

ಕೆಳದಿ ಮತ್ತು ಮೈಸೂರು ಒಡೆಯರ ಕಾಲದಲ್ಲಿಯೂ ಹೆಚ್ಚಿನ ಅಗ್ರಹಾರಗಳು ಮತ್ತು ಬ್ರಹ್ಮದೇಯಗಳ ಉಗಮ ಬೆಳವಣಿಗೆಯನ್ನು ಗುರುತಿಸಬಹುದು. ಕೆಳದಿಯ ನಾಯಕರು ವೀರಶೈವರಾಗಿದ್ದು, ಮಠಗಳ

ಅಭಿವೃದ್ಧಿಗೆ ಹೆಚ್ಚಿನ ಭೂದತ್ತಿಗಳನ್ನು ನೀಡಿರುವುದು ಕಂಡುಬರುತ್ತದೆ. ಕೆಳದಿ ಮತ್ತು ಸ್ವಾದಿ ಅರಸರ ಕಾಲದಲ್ಲಿ ೧೦ ಮಠಗಳಿದ್ದು, ವಿರಕ್ತಮಠಗಳು ಪ್ರಮುಖವಾಗಿವೆ(ಸಾವಂತ, ೨೩೬)

"ಕೆಳದಿಯ ನಾಯಕರ ಕಾಲದಲ್ಲಿ ನಿರ್ಮಿಸಿದ ಅಗ್ರಹಾರಗಳು ನಿಜಕ್ಕೂ ಸುಂದರ ಸುಲಭ ಮತ್ತು ಸುಭದ್ರ ಉತ್ತಮ ಶಿಕ್ಷಾಪದ್ದತಿ ಇತ್ತೆಂದು ನನಗೆನ್ನಿಸುತ್ತದೆ, ಇದು ಸತ್ಯ"(ಜೋಯಿಸ, ೧೯೭೫:೪೬). ಕೆಳದಿ ಪರಿಸರದ ಅಗ್ರಹಾರಗಳ ಮೂಲಕ ಶಿಕ್ಷಣ ಕಲಿಸುವ ಪದ್ಧತಿ ಇತ್ತೆಂದು ತಿಳಿಸುತ್ತಾರೆ. ಆದರೆ ವಾಸ್ತವದಲ್ಲಿ ಅಗ್ರಹಾರಗಳು ಉನ್ನತವರ್ಗಕ್ಕೆ ಮಾತ್ರ ಶಿಕ್ಷಣ ನೀಡುತ್ತಿದ್ದವು. ಕೆಳವರ್ಗದ ಯಾರಿಗೂ ಶಿಕ್ಷಣ ದೊರಕಿದಂತೆ ಕಂಡುಬಂದಿಲ್ಲ. ಸದಾಶಿವನಾಯಕನು ಆರಗದಲ್ಲಿರುವ ಕುಶಾವತಿ ನದಿ ತೀರದಲ್ಲಿ ಸದಾಶಿವಪುರವೆಂಬ ಅಗ್ರಹಾರವನ್ನು ನಿರ್ಮಿಸಿ ಅಲ್ಲಿ ನಿವೇಶನ ಉದ್ಯೋಗವನ್ನು ಒದಗಿಸಿ ಭೂಮಿಯನ್ನು ದಾನ ನೀಡಿದನು(ಶಾಮಶಾಸ್ತ್ರಿ, ೧೯೭೩:೭೫,೭೬).

ಸೋಮಶೇಖರನಾಯಕನು ಶಂಕರನಾರಾಯಣಪುರ ಎಂಬ ಅಗ್ರಹಾರ ಸ್ಥಾಪಿಸಿದ್ದು, ೧೬ನೇ ಶತಮಾನದಲ್ಲಿ ರಾಮನಾಯಕನಿಂದ ಕೆಲವು ಅಗ್ರಹಾರಗಳು ಪುನರುಜ್ಜೀವನಗೊಂಡವು. ಕುಂದಾಪುರ ತಾಲೂಕಿನ ಕಿರುಮಂಜೇಶ್ವರದ ಹದಿನಾರು ಅಗ್ರಹಾರಗಳು ಮರಾಠರ ದಾಳಿಯಿಂದ ೧೭೬೦ರಲ್ಲಿ ಹಾಳಾದವು. ಎಂದು ಬುಕಾನನ್ ತನ್ನ ವರದಿಯಲ್ಲಿ ವಿವರಿಸಿದ್ದಾನೆ(ಬುಕಾನನ್.೧, ೮೭೬:೧೪೨). ಈ ಮೂಲಕ ಕೆಳದಿ ನಾಯಕರು ಹೆಚ್ಚಿನ ಅಗ್ರಹಾರಗಳನ್ನು ಸ್ಥಾಪಿಸುವ ಮೂಲಕ ಶಿಕ್ಷಣಪದ್ಧತಿಯ ಧಾರ್ಮಿಕ ಬೋಧನೆಗೆ ಹೆಚ್ಚಿನ ಪ್ರೋತ್ಸಾಹ ನೀಡಿದಂತೆ ತಿಳಿಯುತ್ತದೆ. ಈ ಕವಲೇದುರ್ಗದ ಮಹತ್ತಿನ ಮಠವನ್ನು ವೆಂಕಟಪ್ಪನಾಯಕನು ಗೆದ್ದುಕೊಂಡಿದ್ದು ಇದು ಒಂದು ಪ್ರಮುಖ ಮಠವಾಗಿ ಕಾರ್ಯ ನಿರ್ವಹಿಸುತ್ತಿತ್ತು. ಈ ಮಠ ಭುವನಗಿರಿದುರ್ಗದಲ್ಲಿದ್ದು ಸುಂಕದಕಟ್ಟೆ ಉಗ್ರಾಣಗಳನ್ನು ಹೊಂದಿದೆ. ಇಲ್ಲಿ ಮಹತ್ತಿನ ಮಠ ಕೃಷಿ ಶಿಸ್ತಿನ ಕರಗಳ ಆಕರಣೆ ಮತ್ತು ವಾಣಿಜ್ಯ ಸುಂಕದ ವಸೂಲಿಯ ಲೆಕ್ಕಪತ್ರಗಳ ಹಾಗೂ ಪುಸ್ತಕ-ಕಡತಗಳ ಚಾವಡಿಯಾಗಿತ್ತು(ಕಲಬುರ್ಗಿ, ರಾಮಭಟ್ಟ, ೧೯೯೪:೨೮೩). ಈ ಮೂಲಕ ವಿಜಯನಗರೋತ್ತರ ಕಾಲದಲ್ಲಿ ಹೆಚ್ಚಿನ ಮಠಗಳು ಸ್ಥಾಪನೆಯಾಗಿದ್ದು, ಹೆಚ್ಚು ಹೆಚ್ಚು ದಾನ ಪಡೆದು ತಮ್ಮದೇ ಭೂಹಿಡುವಳಿಗಳ ಮೂಲಕ ಗೇಣಿಪದ್ಧತಿಯ ಮೂಲಕ ಅದನ್ನು ಕೂಲಿ ಕಾರ್ಮಿಕರಿಗೆ ನೀಡುತ್ತಿದ್ದರು. ಈ ಮೂಲಕ ಮಠಗಳು ಆರ್ಥಿಕ ಧಾರ್ಮಿಕ ಕೇಂದ್ರಗಳಾಗಿ ಗುರುತಿಸಿಕೊಂಡಿವೆ.

೧೫೭೭ರಲ್ಲಿ ಯಲಹಂಕ ನಾಡಪ್ರಭು ಕೆಂಪೇಗೌಡನು ಡಾಣಾಯಕಪುರದ ಕುಮಾರದೇವರ ಕುಮಾರ ಹಿರಿಯ್ಯನಿಗೆ ಚನ್ನಪುರ ಗ್ರಾಮದ ಕೆರೆಕಟ್ಟೆ ಕಾಡಾರಂಭ, ನೀರಾರಂಭ ಸಕಲ ಒತ್ತದಾಯ ಸಕಾಲ ಸುವರ್ಣಾದಾಯ ದಾನ ನೀಡಿದನು(ಜಮುನ, ೨೦೦೬:೪೧). ಇಮ್ಮಡಿ ಕೆಂಪೇಗೌಡರ ಪುಣ್ಯಸ್ತ್ರೀಯಾದ ವೆಂಕಟಕೃಷ್ಣಾಜಮ್ಮ ಎಂಬುವವರು ಕುಣಿಗಲ್‌ನ ಪಶ್ಚಿಮ ಭಾಗದ ವೆಂಕಟಕೃಷ್ಣಸಾಗರ ಗ್ರಾಮವನ್ನು ಅಗ್ರಹಾರವನ್ನಾಗಿಸಿ ೩೦ ಖಂಡುಗ ಬೀಜವರಿ ಹೊಲ, ದೊಡ್ಡಕೆರೆಯ ಕೆಳಗೆ ೨೦ ಖಂಡುಗ ಬೀಜವರಿ ಗದ್ದೆಯನ್ನು, ವೃತ್ತಿಯನ್ನಾಗಿ ಮಾಡಿ ತನ್ನ ಮಾವ ಅತ್ತೆಗೆ ಪುಣ್ಯವಾಗಲಿ ಎಂದು ದಾನ ನೀಡಿದ ವಿವರವಿದೆ.(ಜಮುವ,೨೦೦೬:೭೦). ಕಂಡಾಪುರ, ಹಲಸೂರಿನ ಒಂದು

ಶಾಸನದಲ್ಲಿ ೪೮ ವೃತ್ತಿಗಳನ್ನು ದಾನ ನೀಡಿದ್ದು ಅದರಲ್ಲಿ ಶೂದ್ರವರ್ಗದ ವೀರೇಶ ಎಂಬುವವನಿಗೆ ನೀಡಿದ ಮಾಹಿತಿ ಕೆಂಪಾಪುರ ಅಗ್ರಹಾರ ಶಾಸನದಿಂದ ತಿಳಿಯುತ್ತದೆ. ಕರ್ನಾಟಕದ ಚರಿತ್ರೆಯಲ್ಲಿ ಪ್ರಭುತ್ವಗಳು ಹೆಚ್ಚಾಗಿ ಅಗ್ರಹಾರ, ಮಠಗಳು, ಬ್ರಾಹ್ಮಣರಿಗೆ ಹೆಚ್ಚಿನ ಭೂದಾನಗಳನ್ನು ನೀಡಿದ್ದರು. ಇದರಲ್ಲಿ ಶೂದ್ರ ಅಥವಾ ಸಾಮಾನ್ಯ ಜನರಿಗೆ ಈ ತರಹದ ಕೊಡುಗೆಗಳು ಅತಿ ಕಡಿಮೆ.

ಮುಮ್ಮಡಿ ಕೆಂಪೇಗೌಡನು ೧೭೧೩ರಲ್ಲಿ ಯಲಜವಾಡ ಗ್ರಾಮದ ದಕ್ಷಿಣದಲ್ಲಿ ೧೦ ಖಂಡುಗ ಬೀಜವರಿ ಹೊಲವನ್ನು ಬೆಟ್ಟಹಳ್ಳಿ ಮಠಕ್ಕೆ ದಾನವಾಗಿ ಕೊಟ್ಟನು. ಮಠಮಾನ್ಯಕ್ಕೆ ಯಲಹಂಕದ ನಾಡಪ್ರಭುಗಳು ದಾನ ನೀಡುತ್ತಿದ್ದರು. ಚನ್ನಮ್ಮಾಜಿ ಮಠ ಮಾಗಡಿ ೧೭೧೪ರಲ್ಲಿ ೧ ಖಂಡುಗ ಬೀಜಾವರಿ ಹೊಲ, ೫ ಕೊಳಗ ಬೀಜಾವರಿ ಗದ್ದೆ ನೀಡಿದ್ದಾರೆ. ಮಠಗಳಿಗೆ ದಾನ ನೀಡುವ ಪರಿಕಲ್ಪನೆಯು ಪ್ರಾಚೀನ ಕಾಲದಿಂದಲೂ ಇದ್ದು ಆಧುನಿಕ ಸಂದರ್ಭದಲ್ಲಿ ಈ ಪರಂಪರೆ ಮುಂದುವರಿದಿದೆ.

ಭೂಹಿಡುವಳಿಯಲ್ಲಿ ಅಗ್ರಹಾರಕ್ಕೆ ನೀಡಿದ ಭೂಮಿಯನ್ನು ಹಿಂಪಡೆದು ಬೇರೆಯವರಿಗೆ ನೀಡಿದ ಉಲ್ಲೇಖವನ್ನು ಕುರಿತಂತೆ ೧೭೬೦ರ ಒಂದು ಶಾಸನ ತಿಳಿಸುತ್ತದೆ. ಇದರಲ್ಲಿ ಕೆಂಪೇಗೌಡನ ಉಲ್ಲೇಖ ಮೈಸೂರಿನ ಕೃಷ್ಣರಾಜ ಒಡೆಯರ ಆಳ್ವಿಕೆಯ ಸಂದರ್ಭದಲ್ಲಿ ಮಾಗಡಿಯ ರಘಪತ್ನಯ್ಯನವರ ಮೊಮ್ಮಗ ಪದ್ಮನಾಭಯ್ಯನವರ ಮಗ ಕೃಷ್ಣಯ್ಯ ಎಂಬುವವರು ಕೃಷ್ಣರಾಜನಗರದ(ಮಾಗಡಿ) ಯಲಗಲವಾಡಿ ಹೋಬಳಿಯ ಹೊಸಹಳ್ಳಿ ಗ್ರಾಮಕ್ಕೆ, ಪ್ರತಿನಾಮದೇಯವಾದ ಲಿಂಗಸಾಗರ ಅಗ್ರಹಾರದಲ್ಲಿ ತನ್ನ ಪೂರ್ವಿಕರಿಗೆ ಯಲಹಂಕ ನಾಡಪ್ರಭು ಹಿರಿಯ ಕೆಂಪೇಗೌಡರಿಂದ ದಾನವಾಗಿ ಪ್ರಾಪ್ತಾವಾಗಿದ್ದ ಹೊಲ ಗದ್ದೆಗಳನ್ನು ಮತ್ತು ೧೦೫ ವರಹಗಳನ್ನು ಹಿಂಪಡೆದು ಪಾನ್ಯದ ಸೋಮಲಿಂಗಭಟ್ಟ ಎಂಬುವರಿಗೆ ಕ್ರಯದಾನವಾಗಿ ಕೊಟ್ಟ ವಿವರವವಿದೆ(ಜಮುನ ,೨೦೦೬:೯೧).

ಮೈಸೂರಿನಲ್ಲಿ ಚಾಮರಾಜೇಂದ್ರ ಒಡೆಯರ ಕಾಲದಲ್ಲಿ ಮೊದಲ ಬಾರಿಗೆ ಬ್ರಹ್ಮದೇಯ ಮತ್ತು ದೇವದೇಯಗಳನ್ನು ಕುರಿತಂತೆ ಮೊದಲ ಉಲ್ಲೇಖ ದೊರೆಯುತ್ತದೆ. ಚಾಮರಾಜ ಒಡೆಯರ ಕಾಲದಲ್ಲಿ ಇವರು ಮೈಸೂರಿನ ಆರ್ಥಿಕ ನೀತಿ ರೂಪಿಸಿದರು. ನೀರಾವರಿ ಮೂಲಕ ಕೃಷಿಗೆ ಉತ್ತೇಜನ ನೀಡಿದುದರಿಂದ ಹಲವು ನಾಲೆಗಳ ಜಾಲವನ್ನು ಮಾತ್ರವಲ್ಲದೆ ಕಾವೇರಿಗೆ ಅಡಲಾಗಿ ಒಂದು ಸೇತುವೆಯನ್ನು ನಿರ್ಮಿಸಿದರು. ಅವು ಧಾರ್ಮಿಕ ಮತ್ತು ಆಧ್ಯಾತ್ಮಿಕ ಕೇಂದ್ರವಾಗಿದ್ದುದು ಮಾತ್ರವಲ್ಲದೆ ಕೃಷಿ ಬೆಳವಣಿಗೆಯ ಕೇಂದ್ರವೂ ಆಗಿದ್ದವು(ಪ್ರಸನ್ನ ಕುಮಾರ್, ೨೦೦೧:೨೮). ಬ್ರಹ್ಮದೇಯಗಳ ನಿರ್ಮಾಣ ಮತ್ತು ಹರಡುವಿಕೆಯು ಮೈಸೂರು ಸಂಸ್ಥಾನದಲ್ಲಿ ದಳವಾಯಿಗಳ ಕಾಲದಲ್ಲಿ ಹೆಚ್ಚಾಗಿರುವುದನ್ನು ಗುರುತಿಸಬಹುದು. ಯಾವ ಪ್ರದೇಶಗಳು ಫಲವತ್ತಾಗಿದ್ದವೋ ಆ ಭಾಗಗಳಲ್ಲಿ ಹೆಚ್ಚಿನ ಅಗ್ರಹಾರಗಳು ಸ್ಥಾಪನೆಯಾಗಿರುತ್ತಿದ್ದವು. ನೀರಾವರಿಗೆ ಯೋಗ್ಯವಾದ ಜಮೀನಿನ ಭಾಗಗಳು ಎಲ್ಲಿರುತ್ತಿದ್ದವೋ ಆ ಭಾಗದಲ್ಲಿ ಬ್ರಹ್ಮದೇಯಗಳನ್ನು ದಾನವಾಗಿ ಆರಿಸುತ್ತಿದ್ದರು. ಕಾರಣ ಆ ಪ್ರದೇಶಗಳು ಕಂದಾಯಮುಕ್ತ ಗ್ರಾಮಗಳಾಗಿ ಹೆಚ್ಚಿನ ಫಲವತ್ತತೆ ನೀಡುತ್ತಿದ್ದವು. ಕಂಠೀರವ ನರಸರಾಜ ಒಡೆಯರು ಕಂಠೀರವ ನರಸರಾಜಪುರ ಎಂಬ ಹೊಸ ಹೆಸರಿನ ಮಾಚನಹಳ್ಳಿ

ಮತ್ತು ಕಂಠೀರವ ನರಸಪುರ ಎಂಬ ಮುತ್ತಿಗೋಡು ಹೊಸ ಹೆಸರುಗಳನ್ನು ಪಡೆದು ಬ್ರಹ್ಮದೇಯವಾಗಿ ಅಭಿವೃದ್ಧಿಯೊಂದಿದವು. ಹೀಗೆ ಅಗ್ರಹಾರಗಳ ಸ್ಥಾಪನೆಯಿಂದ ಹೆಚ್ಚಿನ ಕೃಷಿ ಅಭಿವೃದ್ಧಿಯಾಗಿರುವುದನ್ನು ಗಮನಿಸಬಹುದು.

ಚಿಕ್ಕದೇವರಾಜ ಒಡೆಯರು ೫೦ ವೃತ್ತಿಗಳಿದ್ದ ಮಲಗೂರು ಅಗ್ರಹಾರವನ್ನು ೬೪ ವೃತ್ತಿಗಳ ಇಕ್ಕೇರಿ ಎಂದು ಹೆಸರಿಟ್ಟು ನೂಲಪುರ ಅಗ್ರಹಾರವನ್ನು, ಶ್ರೀರಂಗಪಟ್ಟಣದ ಈಶಾನ್ಯಕ್ಕೆ ದೇವರಾಜಪುರವೆಂದು ಕರೆದನು. ನಾಯಕರ ಕಾಲದಲ್ಲಿ ಅನೇಕ ಹೊಸ ಗ್ರಾಮಗಳ ಹುಟ್ಟು ಹಾಗೂ ಹೆಸರುಗಳು ಮರುನಾಮಕರಣವನ್ನು ಮಾಡಿರುವುದು ಕಂಡುಬರುತ್ತದೆ. ಚಿಕ್ಕದೇವರಾಜ ಒಡೆಯರು ೧೬೭೩ರಲ್ಲಿ ಮಧುರೆಯ ನಾಯಕರ ವಿರುದ್ಧವಾಗಿ ತಮಿಳುನಾಡಿನಲ್ಲಿ ತಮ್ಮ ಸೇವಾ ಕಾರ್ಯಾಚರಣೆಗಳನ್ನು ಪ್ರಾರಂಭಿಸಿದರು. ಆ ವರ್ಷದಲ್ಲಿ ೧೬೭೩-೭೪ರಲ್ಲಿ ಗುಂಡುಳ ತೆರಕಣಾಂಬಿಯಲ್ಲಿ ವಾಸುದೇವಾಲಯ ನಿರ್ಮಿಸಿ ಅಲ್ಲಿ ಒಂದು ಅಗ್ರಹಾರವನ್ನು ನಿರ್ಮಿಸಿದರು. ಅದಕ್ಕೆ ಪೂರ್ವಶತಕ ಎಂದು ಹೆಸರಾಯಿತು. ಅದೇ ಸ್ಥಳದಲ್ಲಿ ೧೬೭೪ ಡಿಸೆಂಬರ್ ೫ರಂದು ಇನ್ನೊಂದು ಅಗ್ರಹಾರ ನಿರ್ಮಿಸಿ ದ್ವಿಶತಕ ಎಂದು ಕರೆದರು. ಈ ಮೂಲಕ ಚಿಕ್ಕದೇವರಾಜ ಒಡೆಯರು ಕೂಡ ಬ್ರಾಹ್ಮಣರಿಗೆ ದಾನ ನೀಡಿದ ವಿವರವನ್ನು ಗಮನಿಸಬಹುದು(ಪ್ರಸನ್ನಕುಮಾರ, ೨೦೦೧:೧೯) ಪಕ್ಕದ ಸಂಸ್ಥಾನಗಳ ಜೊತೆ ದಾಳಿ ಮಾಡಿದಾಗ ಜಯಿಸಿದ ಆ ಪ್ರದೇಶಗಳನ್ನು ಅಥವಾ ಗಡಿಭಾಗಗಳನ್ನು ಅಗ್ರಹಾರಗಳಾಗಿ ಮಾಡಿ ದಾನ ನೀಡಿದಂತೆ ಕಂಡುಬರುತ್ತದೆ. ಇದರಿಂದ ಸ್ಪಷ್ಟವಾಗಿ ಗ್ರಹಿಸುವ ಅಂಶವೆಂದರೆ ಬ್ರಾಹ್ಮಣರು ಶ್ರೇಷ್ಠರು, ಅವರ ಮೇಲೆ ದಾಳಿಯನ್ನು ಪುನಃ ಮಾಡಿ ಆ ಪ್ರದೇಶವನ್ನು ಜಯಿಸಲಾರರೆಂಬ ಪರಿಕಲ್ಪನೆ ಇದ್ದಿರಬಹುದು. ಪುನಃ ಆ ಪ್ರದೇಶಗಳು ದಾಳಿಗೆ ತುತ್ತಾಗಬಾರದೆಂಬ ಉದ್ದೇಶದಿಂದ ನಿರ್ಮಿಸಿದ್ದಿರಬಹುದು.

ನಂಜರಾಜಯ್ಯ ಮತ್ತು ದೇವರಾಜಯ್ಯ ದಳವಾಯಿಗಳು ಮೈಸೂರಿನ ದಳವಾಯಿಗಳಾದಾಗ ಹೆಚ್ಚಿನ ಬ್ರಹ್ಮದೇಯ ಮತ್ತು ದೇವದೇಯಗಳು ಉದಯಿಸಿದವು. ಮೈಸೂರಿನ ಒಡೆಯರು ಮತ್ತು ನಂಜರಾಜ ದೇವರಾಜರು ದೇವಾಲಯಕ್ಕೆ ಸೇರಿದ ಭೂಮಿಯಲ್ಲಿ ಉತ್ಪಾದನೆ ಮಾಡಲು ನೀರಾವರಿ ಸೌಲಭ್ಯ ಒದಗಿಸಿಕೊಟ್ಟರು. ಇದರಿಂದ ಅವರ ದೇವದೇಯಕ್ಕೆ ಹೆಚ್ಚಿನ ಮಹತ್ವ ನೀಡಿದ್ದರೆಂಬುದು ಸ್ಪಷ್ಟವಾಗುತ್ತದೆ.

ಕ್ರಿ.ಶ.೧೭೫೫ರಲ್ಲಿ ಮುಳುಬಾಗಿಲಿನ ಶ್ರೀಪಾದರಾಯರ ಮಠದ ದೇವರಿಗೆ ದಿಂಡಿಗಲ್‌ನ ಕಂದಾಚಾರದ ವಂತಿಗಾರರು ಪ್ರತಿವರ್ಷ ತಲಾ ಒಂದು ವರಹ ದಾನ ನೀಡುವುದಾಗಿ ತಿಳಿಸಿದ್ದರು. ಇದೇ ಮಠದ ದೀಪಾರಾಧನೆಗೆ ವಿಜಯಮಂಗಳದ ಪಾರುಪತ್ಯಗಾರರು ತಮ್ಮ ಸಂಬಳದಲ್ಲಿ ಒಂದು ವರ್ಷಕ್ಕೆ ೫೦ ವರಹಗಳನ್ನು ನೀಡುವುದಾಗಿ ತಿಳಿಸಿದ್ದರು. ಈ ಮೂಲಕ ದೇವದಾಯಗಳು ಗೇಣಿಯನ್ನು ನೀಡುವ ಆರ್ಥಿಕ ಕೇಂದ್ರಗಳಾಗಿ ಅಭಿವೃದ್ಧಿ ಹೊಂದಿದವು. ಈ ಪರಂಪರೆಯು ಇಂದಿಗೂ ದೇವಾಲಯ ಇಲ್ಲವೇ ಮಠದ ಭೂಮಿಯನ್ನು ಗೇಣಿಯ ಮೂಲಕ ಕೃಷಿ ಮಾಡಿರುವುದನ್ನು ನಾವು ತಿಳಿಯಬಹುದು. ನಂಜರಾಜ ಅಗ್ರಹಾರ, ವೆಂಕಟರಾಮ ಸಮುದ್ರ ಅಗ್ರಹಾರ, ರಾಮಚಂದ್ರಪುರ

ಅಗ್ರಹಾರ, ಲಕ್ಷ್ಮೀನಾರಾಯಣ ಅಗ್ರಹಾರ ಹೀಗೆ ದಳವಾಯಿಗಳ ಕಾಲದಲ್ಲಿ ಹೆಚ್ಚಿನ ಅಗ್ರಹಾರಗಳು ಸ್ಥಾಪನೆಯಾಗಿದ್ದು ಹೆಚ್ಚಿನ ವಿವರಗಳು ಇವುಗಳನ್ನು ಕುರಿತಂತೆ ಮಾಹಿತಿ ದೊರೆಯುತ್ತದೆ.

ಮಧ್ಯಕಾಲೀನ ಭಾರತದ ಚರಿತ್ರೆಯಲ್ಲಿ ಅಂದಿನ ಸಮಾಜ ಮತ್ತು ಆರ್ಥಿಕತೆಯನ್ನು ಕುರಿತಂತೆ ಗ್ರಹಿಸುವಾಗ ಸಮಾಜದ ಸಮಾಜಿಕ ವರ್ಣಗಳುಂಟಾಗಿ ಊಳಿಗಮಾನ್ಯತೆಯ ಅಂಶಗಳನ್ನು ಬ್ರಾಹ್ಮಣರು ಸಮಾಜದ ಉನ್ನತವರ್ಗದವರಾಗಿದ್ದು ಸಮಾಜದಲ್ಲಿ ಉನ್ನತವರ್ಗದವರು ಎಂಬ ಪರಿಕಲ್ಪನೆ ಇತ್ತು. ಭೂಮಿಯ ಒಡೆತನ ಅವರ ಕೈಯಲ್ಲಿರುತ್ತದೆ. ಇವರು ಗೇಣಿದಾರರಾಗಿ ಗುರುತಿಸಿಕೊಂಡು ಭೂಮಾಲೀಕರಂತೆ ಕೂಲಿಕಾರ್ಮಿಕರಿಗೆ ಭೂಮಿಯನ್ನು ಉಳುಮೆಗೆ ನೀಡುತ್ತಿದ್ದರು. ಈ ಮೂಲಕ ದೇವದಾಯ ಮತ್ತು ಬ್ರಹ್ಮದೇಯಗಳು ಕರ್ನಾಟಕದ ಚರಿತ್ರೆಯಲ್ಲಿ ಪ್ರಾಚೀನ ಕಾಲದಿಂದ ಗುರುತಿಸಿಕೊಂಡಿವೆ. ವಿಜಯನಗರದ ಸ್ಥಾಪನೆಯ ವೇಳೆಗೆ ಇವುಗಳ ನಿರ್ಮಾಣದಲ್ಲಿ ಬದಲಾವಣೆಗಳು ಆಗಲಾರಂಭಿಸಿದವು. ವಿಜಯನಗರೋತ್ತರ ಕಾಲದಲ್ಲಿ ಸಾಮಂತ ಪ್ರಭುತ್ವಗಳು ಸಾರ್ವಭೌಮತ್ವ ಪ್ರಕ್ರಿಯೆಗೆ ಒಳಪಟ್ಟಾಗ ಅವರು ಕರ್ನಾಟಕದಲ್ಲಿ ಪ್ರಮುಖ ಭೂಹಿಡುವಳಿದಾರರಾಗಿ ಕಾಣಿಸಿಕೊಂಡರು. ಹಾಗಾಗಿ ದಳವಾಯಿಗಳ ಆಳ್ವಿಕೆಯಲ್ಲಿ ಅಗ್ರಹಾರ ಮತ್ತು ದೇವದಾಯಗಳ ನಿರ್ಮಾಣದಲ್ಲಿ ಹೆಚ್ಚಾಗಿತ್ತು. ಇರುವ ಬ್ರಹ್ಮದೇಯ ಮತ್ತು ದೇವದಾಯಗಳಿಗೆ ದಾನ ನೀಡುವುದನ್ನು ಮುಂದುವರಿಸಿದ್ದು ಸ್ಪಷ್ಟವಾಗಿದೆ. ಇದರಿಂದ ತಿಳಿಯುವ ಅಂಶವೆಂದರೆ ಕಾಲಕ್ರಮೇಣ ಅಗ್ರಹಾರಗಳ ದತ್ತಿಯನ್ನು ಹಿಂಪಡೆದು ಅದನ್ನು ಬೇರೆಯರಿಗೆ ವಿತರಿಸಿದ್ದನ್ನು ಯಲಹಂಕ ನಾಡಪ್ರಭುವಿನ ಶಾಸನದಿಂದ ತಿಳಿಯುತ್ತದೆ.

ವಿಜಯನಗರೋತ್ತರ ಕಾಲದಲ್ಲಿ ಸ್ಥಾಪನೆಯಾದ ಅನೇಕ ಪಾಳೆಯಗಾರರು ಇವರು ಸಾಮ್ರಾಟರಾಗಿರದೆ, ಅವರು ಕೇವಲ ಭೂಹಿಡುವಳಿದಾರರಾಗಿ ಗುರುತಿಸಿಕೊಂಡಿದ್ದಾರೆ. ಹಾಗೆಯೇ ಕರ್ನಾಟಕ ಚರಿತ್ರೆಯಲ್ಲಿ ಬ್ರಹ್ಮದೇಯಗಳು ವಿಜಯನಗರೋತ್ತರ ಕಾಲದಲ್ಲಿ ಕಂಡುಬರುವುದು ಅತಿ ವಿರಳ. ವಿಶೇಷವಾಗಿ ಅಧ್ಯಯನ ಮಾಡಿದಾಗ ಮೈಸೂರು ಸಂಸ್ಥಾನದಲ್ಲಿ ಈ ಪ್ರಕ್ರಿಯೆ ಮುಂದುವರಿದಿರುವುದನ್ನು ಗುರುತಿಸಬಹುದು. ಅದೇ ರೀತಿ ದೇವಾದಾಯಗಳು ವಿಜಯನಗರ ಪೂರ್ವ ಮತ್ತು ವಿಜಯನಗರ ಕಾಲದಲ್ಲಿ ನಿರ್ಮಾಣಗೊಂಡ ದೇವಾಲಯಗಳು ಹಾಗೂ ಅವುಗಳ ಆದಾಯ ಸ್ವರೂಪ ಹೆಚ್ಚು ಹೆಚ್ಚು ಆರ್ಥಿಕ ಸಂಘಟನಾ ವಲಯವಾಗಿತ್ತು. ಈ ಕಾಲಘಟ್ಟದಲ್ಲಿ ಮತ್ತೊಂದು ಭೂಹಿಡುವಳಿಯನ್ನು ಪಡೆಯುವ ಧಾರ್ಮಿಕ ವಲಯವೆಂದರೆ ಮಠಗಳು. ದಾಸೋಹ ಪರಂಪರೆಯಿಂದ ರಚನೆಯಾದ ಮಠಗಳು ಬರುಬರುತ್ತಾ ಅವು ಆರ್ಥಿಕತೆಯನ್ನು ನಿಗ್ರಹಿಸುವ ಪ್ರಮುಖ ಆರ್ಥಿಕ ವಲಯವಾಗಿ ಗುರುತಿಸಿಕೊಂಡವು.

ಹಾಗೆಯೇ ವಿಜಯನಗರೋತ್ತರ ಕಾಲಾವಧಿಯು ಯುರೋಪಿಯನ್ನರು ವಸಾಹತುಕೇಂದ್ರವನ್ನಾಗಿ ಮಾರ್ಪಡಿಸಿಕೊಂಡಾಂಗ ಅಗ್ರಹಾರಗಳ ಸ್ವರೂಪವು ಬದಲಾಗಿ ಸಾಮಾಜಿಕ ಮೂಡಿಬಂದಿರುವುದನ್ನು ಗಮನಿಸಬಹುದಾಗಿದೆ. ಮರಾಠರು ಕರ್ನಾಟಕ ಪ್ರದೇಶವನ್ನು ತಮ್ಮ ಆಳ್ವಿಕೆಯ ಕೇಂದ್ರವನ್ನಾಗಿಸಿದ್ದು, ಒಂದು ಕಡೆ ಬ್ರಾಹ್ಮಣವರ್ಗಕ್ಕೆ ನಷ್ಟ ಉಂಟಾಗಿ ಈ ಕರ್ನಾಟಕದ ಕೆಳದಿಯ ನಾಯಕರ ಮೇಲೆ

ದಾಳಿ ಮಾಡಿದಾಗ ಅಲ್ಲಿರುವ ಬ್ರಹ್ಮದೇಯಗಳು ನಾಶವಾಗಿವೆ ಎಂಬ ವರದಿಗಳಿಂದ ತಿಳಿಯಬಹುದು. ಬ್ರಿಟಿಶರು ಕರ್ನಾಟಕವನ್ನು ತಮ್ಮ ವಸಾಹತುಕೇಂದ್ರವನ್ನಾಗಿ ಮಾಡಿಕೊಂಡಾಗ ಈ ಬ್ರಹ್ಮದೇಯ ಮತ್ತು ದೇವದೇಯಗಳು ತಮ್ಮ ಅಸ್ತಿತ್ವವನ್ನು ಕಳೆದುಕೊಂಡು ಬ್ರಿಟಿಶರ ಕಂಟೋನ್ಮೆಂಟ್‌ಗಳು ಅಸ್ತಿತ್ವಕ್ಕೆ ಬಂದವು. ಭಾರತೀಯ ಶಿಕ್ಷಣವನ್ನು ಕ್ರೈಸ್ತಮಿಷನರಿಗಳ ಮೂಲಕ ಹಲವಾರು ಬದಲಾವಣೆಗಳನ್ನು ತಂದಿರುವುದನ್ನು ಗುರುತಿಸಬಹುದು. ಈ ಮೂಲಕವಾಗಿ ಕರ್ನಾಟಕದ ಊಳಿಗಮಾನ್ಯ ವ್ಯವಸ್ಥೆಯ ಸ್ಥಾನಪಲ್ಲಟಗಳ ಚಾರಿತ್ರಿಕ ಯುಗವನ್ನು ಗ್ರಹಿಸಲಾಗಿದೆ.

**೪.೪. ಆಯಗಾರ ಪದ್ಧತಿ**

ಪ್ರಾಚೀನ ಕಾಲದಿಂದಲೂ ನಡೆದುಕೊಂಡು ಬಂದಿರುವ ಆಯಗಾರಿಕೆ ಪದ್ಧತಿಯು ಸಮಾಜದ ಬಹುಮುಖ್ಯ ಆರ್ಥಿಕ ಹಾಗೂ ಸಾಮಾಜಿಕ ಪದ್ಧತಿಯಾಗಿತ್ತು. ಈ ಪದ್ಧತಿಯು ಕೂಡುಕುಟುಂಬದ ಪರಿಕಲ್ಪನೆಯಂತೆ ಇದ್ದು, ಉತ್ಪಾದಕ, ರೈತ, ವರ್ತಕ ಅವರನ್ನು ಅವಲಂಬಿಸಿರುವ ಕರಕುಶಲಕಸುಬುಗಳನ್ನು ಆಶ್ರಯಿಸಿ ಬದುಕುವ ರೈತ ಕುಟುಂಬಗಳು ಇವರೆಲ್ಲರಿಗೂ ಕರ್ತವ್ಯ ಪ್ರಜ್ಞೆಯನ್ನು ತೋರಿಸುವ ಭಾಗವಾಗಿ 'ಆಯ' ಗ್ರಾಮೀಣ ಅರ್ಥವ್ಯವಸ್ಥೆಯಲ್ಲಿ ಪ್ರಚಲಿತದಲ್ಲಿದ್ದ ಪ್ರಮುಖ ಪದ್ಧತಿಯಾಗಿದೆ. ವ್ಯವಸಾಯ ಹಾಗೂ ಸೇವಾವೃತ್ತಿಯಂಥ ಉದ್ಯೋಗಗಳು ಬರೀ ವೃತ್ತಿಗಳಾಗಿರಲಿಲ್ಲ. ಅವು ಜೀವನಪದ್ಧತಿಗಳಾಗಿದ್ದವು. ಆದ ಕಾರಣ ಗ್ರಾಮೀಣ ಆರ್ಥಿಕತೆಯಲ್ಲಿ ಈ ಪದ್ಧತಿ ಪ್ರಭುತ್ವದ ಹಿನ್ನೆಲೆಯಲ್ಲಿ ಜೀವಂತವಾಗಿ ಬೆಳೆದುಬಂದಿರುವುದನ್ನು ಗಮನಿಸಬೇಕಾಗುತ್ತದೆ. ಜನ ಬೆಳೆದು ಜನಾಂಗವಾದಾಗಲೇ ಆಯಗಾರ ಪದ್ಧತಿ ಹುಟ್ಟಿಕೊಂಡಿತು. ಜೀವನದ ಅವಶ್ಯಕತೆ ಪರಸ್ಪರ ಅನಿವಾರ್ಯತೆಯೇ ಆಯಗಾರಿಕೆಯ ಉಗಮಕ್ಕೆ ಕಾರಣ(ಬಡಿಗೇರ,೨೦೧೦:೩).

ಈ ಆಯಗಾರ ಪದದ ಅರ್ಥದ ಪ್ರಕಾರ ಆಯ ಎಂದರೆ ಕೃಷಿ ಕಾರ್ಯಗಳಿಗೆ ಬೇಕಾದ ಸೇವೆಗಳನ್ನು, ಸಲಕರಣೆಗಳನ್ನು ಒದಗಿಸುವ ಸಮುದಾಯಗಳಿಗೆ ರೈತರು ಬೆಳೆದದ್ದರಲ್ಲಿ ಒಂದು ಪಾಲನ್ನು ಧಾನ್ಯರೂಪದಲ್ಲಿ ನೀಡುವ ಪ್ರತಿಫಲವನ್ನೇ 'ಆಯ' ಎನ್ನಲಾಗುತ್ತದೆ. ಆಯಗಾರರಲ್ಲಿ ವಿವಿಧ ಜಾತಿ ಕಸುಬಿನವರಿದ್ದರೂ ಒಂದೊಂದು ಕಸುಬಿನವರು ಇತರ ಕಸುಬುದಾರರ ನೆರವು ಪಡೆಯುವುದು ಅನಿವಾರ್ಯವಾಗಿತ್ತು. ಒಂದು ಸಂದರ್ಭದಲ್ಲಿ ಧಣಿ(ಒಡೆಯ) ಆದವನು ಮತ್ತೊಂದು ಸಂದರ್ಭದಲ್ಲಿ ಅಧೀನನಾಗುತ್ತಿದ್ದ. ಮತ್ತೊಮ್ಮೆ ಸರೀಕನಾಗುತ್ತಿದ್ದ. ಎಲ್ಲ ಆಯಗಳು ಪರಸ್ಪರ ಪೋಷಕ ಸಂಬಂಧವನ್ನು ಹೊಂದಿದ್ದವು. ಅಂದರೆ ಬಡಗಿ, ಕುಂಬಾರ, ಅಗಸ, ಬೇರೆಯವರ ಮನೆಯಲ್ಲಿ ಹೋದಾಗ ಕೆಲಸ ನಿರ್ವಹಿಸಿ ಪ್ರತಿಫಲವನ್ನು ಪಡೆದರೆ ಅವರ ಮನೆಯ ಕೆಲಸದಲ್ಲಿ ಒಡೆಯನಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಕೃಷಿಯು ಆಯಗಾರರನ್ನು ಅವಲಂಬಿಸಿತ್ತು, ಆಯಗಾರರು ಕೃಷಿಕರನ್ನು ಅವಲಂಬಿಸಿದ್ದರು. ಈ ಮೂಲಕ ಅವರ ಸಂಬಂಧ ಅವಿನಾಭಾವತೆಯಿಂದ ಕೂಡಿತ್ತು.

ಆಯಗಾರರನ್ನು ಒಂದೊಂದು ಭಾಗದಲ್ಲಿ ಒಂದೊಂದು ಹೆಸರಿನಿಂದ ಕರೆಯುತ್ತಾರೆ. ಉತ್ತರ ಕರ್ನಾಟಕದಲ್ಲಿ ಬಾರಾಬಲೂತಿ, ಮಂಡ್ಯ, ಮೈಸೂರು ಕಡೆ ಅಡದೆ, ಉತ್ತರ ಕನ್ನಡದಲ್ಲಿ ಎಚ್ಚ, ಆಯಗಾರ ಎಂದು ಹೀಗೆ ಹಲವಾರು ಹೆಸರುಗಳಿಂದ ಕರೆಯುತ್ತಾರೆ. ವಿಜಯನಗರ ಕಾಲದಲ್ಲಿ ಇವರನ್ನು ನೇಮಿಸಿ ಅವರಿಗೆ ಅಧಿಕಾರವನ್ನು ನೀಡುತ್ತಿದ್ದರು(ದೇವರಾಜ, ೨೦೧೩:೯೦)

ವಿಜಯನಗರದ ಆಡಳಿತದಲ್ಲಿ ಇವರು ಗ್ರಾಮೀಣ ಆರ್ಥಿಕ ಸ್ವರೂಪದ ಒಂದು ಭಾಗವಾಗಿ ಕಾರ್ಯ ನಿರ್ವಹಿಸಿರುವುದನ್ನು ಗಮನಿಸಬಹುದು. ಈ ಪ್ರಕ್ರಿಯೆಯು ವಿಜಯನಗರೋತ್ತರ ಕಾಲದಲ್ಲಿಯೂ ಮುಂದುವರಿದಿರುವುದು ಕಂಡುಬರುತ್ತದೆ.

ಭಾರತದಲ್ಲಿ ಶ್ರಮಿಕವರ್ಗ ಹಾಗೂ ಕೃಷಿಕವರ್ಗ ರೂಪುಗೊಂಡು ಪರಸ್ಪರ ಸಹಾಯಕರಾಗಿ ಕಾರ್ಯ ನಿರ್ವಹಿಸಿದ್ದರ ಜೊತೆ ಜೊತೆಯಲ್ಲೇ ಈ ವರ್ಗಗಳು ಜಾತಿಯ ಸ್ವರೂಪ ಪಡೆದುಕೊಂಡವು. ಇದರ ಹಿಂದೆ ಹಲವು ರಾಜಕಾರಣಗಳು ಕೆಲಸ ಮಾಡಿವೆ. ಪ್ರಮುಖವಾಗಿ ಬುದ್ಧಿವಂತಿಕೆಯನ್ನು ಆಸ್ತಿಯನ್ನಾಗಿ ಮಾಡಿಕೊಂಡಿರುವ ವರ್ಗದವರ ಆಶಯ ಪ್ರಮುಖವಾಗಿದೆ. ಡಿ.ಡಿ.ಕೋಸಾಂಬಿ, ಅಂಬೇಡ್ಕರ್ ಮತ್ತು ಗಾಂಧೀಜಿ ಅವರು ಜಾತಿ ನಿರ್ಮಾಣವನ್ನು ಕುರಿತು ಮಾತನಾಡುವಾಗ ಈ ಆಶಯವನ್ನು ಹಲವು ಕಡೆ ಪ್ರಸ್ತಾಪಿಸಿದ್ದಾರೆ. ಅಂದರೆ ಪ್ರಾಚೀನ ಭಾರತದ ಸಾಮಾಜಿಕ ವ್ಯವಸ್ಥೆಯು ವರ್ಣವ್ಯವಸ್ಥೆಗಳ ಆಧಾರದ ಮೇಲೆ ರೂಪುಗೊಂಡಿತು. ಇಲ್ಲಿ ನಾಲ್ಕು ವರ್ಣಗಳನ್ನು ಉಲ್ಲೇಖಿಸಲಾಗಿತ್ತು. ಆದರೆ ವರ್ಣವ್ಯವಸ್ಥೆಯ ಮೊದಲ ಶ್ರಮದ ಆಧಾರದ ಮೇಲೆ ರೂಪಿತವಾದ ವೃತ್ತಿ ಆಧಾರಿತ ವ್ಯವಸ್ಥೆಯೇ ಭಾರತೀಯ ನೈಜವಾದ ಸಾಮಾಜಿಕ ವ್ಯವಸ್ಥೆ. ಶ್ರಮದ ಆಧಾರದ ಮೇಲೆ ವಿಭಜನೆಯಾದ ವೃತ್ತಿಗಳು ಯಾವ ಕಾಲಘಟ್ಟದಲ್ಲಿ ಜಾತಿರೂಪ ಪಡೆದವೆಂದು ಹೇಳವುದು ಕಷ್ಟದ ಕೆಲಸ. ಈ ಮೂಲಕ ಭಾರತೀಯ ಸಮಾಜದಲ್ಲಿ ಶ್ರಮದ ಆಧಾರದ ಮೇಲೆ ಆಯಗಾರರನ್ನು ಗುರುತಿಸಬಹುದು.

ಆಯಗಾರರು ೮, ೧೨ ಅಥವಾ ೧೮ ಜನರನ್ನು ಗ್ರಾಮೀಣ ಅರ್ಥವ್ಯವಸ್ಥೆಯಲ್ಲಿ ಗುರುತಿಸಬಹುದು. ರೈತರಿಂದ ವರ್ಷದ ಸುಗ್ಗಿ ಸಮಯದಲ್ಲಿ ದವಸ-ಧಾನ್ಯಗಳನ್ನು ಪಡೆದು ಅವರಿಗೆ ವ್ಯವಸಾಯೋತ್ಪನಗಳನ್ನು ಹಾಗೂ ಇನ್ನಿತರ ಸಹಾಯವನ್ನು ಮಾಡುವವನು ಕಮ್ಮಾರ, ಬಡಿಗೇರ, ಕುಂಬಾರ, ಕ್ಷೌರಿಕ, ಅಕ್ಕಸಾಲಿಗ, ನೇಕಾರ, ಮೇದಾರ, ಶಿಲ್ಪಗಾರ, ಚಮ್ಮಾರ, ಗೊಲ್ಲ, ಹೊಲೆಯ, ಕಂಚುಗಾರ, ಕೊರವ, ಆಯ್ಯನೋರು, ಕುರುಬ, ಮಡಿವಾಳ, ಮಾದಿಗ, ಕಲ್ಲುಕುಟಿಗ(ಕುಮಾರ್, ೨೦೧೪:೬). ಆಯಗಾರರಾಗಿ ಗುರುತಿಸಿಕೊಳ್ಳುತ್ತಾರೆ.

ಆಯಗಾರರನ್ನು ಸಾಂಪ್ರದಾಯಿಕವಾಗಿ ೮ರಿಂದ ೧೨ ಆಯಗಾರರ ಪ್ರಮಾಣವನ್ನು ಗುರುತಿಸಬಹುದು. ಆದರೆ ಕಾಲ, ಸ್ಥಳ, ಪ್ರದೇಶಕ್ಕಾನುಗುಣವಾಗಿ ಹೆಚ್ಚು ಆಯಗಾರರನ್ನು ಗುರುತಿಸಲಾಗಿದೆ. ಹೀಗೆ ವಿಜಯನಗರ ಸಾಮ್ರಾಜ್ಯದಲ್ಲಿ ಅಸ್ತಿತ್ವದಲ್ಲಿದ್ದಂತಹ ಆಯಗಾರ ಪದ್ಧತಿಯನ್ನು ವಿಜಯನಗರೋತ್ತರ ಕಾಲದಲ್ಲಿಯೂ ಮುಂದುವರಿಸಿದ್ದರು. ವಿಜಯನಗರೋತ್ತರ ಕಾಲದ ಗ್ರಾಮೀಣ ಆರ್ಥಿಕತೆಯಲ್ಲಿ ಆಯಗಾರರ ಉಲ್ಲೇಖಗಳನ್ನು ಗಮನಿಸಬಹುದು. ೧೭೪೭ರ ಒಂದು ಶಾಸನ ಚಿತ್ರದುರ್ಗದ ನಾಯಕರ ಕಾಲದ ಆಯಗಾರರನ್ನು ಉಲ್ಲೇಖಿಸುತ್ತದೆ. ಇವರು ಪ್ರತಿಯೊಂದು ಹಳ್ಳಿಯಲ್ಲಿಯೂ ಇದ್ದು ತಮ್ಮ ಆಯದ ಕಾರ್ಯವನ್ನು ನಿರ್ವಹಿಸುತ್ತಿದ್ದರು.

ಗೌಡ, ಶಾನುಭೋಗ, ಬಡಗಿ, ಕಮ್ಮಾರ, ತಳವಾರ, ಜೋಯಿಸ, ಕುಲಾಲ, ಶಿಲ್ಪಕಾರ, ನಾಪಿತ-ಕ್ಷೌರಿಕ, ರಜಕ-ಅಗಸ, ಒನಿಕ, ಬೇಗಾರ, ಅಕ್ಕಸಾಲಿ, ಎಂಬ ಉಲ್ಲೇಖಗಳಿವೆ(ದೇಶಪಾಂಡೆ, ೧೯೭೯:೧೧೫). ಸಂತೆಬೆನ್ನೂರಿನ ನಾಯಕರ ಕಾಲದಲ್ಲಿ ಆಯಗಾರರ ಉಲ್ಲೇಖವಿದೆ. ಕೈವಾಡದವರು, ಬಡಗಿ, ಕಮ್ಮಾರ, ಅಗಸ, ತಳವಾರ, ಕಾಯಕದವನು(ನಾಡಿಗ, ೧೯೯೯:೬,೭,೮).

ಯಲಹಂಕ ನಾಡಪ್ರಭುಗಳ ಕಾಲದಲ್ಲಿ ಉಲ್ಲೇಖಿಸಿರುವಂತೆ ಆಯಗಾರ ಪದ್ಧತಿಯಲ್ಲಿ ೧೨ ಜನ ಆಯಗಾರರನ್ನು ಮುಖ್ಯರೆಂದು ಪರಿಗಣಿಸಿದ್ದಾರೆ. ಶ್ಯಾನುಭೋಗ, ಪಟೇಲ, ಜೋಯಿಸ, ಕಮ್ಮಾರ, ಅಗಸ, ನಾಯಿಂದ, ತೋಟಿ, ತಳವಾರ, ನೀರಗಂಟಿ, ಅಕ್ಕಸಾಲಿ, ಕುಂಬಾರ, ಬಡಗಿ, ೧೨ ಜನ ಮಂದಿ ಆಯಗಾರರ ಮೇಲ್ಪಟ್ಟು ಒಬ್ಬ ಪಾರುಪತ್ಯಗಾರನಿರುತ್ತಿದ್ದನು. ಎಲ್ಲ ಆಯಗಾರರು ಪಾರುಪತ್ಯಗಾರನ ಆಜ್ಞೆಯಂತೆ ನಡೆದುಕೊಳ್ಳುತ್ತಿದ್ದರು(ಸುಂದರರಾವ್, ೨೦೧೧:೫೫).

"೧೬೭೪ರ ಯಲಹಂಕ ನಾಡಪ್ರಭು ಮುಮ್ಮಡಿ ಕೆಂಪೇಗೌಡರು ತಮ್ಮ ಆಳ್ವಿಕೆಗೆ ಸೇರಿದ ಮಾಗಡಿ ಸೀಮೆಯ ಹಾರಂಗಳ್ಳಿ ಎಂಬ ಗ್ರಾಮಕ್ಕೆ ಪ್ರತಿನಾಮಧೇಯನಾದ ಮುಮ್ಮಡಿ ಕೆಂಪಸಾಗರದ ನೀರಗಂಟಿ ಭಕ್ತದಾಸ ಜೋಯಿಸರಿಗೆ ಕೆರೆಯ ನೀರಿನ ಕೆಲಸ ನಿರ್ವಹಿಸುವುದಕ್ಕೆ ಹಾಲಶೆಟ್ಟಿಹಳ್ಳಿ ಗ್ರಾಮದಲ್ಲಿ ಒಂದು ಖಂಡುಂಗ, ಶ್ರೀಪತಿಹಳ್ಳಿಯಲ್ಲಿ ಮೂರು ಖಂಡುಗ ಒಟ್ಟು ನಾಲ್ಕು ಖಂಡುಗ ಬೆಳೆಯುವ ಹೊಲವನ್ನು ದಾನ ಕೊಟ್ಟ ವಿಚಾರ ಈ ಶಾಸನದಿಂದ ತಿಳಿಯುತ್ತದೆ(ಜಮುನ, ೨೦೦೬:೧೩೧). ನೀರಗಂಟಿಯ ಹುದ್ದೆ ಆಧುನಿಕ ಸಂದರ್ಭದಲ್ಲಿಯೂ ಮುಂದುವರಿದಿದೆ. ಗ್ರಾಮಗಳಲ್ಲಿ ತಳವಾರರು ಪ್ರಸ್ತುತ ನೀರಗಂಟಿಯ ಕಾರ್ಯ ನಿರ್ವಹಿಸುತ್ತಿದ್ದಾರೆ.

ಸರ್ಕಾರದಿಂದ ನೇಮಕ ಮಾಡಿದ ಗ್ರಾಮಗಳಲ್ಲಿ ಬಾರಾಬಲೂತಿ ಕೆಲಸದವರಿಗೆ ಮಾನ್ಯ ಮಿರಾಸಿ ಮೊದಲಾದ ಅಗತ್ಯಗಳನ್ನು ಮಾಡಿಕೊಟ್ಟು ಸರ್ಕಾರದಿಂದ ನೇಮಕ ಮಾಡಿದ್ದ ಆ ಜನ ಆಯಗಾರರಿಗೆ ತಮ್ಮ ಕೆಲಸಕ್ಕೆ ತಕ್ಕ ಭೂಮಿ, ಧಾನ್ಯಗಳನ್ನು ಪ್ರತಿವರ್ಷ ಸುಗ್ಗಿಯ ಸಂದರ್ಭದಲ್ಲಿ ಪಡೆದುಕೊಳ್ಳುತ್ತಿದ್ದರು. ಅವರು ಪಡೆದ ಭೂಮಿಯು ತೆರಿಗೆರಹಿತವಾಗಿರುತ್ತಿತ್ತು. ಉದಾ: ಚಿತ್ರದುರ್ಗದ ನಾಯಕರು ಹನುಮನ ಗುಡಿ ಕಟ್ಟಿಸಿದ್ದಕ್ಕಾಗಿ ಮತ್ತು ನಾಡಿನ ಜನತೆಗೆ ಸೇವೆ ಸಲ್ಲಿಸಿದ ಬಡಗಿ ಕಲ್ಲುಕುಟ್ಟಿಗನಿಗೆ ಚಿನ್ನ ಬೆಳ್ಳಿ ಕೆಲಸಗಾರರಿಗೆ, ಕ್ಷೌರಿಕರಿಗೆ ಭೂಮಿಯನ್ನು ತೆರಿಗೆರಹಿತವಾಗಿ ಕೊಟ್ಟಿದ್ದನೆಂದು ತಿಳಿದುಬರುತ್ತದೆ(ಬಸವರಾಜಪ್ಪ, ೨೦೦೦:೪೬).

ಎಂ.ಎಸ್. ಪುಟ್ಟಣ್ಣನವರು ಪಾಳೆಯಗಾರರ ಆಳ್ವಿಕೆಯ ಗ್ರಾಮಗಳಲ್ಲಿ ಬಾರಾಬಲೂತಿ ಕೆಲಸ ಮಾಡಿದವರಿಗೆ ಮಾನ್ಯ ಮಿರಾಸಿ ಮೊದಲಾದ ಅಗತ್ಯಗಳನ್ನು ಮಾಡಿಕೊಟ್ಟು ಸರ್ಕಾರದಿಂದ ನೇಮಕ ಮಾಡಿದ ವಿವರ ನೀಡುತ್ತಾರೆ.

| ನಿಜ ಆಯಗಾರರು | ಅರೆ ಆಯಗಾರರು |
|---|---|
| ೧. ಗೌಡ | ಜೋಯಿಸ |
| ೨. ಶಾನುಭೋಗ | ಕುಲಾಲ(ಕುಂಬಾರ) |
| ೩. ಬಡಗಿ | ನಾಪಿತ(ಕ್ಷೌರಿಕ) |
| ೪. ಕಮ್ಮಾರ | ರಜಕ(ಅಗಸ) |
| ೫. ತಳವಾರ | ಬಾರಿಕ(ನೀರಗಂಟಿ) |
| ೬. ಬೇಗಾರ | ಅಕ್ಕಸಾಲಿ |
| (ಎಂ.ಎಸ್.ಪುಟ್ಟಣ್ಣ, ೧೯೯೭:೮). | |

ಹೀಗೆ ಪಟ್ಟಿಯನ್ನು ವಿವರಿಸುತ್ತಾರೆ. ಬ್ರಾಹ್ಮಣರು ಯಾವಾಗಲೂ ಪ್ರಧಾನಿಗಳಾಗಿ ಮಂತ್ರಾಲೋಚನೆಯಲ್ಲಿ ಪುರೋಹಿತ ಕಾರ್ಯ ಮಾಡುತ್ತಿದ್ದರು. ಇದೇ ಪಟ್ಟಿಯನ್ನು ಚಿತ್ರದುರ್ಗ ದಿ ಸ್ಟೇಟ್ ಪ್ರಬಂಧದಲ್ಲಿ ದೇಶಪಾಂಡೆಯವರು ನೀಡುತ್ತಾರೆ.

ಭರಮಪ್ಪನಾಯಕನ ಆಳ್ವಿಕೆಯಲ್ಲಿ ಸಂದರ್ಭದಲ್ಲಿ ಭಾರತ ಹುಣ್ಣಿಮೆಯ ಸಮಯದಲ್ಲಿ ದೇವಾಲಯಕ್ಕೆ ರಾಜಕುಮಾರ, ರಾಣಿಯರು ಬಂದು ಉತ್ಸವಾಂಭಗೂ, ಕಾಟಮ್ಮ ದೇವರಿಗೂ ಸೇವೆ ಸಲ್ಲಿಸಿ ಬರುತ್ತಿದ್ದರು. ಹಾಗೆ ಹೋಗುವಾಗ,

೧. ಗ್ರಾಮದ ತಳವಾರರು ಗ್ರಾಮವೊಂದಕ್ಕೆ ಒಂದು ಟಗರು, ಒಂದು ತಪ್ಪದ ಕುಂಭ ತರಬೇಕು.

೨. ದೊರೆಯು ಬೇಟೆ ಹೊರಟಾಗ ಪ್ರತಿ ಗ್ರಾಮದ ಗೌಡನೂ ಗ್ರಾಮವೊಂದಕ್ಕೆ ೧೦ ವರಹ ಬೇಟೆ ಕಾಣಿಕೆಯನ್ನು ಹಾಕಬೇಕು.

೩. ಭಾದ್ರಪದ ಮಾಸದ ವಿನಾಯಕನ ಚೌತಿಯಲ್ಲಿ ವಿಶಿಷ್ಠ ಮಠದ ಐಯ್ಯನವರು ಕರ್ಜಿಕಾಯಿ ಮಾಡಿಕೊಂಡು ಬಂದು ಅದನ್ನು ಅರಮನೆಯ ಬೊಕ್ಕಸದ ಮನೆಗೆ ಒಪ್ಪಿಸಬೇಕು.

೪. ಜಾಡರ ಮಗ್ಗವೊಂದಕ್ಕೆ ನೂಲಹಗ್ಗದ ಪ್ರಕಾರ ಪ್ರತಿವರುಷವೂ ಜಾಡರು ತಂದು ಅರಮನೆಗೆ ಒಪ್ಪಿಸಬೇಕು.

೫. ಗ್ರಾಮಾಂತರಗಳಿಂದ ಹಜಾಮರು ತಿಂಗಳಿಗೆ ಒಂದು ಸಾರಿ ಸರದಿ ಮೇರೆ ದುರ್ಗಕ್ಕೆ ಒಂದು ಖಾಸಾಪಾಗದ ಕುದುರೆಗಳನ್ನು ಮೈಕೂದಲನ್ನು ಅಯಾಲನ್ನು ಕತ್ತರಿಸಬೇಕು.

೬. ಗ್ರಾಮದ ಬೇಗಾರರು(ಮಾದಿಗರು) ಖಾಸ ಕುದುರೆಗಳಿಗೆ ಒಂದಕ್ಕೆ ಹಸಿಹುಲ್ಲು ೧೦ ಹೊರೆ ಪ್ರಕಾರ ಸರದಿ ಮೇರೆಗೆ ತರಬೇಕು.

೭. ಗ್ರಾಮ ಒಂದಕ್ಕೆ ಎರಡು ಆಳುಗಳು ಗ್ರಾಮಾಂತರಗಳಿಂದ ತಿಂಗಳಿಗೆ ಒಂದು ಸಾರಿ ದುರ್ಗಕ್ಕೆ ಬಂದು ಕರಡು ಹುಲ್ಲನ್ನು ಕುಯಿದು ಬಣವೆ ಹಾಕಬೇಕು.

ಈ ಮೂಲಕವಾಗಿ ಚಿತ್ರದುರ್ಗದ ನಾಯಕರು ಗ್ರಾಮೀಣ ಜೀವನದಲ್ಲಿ ಪ್ರತಿಯೊಂದು ಆಯದ ಕೆಲಸ ಮಾಡುವವರು ದಾನವಾಗಿ ಸೇವೆಯನ್ನು ಮಾಡಬೇಕೆಂದು ತಿಳಿಸಿದ್ದರು. ಹಾಗೂ ಇದು ಬಿಟ್ಟಿಸೇವೆಯ ಪರಿಕಲ್ಪನೆಯನ್ನು ಸೂಚಿಸುತ್ತದೆ.

ಮೈಸೂರಿನ ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಗ್ರಾಮೀಣ ಅರ್ಥವ್ಯವಸ್ಥೆಯಲ್ಲಿ ಬಾರಾಬಲೂತಿ ಪದ್ಧತಿಯು ಒಂದಾಗಿದೆ. ಚಿಕ್ಕದೇವರಾಜ ಒಡೆಯರ ಕಾಲದ ಸುಧಾರಣೆಗಳಲ್ಲಿ ೧೨ ಮಂದಿ ಹೊಂದಿದ ಈ ಪದ್ಧತಿಯು ಮುಖ್ಯವಾಗಿತ್ತು. ಇವರನ್ನು ಕೈವಾಡದವರು ಅಥವಾ ಅಡದೆಯವರು ಎಂದು ಕರೆಯುತ್ತಾರೆ.

ಈ ಆಯಗಾರ ಪದ್ಧತಿಯ ಮುಖ್ಯ ಉದ್ದೇಶ ಗ್ರಾಮೀಣ ಸ್ವಾವಲಂಬನೆ ಹಾಗೂ ಗ್ರಾಮದ ಎಲ್ಲ ವರ್ಗಗಳವರಿಗೂ ವೃತ್ತಿಯನ್ನು ಒದಗಿಸುವುದಾಗಿತ್ತು. ಸ್ಥಳೀಯ ಪರಿಸ್ಥಿತಿಗಳಿಗೆ ಅನುಗುಣವಾಗಿ ಆಯಗಾರರ ಸಂಖ್ಯೆಯಲ್ಲಿ ವ್ಯತ್ಯಾಸಗೊಳ್ಳುತ್ತಿದ್ದರೂ ಅವರ ಸಂಖ್ಯೆ ಸಾಮಾನ್ಯವಾಗಿ ೧೨ ಇರುತ್ತದೆ.

ಇವರ ಜೊತೆಗೆ ಜಂಗಮರಿಗೆ, ತೇರು ಎಳೆಯುವವರಿಗೆ, ಬಡ ಬ್ರಾಹ್ಮಣರಿಗೂ ಕೂಡ ರೈತರು ಧಾನ್ಯಗಳನ್ನು ನೀಡುತ್ತಿದ್ದರು.

ಆಯಗಾರರ ಬಗ್ಗೆ ಬುಕಾನನ್ ಕೊಟ್ಟಿರುವ ಪಟ್ಟಿ ಹೀಗಿದೆ.

| ಪ್ರತಿ ೧೦ ಖಂಡುಗಕ್ಕೆ | ಸೇರುಗಳಲ್ಲಿ |
|---|---|
| ದೇವರಿಗೆ, ಪೂಜಾರಿಗೆ | ೫ ಸೇರುಗಳಲ್ಲಿ |
| ಬ್ರಾಹ್ಮಣರು, ಜಂಗಮರಿಗೆ | ೫ ಸೇರುಗಳಲ್ಲಿ |
| ಪಂಚಾಂಗ ಬ್ರಾಹ್ಮಣನಿಗೆ | ೫ ಸೇರುಗಳಲ್ಲಿ |
| ನಾಯಿಂದ, ಕುಂಬಾರ, ಕಂಚುಗಾರ | ತಲಾ ೨ ಸೇರುಗಳಲ್ಲಿ |
| ಆಚಾರಿ, ಅಗಸ, ಕಬ್ಬಿಣದವ | ತಲಾ ೨ ಸೇರುಗಳಲ್ಲಿ |
| ಅಳತೆಗಾರ | ೪ ಸೇರುಗಳಲ್ಲಿ |
| ಗೌಡ | ೮ ಸೇರುಗಳಲ್ಲಿ |
| ಶಾನುಭೋಗ | ೧೦ ಸೇರುಗಳಲ್ಲಿ |
| ತೋಟಿ, ತಳವಾರ | ೧/೨ ಸೇರುಗಳಲ್ಲಿ |
| ನೀರಗಂಟಿ | ೧ ಸೇರುಗಳಲ್ಲಿ |

(ಬುಕಾನನ್,(೧೮೭೦), ೧೮೭೦:೨೬೫-೨೬೮).

ಈ ಮೂಲಕ ಅಂದಿನ ರೈತನು ಹೆಚ್ಚು ಹೆಚ್ಚು ಬೆಳೆದರೆ ಅದಕ್ಕನುಗುಣವಾಗಿ ಈ ಹಂಚಿಕೆಯ ಪ್ರಮಾಣವೂ ಹೆಚ್ಚಾಗಿರುತ್ತಿತ್ತು. ಗೌಡ ಮತ್ತು ಶಾನುಭೋಗರಿಗೆ ಧಾನ್ಯದ ಜೊತೆಗೆ ಭೂಮಿಯನ್ನು ನೀಡಲಾಗಿತ್ತು. ಉಳಿದವರಿಗೆ ಹೊರೆಹುಲ್ಲು ಮೊರೆಭಕ್ತ ಎಂಬಂತೆ ಹುಲ್ಲು ಮತ್ತು ಧಾನ್ಯ ನೀಡಲಾಗುತ್ತಿತ್ತು. ಈ ಮೂಲಕವಾಗಿ ಪ್ರಾಚೀನ ಕಾಲದಿಂದಲೂ ವಿವಿಧ ಹೆಸರುಗಳಿಂದ ಕರೆದುಕೊಂಡಿರುವ ಈ ಪದ್ಧತಿಯು ವಸಾಹತು ಕರ್ನಾಟಕದ ಆಳ್ವಿಕೆಯವರೆಗೂ ಅಸ್ತಿತ್ವದಲ್ಲಿತ್ತು. ವಸಾಹತು ಕರ್ನಾಟಕದಲ್ಲಿ ಬಂಡವಾಳತ್ವದ ಪರಿಕಲ್ಪನೆ ಬೆಳೆದು ತಾಂತ್ರಿಕತೆಯ ಉಗಮದಿಂದ ಆಯಗಾರ ಪದ್ಧತಿಯು ಹಿನ್ನಡೆಯಾಗಿರುವುದನ್ನು ಗಮನಿಸಬಹುದು. ಆದರೆ ಪ್ರಸ್ತುತ ಆಧುನಿಕ ಕಾಲದಲ್ಲಿಯೂ ಈ ಆಯುಗಾರ ಪದ್ಧತಿ ಗ್ರಾಮೀಣ ಬದುಕಿನ ಆಸರೆಯಾಗಿ ಮುಂದುವರಿದಿರುವುದನ್ನು ಗಮನಿಸಬಹುದಾಗಿದೆ. ಸುಗ್ಗಿಯ ಸಂದರ್ಭದಲ್ಲಿ ರೈತರಿಂದ ಧಾನ್ಯಗಳನ್ನು ಪಡೆಯುತ್ತಿರುವುದು ಗಮನಾರ್ಹ.

ಚಿತ್ರದುರ್ಗ ನಾಯಕರ ಆಳ್ವಿಕೆಯ ಕಾಲದಲ್ಲಿ ಆಯಗಾರರ ಗೌಡಿಕೆ ವಿಚಾರದ ಉಲ್ಲೇಖವನ್ನು ವಿವರಿಸಲಾಗಿದೆ. ೧೭೦೬ರ ಚಿತ್ರದುರ್ಗದ ಕಾಮಗೇತಿ ಕಸ್ತೂರಿ ಭರಮಣ್ಣನಾಯಕನು ಬರೆಸಿ ಈ ಜಯರೇಖೆ ಶಾಸನದಲ್ಲಿ ದಾವಣಗೆರೆ ಗೌಡಿಕೆ ಬಗ್ಗೆ ನಡೆದ ವಿವಾದದ ಪ್ರಸ್ತಾಪದಲ್ಲಿ ಸಂತೆಬೆನ್ನೂರು ಹನುಮಪ್ಪನಾಯಕರ ಅವಾಂತರದಿಂದ ದಾವಣಗೆರೆ ಹಾಳಾದಾಗ ಊರ ಗೌಡಿಕೆ ಬಗ್ಗೆ ಆದ ಪ್ರಸಂಗವನ್ನು ಇಲ್ಲಿ ಉಲ್ಲೇಖಿಸಲಾಗಿದೆ. ದಾವಣಗೆರೆಯ ಆರೇಹಟ್ಟಿಯಲ್ಲಿರುವ ಬೀರದೇವರ ದೇವಸ್ಥಾನದಿಂದ ಸಂಗ್ರಹಿಸಲಾದ ಈ ದಾಖಲೆಯಲ್ಲಿ ಕುರುಬ ಮತ್ತು ಸಾದ ಜನಾಂಗದ ಮಧ್ಯೆ ಜಾತಿ ನೆಲೆಯ ವ್ಯಾಜ್ಯ ಕುರಿತು ವಿವರಗಳು ಇದರಲ್ಲಿವೆ(ನಾಡಿಗ, ೨೦೦೮:೫೭). ಈ ಮೂಲಕ

ವಿಜಯನಗರೋತ್ತರ ಕಾಲದ ಈ ಆಯಗಾರ ವ್ಯವಸ್ಥೆಯ ಉಲ್ಲೇಖವನ್ನು ಗಮನಿಸಿದ್ದಾಗ ಈ ಶಾಸನ ಗೌಡಿಕೆಯ ಹಿನ್ನೆಲೆಯಲ್ಲಿ ಜಾತಿ ಮಧ್ಯೆ ವ್ಯಾಜ್ಯಗಳಾದ ಉಲ್ಲೇಖವನ್ನು ತಿಳಿಸುತ್ತದೆ. ಬರೀ ಗೌಡಿಕೆಯನ್ನು ಸಾದ ಜನಾಂಗದವರಲ್ಲದೇ ಕುರುಬ ಜನಾಂಗದವರು ಈ ಗೌಡಿಕೆಯನ್ನು ನಿರ್ವಹಿಸುವ ಕಾರ್ಯವನ್ನು ಮಾಡುತ್ತಿದ್ದರು. ಗ್ರಾಮಗಳಲ್ಲಿ ಹೆಚ್ಚಿನ ಜನಸಂಖ್ಯೆಗಳನ್ನು ಯಾರು ಹೊಂದಿರುತ್ತಿದ್ದರೋ ಅವರು ಗೌಡಿಕೆಯ ಕಾರ್ಯ ನಿರ್ವಹಿಸುತ್ತಿದ್ದರು. ತರೀಕೆರೆ ಪಾಳೆಯಗಾರ ಸರ್ಜಪ್ಪನಾಯಕನ ಕಥನ ಕಾವ್ಯದಲ್ಲಿ ಆಯಗಾರರ ಉಲ್ಲೇಖವಿದೆ. ತಳವಾರನ ಪಾತ್ರ ಅಲ್ಲಿ ಬಂದಿರುವುದು ವಿಶೇಷ.

ಕೆಳದಿ ನೃಪವಿಜಯದಲ್ಲಿ ತಳವಾರಘಟ್ಟಿ ಎಂದು ಉಲ್ಲೇಖಿಸಿದ್ದಾರೆ. ಇದನ್ನು ತಳವಾರನು ಕಾರ್ಯವನ್ನು ನಿರ್ವಹಿಸುವ ಸ್ಥಳವೆಂದು ಕರೆಯಾಲಾಗಿದೆ. ಹಂಡೇ ಪಾಳೆಯಗಾರರ ಕಾಲದಲ್ಲಿ ನಾಡಾತಳವಾರ ನಾಯಕರಿಗೆ ಉಂಬಳಿ ಗ್ರಾಮವನ್ನು ಕೊಟ್ಟು ತಮ್ಮ ಜಾಗೀರಿ ಗ್ರಾಮವಾಗಿದ್ದ ತಳವಾರರು ತಳವಾರಿಕೆಯನ್ನು ಸರಕಾರದ ಆಜ್ಞೆಯಂತೆ ಪಾಲಿಸಿಕೊಂಡು ಬರುತ್ತಿದ್ದರುಪೂಜಾರಹಳ್ಳಿ, ೨೦೧೦:೪೬).

ಗ್ರಾಮೀಣ ಆರ್ಥಿಕತೆಯಲ್ಲಿ ಯಾವ ಜನಾಂಗದವರು ಹೆಚ್ಚಿನ ಸಂಖ್ಯೆಯಲ್ಲಿ ಇರುತ್ತಿದ್ದರೋ ಆ ಜನಾಂಗದವರಿಗೆ ಆ ಗ್ರಾಮದ ಗೌಡಿಕೆ ದೊರೆಯುತ್ತಿತ್ತು. ಒಂದೊಂದು ಗ್ರಾಮದಲ್ಲಿ ಲಿಂಗಾಯತರು ಗೌಡಿಕೆ ಮಾಡಿದರೆ, ಇನ್ನೊಂದು ಭಾಗದಲ್ಲಿ ಒಕ್ಕಲಿಗರು ಗೌಡಿಕೆ ಮಾಡುತ್ತಿದ್ದರು. ಈ ಆಯಗಾರ ಪರಂಪರೆಯು ವರ್ತಮಾನದಲ್ಲಿ ಜಾತ್ರೆ ಮತ್ತು ವಿಶೇಷ ಸಂದರ್ಭದಲ್ಲಿ ಪೂಜೆ ಕಾರ್ಯಗಳನ್ನು ನಿರ್ವಹಿಸುವಾಗ ಆಯಾ ಆಯಗಾರರ ಮನೆಯಿಂದ ಪೂಜಾ ನೈವೇದ್ಯಗಳನ್ನು ತಂದು ಪೂಜೆ ಸಲ್ಲಿಸುತ್ತಿರುವುದನ್ನು ಗಮನಿಸಬಹುದು.

ಒಟ್ಟಾರೆಯಾಗಿ ಹೇಳುವುದಾದರೆ ಬೃಹತ್ ಸಾಮ್ರಾಜ್ಯ ಇಡೀ ತಮ್ಮ ಆಡಳಿತ ವ್ಯಾಪ್ತಿಯನ್ನು ನಿಯಂತ್ರಿಸಲು ಮತ್ತು ಸಂಘಟಿಸಲು ಸಾಧ್ಯವಿರಲಿಲ್ಲ. ಆದ್ದರಿಂದ ಇಡೀ ಸಾಮ್ರಾಜ್ಯ ಅಥವಾ ಸಂಸ್ಥಾನಗಳನ್ನು ಚಿಕ್ಕ ಚಿಕ್ಕ ಆಡಳಿತ ಘಟಕಗಳಾಗಿ ವಿಭಜನೆ ಮಾಡುತ್ತಿದ್ದರು. ಇಂತಹ ಚಿಕ್ಕ ಘಟಕಗಳನ್ನು ನಾಡು, ಸೀಮೆ, ಮಾಗಣಿ, ವೇಂಠೆ, ಚಾವಡಿ ಮುಂತಾದ ಪಾರಿಭಾಷಿಕ ಪದಗಳಿಂದ ಕರೆಯುತ್ತಿದ್ದರು. ಗ್ರಾಮ ಅಥವಾ ಸೀಮೆಗಳನ್ನು ನಿಯಂತ್ರಿಸಲು ೧೨ ಜಾತಿಗಳ ಮುಖಂಡರನ್ನು ಸೂಚಿಸುವ ಅನೇಕ ಶಾಸನಗಳು ಇದ್ದು, ಇವು ಆಡಳಿತ ಘಟಕದ ಅಂತಿಮ ಸ್ಥಾನವನ್ನು ಹೊಂದಿರುತ್ತವೆ. ಗ್ರಾಮಗಳ ಲೆಕ್ಕಾಚಾರ ಹಾಗೂ ಕಂದಾಯ ವಸೂಲಿ ಇನ್ನಿತರೇ ಕಾರ್ಯಗಳಿಗೆ ಆಯಗಾರ ವ್ಯವಸ್ಥೆಯೇ ಮುಖ್ಯ ವಾಹಿನಿಯಾಗಿ ಗುರುತಿಸಿದ್ದು, ಇದರ ಮೂಲಕ ಗ್ರಾಮಗಳ ಮುಖಂಡರಾಗಿ ಗೌಡ, ಶಾನುಭೋಗ, ಜ್ಯೋತಿಷ್ಯಿ ತಳವಾರ ಇನ್ನಿತರ ವರ್ಗದವರು ಗ್ರಾಮ ನಿಯಂತ್ರಣ ವ್ಯವಸ್ಥೆಯ ಮುಖ್ಯ ಭಾಗವಾಗಿ ಇದ್ದರು ಎಂಬುದು ಈ ಮೂಲಕ ವಿವರಣೆಯನ್ನು ಒಳಗೊಂಡಿರುವ ಸಾರವಾಗಿದೆ.

**೪.೫. ಭೂಮಾಲೀಕರು ಮತ್ತು ಕೃಷಿ ಕಾರ್ಮಿಕರು**

ಮಧ್ಯಕಾಲೀನ ಕನ್ನಡ ನಾಡಿನಲ್ಲಿ ಭೂಮಾಲೀಕರು ಮತ್ತು ಕೃಷಿ ಕಾರ್ಮಿಕರು ಪ್ರಮುಖ ಪಾತ್ರ ವಹಿಸುತ್ತಾರೆ. ಜಿ.ಆರ್. ಕುಪ್ಪಸ್ವಾಮಿ ಅವರು ಮೂರು ವಿಧದ ಕೃಷಿವ್ಯವಸ್ಥೆ ಈ ಕಾಲದಲ್ಲಿತ್ತೆಂದು

ದಾಖಲಿಸುತ್ತಾರೆ. ಮೊದಲನೆಯದು ಕುಟುಂಬದವರೆಲ್ಲ ಸೇರಿ ಮಾಲೀಕನೊಡನೆ ಕೃಷಿ ಮಾಡುವುದು, ಎರಡನೆಯದು ಮಾಲೀಕನು ಉಸ್ತುವಾರಿ ನೋಡಿಕೊಳ್ಳುತ್ತಿದ್ದು ಕೂಲಿಯಾಳುಗಳಿಂದ ಕೃಷಿ ಮಾಡಿಸುವುದು, ಮೂರನೆಯದು ಮಾಲೀಕರು ಭೂಮಿಯನ್ನು ಇತರರಿಗೆ ಗುತ್ತಿಗೆ ಆಧಾರದ ಮೇಲೆ ಕೊಟ್ಟು ಕೃಷಿ ಮಾಡಿಸುವುದು. ಇಲ್ಲಿ ಭೂಮಾಲೀಕರು, ವ್ಯಕ್ತಿ, ಅಥವಾ ಸಂಸ್ಥೆಗಳೂ ಸಹ ಆಗಿರಬಹುದು. ಪ್ರಭುತ್ವದಿಂದ ಭೂಮಿಯನ್ನು ಪಡೆದು ಮಾಲೀಕರಾಗಿರುವ ಇವರು ಸಮಾಜದಲ್ಲಿ ಪ್ರಾಚೀನ ಕಾಲದಿಂದಲೂ ಮುಖ್ಯರಂತೆ ಗುರುತಿಸಿಕೊಂಡಿದ್ದಾರೆ.

ಭೂಮಾಲೀಕತ್ವ ಎನ್ನುವ ಅರ್ಥವ್ಯವಸ್ಥೆಯು ಭೂ ಆಧಾರಿತ ವ್ಯವಸ್ಥೆಯಾಗಿತ್ತು. ಬುಡಕಟ್ಟು ಸಮಾಜ ಕೃಷಿವ್ಯವಸ್ಥೆಗೆ ಹಲವಾರು ಬದಲಾವಣೆಗಳೊಂದಿಗೆ ಪರಿವರ್ತನೆಗೊಂಡಿದ್ದು, ರಾಜ್ಯ ವ್ಯವಸ್ಥೆಯ ಮೇಲೆ ಮಹತ್ತರ ಪ್ರಭಾವವನ್ನು ಬೀರಿದೆ. ಭೂಮಿಯನ್ನು ಹೊಂದಿದ ಮಾಲೀಕರು ಧಾರ್ಮಿಕ ಸಂಘಟಕರಾಗಿ ಪ್ರಾಚೀನ ಕಾಲದಿಂದಲೂ ಗುರುತಿಸಿಕೊಂಡಿದ್ದಾರೆ. ವಿಜಯನಗರೋತ್ತರ ಕಾಲದಲ್ಲಿ ನಾಯಕರು ಬ್ರಾಹ್ಮಣರಿಗೆ, ಮಠಗಳಿಗೆ ದೇವಾಲಯಗಳಿಗೆ ದಾನ ನೀಡುವ ಪ್ರಕ್ರಿಯೆ ಮುಂದುವರಿದು, ಭೂಮಾಲೀಕತ್ವ ವರ್ಗವು ಇತರೆ ಪ್ರಭುತ್ವಗಳಲ್ಲಿ ಇದ್ದಂತೆ ವಿಜಯನಗರೋತ್ತರ ಕಾಲದಲ್ಲಿ ಮುಂದುವರಿದುಕೊಂಡು ಬಂದಿದೆ. ಆದರೆ ಇಲ್ಲಿ ಪ್ರಧಾನವಾಗಿ ಮಠಗಳು ಆರ್ಥಿಕ ಕೇಂದ್ರಗಳಾಗಿ ರೂಪಿತವಾದವು.

ಪ್ರತಿಯೊಬ್ಬ ವ್ಯಕ್ತಿಯು ತನ್ನದೇ ಆದ ಸ್ವಂತ ಭೂಮಿಯನ್ನು ಹೊಂದುವ ಆಸೆ ಪಡುತ್ತಿದ್ದದ್ದು ಅಂದಿನ ಜನರ ಸಹಜ ಬೆಳವಣಿಗೆಯಾಗಿತ್ತು. ಭೂಮಾಲೀಕತ್ವದ ಪ್ರಮುಖ ಮಾದರಿಗಳಿಂದ ಗುರುತಿಸಿಕೊಂಡಿದೆ. ರಾಜನಿಗೆ ಸೇರಿದ ಭೂಮಿ, ಖಾಸಗಿ ಭೂಮಿ, ಸಾಮುದಾಯಿಕ ಭೂಮಿ, ದಾನದ ರೂಪದಲ್ಲಿ ಬಂದ ಭೂಮಿ ಹೀಗೆ ಭೂಮಿಯ ಒಡೆತನ ಅಸ್ತಿತ್ವದಲ್ಲಿತ್ತು(ರೈ, ೨೦೧೭:೫೦). ಪ್ರಭುತ್ವಗಳು ಭೂ ತೆರಿಗೆಯನ್ನು ನಿರ್ಧರಿಸುವಾಗ ಆಡಳಿತ ವ್ಯಾಪ್ತಿಯ ಭೂಮಿಯನ್ನು ಹುಲ್ಲುಗಾವಲು, ಕಾಡುಭೂಮಿ, ನೀರಾವರಿ ಮತ್ತು ಬೆದ್ದಲು ಭೂಮಿಯೆಂದು ವರ್ಗಿಕರಿಸಿದ್ದು, ನಂತರ ಅರಸರಿಂದ ಸಾಮಾಜಿಕ ಸಂಸ್ಥೆಗಳಿಗೆ ಅಥವಾ ವ್ಯಕ್ತಿಗಳಿಗೆ ನೀಡಿದ ಭೂಮಿಯು ತೆರಿಗೆ ವಿನಾಯಿತಿಯನ್ನು ಪಡೆದಿರುತ್ತಿತ್ತು. ದಾನ ಪ್ರಕ್ರಿಯೆಯಿಂದ ಬಂದ ಭೂಮಿಯನ್ನು ಭೂಮಾಲೀಕರು ವಿವಿಧ ಭಾಗಗಳಾಗಿ ವಿಭಾಗಿಸಿದ್ದಾರೆ. ಅವುಗಳೆಂದರೆ ಹುಲ್ಲುಗಾವಲು ಭೂಮಿ, ಕಾಡು ಭೂಮಿ, ಭೂಮಾಲೀಕನು ಬಾಡಿಗೆದಾರನಿಗೆ ನೀಡಿದ ಭೂಮಿ ಮತ್ತು ಕೂಲಿ ಕಾರ್ಮಿಕರ ಭೂಮಿ ಎಂದು ಪ್ರಮುಖವಾಗಿ ನಾಲ್ಕು ವಿಭಾಗಗಳಲ್ಲಿ ವಿಭಾಗಿಸಿಕೊಂಡಿದ್ದರು(ಸಾಕಿ,೦೧, ೧೯೯೮:೨೭೭).

ಭೂ ಮಾಲೀಕತ್ವದ ಪ್ರಕ್ರಿಯೆಯಲ್ಲಿ ಮಠಗಳೇ ಪ್ರಮುಖ ಆರ್ಥಿಕ ಕೇಂದ್ರಗಳಾಗಿ ಹೆಚ್ಚಿನ ಭೂಮಿಯನ್ನು ಹೊಂದಿ ಭೂಮಾಲೀಕತ್ವದ ಒಡೆಯನಂತೆ ವರ್ತಿಸತೊಡಗಿದವು. ಈ ಕಾಲಘಟ್ಟದಲ್ಲಿ ಹೊಸದೊಂದು ಭೂಮಾಲೀಕ ಮಧ್ಯವರ್ತಿ ವರ್ಗ ಉದಯಿಸಿದ ಕಾಲವೆಂದು ಹೇಳಬಹುದು. ಅನ್ಯ ರಾಜ್ಯಗಳಿಂದ ಬಂದ ವರ್ಗಗಳು ಮಧ್ಯವರ್ತಿ ವರ್ಗಗಳಾಗಿ ಗುರುತಿಸಿಕೊಳ್ಳುವುದರ ಜೊತೆ ಇಲ್ಲಿ ಭೂಮಿಯನ್ನು ಕೊಂಡು ಭೂಮಾಲೀಕ ಮಧ್ಯವರ್ತಿವರ್ಗಗಳಾಗಿ ಉದಯಿಸಿದರು.

ಭೂಮಾಲೀಕತ್ವ ಪ್ರಕ್ರಿಯೆಯಲ್ಲಿ ಭೂಮಾಲೀಕರು ಹೊಂದಿರುವ ಜಮೀನನ್ನು ಬಾಡಿಗೆಗೆ ಗೇಣಿಗೆ ನೀಡುತ್ತಿದ್ದರು. ರಾಜ್ಯದ ಭೂಮಿಯು ಸಂಪೂರ್ಣವಾಗಿ ರಾಜನಿಗೆ ಸೇರಿದ ಭೂಮಿ ಎನ್ನುವ ತಪ್ಪು ಕಲ್ಪನೆಯು ಬದಲಾಗಿ, ರಾಜನು ರಾಜ್ಯದ ಒಂದು ಭಾಗದ ಭೂಮಿಯನ್ನು ಮಾತ್ರ ಹೊಂದಿರುತ್ತಿದ್ದನು. ಕೃಷಿವ್ಯವಸ್ಥೆಯಲ್ಲಿ ಭೂಮಿಯನ್ನು ಹೊಂದಿದ ಭೂಮಾಲೀಕರು ಅವರ ಅಧೀನದಲ್ಲಿರುವ ಭೂಮಿಯನ್ನು ಕಾರ್ಮಿಕರಿಗೆ ದೇಣಿಗೆ ನೀಡುವ ಪ್ರಕ್ರಿಯೆ ಒಂದು ಮಾದರಿಯಾದರೆ, ಬಿಟ್ಟಿ ಸೇವೆಯ ಪ್ರಕ್ರಿಯೆಗಳು ಇನ್ನೊಂದು ಮಾದರಿಯೆಂದು ಹೇಳಬಹುದು. ಈ ಪ್ರಕ್ರಿಯೆಯ ಕೃಷಿ ವ್ಯವಸ್ಥೆಯಲ್ಲಿ ದುಡಿಯುವುದು ಅಂದಿನ ಪ್ರಕ್ರಿಯೆ ಅಲ್ಲದೇ ಪ್ರಾಚೀನ ಕಾಲದಿಂದಲೂ ಮುಂದುವರಿದುಕೊಂಡು ಬಂದ ವಿಧಾನವಾಗಿದೆ. ಭೂ ಮಾಲೀಕತ್ವದ ಮೂಲಕ ಮಧ್ಯವರ್ತಿ ವರ್ಗ ಉದಯಿಸಿದ ಈ ವರ್ಗವು ರೈತನಿಗೆ ಭೂಮಿಯನ್ನು ಗೇಣಿಗೆ ನೀಡಿ ಬಿಟ್ಟಿ ಸೇವೆಯನ್ನು ನಿರ್ವಹಿಸುವ ಪ್ರಕ್ರಿಯೆಗಳು ಮುಂದುವರಿದವು.

ಸಾಮಾಜಿಕ ರಚನೆಯಲ್ಲಿ ಬಿಕ್ಕಟ್ಟು ತಲೆದೋರಿದಾಗ ಧಾರ್ಮಿಕ ಮತ್ತು ಆಡಳಿತ ಸೇವೆಗೆ ದತ್ತಿ ಜಮೀನುಗಳ ರೂಪದಲ್ಲಿ ಸಂಭಾವನೆ ಕೊಡಲಾಯಿತೆಂದು ತೋರುತ್ತದೆ. ಈ ಪ್ರಕ್ರಿಯೆಯಿಂದ ರಾಜ ಮತ್ತು ರೈತನ ನಡುವೆ ವೈಶ್ಯ ಭೂಮಾಲೀಕರೆಂಬ ಇನ್ನೊಂದು ವರ್ಗ ಸೃಷ್ಟಿಯಾಯಿತು. ಹೀಗಾಗಿ ವೈಶ್ಯರು ಮುಂಚಿನ ಸ್ಥಾನದಿಂದ ಕೆಳಗಿಳಿದರು. ಇದೇ ರೀತಿ ಬುಡಕಟ್ಟು ಮುಖ್ಯಸ್ಥರಿಂದ ಉಪದ್ರವ ಬಂದೊದಗಿದಾಗ ಅಂತಹ ಬುಡಕಟ್ಟು ಪ್ರದೇಶಗಳಲ್ಲಿ ಬ್ರಾಹ್ಮಣರಿಗೆ ದತ್ತಿ ಜಮೀನುಗಳನ್ನು ಬಿಟ್ಟುಕೊಟ್ಟು ಅವರನ್ನು ಅಲ್ಲಿ ನಿಲ್ಲಿಸಲಾಯಿತು. ಬ್ರಾಹ್ಮಣರಿಗೆ ಮತ್ತು ಇನ್ನೂ ಕೆಲವರಿಗೆ ಹಿಂದುಳಿದ, ಆದಿವಾಸಿ ಪ್ರದೇಶಗಳಲ್ಲಿ ಜಮೀನುಗಳನ್ನು ಬಿಟ್ಟುಕೊಟ್ಟಿದ್ದರಿಂದ ಕಬ್ಬಿಣ, ನೇಗಿಲಿನ ಬೇಸಾಯ, ಪಶುಸಂಗೋಪನೆಗೆ ಬೇಕಿದ್ದ ಜ್ಞಾನ ಹೆಚ್ಚಿ ಇವು ಪ್ರಭುತ್ವಗಳಲ್ಲಿ ಹರಡಿದವು. ಇದರಿಂದ ಕೃಷಿ ಉತ್ಪನ್ನ ಹೆಚ್ಚಾಯಿತಲ್ಲದೆ ಬುಡಕಟ್ಟು ಜನರು ರಾಜಸತ್ತೆಯ ಅಧೀನಕ್ಕೆ ಒಳಪಟ್ಟರು. ದತ್ತಿ ಜಮೀನಿನ ಪ್ರಕ್ರಿಯೆ ಆದಿವಾಸಿ ರೈತರನ್ನು ಬ್ರಾಹ್ಮಣವಾದಿ ಸಮಾಜದ ಪರಧಿಯೊಳಗೆ ಎಳೆಯಿತು. ಶೂದ್ರರ ಶ್ರೇಣಿಗೆ ಅವರನ್ನು ಸೇರಿಸಲಾಯಿತು. ಹೀಗೆ ಮಧ್ಯಯುಗದ ಚರಿತ್ರೆಯಲ್ಲಿ ಶೂದ್ರರನ್ನು ರೈತರು ಮತ್ತು ಬೇಸಾಯಗಾರರು ಎಂದು ಕರೆಯಲಾಯಿತು(ಶರ್ಮ, ೨೦೦೮:೧೪೨). ಈ ಮೂಲಕ ಭಾರತದ ಚರಿತ್ರೆಯಲ್ಲಿ ಭೂಹಿಡುವಳಿಗಳಲ್ಲಿ ಗೇಣಿದಾರರಾಗಿ ಗುರುತಿಸಿಕೊಂಡ ಶೂದ್ರರು, ಸಮಾಜದಲ್ಲಿ ಅವರು ಕೃಷಿ ಕೆಲಸವನ್ನು ನಿರ್ವಹಿಸುವರು ಎಂಬ ಪರಿಕಲ್ಪನೆ ಬೆಳೆದು ಜಾತಿವ್ಯವಸ್ಥೆಯು ಗಟ್ಟಿಯಾಗಿ ನೆಲೆಗೊಳ್ಳಲಾರಂಭಿಸದ ಪ್ರಕ್ರಿಯೆ.

ಭೂಮಾಲೀಕರು ಮತ್ತು ಕೃಷಿ ಕಾರ್ಮಿಕರ ಸಂಬಂಧವನ್ನು ಗ್ರಹಿಸುವಾಗ ಭಾರತದ ಚರಿತ್ರೆಯಲ್ಲಿ ಅವರ ಸ್ವರೂಪ ಸಾಮಾಜಿಕ ಅಸಮಾನತೆಯನ್ನು ತೋರ್ಪಡಿಸುತ್ತದೆಂದು ಹೇಳಬಹುದು. ಕೂಲಿ ಕಾರ್ಮಿಕರು ಊಳಿಗಮಾನ್ಯತೆಯ ಅಂಶಗಳಲ್ಲಿ ಬೇರೂರಿದ್ದಾರೆ. ಪ್ರಭುತ್ವಕ್ಕೆ ನಿರಂತರವಾಗಿ ಸೇವೆ ಸಲ್ಲಿಸುತ್ತಲೇ ಬಂದಿದ್ದಾರೆ.

ವಿಜಯನಗರೋತ್ತರ ಕಾಲದಲ್ಲಿ ಜೀತ ಪದ್ಧತಿ, ಗುಲಾಮಗಿರಿ, ದೈಹಿಕ ದಡಿಮೆ, ಬಿಟ್ಟಿಸೇವೆ ಈ ರೀತಿಯ ವ್ಯವಸ್ಥೆಯು ಕೂಲಿ ಕಾರ್ಮಿಕರಿಗೆ ಇದ್ದು, ಪ್ರಭುತ್ವದ ಜೊತೆ ಕೈ ಜೋಡಿಸಿ ಕೆಲಸ

ಮಾಡಬೇಕಾಗುತ್ತದೆ. ಇದರಿಂದ ಭೂಮಾಲೀಕರು ಮತ್ತು ಕೃಷಿ ಕಾರ್ಮಿಕರ ಮಧ್ಯೆ ಅಂತರ ಕಂಡುಕೊಳ್ಳಲು ಸಾಧ್ಯವಾಯಿತು. ಭೂಮಾಲೀಕ ವರ್ಗಗಳು ಸಮಾಜದಲ್ಲಿ ಉನ್ನತ ಸ್ಥಾನವನ್ನು ಹೊಂದಿದ್ದರೆ ಕೂಲಿ ಕಾರ್ಮಿಕರು ಕೆಳಸ್ತರವನ್ನು ಹೊಂದಿರುತ್ತಿದ್ದರು. ಬಲಾಢ್ಯ ಜಾತಿಗಳು ಕೆಳಸಮುದಾಯಗಳನ್ನು ಬಲವಂತದ ದುಡಿಮೆ ಮುಖಾಂತರ ದುಡಿಸಿಕೊಳ್ಳುತ್ತಾ ಆರ್ಥಿಕವಾಗಿ ಸದೃಢವಾಗುತ್ತಿರುವ ಪ್ರಕ್ರಿಯೆಗಳು ಅಂದಿನಿಂದ ಇಂದಿಗೂ ಯಾವ ವ್ಯತ್ಯಾಸವಿಲ್ಲದಂತೆ ಮುಂದುವರಿಯುತ್ತಿವೆ. ಸಾಮಂತ ಅರಸರು ಪಾಳೆಯಗಾರರು ಹೀಗೆ ಸಮಾಜದ ಬಹುಮುಖ್ಯ ನೆಲೆಯಲ್ಲಿ ಆಳ್ವಿಕೆ ನಡೆಸಿದ್ದಾರೆ. ಆರ್ಥಿಕ ಪರಿಸ್ಥಿತಿಯಿಂದ ಚೇತರಿಸಿಕೊಳ್ಳಲಾಗದ ನಾಗರಿಕ ಪ್ರಪಂಚದಿಂದ ಬಹು ದೂರವಿರುವ ಬುಡಕಟ್ಟು ಮತ್ತು ದಲಿತ ಸಮುದಾಯಗಳು ಇನ್ನೊಬ್ಬರನ್ನು ಅವಲಂಬಿಸಿಯೇ ಜೀವನ ನಡೆಸುವಂತ ಪರಿಸ್ಥಿತಿಯನ್ನು ಕಾಣುತ್ತೇವೆ(ದೇವರಾಜ, ೨೦೧೩:೧೮೪). ಹೀಗೆ ಕರ್ನಾಟಕದಲ್ಲಿ ದಲಿತ ಮತ್ತು ಬುಡಕಟ್ಟು ಸಮುದಾಯಗಳು ಕೃಷಿಯಲ್ಲಿ ತಮ್ಮನ್ನು ಗುರುತಿಸಿಕೊಳ್ಳುತ್ತಾ ಬಂದಿದ್ದಾರೆ. ಪ್ರಸ್ತುತ ಆಧುನಿಕ ಸಂದರ್ಭದಲ್ಲಿಯೂ ಬುಡಕಟ್ಟು ಸಮುದಾಯಗಳು ಕೃಷಿವ್ಯವಸ್ಥೆಯಲ್ಲಿ ತೊಡಗಿ ತಮ್ಮ ಜೀವನ ನಿರ್ವಹಿಸುತ್ತಿರುವುದನ್ನು ಗಮನಿಸಬಹುದಾಗಿದೆ.

ಕುಪ್ಪುಸ್ವಾಮಿಯವರು ಮಧ್ಯಕಾಲೀನ ಕರ್ನಾಟಕದಲ್ಲಿ ಭೂಮಿಯ ಮೇಲಿನ ಒಡೆತನವನ್ನು ಕುರಿತಂತೆ ಬರೆದಿದ್ದಾರೆ. ಸಮುದಾಯದ ಒಡೆತನ ಮತ್ತು ವ್ಯಕ್ತಿಗತ ಒಡೆತನ ಎರಡು ಬಗೆಯಲ್ಲಿ ಅಸ್ತಿತ್ವದಲ್ಲಿದ್ದವು. ಆದರೆ ಸಮುದಾಯದ ಒಡೆತನವು ಹೆಚ್ಚು ಪ್ರಚಲಿತದಲ್ಲಿತ್ತು. ಸಮುದಾಯದ ಒಡೆತನದಲ್ಲಿದ್ದ ಭೂಮಿಯಲ್ಲಿ ಎರಡು ವಿಧ ಕೃಷಿಯೋಗ್ಯವಾದ ಮತ್ತು ದನದ ಮೇವಿಗಾಗಿ ಇರುತ್ತಿದ್ದ ಅರೆ ಬಂಜರು ಭೂಮಿಯನ್ನು ಎಲ್ಲರ ಉಪಯೋಗಕ್ಕೆ ಮೀಸಲಿಡಲಾಗುತ್ತಿತ್ತು. ಸಮುದಾಯದ ಒಡೆತನದ ಸಂದರ್ಭದಲ್ಲಿ ಕೆಲವು ನಿಯಮಗಳನ್ನು ಮೀಸಲಿಡಲಾಗುತ್ತಿತ್ತು. ಹೀಗೆ ಭೂಮಿಯ ಒಡೆತನದ ವಿಂಗಡಣೆಯನ್ನು ಗಮನಿಸಬಹುದಾಗಿದೆ.

ಗ್ರಾಮೀಣ ಅರ್ಥವ್ಯವಸ್ಥೆಯಲ್ಲಿ ಕೃಷಿ ಕಾರ್ಮಿಕರು ಮಹತ್ವದ ಪಾತ್ರ ವಹಿಸಿದ್ದರು. ಇವರು ಧಾರ್ಮಿಕ ಸಂಸ್ಥೆಗಳಾದ ದೇವಾಲಯ, ಮಠಗಳು ಹಾಗೂ ಕೃಷಿಯೇತರ ವರ್ಗದವರು ಹೊಂದಿದ್ದ ಜಮೀನುಗಳಲ್ಲಿ ಕೂಲಿಗಳಾಗಿ ದುಡಿಯುತ್ತಿದ್ದರು. ಬೀಜ ಬಿತ್ತನೆ, ನಾಟಿ, ಗೊಬ್ಬರ ಹಾಕುವುದು, ಕೊಯ್ಲು ಮುಂತಾದ ಕಾರ್ಯಗಳಿಗೆ ಕೂಲಿಗಳನ್ನು ನೇಮಿಸಲಾಗುತ್ತಿತ್ತು. ಸಣ್ಣಪುಟ್ಟ ಕೃಷಿಕರಾಗಿದ್ದ ರೈತರಿಗೂ ಕೂಡ ನಾಟಿ ಹಾಗೂ ಕೊಯ್ಲಿನ ಸಂದರ್ಭದಲ್ಲಿ ಕೂಲಿಗಳ ಸೇವೆ ಅವಶ್ಯಕವಾಗಿತ್ತು. ಆರಂಭದಿಂದಲೂ ಕೃಷಿಕರಲ್ಲದವರು ತಮ್ಮ ಜಮೀನುಗಳನ್ನು ಗುತ್ತಿಗೆಗೆ ಬಿಡುವ ಬದಲು ಕೂಲಿಗಳನ್ನು ನೇಮಿಸಿಕೊಳ್ಳುವುದರ ಮೂಲಕ ಬೆಳೆ ತೆಗೆಯುವುದು ರೂಢಿಯಾಗಿತ್ತು.

ಕೂಲಿ ಕಾರ್ಮಿಕರು ತಮಗಿಷ್ಟ ಬಂದ ಕೃಷಿಭೂಮಿಯಲ್ಲಿ ಕೆಲಸ ಮಾಡುತ್ತಿದ್ದರು. ಇವರನ್ನು ಮನ್ನು ಎಂಬುದಾಗಿ ಕರೆಯಲಾಗುತ್ತಿತ್ತು. ತೋಟಗಳಲ್ಲಿ ಅಡಿಕೆ ಫಸಲನ್ನು ಕುಯ್ಲು ಮಾಡುತ್ತಿದ್ದ ವ್ಯಕ್ತಿ ಗೊನೆಕಾರ ಚೆನ್ನಣ್ಣ ಎಂಬಾತನ ಉಲ್ಲೇಖವಿದೆ(ಸುಧಾಮಣಿ, ೨೦೦೯:೮೮). ಈತನು ಕೂಲಿ ಕೆಲಸವನ್ನು ನಿರ್ವಹಿಸುತ್ತಿದ್ದನು. ಈತನು ಮರದಿಂದ ಮರಕ್ಕೆ ಹಾರಿ ಅಡಿಕೆ ಕುಯ್ಲು ಮಾಡುವ

ಚಾಕಚಕ್ಯತೆಯನ್ನು ಹೊಂದಿದ್ದನು. ಅಪಾಯಕಾರಿ ಕೆಲಸ ನುರಿತ ವ್ಯಕ್ತಿಗಳಿಂದ ಮಾತ್ರ ಸಾಧ್ಯವಿತ್ತು. ಈ ಭಾಗದ ಹಲವೆಡೆಗಳಲ್ಲಿ ಇಂದಿಗೂ ಈ ಗೊನೆಗಾರರಿರುವುದು ಗಮನಾರ್ಹ. ಈ ಮೂಲಕವಾಗಿ ಗ್ರಾಮೀಣ ಆರ್ಥಿಕ ವ್ಯವಸ್ಥೆಯಲ್ಲಿ ಕೂಲಿಗಳು ಅವಶ್ಯಕವಾಗಿತ್ತು. ಭೂಮಾಲೀಕರಂತೆಯೇ ಅವನು ಕಾರ್ಯ ನಿರ್ವಹಿಸಿದರೆ, ಸೇವಕರಂತೆ ಕೂಲಿ ಕಾರ್ಮಿಕರು ಕೆಲಸ ನಿರ್ವಹಿಸಬೇಕಾಗಿತ್ತು.

ವಿಜಯನಗರ ಸಾಮ್ರಾಜ್ಯದ ಕೂಲಿ ಕಾರ್ಮಿಕರ ವ್ಯವಸ್ಥೆಯಂತೆ ವಿಜಯನಗರೋತ್ತರ ಕಾಲದಲ್ಲಿಯೂ ಶೂದ್ರರು, ಗೇಣಿದಾರರು ಅಥವಾ ಕೃಷಿ ಕಾರ್ಮಿಕರು ರಾಷ್ಟ್ರದ ಬೆನ್ನೆಲುಬಾಗಿದ್ದರು. ಈ ದೇಶದ ಅಭ್ಯುದಯವು ಅವರ ಮೇಲೆ ಬಹುಮಟ್ಟಿಗೆ ಅವಲಂಬಿಸಿತ್ತು. ಈ ಮೂಲಕ ಕೃಷಿ ಕಾರ್ಮಿಕ ಸಮಾಜಕ್ಕೆ ಅನ್ನ ನೀಡುವ ಕೆಲಸ ನಿರ್ವಹಿಸುತ್ತಿದ್ದರೆಂದರೆ ತಪ್ಪಾಗಲಾರದು. ಕೃಷಿ ಕಾರ್ಮಿಕರಲ್ಲಿ ಬಹಳಷ್ಟು ಜನ ಮೂಲ ವರ್ಗಕ್ಕೆ ಸೇರಿದವರು. ಉಪಕಸುಬಾಗಿ ಅವರು ನೇಯ್ಗೆ ಮಾಡುತ್ತಿದ್ದರು. ಯಾವುದೇ ನಾಗರಿಕ ಅಥವಾ ಸೈನ್ಯ ಹುದ್ದೆಗಳಿಗೆ ಅವರನ್ನು ಸೇರಿಸುತ್ತಿರಲಿಲ್ಲ. ಆದ್ದರಿಂದ ಅವರಲ್ಲಿ ಅನೇಕರು ಹೆದ್ದಾರಿ ದರೋಡೆಕೋರರಾಗಿರುತ್ತಿದ್ದರು. ಅಂದರೆ ಸಮಾಜದಲ್ಲಿ ಉನ್ನತ ಸ್ಥಾನ ದೊರೆಯದಿದ್ದಾಗ ಈ ರೀತಿಯ ಕಾರ್ಯ ಮಾಡುತ್ತಿದ್ದರೆಂದು ಉದಾರಿಸಬಹುದು.

ಇರ್ಫಾನ್ ಹಬೀಬ್ ಅವರ ಪ್ರಕಾರ; ರೈತರು ಜಮೀನಿನೊಂದಿಗಿನ ಸಂಬಂಧಗಳ ಆಧಾರದ ಮೇಲೆ ಮೂರು ಭಾಗವಾಗಿ ವಿಂಗಡಿಸಿದ್ದಾರೆ. ಅವುಗಳೆಂದರೆ; ಕೃಷಿ ಕಾರ್ಮಿಕರನ್ನು ಸಂಬಳಕ್ಕೆ ಬಲತ್ಕಾರದ ದುಡಿಮೆಗೆ ಉಪಯೋಗಿಸುತ್ತಿದ್ದ ಶ್ರೀಮಂತ ರೈತರು, ಕುಟುಂಬದ ಸದಸ್ಯರನ್ನೇ ಕೃಷಿಯಲ್ಲಿ ತೊಡಗಿಸುತ್ತಿದ್ದ ಮಧ್ಯಮ ರೈತರು ಹಾಗೂ ಕುಟುಂಬದ ನಿರ್ವಹಣೆಗೆ ಸಾಕಾಗುಷ್ಟು ಭೂಮಿಯನ್ನು ಹೊಂದಿರದ ಮತ್ತು ತಾವೇ ದುಡಿಯುತ್ತಿದ್ದ ಬಡ ರೈತರು. ಇವರೊಂದಿಗೆ ಕೃಷಿ ಕೆಲಸಗಳಲ್ಲಿ ತೊಡಗಿದ್ದ ಭೂರಹಿತ ಕೃಷಿ ಕಾರ್ಮಿಕರಾದ ವೃತ್ತಿ ಆಧಾರಿತ ಆಯಾಗಾರರಿದ್ದರು. (ಸುಜ್ಞಾನಮೂರ್ತಿ, ೨೦೧೬:೧೬). ರಾಜ್ಯದ ಭೂಮಿಯು ರಾಜನಿಗೆ ಸೇರಿದ್ದು, ರಾಜ್ಯವನ್ನು ಚಿಕ್ಕ ಚಿಕ್ಕ ಘಟಕಗಳನ್ನಾಗಿಸಿ ವಿಂಗಡಿಸಿ ಹಲವಾರು ಅಧಿಕಾರಿಗಳನ್ನು ನೇಮಿಸುತ್ತಿದ್ದರು. ಗ್ರಾಮ ಮಟ್ಟದಲ್ಲಿ ಗೌಡ, ಶಾನುಭೋಗರಂತಹ ಕೆಲಸವನ್ನು ನೇಮಿಸುತ್ತಿದ್ದರು. ಇವರು ಗ್ರಾಮದ ಜಮೀನಿನ ಮೇಲೆ ನಿಯಂತ್ರಣ ಹೊಂದಿದ್ದರಿಂದ ಅವರು ಗ್ರಾಮದ ಹಲವರಿಗೆ ಗೇಣಿಗೆ ನೀಡಿ ಉಳುಮೆಯಲ್ಲಿ ತೊಡಗುವಂತೆ ಮಾಡುತ್ತಿದ್ದರು. ಇದರಿಂದ ಭೂಮಾಲೀಕ ವರ್ಗದ ಬೆಳವಣಿಗೆಯಾಗಿ ಕೂಲಿ ಕಾರ್ಮಿಕರ ಸಂಖ್ಯೆ ಹೆಚ್ಚಾಯಿತ್ತೆಂದು ಗ್ರಹಿಸಬಹುದಾಗಿದೆ.

ಕೆಳದಿ ನಾಯಕರ ಕಾಲದಲ್ಲಿ ಕೊಂಕಣಿ ಕ್ರಿಶ್ಚಿಯನ್ನರು ಕರ್ನಾಟಕದ ಕರಾವಳಿ ಭಾಗಕ್ಕೆ ಬಂದಾಗ ಇವರು ಹಣಕಾಸು, ಲೇವಾದೇವಿಗಾರ ವ್ಯಾಪಾರ ಮತ್ತು ಕೃಷಿಗಳಲ್ಲಿ ನುರಿತಿದ್ದರು. ಇವರಿಗೆ ಕೃಷಿ ಮಾಡಿ ಜೀವಿಸಲು ನೆಲವನ್ನು ಕೊಟ್ಟರು(ಷೇಕ್ ಅಲಿ, ಸಂ.೩, ೨೦೧೭:೩೪೭). ಈ ಮೂಲಕ ಕೆಳದಿ ನಾಯಕರ ಕಾಲದಲ್ಲಿ ಕೊಂಕಣಿಗಳೆಂಬ ಜನಾಂಗವು ಕೃಷಿಯಲ್ಲಿ ನುರಿತಿರುವುದನ್ನು ಗಮನಿಸಬಹುದು. ಒಂದೇ ಜಾತಿಯವರು ಕೃಷಿ ಮಾಡುತ್ತಿದ್ದರೆಂಬ ಕಲ್ಪನೆಯ ಹೊರತಾಗಿಯೂ ಬೇರೆ ಬೇರೆ ಜಾತಿವಾರು ಕೃಷಿಯಲ್ಲಿ ತೊಡಗಿರುವುದು ಸ್ಪಷ್ಟ. ಇವರೇ ಮುಂದೆ ಕಂಪನಿಯ ಆಳ್ವಿಕೆಯಲ್ಲಿ ಮಧ್ಯವರ್ತಿ ಅಧಿಕಾರಿಗಳಾದರು.

ವಿಜಯನಗರೋತ್ತರ ಕಾಲಾವಧಿಯಲ್ಲಿ ಮಧ್ಯವರ್ತಿಗಳಾಗಿ ಪ್ರಮುಖವಾಗಿ ಗುರುತಿಸಿಕೊಂಡವರು ಸರ್ಕಾರದ ವಿವಿಧ ಹುದ್ದೆಯಲ್ಲಿರುತ್ತಿದ್ದರು. ಇವರು ತಮ್ಮ ಕೆಲಸಗಳಿಗೆ ಪ್ರತಿಫಲವಾಗಿ ಭೂಮಿ, ಸುಂಕ, ಗ್ರಾಮ ಸ್ವಾಮ್ಯಗಳನ್ನು ಅರಸರಿಂದ ದಾನವಾಗಿ ಪಡೆಯುತ್ತಿದ್ದರು. ಅಮಾತ್ಯ, ಮಾಂಡಲಿಕ, ಪಾರುಪತ್ಯಗಾರ, ಸುಂಕದ ಅಧಿಕಾರಿ, ಸುಬೇದಾರ, ಅಠವಣೆ ಅಧಿಕಾರಿ, ಅವಸರದ ಅಧಿಕಾರಿ, ಪಟ್ಟಣಸ್ವಾಮಿ, ಕುಲಕರಣಿ, ಬೊಕ್ಕಸ, ಊಳಿಗದವ, ಉಗ್ರಾಣದವ, ಗೌಡ, ಶ್ಯಾನುಭೋಗ, ಇವರುಗಳು ಅರಸರಿಂದ ಜಮೀನು ಮತ್ತು ಗ್ರಾಮಗಳ ಅಧಿಕಾರವನ್ನು ಪಡೆದು ಅದೇ ಅಧಿಕಾರದಿಂದ ರೈತಾಪಿ ವರ್ಗದ ಮೇಲೆ ಹತೋಟಿ ಸಾಧಿಸಿದ್ದರು.

ಮಧ್ಯಕಾಲೀನೋತ್ತರ ಅವಧಿಯಲ್ಲಿ ಒಡೆಯ ಮತ್ತು ಗೇಣಿದಾರ ಎಂಬ ಎರಡು ವರ್ಗಗಳು ಹಾಗೆಯೇ ಮುಂದುವರಿದವು. ಇದರ ಜೊತೆಗೆ ಜೀತದಾಳುಗಳು ಇದರಾಚೆ ಇರುತ್ತಿದ್ದರು. ವಿಜಯನಗರದ ಪತನದ ನಂತರ ಕರ್ನಾಟಕದುದ್ದಕ್ಕೂ ಪಾಳೆಯ ಪಟ್ಟುಗಳು ಸ್ವಂತಂತ್ರವಾಗಲು ಯತ್ನಿಸಿ ಯಶಸ್ವಿಯಾದವು. ಈ ಅವಧಿಯಲ್ಲಿ ಯಥಾಸ್ಥಿತಿಯೇ ಮುಂದುವರಿಯಿತು. ಚಿತ್ರದುರ್ಗ, ತರೀಕೆರೆ, ಹರಪನಹಳ್ಳಿ, ಸುರಪುರ, ಕೆಳದಿ, ಹಾಗಲವಾಡಿ, ಮಧುಗಿರಿ ಮುಂತಾದ ಪಾಳೆಯಪಟ್ಟುಗಳು ಮುಖ್ಯವಾಹಿನಿಯಲ್ಲಿದ್ದವು. ಮಧ್ಯಕರ್ನಾಟಕದ ಪ್ರದೇಶಗಳ ವ್ಯಾಪ್ತಿಯಿಂದ ನೋಡಿದಾಗ ಭೂಮಾಲೀಕರ ಮತ್ತು ಕೃಷಿ ಕಾರ್ಮಿಕರ ಸಂಬಂಧಗಳು ಹೆಚ್ಚು ಕಡಿಮೆ ಒಂದೇ ರೀತಿಯಾಗಿ ಕಂಡುಬರುತ್ತವೆ. ಹಾಗಲವಾಡಿ, ಶೆಟ್ಟಿಕೆರೆ, ಕಂಡಿಕೆರೆ, ತುರುವಕೆರೆ ಮುಂತಾದ ಪ್ರದೇಶಗಳಲ್ಲಿ ಬ್ರಾಹ್ಮಣವರ್ಗ, ವ್ಯಾಪಾರಿವರ್ಗ ಪ್ರಧಾನವಾಗಿ ಭೂ ಒಡೆಯರಿದ್ದರು. ಗೇಣಿದಾರರ ವರ್ಗವೊಂದು ಈ ಪ್ರದೇಶದಲ್ಲಿ ಪ್ರಬಲವಾಗಿತ್ತು. ವೀರಶೈವರು ಹೆಚ್ಚಿನ ಸಂಖ್ಯೆಯಲ್ಲಿ ಜಮೀನಿನ ಒಡೆಯರಾಗಿದ್ದರು. ಗೇಣಿಗಾಗಿ ಅಥವಾ ಕೂಲಿಗಾಗಿ ದುಡಿಯುತ್ತಿದ್ದ ಕುರುಬ, ಒಕ್ಕಲಿಗರು, ಕೆಳವರ್ಗದ ಜಾತಿಗಳಾಗಿದ್ದರು. ಗೇಣಿದಾರರ ವರ್ಗವಲ್ಲದೆ ಅಸ್ಪೃಶ್ಯ ಜಾತಿಯ ಜೀತದಾಳುಗಳೂ ಇದ್ದರು(ದೇವರಾಜ,೨೦೧೩:೧೮೭).

ಫ್ರಿತ್ರೋದೆಲ್ಲಾವೆಲ್ಲ ತನ್ನ ಪ್ರವಾಸದ ಸಂದರ್ಭದಲ್ಲಿ ಕೂಲಿಯವರನ್ನು ಕುರಿತು ಹೀಗೆ ಬರೆಯುತ್ತಾನೆ; ದಾಸ್ಯ ಪದ್ಧತಿಯು ಆ ಕಾಲದಲ್ಲಿ ಪ್ರಚಲಿತವಿತ್ತು. ಹೆಣ್ಣನ್ನು ಮಾರಾಟ ಮಾಡುವ ಹಾಗೂ ಕೊಂಡುಕೊಳ್ಳುವ ವ್ಯಾಪಾರ ನಡೆಯುತ್ತಿತ್ತು. ಮಧ್ಯಕಾಲೀನ ರಾಜ್ಯಗಳು ಬಹುಪಾಲು ಕೃಷಿಯನ್ನೇ ಪ್ರಧಾನವಾಗಿ ಅವಲಂಬಿಸಿದ್ದವು. ಕೃಷಿಯ ವಿಸ್ತರಣೆ ಆದಂತೆ ಸಮಾಜದ ಆರ್ಥಿಕ ಕ್ಷೇತ್ರವು ಬದಲಾಗುವುದರ ಜೊತೆಗೆ ಅನೇಕ ಸಮುದಾಯಗಳು ಕೃಷಿಯಲ್ಲಿ ತೊಡಗಿಕೊಂಡವು. ರಾಜ್ಯಕ್ಕೆ ಹೆಚ್ಚಿನ ಆದಾಯ ತೆರಿಗೆಗಳಿಂದ ಬರುತ್ತಿದ್ದ ಕಾರಣ ಅದರ ಉತ್ಪಾದನಾ ಪ್ರಮಾಣವನ್ನು ಹೆಚ್ಚಿಸುವುದು ರಾಜನ ಕರ್ತವ್ಯವಾಗಿತ್ತು. ಆ ಮುಖಾಂತರ ಜನ ಸಾಮಾನ್ಯರು ಕೆರೆ ಕಟ್ಟೆಗಳ ನಿರ್ಮಾಣ ಮತ್ತು ದುರಸ್ತಿಗಾಗಿ ದುಡಿದದ್ದು ಈಗ ಇತಿಹಾಸ. ಅಂದು ನಿರ್ಮಾಣವಾದಂತಹ ಅನೇಕ ಕೆರೆ, ಕಟ್ಟೆಗಳು, ದೇವಾಲಯಗಳು, ಸ್ಮಾರಕಗಳ ಶ್ರಮದಲ್ಲಿ ಜನಸಾಮಾನ್ಯರ ಅದರಲ್ಲೂ ದಲಿತರ ಪಾಲು ಗಮನಾರ್ಹ. ಹೀಗೆ ವಿಜಯನಗರೋತ್ತರ ಕಾಲದಲ್ಲಿ ಕೃಷಿಯ ವಿಸ್ತರಣೆಯೇ ಪ್ರಧಾನವಾಗಿ ಕಾಣಿಸಿಕೊಳ್ಳುತ್ತದೆ.

ಜಮೀನ್ದಾರರು ಭೂಮಿಯನ್ನು ಸಾಗುವಳಿ ಮಾಡುವ ಕೃಷಿ ಕಾರ್ಮಿಕರಿಂದ ಪ್ರತಿ ವರ್ಷ ನಿಗದಿ ಮಾಡಿದ ಗೇಣಿಯನ್ನು ಪಡೆದು, ಗೇಣಿ ಹಣದ ಒಂದು ಭಾಗವನ್ನು ಭೂಕಂದಾಯವೆಂದು

ಸರ್ಕಾರಕ್ಕೆ ಕೊಟ್ಟು ಉಳಿದುದನ್ನು ತಾವೇ ಇಟ್ಟುಕೊಳ್ಳುತ್ತಿದ್ದರು. ಅದು ಅವರ ಆದಾಯವನ್ನು ಹೆಚ್ಚಿಸುತ್ತಿತ್ತು. ಈ ಮೂಲಕ ಕರ್ನಾಟಕದ ಒಂದೊಂದು ಭಾಗದಲ್ಲಿ ಒಂದೊಂದು ಜನಾಂಗ ಭೂ ಹಿಡುವಳಿಯ ಹಂಚಿಕೆಯನ್ನು ಹೊಂದಿ ತೆರಿಗೆಯನ್ನು ವಸೂಲಿ ಮಾಡುವ ಕಾರ್ಯವನ್ನು ನಿರ್ವಹಿಸುತ್ತಿತ್ತು.

ಈ ಜಮೀನ್ದಾರಿ ಪದ್ಧತಿಯಲ್ಲಿ ಹೆಚ್ಚಿನ ಭೂಮಿಯನ್ನು ಹೊಂದಿದ ಇವರು ಭೂಮಾಲೀಕರಂತೆ ವರ್ತಿಸುತ್ತಿದ್ದು, ಈ ಭೂಮಾಲೀಕರು ಕೃಷಿ ಕಾರ್ಮಿಕರಿಂದ ತಮಗೆ ಬರಬೇಕಾದ ಗೇಣಿಯ ಬಗ್ಗೆ ಮಾತ್ರ ಆಸಕ್ತಿಯಿತ್ತೇ ವಿನಾ ಸಾಗುವಳಿಯನ್ನು ಸುಧಾರಿಸಲು ಯಾವ ಆಸಕ್ತಿಯೂ ಇರಲಿಲ್ಲ. ಗೇಣಿದಾರನಿಗೆ ಭೂಮಿಯ ಉತ್ಪಾದನೆಯನ್ನು ಹೆಚ್ಚಿಸಲು ಯಾವ ಸಹಾಯವನ್ನು ಮಾಡುತ್ತಿರಲಿಲ್ಲ. ಆದರೂ ಭೂಮಾಲೀಕರು ಸ್ವತಃ ಸಾಗುವಳಿ ಮಾಡದಿದ್ದರೂ ಭೂ ಒಡೆಯರಾಗಿದ್ದರು. ಈ ಮೂಲಕ ಭೂ ಒಡೆಯರಾದ ಅವರು ಭೂಮಿಯನ್ನು ಹೊಂದಿ ಅದನ್ನು ಗೇಣಿಗೆ ನೀಡಿ ಕಂದಾಯವನ್ನು ವಸೂಲಿ ಮಾಡುತ್ತಿದ್ದರು. ಕಂದಾಯ ಸರಿಯಾದ ಕ್ರಮದಲ್ಲಿ ಕೊಡದಿದ್ದರೆ ಅವರ ಜಮೀನುಗಳನ್ನು ಜಪ್ತಿ ಮಾಡುತ್ತಿದ್ದರು. ಈ ಮೂಲಕ ಭೂಮಾಲೀಕರು ಮತ್ತು ಕೃಷಿ ಕಾರ್ಮಿಕರ ಸಂಬಂಧಗಳು ಮಧ್ಯಕಾಲೀನ ಕರ್ನಾಟಕ ಚರಿತ್ರೆಯಲ್ಲಿ ಗಟ್ಟಿಯಾಗಿ ನೆಲೆಯೂರಿದ್ದವು.

ಆದಿಲ್‌ಶಾಹಿಗಳ ಕಾಲದಲ್ಲಿ ಕೃಷಿ ಕೂಲಿಗಾರರು ಹೆಚ್ಚಾಗಿದ್ದು, ಭೂಮಾಲೀಕರು ಕೂಲಿಕಾರರನ್ನು ನೇಮಿಸಿಕೊಂಡು ಅವರಿಗೆ ನಗದಾಗಿಯೋ ಅಥವಾ ವಸ್ತು ರೂಪದಲ್ಲೋ ಕೂಲಿಯನ್ನು ಕೊಡುತ್ತಿದ್ದರು. ಜನರು ಸಾಮಾನ್ಯವಾಗಿ ಸರಕಾರಿ ಜಮೀನುಗಳಲ್ಲಿ ದುಡಿಯುತ್ತಿದ್ದರು. ಗುಲಾಮರನ್ನು ಕೃಷಿ ಕೂಲಿಗಳನ್ನಾಗಿ ನೇಮಿಸಿಕೊಳ್ಳಲಾಗುತ್ತಿತ್ತು. ಸರ್ಕಾರಿ ಜಮೀನುಗಳನ್ನು, ದತ್ತಿ ಜಮೀನುಗಳನ್ನು ಕೂಲಿ ಕೊಟ್ಟು ಬೇಸಾಯ ಮಾಡಿಸಲಾಗುತ್ತಿತ್ತು. ಅವರು ಸಮಾಜದ ಕೆಳಗಿನ ಸ್ತರಕ್ಕೆ ಸೇರಿದವರಾಗಿದ್ದರೂ ದಟ್ಟವಾದ ಕಾಡುಗಳು, ಬೀಳು ಭೂಮಿಗಳನ್ನು ಗುಲಾಮರು ಮತ್ತು ಕೂಲಿಗಳಿಂದ ಉಳುಮೆ ಮಾಡಿಸಲಾಗುತ್ತಿತ್ತು. ಮಧ್ಯಯುಗದಲ್ಲಿ ಗುಲಾಮಗಿರಿ ಚಾಲ್ತಿಯಲ್ಲಿತ್ತು. ದಖ್ಖನ್ನಿನಲ್ಲಿ ಗುಲಾಮರು ಅತ್ಯಂತ ಉನ್ನತವಾದ ಪದವಿಯಿಂದ ಅತ್ಯಂತ ಕೆಳಮಟ್ಟದ ಕೆಲಸಗಳನ್ನು ಮಾಡುವವರೆಗೆ ಎಲ್ಲದರಲ್ಲೂ ತುಂಬಾ ಮುಖ್ಯವಾದ ಪಾತ್ರವನ್ನು ನಿರ್ವಹಿಸುತ್ತಿದ್ದರು(ಷೇಕ್ ಅಲಿ,.ಳ,೨೦೧೮:೩೦೦).

ಕರ್ನಾಟಕದಲ್ಲಿ ಮಧ್ಯಮವರ್ಗದ ಮಧ್ಯವರ್ತಿ ಅಧಿಕಾರಿಗಳ ಜನನವಾಗಲು ಒಂದು ಶತಮಾನಕ್ಕೂ ಅಧಿಕ ಸಮಯವಿಡಿಯಿತು. ಈ ಸೃಷ್ಟಿ ಸಾಧ್ಯವಾಗಲು ಬೇಕಾಗಿದ್ದ ಸಾಮಾಜಿಕ ಆಧಾರಗಳನ್ನು ಇತಿಹಾಸದ ಈ ಘಟ್ಟದಲ್ಲಿ ಸ್ಪಷ್ಟವಾಗಿ ಗುರುತಿಸಬಹುದು. ಈ ಮಧ್ಯವರ್ತಿ ವರ್ತಕರು ಮತ್ತು ಮಧ್ಯವರ್ತಿ ಅಧಿಕಾರಿಗಳು ಶತಮಾನದ ನಂತರ ಮಧ್ಯಮವರ್ಗದ ಮಧ್ಯವರ್ತಿ ಅಧಿಕಾರಿಗಳ ಸೃಷ್ಟಿಗೆ ಕಾರಣರಾದರು. ಕರ್ನಾಟಕದಲ್ಲಿನ ವಸಾಹತುಶಾಹಿ ಆಡಳಿತದ ಮೊದಲ ದಶಕಗಳಲ್ಲಿ ಮಧ್ಯವರ್ತಿ ವರ್ತಕರು ಮತ್ತು ಅಧಿಕಾರಿಗಳನ್ನು ಸೃಷ್ಟಿಸಿದ ದಾರಿಯನ್ನು ಇಲ್ಲಿ ಗಮನಿಸಬಹುದು.

ಕರಾವಳಿ ಕರ್ನಾಟಕದ ಭಾಗದಲ್ಲಿ ವಾಣಿಜ್ಯ ಬೆಳೆಗಳ ಕೃಷಿ ಕಾರ್ಮಿಕರಾಗಿ ಮೋಗೇರ ಜಾತಿಯವರನ್ನು ಉಪಯೋಗಿಸಿಕೊಂಡಿದ್ದರೆಂದು ಡಚ್ ಪ್ರವಾಸಿ ಲಿನ್ಸ್‌ಕೊತನ್ ತನ್ನ ವರದಿಯಲ್ಲಿ

ತಿಳಿಸಿದ್ದಾನೆ. ಇವರು ಗದ್ದೆಗಳಲ್ಲಿ ಉಳುಮೆ ಮಾಡುತ್ತಿದ್ದರೆಂದು ತಿಳಿಸಿದ್ದಾರೆ. ಪೋರ್ಚುಗೀಸರಿಗೆ ಅಗತ್ಯವಿರುವ ವಾಣಿಜ್ಯ ಬೆಳೆಗಳನ್ನು ಈ ಜಾತಿಯವರು ಬೆಳೆದು ಕೊಡುತ್ತಿದ್ದರು. ಕ್ರಿ.ಶ. ೧೬೩೦ರಲ್ಲಿ ಪೋರ್ಚುಗೀಸರು ಗಂಗೊಳ್ಳಿಯನ್ನು ವಶಪಡಿಸಿಕೊಂಡ ನಂತರ ಇಲ್ಲಿ ಕರಿಮೆಣಸು, ಭತ್ತ, ತೆಂಗು ಕೃಷಿ ಹೆಚ್ಚಿಸಲು ಇಚ್ಚಿಸಿದ್ದರೆಂದು ಇವರು ತಿಳಿಸುತ್ತಾರೆ(ಮಾಧವ,೧೯೮೬: ದರ್ಶಸಂ:೫೮). ಈ ಜನಾಂಗದವರು ಕೃಷಿ ಮತ್ತು ಮೀನುಗಾರಿಕೆ ವೃತ್ತಿಯನ್ನು ಅವಲಂಬಿಸಿದ್ದರು. ಆದರೆ ಪೋರ್ಚುಗೀಸರ ಪ್ರಭಾವದಿಂದ ಇವರು ಕ್ರೈಸ್ತಧರ್ಮವನ್ನು ಸ್ವೀಕರಿಸಿದರು. ಇದರಿಂದ ಇತರೆ ಜನಾಂಗದವರು ಇವರು ಕೀಳು ಜಾತಿಯವರೆಂದು ಭಾವಿಸತೊಡಗಿದರು. ಈ ಮೂಲಕ ಕೀಳುಜಾತಿಯವರೆಂದು ಬಿಂಬಿತರಾಗಿದ್ದ ಇವರನ್ನು ಭೂಮಾಲೀಕ ವರ್ಗಗಳು ಪ್ರತಿರೋಧಿಸಿ ಅವರಿಂದ ಹೆಚ್ಚಿನ ಕಂದಾಯವನ್ನು ವಸೂಲಿ ಮಾಡಲಾರಂಭಿಸಿದರು.

ಈ ಮೂಲಕ ಭೂಮಿಯನ್ನು ಕೇಂದ್ರ ಅಂಶವನ್ನಾಗಿ ಮಾಡಿಕೊಂಡು ಭೂಮಾಲೀಕರು ಪ್ರವರ್ಧಮಾನಕ್ಕೆ ಬಂದರು. ದಿನನಿತ್ಯದ ಬದುಕಿನ ವಿಚಾರಗಳಲ್ಲಿ ಮಧ್ಯವರ್ತಿ ಗೇಣಿದಾರರ ಮೂಲಕ ಉಳುಮೆಯನ್ನು ಮಾಡಿಸುತ್ತಿದ್ದರು. ಹೀಗೆ ಕೂಲಿ ಕಾರ್ಮಿಕರನ್ನು ಬಳಸಿಕೊಂಡು ಕೃಷಿ ಮಾಡುತ್ತಿದ್ದರು. ಹೀಗೆ ಸಮಾಜದಲ್ಲಿ ಹಿಂದುಳಿದ ಜಾತಿಯವರು ಕಾಣಿಸಿಕೊಳ್ಳಲಾರಂಭಿಸಿದರು. ಕೃಷಿಯು ಸಂಸ್ಥಾನಗಳ ಮುಖ್ಯ ಕಸುಬಾಗಿದ್ದು, ಬಹುಪಾಲು ಜನತೆ ಕೃಷಿಯನ್ನೇ ಅವಲಂಬಿಸಿದ್ದರು. ಈ ಕ್ಷೇತ್ರದಲ್ಲಿ ಭೂಮಾಲೀಕರು ಮತ್ತು ಶ್ರಮಿಕರು ಮುಖ್ಯವಾಗಿ ಕಾಣಿಸಿಕೊಂಡ ವರ್ಗಗಳು. ಕೂಲಿ ಕಾರ್ಮಿಕರು ಹಣದ ಮತ್ತು ಧಾನ್ಯದ ರೂಪದಲ್ಲಿ ಕೂಲಿಯನ್ನು ಪಡೆಯುತ್ತಿದ್ದರು.

ಪುರಾತನ ಕಾಲದಿಂದಲೂ ನಡೆದುಬಂದ ಹಿಂದೂಧರ್ಮದ ನಾಲ್ಕು ವರ್ಣಗಳಲ್ಲದೇ ಈ ವರ್ಣ ವಿಭಾಗಕ್ಕೆ ಇತರೆ ಧರ್ಮೀಯರಾದ ಜೈನರೂ ಒಡೆಯರ ಕಾಲದಲ್ಲಿ ಪ್ರಜಾವರ್ಗದ ರಾಜಕೀಯ ಧಾರ್ಮಿಕ ಮತ್ತು ವಾಣಿಜ್ಯ ವ್ಯವಹಾರಗಳಲ್ಲಿ ಮಹತ್ವದ ಪಾತ್ರ ವಹಿಸಿದವರಾಗಿದ್ದರು(ಕೃಷ್ಣರಾವ್, ಕೇಶವಭಟ್ಟ, ೧೯೭೦:೯೦). ಒಡೆಯರ ಕಾಲದಲ್ಲಿ ಕರ್ನಾಟಕ ಪ್ರದೇಶಕ್ಕೆ ತಮಿಳು, ತೆಲುಗು, ಪ್ರಾಂತ್ಯಗಳಿಂದ ಹಾಗೂ ಸೌರಾಷ್ಟ್ರಗಳಿಂದ ಹಲವು ಭಾಷಿಕರು ಬಂದು ಸಂಸ್ಥಾನದ ಪ್ರಾಂತ್ಯಗಳಲ್ಲಿ ನೆಲೆಸಿದರು. ತಮಿಳುನಾಡಿನಿಂದ ಬಂದ ಕೃಷಿ ಕಾರ್ಮಿಕರೆಂದರೆ ಪಲ್ಲಿವಾನಲು ಎಂಬ ಜನಾಂಗದವರು ತೋಟಗಳನ್ನು ಬೆಳೆಸುವ ಕಾರ್ಯದಲ್ಲಿ ತೊಡಗಿದ್ದರು. ಮೋಚಿ ಎಂಬ ಪಂಗಡದವರು ಪಾದರಕ್ಷೆಗಳನ್ನು ತಯಾರಿಸುವ ಕೆಲಸದಲ್ಲಿ ನಿರತರಾಗಿದ್ದರು(ಮಹಾದೇವಿ, ೧೯೮೮:೨೦).

ಭೂಮಿಯನ್ನು ಉತ್ತಿ, ಬಿತ್ತಿ ಬೆಳೆ ತೆಗೆಯಲು ಸೃಷ್ಟಿಯಾದವನೇ ಶೂದ್ರ. ಆದರೆ ಹೀಗೆ ಹೇಳಿರುವುದು ಕಂಡುಬಂದರೂ ನಂತರದಲ್ಲಿ ಈ ಕಾಯಕವನ್ನು ಕೈಗೊಂಡವರನ್ನು ಒಕ್ಕಲಿಗರೆಂದು ಗುರುತಿಸಿರುವುದು ಸಂಸ್ಥಾನದ ಸಾಮಾಜಿಕ ರಚನೆಯಲ್ಲಿ ಕಂಡುಬರುತ್ತದೆ. ಜೀವನದ ಉಳಿವಿಗಾಗಿ ಕೈಗೊಂಡ ಕೆಲಸದ ಆಧಾರದ ಮೇಲೆ ಸೃಷ್ಟಿಸಿಕೊಂಡ ಜಾತಿಗಳು ಮುಂದಿನಂತೆ ಇದ್ದವು. ಪಾಂಚಾಲರು, ಅಗಸ, ಜೇಡ, ಚಿಪ್ಪಿಗ, ತೆಲ್ಲಿಗ, ಕುಂಬಾರ ಮೋಚಿ, ಮೇದ, ಗೊಲ್ಲ, ಉಪ್ಪಾರ,

ಹಾಗೂ ಹೊಲೆಯ–ಮಾದಿಗರು ಇವರೆಲ್ಲರೂ ಒಂದಲ್ಲ ಒಂದು ರೀತಿಯಲ್ಲಿ ಕೂಲಿ ಕಾರ್ಮಿಕರಾಗಿ ಕರಕುಶಲ ಕಸುಬುದಾರರಾಗಿ ಮೈಸೂರು ಸಂಸ್ಥಾನದಲ್ಲಿ ಗುರುತಿಸಿಕೊಂಡಿದ್ದಾರೆ(ಸೋಸಲೆ ೨೦೦೪:೨೬೭). ಈ ಮೂಲಕ ಕೂಲಿ ಕಾರ್ಮಿಕರು ಮತ್ತು ಕಸುಬುದಾರ ವರ್ಗಗಳು ತಮ್ಮ ಜೀವನ ನಿರ್ವಹಿಸುತ್ತಿದ್ದರು.

ಮಧ್ಯಕಾಲೀನ ಕರ್ನಾಟಕದಲ್ಲಿ ಕಂಡುಬಂದ ಭೂಮಾಲೀಕ ಮತ್ತು ಕೃಷಿಕರ ಸಂಬಂಧವನ್ನು ಸಂಪೂರ್ಣವಾಗಿ ಬದಲಾಯಿಸಿದ ಕೀರ್ತಿ ಟಿಪ್ಪು ಸುಲ್ತಾನನಿಗೆ ಸಲ್ಲುತ್ತದೆ. ಇದುವರೆಗೂ ಭೂ ಮಾಲೀಕರಾಗಿ ಗುರುತಿಸಿಕೊಂಡು ಹುದ್ದೆಯನ್ನು ಕಿತ್ತೊಗೆದು ರೈತರು ನೇರವಾಗಿ ಸರ್ಕಾರದ ಜೊತೆ ಸಂಬಂಧ ಹೊಂದುವಂತೆ ಮಾಡಿದನು.

ಟಿಪ್ಪು ಸುಲ್ತಾನ್ ಭೂಮಾಲೀಕ ಮಧ್ಯವರ್ತಿಗಳನ್ನು ಕಿತ್ತೊಗೆದು ಕೃಷಿ ಕಾರ್ಮಿಕರಿಗೆ ನೇರವಾಗಿ ಸರ್ಕಾರದ ಜೊತೆ ಸಂಬಂಧ ಬೆಳೆಸುವಂತೆ ಮಾಡಿದನು. ಇಡೀ ರಾಜ್ಯ ಒಡೆತನದ ಭೂಮಿಯನ್ನು 'ಗೇಣಿಗೆ ರೈತರಿಗೆ ನೇರವಾಗಿ ದೊರೆಯುವಂತೆ ಮಾಡಿದ್ದನು. ಕೃಷಿ ಕಾರ್ಮಿಕರಿಗೆ ಸಲಕರಣೆಗಳನ್ನು ತಪಾಸಣೆ ನಡೆಸಿ ಸಂಕಷ್ಟದಲ್ಲಿರುವ ರೈತರಿಗೆ ಉಳುಮೆ ಮಾಡಲು ಪ್ರೋತ್ಸಾಹಿಸುವ ಸಲುವಾಗಿ ನೇಗಿಲುಗಳನ್ನು ಕೊಳ್ಳಲು ತಕ್ಕಾವಿ ಸಾಲಗಳನ್ನು ಮಂಜೂರು ಮಾಡಿದನು. ಪ್ರತಿಯೊಂದು ನೇಗಿಲ ಸಾಲದ ಮೇಲೆ ವಾರ್ಷಿಕವಾಗಿ ಶೇ.೩–೪ರಷ್ಟು ಬಡ್ಡಿಯನ್ನು ವಸೂಲಿ ಮಾಡಲಾಯಿತು. ಅಷ್ಟೇ ಅಲ್ಲದೆ ಸಾಲ ಮರುಪಾವತಿಯನ್ನು ಒಂದು ಅಥವಾ ಎರಡು ವರ್ಷಗಳಲ್ಲಿ ಹಿಂದಿರುಗಿಸುವಂತಹ ಸೂಚನೆ ಹೊರಡಿಸಿದನು. ಟಿಪ್ಪು ಸಂಕಷ್ಟದಲ್ಲಿರುವ ರೈತರಿಗೆ ಸಾಲ ಸೌಲಭ್ಯಗಳನ್ನು ನೀಡುವುದರ ಜೊತೆಗೆ ತನ್ನ ಸಂಸ್ಥಾನದ ಅಧೀನ ಭೂಮಿಯನ್ನು ನೀಡಿ ಕೃಷಿ ಚಟುವಟಿಕೆಗಳಲ್ಲಿ ತೊಡಗಲು ನೇರವಾದನು(ಚಂದ್ರಶೇಖರ, ರಾವ್, ೨೦೧೬:೭೭). ಈ ಮೂಲಕ ಪ್ರಾಚೀನ ಕಾಲದಿಂದಲೂ ಅಸ್ತಿತ್ವದಲ್ಲಿದ್ದ ಭೂಮಾಲೀಕವರ್ಗವನ್ನು ನಿಯಂತ್ರಿಸಿದ್ದರಿಂದ ರಾಜ್ಯದ ಜೊತೆ ರೈತರ ಸಂಪರ್ಕ ಸಾಧ್ಯ ಎಂಬ ಕಾರಣಕ್ಕಾಗಿಯೇ ಇವರನ್ನು ನಿಯಂತ್ರಿಸಿದ ಉತ್ತರ ಕರ್ನಾಟಕ ಭಾಗದಲ್ಲಿ ಆದಿಲ್‌ಶಾಹಿಗಳ ನೇತೃತ್ವದಲ್ಲಿ ಬೆಳೆದ ದೇಶಗತ್ತಿಗಳೆಂಬ ಭೂ ಮಾಲೀಕರು ರೈತರಿಗೆ ಅಪಾರ ಶೋಷಣೆಗೆ ಒಳಪಡಿಸುತ್ತಿದ್ದರಿಂದ ಆದ್ದರಿಂದ ಉತ್ತರ ಕರ್ನಾಟಕ ಭಾಗದಿಂದ ಈ ಭೂಮಾಲೀಕವರ್ಗದ ಅಧಿಕಾರವನ್ನು ಕಿತ್ತೊಗೆದರು. ಟಿಪ್ಪು ಸುಲ್ತಾನ್ ಭೂಮಾಲೀಕ ಜಮೀನ್ದಾರರ ವರ್ಗಗಳನ್ನು ನಿರ್ಮೂಲನೆ ಮಾಡಲಾರಂಭಿಸಿದಾಗ ಟಿಪ್ಪು ಮರಣ ಹೊಂದಿದ ತರುವಾಯ ಜಮೀನ್ದಾರರ ವರ್ಗಗಳು ಪುನಃ ತಮ್ಮ ಸ್ಥಾನವನ್ನು ಭದ್ರಪಡಿಸಿಕೊಂಡವು. ಬ್ರಿಟಿಶರು ಸಹ ಭೂಮಾಲೀಕವರ್ಗಗಳ ಬೆಳವಣಿಗೆಗೆ ಅವಕಾಶ ನೀಡಿದರು.

ವಸಾಹತು ಕರ್ನಾಟಕದಲ್ಲಿಯ ಈ ಭೂಮಾಲೀಕ ಮಧ್ಯಮವರ್ಗದ ಮಧ್ಯವರ್ತಿ ಅಧಿಕಾರಿಗಳು ಕಂಡುಬರುತ್ತಾರೆ. ಉತ್ತರ ಕರ್ನಾಟಕದ ಭಾಗದಲ್ಲಿ ವಸಾಹತು ಕಾಲದಲ್ಲಿ ಕಂಡುಬರುವ ದೇಸಗತ್ತಿಗಳೆಂಬ ಭೂಮಾಲೀಕ ವರ್ಗವಿತ್ತು. ಈ ವರ್ಗವು ಬ್ರಿಟಿಶರ ಕೈಗೊಂಬೆಗಳಾಗಿ ಇನಾಂ ಭೂಮಿಯನ್ನು ಪಡೆದು ಕೃಷಿ ಕೂಲಿಕಾರ್ಮಿಕರ ಮೂಲಕ ತಮ್ಮ ಕಾರ್ಯವನ್ನು ನಿರ್ವಹಿಸಿಕೊಳ್ಳುತ್ತಿದ್ದರು. ಕಿತ್ತೂರಿನ

ದೇಸಾಯಿಗಳ ಆಳ್ವಿಕೆಯಲ್ಲಿ ಕುಲಕರ್ಣಿಕರೆಂಬ ಭೂಮಾಲೀಕ ಮಧ್ಯಮವರ್ತಿ ವರ್ಗವಿದ್ದು, ಈ ವರ್ಗಗಳು ಅಂದಿನ ರೈತರ ಮೇಲೆ ಶೋಷಣೆಗಳನ್ನು ನಡೆಸುತ್ತಿರುವುದು ಕಂಡುಬರುತ್ತದೆ. ಪ್ರಾಚೀನ ಕಾಲದಿಂದಲೂ ದಾನ ಪ್ರಕ್ರಿಯೆ ಎಂದು ಆರಂಭವಾಯಿತೋ ಅಂದಿನಿಂದ ಈ ಭೂಮಾಲೀಕರು ಮತ್ತು ಮಧ್ಯಮವರ್ತಿ ವರ್ಗಗಳು ತಮ್ಮ ಅಸ್ತಿತ್ವವನ್ನು ಚರಿತ್ರೆಯಲ್ಲಿ ಗುರುತಿಸಿಕೊಂಡಿವೆ. ಆದ್ದರಿಂದ ಕೃಷಿ ಕೂಲಿಕಾರ್ಮಿಕ ಸ್ಥಿತಿಯು ಚಿಂತಾಜನಕವಾಗಿದೆ. ಬ್ರಿಟಿಶರು ಭಾರತವನ್ನು ವಸಾಹತುವನ್ನಾಗಿ ಮಾಡಿಕೊಳ್ಳುವುದಕ್ಕೆ ಬಂದಂಥ ಸಂದರ್ಭದಲ್ಲಿ ಭಾರತದಲ್ಲಿದ್ದ ಊಳಿಗಮಾನ್ಯತೆಯು ಅವರ ಬೆಳವಣಿಗೆಗೆ ಪೂರಕವಾಗಿದೆ.

**೪.೬. ಬಿಟ್ಟಿಸೇವೆ**

ತೆರಿಗೆಯ ಬದಲಾಗಿ ಪುಕ್ಕಟೆ ಸೇವೆಯನ್ನು ಸಲ್ಲಿಸುವ ಪದ್ಧತಿಯು ಪ್ರಾಚೀನ ಕಾಲದಿಂದಲೂ ಇತ್ತು. ಕೃಷಿ ಕಾರ್ಮಿಕರನ್ನು ಹಾಗೂ ಕುಶಲಕರ್ಮಿಗಳಿಗೆ ಸಂಬಳ ಕೊಡದೆ ದುಡಿಸುವ ಬಲಾತ್ಕಾರದ ದುಡಿಮೆಯು ವಿಜಯನಗರೋತ್ತರ ಕಾಲದ ಕರ್ನಾಟಕದ ಚರಿತ್ರೆಯಲ್ಲಿ ಕಂಡುಬರುತ್ತದೆ. ಕೃಷಿ ಕಾರ್ಮಿಕರ ದುಡಿಮೆಯನ್ನೇ ತೆರಿಗೆಯನ್ನಾಗಿ ಪರಿಗಣಿಸಲಾಗುತ್ತಿತ್ತು(ರೈ, ೨೦೧೭:೩೨). ಅಂದಿನ ಸಂದರ್ಭದ ಸಾಮಾಜಿಕ ಆರ್ಥಿಕ ಕೆಲಸ ಕಾರ್ಯಗಳಿಗೆ ಈ ಕಾರ್ಮಿಕರನ್ನು ಬಳಸಿಕೊಳ್ಳಲಾಗುತ್ತಿತ್ತು. ಈ ವಿಧಾನವು ತೆರಿಗೆಯನ್ನು ಪಾವತಿಸುವ ಬದಲು ಅಂದಿನ ಶೋಷಣೆಯ ಸ್ವರೂಪವನ್ನು ಸೂಚಿಸುತ್ತದೆ.

ಆರ್.ಎಸ್.ಶರ್ಮ ಅವರ ಪ್ರಕಾರ ಮಾನವ ಶಕ್ತಿಯ ಅಭಾವವು ಬಲಾತ್ಕಾರದ ದುಡಿಮೆಯ ಪೂರ್ವಕಲ್ಪಿತ ಸ್ಥಿತಿಯಾಗಿರುತ್ತದೆ. ಬಲಾತ್ಕಾರದ ದುಡಿಮೆಯನ್ನು ಹೇರುವ ಹಕ್ಕು ಎಲ್ಲ ಭೂಮಾಲೀಕರು ದಾನವೊಂದಿಗೆ ಪಡೆದುಕೊಳ್ಳುತ್ತಿದ್ದರು. ಗುಪ್ತರ ಕಾಲದಲ್ಲಿ ವಿಷ್ಟಿ ಎಂಬ ಬಲವಂತದ ದುಡಿಮೆ ಮತ್ತಿತರ ತೆರಿಗೆಗಳಿಂದ ರೈತರ ಸ್ಥಿತಿ ಚಿಂತಾಜನಕವಾಗಿತ್ತು. ಗುಪ್ತರು ಎಲ್ಲ ವರ್ಗದ ರೈತರನ್ನು ಎಲ್ಲ ಕಾರ್ಯಗಳಿಗೂ ಬಲವಂತದ ದುಡಿಮೆ ಮಾಡಿಸಿಕೊಳ್ಳುತ್ತಿದ್ದರು. ವಿಜಯನಗರೋತ್ತರ ಕಾಲದಲ್ಲಿ ಅರಮನೆಯಲ್ಲಿ ಬಿಟ್ಟಿ ದುಡಿಯುತ್ತಿದ್ದವರ ಬಗ್ಗೆ ವಿವರವಿದೆ. ಗ್ರಾಮದ ಮಾದಿಗರು ಖಾಸ ಕುದುರೆಗಳಿಗೆ ಒಂದು ದಿನಕ್ಕೆ ಹತ್ತು ಹೊರೆ ಪ್ರಕಾರ ಹಸಿ ಹುಲ್ಲನ್ನು ಸರದಿ ಮೇಲೆ ತರಬೇಕು(ಪುಟ್ಟಣ್ಣ, ೧೯೭೭:೬೨). ಈ ಮೂಲಕ ಬಿಟ್ಟಿಸೇವೆಯಲ್ಲಿ ಇವರು ಗುರುತಿಸಿಕೊಂಡರು. ಅವರ ಸರದಿ ಬಂದಾಗ ಗ್ರಾಮಕ್ಕೆ ಬಿಟ್ಟಿಸೇವೆ ಮಾಡಬೇಕು.

ಸದಾಶಿವರಾಯ ವಿದ್ಯಾನಗರದಲ್ಲಿ ಅಳುತ್ತಿದ್ದಾಗ ರಾಜನಿಯೋಗದ ನಾಯಿಂದರಾದ ಭದ್ರೋಜ, ತಿಮ್ಮೋಜ, ಕೊಂಡೋಜ ಮತ್ತಿತರರಿಗೆ ಕಾಣಿಕೆ, ಕಡಾಯ, ಬಿಟ್ಟಿ, ಬಿರಾಡ ಮುಂತಾದ ತೆರಿಗೆಗಳಿಂದ ವಿನಾಯಿತಿ ನೀಡುತ್ತಾನೆ. ಕೊಟ್ಟೂರು ಸೀಮೆಯ ಬಾಗುಳಿಯ ನಾಯಿಂದರಿಗೂ ಈ ತೆರಿಗೆಗಳಿಂದ ವಿನಾಯಿತಿ ನೀಡಿದ ಉಲ್ಲೇಖವಿದೆ(ಕ.ವಿ.ವಿ. ಶಾ.ಸಂ. ಹ:೧೮೫).

ಹಳ್ಳಿಯಲ್ಲಿ ಕಾರ್ಯ ನಿರ್ವಹಿಸುವ ಪ್ರತಿಯೊಬ್ಬರು ಈ ಬಿಟ್ಟಿಸೇವೆಯನ್ನು ನಿರ್ವಹಿಸಬೇಕು. ಬಡಗಿ, ಕಮ್ಮಾರ, ಮಾದಿಗ, ಕಂಚುಗಾರ ಪ್ರತಿಯೊಬ್ಬರು ಅರಸರ ಅವಶ್ಯಕತೆಗೆ ತಕ್ಕಂತೆ ಕೆಲಸ ಕಾರ್ಯಗಳನ್ನು ಉಚಿತ ಸೇವೆಯಾಗಿ ನೀಡಬೇಕಾಗಿತ್ತು. ಪ್ರಾಚೀನ ಕಾಲದಿಂದಲೂ ಬ್ರಿಟಿಶರ

ಆಳ್ವಿಕೆಯ ಕಾಲದವರೆಗೂ ಪ್ರತಿಯೊಂದು ಹಂತದಲ್ಲಿಯೂ ಈ ಬಿಟ್ಟಿಸೇವೆಯು ಮುಂದುವರಿದಿದೆ. ಬ್ರಿಟಿಶರು ಇಲ್ಲಿನ ಜನರನ್ನು ತಮ್ಮ ಅಭಿವೃದ್ಧಿಗೆ ಬಳಸಿಕೊಂಡರು. ಇಲ್ಲಿನ ರಸ್ತೆ ಮಾರ್ಗಗಳನ್ನು ಕಟ್ಟಡಗಳ ನಿರ್ಮಾಣ ಅವರ ಕಛೇರಿಯ ಕೆಲಸಕ್ಕೆ ಇಲ್ಲಿನ ಜನರನ್ನು ಬಳಸಿಕೊಂಡಿದ್ದು, ನಿಗದಿತ ಕೂಲಿಯನ್ನು ನೀಡಿದರು. ಕೆಲವೊಂದು ವೇಳೆ ಬಿಟ್ಟಿಗೆ ಅವರು ಕಾರ್ಯ ನಿರ್ವಹಿಸಬೇಕಿತ್ತು.

ವಿಜಯನಗರೋತ್ತರ ಶೃಂಗೇರಿ ಮಠದ ಕಡತಗಳಲ್ಲಿ ಕೆಳವರ್ಗದ ಮಹಿಳೆಯರು ಮಠದಲ್ಲಿ ದಾಸ್ಯ ವೃತ್ತಿಯ ಕೆಲಸ ಮಾಡುತ್ತಿದ್ದರು. ಶೂದ್ರ ಕಂದಾಚಾರಕ್ಕೆ ಎಂಬ ಶೀರ್ಷಿಕೆ ಮಠದಲ್ಲಿ ಚಾಕರಿ ಮಾಡುವ ಹೆಣ್ಣುಮಗಳಿಗೂ ಸಂದಾಯವಾಗುತ್ತಿತ್ತು. ಅನಾಥ ಮತ್ತು ಕೆಟ್ಟ ಹೆಣ್ಣುಗಳನ್ನು ಮಠದಲ್ಲಿ ದಾಸ್ಯ ವೃತ್ತಿಗೆ ನೇಮಕ ಮಾಡಿಕೊಳ್ಳಲಾಗುತ್ತಿತ್ತು. ಕೆಟ್ಟ ಹೆಣ್ಣುಗಳನ್ನು ಭೂಮಿಯ ಮಾಲೀಕರು ಮಠದ ಚಾವಡಿಯಿಂದ ಖರೀದಿಸಿ ಮನೆಯ ಹೊರಗೆಲಸಕ್ಕಾಗಿ ಇಟ್ಟುಕೊಳ್ಳುತ್ತಿದ್ದರೆಂದು ತಿಳಿಯುತ್ತದೆ(ಕಲಬುರ್ಗಿ, ೧೯೯೪:೨೪೭).

ಹಳ್ಳಿಯ ಜನರು ದೇಸಾಯಿಗಳಿಗೆ ಉಪಯುಕ್ತರಾಗುವಂತಿರಬೇಕೆಂಬ ಪೂರ್ವನಿರ್ಧರಿತ ನಿಯಮವಿತ್ತು. ಇದಕ್ಕೆ ಕಾರಣ ತಲ್ಲೂರಿನ ಸುತ್ತಮುತ್ತಲಿದ್ದ ರೈತರು ಹತ್ತು ಹಲವು ವಿಧದಲ್ಲಿ ದೇಸಾಯಿಗಳ ಮೇಲೆ ಅವಲಂಬಿತರಾಗಿದ್ದರು. ಅವರ ಹಸುಗಳು ದೇಸಾಯಿಯ ಕಾಡಿನಲ್ಲಿ ಮೇಯಿಸಬೇಕಿತ್ತು. ಉರುವಲನ್ನು ಮರಮುಟ್ಟುಗಳನ್ನು ಇದೇ ಕಾಡಿನಿಂದ ಪಡೆಯಬೇಕಿತ್ತು. ನೀರನ್ನು ಇಲ್ಲಿಂದಲೇ ತೆಗೆದುಕೊಳ್ಳುತ್ತಿದ್ದರು. ದೇಸಾಯಿಗಳ ವಿರುದ್ಧ ದನಿಯೆತ್ತುವ ಧೈರ್ಯ ತೋರಿದರೆ ಈ ಸವಲತ್ತುಗಳಿಗೆಲ್ಲ ಕೊಕ್ಕೆ ಬೀಳುತ್ತಿತ್ತು. ಹರಾಜಿನ ಮುಖಾಂತರ ಭೂಮಿಯನ್ನು ಐದು ವರ್ಷದ ವ್ಯವಸಾಯಕ್ಕೆ ರೈತರಿಗೆ ಗುತ್ತಿಗೆ ನೀಡಿದ ನಂತರ ಈ ಬಾಡಿಗೆದಾರರು ದೇಸಾಯಿಗಳಿಗೆ ಬಿಟ್ಟಿ(ಕೊರ್ವಿ) ಸಲ್ಲಿಸಬೇಕಿತ್ತು. ಸಲ್ಲಿಸದಿದ್ದಲ್ಲಿ ಪ್ರತಿ ವರುಷದ ಕಟಾವಿನ ಸಮಯದಲ್ಲಿ ೨೦ ರೂಪಾಯಿಗಳನ್ನು ನೀಡಬೇಕಿತ್ತು(ಸಾಕಿ.೧, ೧೯೯೮:೫೫,೫೬).

ತಲ್ಲೂರಿನ ಪಂಚಾಯಿತಿಯನ್ನು ಉಚಿತ ಶ್ರಮದಿಂದ ಕಟ್ಟಿದ್ದು, ರೈತ ಕಾರ್ಮಿಕರು ಕಟ್ಟಲು ಬೇಕಾದ ಮರದ ದಿಮ್ಮಿಗಳನ್ನು ದೂರದ ಉತ್ತರ ಕನ್ನಡ ಜಿಲ್ಲೆಯ ಕಾಡುಗಳಿಂದಲೂ ಹೊತ್ತು ತಂದಿದ್ದರು. ತಲ್ಲೂರಿನಲ್ಲಿ ಎಂಟು ಹೊಲೆಯರ ಕುಟುಂಬಗಳಿದ್ದವು. ದೇಸಗತ್ತಿಗಳಿಗೆ ಅವರು ಮಾಡುವ ಸೇವೆಗೆ ಊರಿನ ಜನರು ಹಣ ಪಾವತಿಸಬೇಕಿತ್ತು. ಈ ಮೂಲಕ ವಿಜಯನಗರೋತ್ತರ ಕಾಲದಲ್ಲಿ ಉತ್ತರ ಕರ್ನಾಟಕ ಭಾಗದಲ್ಲಿ ಬಿಟ್ಟಿಸೇವೆಯ ಪರಿಕಲ್ಪನೆಯು ಹೆಚ್ಚಾಗಿ ಕಂಡುಬರುತ್ತದೆ. ಮರಾಠರು, ಮೊಗಲರು ಮತ್ತು ಆದಿಲ್‌ಶಾಹಿಗಳು ಈ ಭಾಗದಲ್ಲಿ ಆಳ್ವಿಕೆ ಮಾಡಿದ್ದು, ಬಿಟ್ಟಿಸೇವೆಯ ಪರಿಕಲ್ಪನೆಯು ಗಾಢವಾಗಿ ಬೆಳೆದುಬಿಟ್ಟಿದೆ.

ದೇಸಗತ್ತಿಗಳು ಕರ್ನಾಟಕದ ರಾಜಕೀಯದ ವಸಾಹತ್ತೋತ್ತರ ಕಾಲದಲ್ಲಿ ಹೆಚ್ಚಾಗಿ ಗುರುತಿಸಿಕೊಳ್ಳುತ್ತಾರೆ. ಸಾಮಾನ್ಯ ಜನರನ್ನು ಶೋಷಿಸುವ ಪರಿಕಲ್ಪನೆಯನ್ನು ಹುಟ್ಟುಹಾಕಿದರು. ದೇಸಾಯಿ ಮತ್ತು ದೇಸಗತ್ತಿ ಸಮುದಾಯಗಳು ಯುರೋಪಿಯನ್ನರ ಪರ ಕೆಲಸ ಕಾರ್ಯಗಳನ್ನು ನಿರ್ವಹಿಸುತ್ತಾ ಆದಿಲ್‌ಷಾಹಿ ಸಂಸ್ಥಾನದ ನಾಶಕ್ಕೂ ಕಾರಣರಾದರು.

ವಿಜಯನಗರೋತ್ತರ ಕಾಲದಲ್ಲಿ ಮೈಸೂರು ಸಂಸ್ಥಾನದ ಎಲ್ಲ ಭಾಗಗಳಲ್ಲಿ ಕಂಡುಬರುವವರು ಚರ್ಮದ ಕೆಲಸ ಮಾಡುವವರು. ಹಾಗೆಯೇ ಜೀವನೋಪಾಯಕ್ಕಾಗಿ ಕೃಷಿ ಕೂಲಿಕಾರರಾಗಿ, ಬೇಸಾಯಗಾರರಾಗಿ, ಜೀತದಾರರಾಗಿ ಸಂಸ್ಥಾನದಲ್ಲಿ ಗುರುತಿಸಿಕೊಂಡಿದ್ದರು(ಸೋಸಲೆ,೨೦೦೪:೨೬೮). ಈ ಮೂಲಕ ವಿಜಯನಗರೋತ್ತರ ಕಾಲದಲ್ಲಿ ಎಲ್ಲ ಭಾಗಗಳಲ್ಲಿ ಇವರು ಕಂಡುಬರುತ್ತಿದ್ದು, ಅರಮನೆಯ ಕೆಲಸಕ್ಕೆ ಮತ್ತು ಕೃಷಿ ಭೂಮಿಯ ನಿರ್ವಹಣೆಗೆ ಈ ಜನಾಂಗದವರನ್ನು ಬಿಟ್ಟಿಸೇವೆಗೆ ಪ್ರಾಚೀನ ಕಾಲದಿಂದಲೂ ಹಿಂದುಳಿದ ಸಮುದಾಯಗಳನ್ನು ಕೃಷಿ ಕೆಲಸಕ್ಕೆ ಬಳಸಿಕೊಂಡರು. ನಂತರ ಇವರ ಸ್ಥಾನವನ್ನು ಒಕ್ಕಲಿಗರು ಅವಲಂಬಿಸಿದರು. ಪೋರ್ಚುಗೀಸರು ವಿಜಯನಗರ ಮತ್ತು ವಿಜಯನಗರೋತ್ತರ ಕಾಲದಲ್ಲಿ ಇಲ್ಲಿ ತಮ್ಮ ಅಸ್ತಿತ್ವ ಕಂಡುಕೊಂಡಿದ್ದರು. ರಾಬಟ್ ಸಿವೆಲ್ ಪ್ರಕಾರ ಗವರ್ನರ್ ಅನ್ಫಾನ್ಸೋ ಡಿಸೋಜಾ ಭಟ್ಕಳದ ರಾಣಿಯ ಪ್ರಾಂತ್ಯದ ಮೇಲೆ ಪೋರ್ಚುಗಲ್ ರಾಜನಿಗೆ ನೀಡಬೇಕಾದ ಕಪ್ಪಕಾಣಿಕೆಯನ್ನು ನೀಡದೆ ಬಾಕಿ ಇಟ್ಟಿರುವುದರಿಂದ ಆ ಪ್ರಾಂತ್ಯವನ್ನು ಸಂಪೂರ್ಣವಾಗಿ ಕತ್ತಿನ ಅಲಗು ಮತ್ತು ಕೆನ್ನಾಲಿಗೆ ಆಹುತಿ ಆಗುವ ಹಾಗೆ ಬೆಂಕಿಹಚ್ಚಿ ಸುಡಲಾಯಿತು(ರಾಬಟ್ ಸಿವೆಲ್., ೧೯೮೪:೧೮೫). ಈ ಮೂಲಕ ಪೋರ್ಚಗೀಸರು ದೇಶಿಯ ಸಂಸ್ಥಾನಗಳು ತೆರಿಗೆ ಕೊಡುವುದನ್ನು ನಿಲ್ಲಿಸಿದಾಗ ಸಾಮಾನ್ಯ ಜನರನ್ನು ಎದುರಿಸುವ ಮೂಲಕ ಅವರನ್ನು ಒಪ್ಪಂದಕ್ಕೆ ಸಹಿ ಹಾಕುವಂತೆ ಮಾಡುತ್ತಿದ್ದರು.

ಈ ಮೂಲಕ ವಿಜಯನಗರೋತ್ತರ ಕಾಲಾವಧಿಯಲ್ಲಿ ಜನಸಾಮಾನ್ಯರು ರಾಜ್ಯಕ್ಕೆ ಸಲ್ಲಿಸಬೇಕಾದ ತೆರಿಗೆಗಳಲ್ಲಿ ಬಿಟ್ಟಿಯು ಒಂದು. ರಾಜನು ತನಗೆ ಇಷ್ಟ ಬಂದಾಗ ತನ್ನ ಅಧೀನದಲ್ಲಿರುವ ಯಾರನ್ನೇ ಆಗಲಿ ಪ್ರತಿಫಲವಿಲ್ಲದೇ ಕೆಲಸ ಮಾಡುವಂತೆ ಆಜ್ಞೆ ಮಾಡಬಹುದಾಗಿತ್ತು. ರಾಜನು ದೇಶದಲ್ಲಿ ಸಂಚರಿಸುತ್ತಿರುವಾಗ ಅವನ ಆನೆ, ಕುದುರೆಗಳಿಗೆ ಹುಲ್ಲನ್ನು ಕೊಯ್ದು ಹಾಕುವುದು, ಆಯುದಾದಿಗಳನ್ನು ಹೊರುವುದು, ಗಾಯಗೊಂಡವರನ್ನು ಹೊತ್ತು ತರುವುದು ಇವೆಲ್ಲ ಬಿಟ್ಟಿ ಕೆಲಸಗಳೇ ಆಗಿದ್ದವು. ಪ್ರಾಚೀನ ಕಾಲದಿಂದ ಈ ರೀತಿಯ ಕೆಲಸಗಳು ಭಾರತದಲ್ಲಿ ಅಸ್ತಿತ್ವದಲ್ಲಿದ್ದವು.

ಅನಾವೃಷ್ಟಿಯಿಂದಾಗಲಿ ಬೇರೆ ಯಾವುದೇ ಅನಿರೀಕ್ಷಿತ ವಿಪತ್ತಿನಿಂದಾಗಲಿ ಬೆಳೆ ಸಾಕಷ್ಟು ಬೆಳೆಯದ ಕಾಲದಲ್ಲಿ ಸಂಕಟಗ್ರಸ್ತರಾದ ರೈತರಿಗೆ ಕೆಲವಾರು ಸೌಲಭ್ಯಗಳು ಲಭಿಸುತ್ತಿದ್ದವು. ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಸಂಭವಿಸಿದ ವಿಪತ್ತಿನಿಂದ ಕಂಗೆಟ್ಟ ರೈತರು ಒಡೆಯರ ಬಳಿ ಹೋಗಿಬಂದು ನಿಶ್ಚಿತವಾದ ನಗದು ಕಂದಾಯವನ್ನು ಸಲ್ಲಿಸಲು ತಮ್ಮ ಕೈಯಲ್ಲಾಗುವುದಿಲ್ಲವೆಂದು ಗೋಳಿಟ್ಟರಂತೆ. ಇವರ ಬವಣೆಯಿಂದ ಮನಕರಗಿದ ಒಡೆಯರು ಅಂತಹ ಸಂದರ್ಭದಲ್ಲಿ ವಾಸ್ತವವಾಗಿ ಫಸಲಿನ ಅರ್ಧಾಂಶ ಮಾತ್ರವನ್ನೇ ಕಂದಾಯವಾಗಿ ಸಂಗ್ರಹಿಸುವಂತೆ ಅಧಿಕಾರಿಗಳಿಗೆ ಆದೇಶ ನೀಡಿದರು(ಕೃಷ್ಣರಾವ್, ಕೇಶವಭಟ್ಟ, ೧೯೭೦:೯೩೮).

ಚಿತ್ರದುರ್ಗದ ಹಿರೇಮದಕರಿನಾಯಕ ಆಳ್ವಿಕೆ ಮಾಡುವಾಗ ಜನರಿಗೆ ಧರ್ಮಕ್ಕೆ ಅನ್ನ ಹಾಕಿಸಲು ಹೊಸ ಏರ್ಪಾಡು ಮಾಡಿದ್ದನು(ಪುಟ್ಟಣ್ಣ, ೧೯೯೭:೬೬).

ದೇವಾಲಯಗಳು, ಮಠಗಳು, ಅಗ್ರಹಾರಗಳು ತೆರಿಗೆಯಿಂದ ವಿನಾಯಿತಿಯನ್ನು ಪಡೆದಿದ್ದವು. ವಿಜಯನಗರೋತ್ತರ ಕಾಲದಲ್ಲಿ ಹೊಳೆ ಉಕ್ಕಿ ಹರಿದಾಗ ೧೬೩೨ರಲ್ಲಿ ವೀರಭದ್ರಪ್ಪನಾಯಕನು ಪರಿಹಾರ ನೀಡಿದ ಉಲ್ಲೇಖಗಳು ಸಿಗುತ್ತವೆ. ಕೆಳದಿಯ ನಾಯಕರು ಪ್ರಾಕೃತಿಕ ನಷ್ಟ ಉಂಟಾದಾಗ ಅಲ್ಲಿನ ಜನರಿಗೆ ಭದ್ರತೆಯನ್ನು ಒದಗಿಸಿ ಪರಿಹಾರವನ್ನು ನೀಡುತ್ತಿದ್ದರು ಎಂದು ವಿಜಯನಗರೋತ್ತರ ಕಾಲಘಟ್ಟದ ಶಾಸನಗಳಿಂದ ತಿಳಿಯುತ್ತದೆ. ಇವರಿಗೆ ಪರಿಹಾರ ನೀಡಿದ ದಾನವನ್ನು ರಾಜ್ಯದ ಆದಾಯದಿಂದ ಪಡೆಯುತ್ತಿದ್ದರು. ೧೬೫೪ರಲ್ಲಿ ಶಿವಪ್ಪನಾಯಕನ ಒಂದು ಶಾಸನದಲ್ಲಿ ಬೀಳುಸಾಗಿ ನಷ್ಟವಾಗಿದ್ದಕ್ಕೆ ಸಿಲುಕಿದ ಬಾಗೇಲುಚಾಗ ಎಂದು ಉಲ್ಲೇಖಿಸಿದ್ದಾನೆ. ಹೀಗೆ ವಿಜಯನಗರೋತ್ತರ ಕಾಲವು ಹಲವಾರು ಸ್ಥಿತ್ಯಂತರಗಳನ್ನು ಕಂಡುಕೊಂಡ ಕಾಲವಾಗಿದ್ದು, ಹಲವಾರು ಸಾಮಾಜಿಕ, ಆರ್ಥಿಕ ಮಠಪುರಗಳು ವಿಜಯನಗರೋತ್ತರ ಕಾಲದ ಆರ್ಥಿಕವಾಗಿ ಬಲಿಷ್ಠವಾಗಿ ಬೆಳೆಯಲಾರಂಭಿಸಿವು. ಇದುವರೆಗೂ ಅಸ್ತಿತ್ವದಲ್ಲಿದ್ದ ಬ್ರಾಹ್ಮಣತ್ವದ ಕಲ್ಪನೆಯ ಜೊತೆ ವೀರಶೈವ ತತ್ವಗಳನ್ನೇ ಹೆಚ್ಚಾಗಿ ಅವಲಂಬಿಸಿದ್ದ ಮಠಪುರಗಳು ಹೆಚ್ಚಾಗಿ ಸ್ಥಾಪನೆಯಾದವು. ಮಠಗಳ ನಿರ್ಮಾಣವಾಗುವ ಸ್ಥಳದಲ್ಲಿ ಹೊಸ ಪುರಗಳು ನಿರ್ಮಾಣವಾಗುತ್ತಿದ್ದವು. ಈ ಮೂಲಕ ಹೊಸದೊಂದು ಆರ್ಥಿಕ ವ್ಯವಸ್ಥೆ ಹುಟ್ಟಿಕೊಳ್ಳುತ್ತಿತ್ತು. ನಷ್ಟಕ್ಕೆ ವ್ಯಾಪಾರಿಗಳು ಸಾಮಾನ್ಯರು ಒಳಪಟ್ಟಾಗ ಅವರನ್ನು ರಕ್ಷಿಸುವ ಕೆಲಸವನ್ನು ಪ್ರಭುತ್ವಗಳು ನಿರ್ವಹಿಸುತ್ತಿದ್ದವು ಹಾಗೂ ಪ್ರಭುತ್ವಗಳು ಅರಮನೆಗಳಲ್ಲಿ ಸೇವಕಿಯರನ್ನು ನೇಮಿಸಿಕೊಳ್ಳುವ ಮೂಲಕ ಮಹಿಳೆಯರನ್ನು ಬಳಸಿಕೊಳ್ಳುತ್ತಿದ್ದರು. ಗುಲಾಮರಂತೆ ಮಹಿಳೆಯರನ್ನು ಮಾರುಕಟ್ಟೆಗಳಲ್ಲಿ ಮಾರಾಟ ಮಾಡುತ್ತಿದ್ದರು ಮತ್ತು ಬಿಟ್ಟಿಗೆ ಮಹಿಳೆಯನ್ನು ಬಳಸಿಕೊಳ್ಳುತ್ತಿದ್ದರು. ಒಟ್ಟಾರೆಯಾಗಿ ಬಿಟ್ಟಿಸೇವೆಯು ಪ್ರಾಚೀನ ಕಾಲದಿಂದಲೂ ಮುಂದುವರಿದುಕೊಂಡು ಬಂದಿರುವ ಪರಿಕಲ್ಪನೆಯಾಗಿದೆ.

**೪.೭. ತೆರಿಗೆ ಪದ್ಧತಿ**

ವಿಶ್ವದ ಚರಿತ್ರೆಯನ್ನು ಅವಲೋಕಿಸಿದಾಗ ತೆರಿಗೆಯು ಪ್ರಾಚೀನ ಕಾಲದಿಂದಲೂ ಮಾನವನ ಜೀವನದ ಜೊತೆ ಹಾಸುಹೊಕ್ಕಾರುವುದು ಕಂಡುಬರುತ್ತದೆ. ತೆರಿಗೆಯನ್ನು ಯಾಕೆ ಕೊಡಬೇಕು ಎಂಬ ವಿಚಾರವನ್ನು ಕುರಿತಂತೆ ಚರ್ಚೆಗೆ ಒಳಪಟ್ಟಿದೆ. ರಾಜ್ಯದ ಆದಾಯದ ಮೂಲಗಳಲ್ಲಿ ತೆರಿಗೆಯದ್ದು ಮೊದಲ ಸ್ಥಾನ. ತೆರಿಗೆಯನ್ನು ಅನೇಕ ಮೂಲಗಳಿಂದ ಸಂಗ್ರಹಿಸಲಾಗುತ್ತಿತ್ತು. ಭೂಮಿ, ಮನೆ, ವೃತ್ತಿ, ಆಸ್ತಿ, ಸರಕು ಉತ್ಪನ್ನಗಳು, ಸಾಮಾಜಿಕ ತೆರಿಗೆ, ಜಾತಿ ತೆರಿಗೆ, ದಂಡಗಳು, ಕಾಣಿಕೆಗಳು, ಉದ್ಯೋಗ, ವಾಣಿಜ್ಯ, ಆದಾಯ ಮುಂತಾದ ಮೂಲಗಳಿಂದ ರಾಜ್ಯಕ್ಕೆ ತೆರಿಗೆ ಹಣ ಸಂಗ್ರಹವಾಗುತ್ತಿತ್ತು. ಕಾಣಿಕೆಗಳು ಮತ್ತು ದಂಡಗಳು ಪ್ರಮುಖ ತೆರಿಗೆಗಳಾಗಿ ಗುರುತಿಸಿಕೊಂಡಿದ್ದವು. ಗ್ರಾಮೀಣ ಮಟ್ಟದಿಂದ ನಗರ ಅರ್ಥವ್ಯವಸ್ಥೆಯವರೆಗಿನ ಅಂಶಗಳಲ್ಲಿ ತೆರಿಗೆ ಪಾತ್ರ ಮುಖ್ಯವಾಗಿರುವಂತದ್ದು. ಭಾರತದ ಚರಿತ್ರೆಯಲ್ಲಿ ವೇದಗಳ ಕಾಲಕ್ಕಿಂತ ಹಿಂದೆಯೇ ತೆರಿಗೆಯನ್ನು ವಿಧಿಸುವ ಪರಿಪಾಟವಿತ್ತು. ಆರಂಭದಲ್ಲಿ ತೆರಿಗೆಯನ್ನು ಸ್ವಯಂಪ್ರೇರಣೆಯಿಂದ ನೀಡುತ್ತಿದ್ದು ನಂತರದಲ್ಲಿ ಕಡ್ಡಾಯ ಮಾಡಲಾಯಿತು. ವೇದಗಳ ಕಾಲದಲ್ಲಿ ತೆರಿಗೆಯನ್ನು ಬಲಿ ಎಂಬ ರೂಪದಲ್ಲಿ ನೀಡುತ್ತಿದ್ದರು. ಹೀಗೆ ತೆರಿಗೆ ಪದ್ಧತಿಯು ತನ್ನ ಅಸ್ತಿತ್ವವನ್ನು ಕಂಡುಕೊಂಡಿರುವುದನ್ನು ಕಾಣಬಹುದು.

ರಾಜ್ಯದ ಅರ್ಥವ್ಯವಸ್ಥೆಯಲ್ಲಿ ಭೂಮಿ ಪ್ರಮುಖ ಪಾತ್ರ ವಹಿಸುತ್ತಿದ್ದರಿಂದಾಗಿ ರಾಜ್ಯಾದಾಯದಲ್ಲಿ ಭೂಕಂದಾಯದ ಮೊತ್ತ ದೊಡ್ಡದಾಗಿರುತ್ತಿತ್ತು. ಕಂದಾಯವನ್ನು ವಿಧಿಸುವ ಮೊದಲು ಆ ಭೂಮಿಯನ್ನು ಅಳತೆ ಮಾಡುತ್ತಿದ್ದರು. ರಾಜ್ಯವು ಬಹುತೇಕ ಮಳೆಯಾಧರಿತ ಕೃಷಿಪ್ರಧಾನ ಸಮಾಜವನ್ನು ಇಂದಿಗೂ ನೋಡಬಹುದಾಗಿದ್ದು, ವಿಜಯನಗರೋತ್ತರ ಸಮಾಜದ ತೆರಿಗೆಪದ್ಧತಿಯು ವಿಜಯನಗರ ಸಮಾಜದ ಸಾರ್ವಭೌಮರ ಪೂರ್ವ ಮರ್ಯಾದೆಯನ್ನು ಕೆಲವು ಮನೆತನಗಳು ಪಾಲಿಸಿದವು. ಇನ್ನು ಕೆಲವು ಮನೆತನಗಳು ವಿಜಯನಗರದ ತೆರಿಗೆಪದ್ಧತಿಯನ್ನೇ ಮುಂದುವರಿಸಿದವು. ಈ ಮೂಲಕ ಅವರು ಅಮರ ಮಾಗಣಿದಾರರಾಗಿ ಮಾಗಣಿಗಳನ್ನು ಪಡೆದು ವಾರ್ಷಿಕ ಕಪ್ಪಗಳನ್ನು ವಿಜಯನಗರದ ಅರಸರಿಗೆ ಒಪ್ಪಿಸುತ್ತಿದ್ದರು.

ಸಾರ್ವಭೌಮ ಮತ್ತು ಸಾಮಂತರ ಸಂಬಂಧಗಳು ಗಟ್ಟಿಗೊಳ್ಳಲು ಮತ್ತು ಸಾಮಂತ ಪ್ರಭುತ್ವಗಳು ತಮ್ಮ ಕರ್ತವ್ಯಗಳನ್ನು ರೂಪಿಸಿಕೊಂಡ ವಿಧಾನಗಳಲ್ಲಿ ತೆರಿಗೆಪದ್ಧತಿಯು ಒಂದಾಗಿದೆ. ವಿಜಯನಗರ ರಾಜರ ಕಾಲದ ಜನಸಾಮಾನ್ಯರ ಇನ್ನೊಂದು ಚಿತ್ರಣ ಆರ್ಥಿಕವಾಗಿ ಬಹಳ ಆಘಾತಕಾರಿಯಾಗಿದೆ. ಜನಸಾಮಾನ್ಯರ ಮೇಲೆ ಅತಿ ಹೆಚ್ಚು ತೆರಿಗೆಗಳನ್ನು ಏರಿಸಿದರು. ಅಲ್ಲಾವುದ್ದೀನ್ ಖಿಲ್ಜಿಗಿಂತ ವಿಜಯನಗರ ಸಾಮ್ರಾಜ್ಯದಲ್ಲಿ ತೆರಿಗೆ ಹೆಚ್ಚಿತ್ತು. ದುಡಿಯುವ ವರ್ಗಕ್ಕೆ ಕ್ಷೌರಿಕನ ತೆರಿಗೆ, ವೀಳ್ಯದೆಲೆಯ ತೆರಿಗೆ, ವೇಶ್ಯಾವಾಟಿಕೆ ಮೇಲಿನ ತೆರಿಗೆ, ಈ ತೆರಿಗೆಗಳು ವಿಜಯನಗರೋತ್ತರ ಕಾಲದಲ್ಲಿ ಇವುಗಳ ಸ್ವರೂಪವನ್ನು ಗಮನಿಸಬಹುದಾಗಿದೆ.

ಪ್ರಸ್ತುತ ಅಧ್ಯಾಯದಲ್ಲಿ ವಿಜಯನಗರೋತ್ತರ ಕಾಲದ ತೆರಿಗೆ ವಿಧಾನದ ಸ್ವರೂಪವನ್ನು ಕುರಿತಂತೆ ಚರ್ಚಿಸಲಾಗಿದೆ. ರಾಜ್ಯದ ಆದಾಯದಲ್ಲಿ ತೆರಿಗೆಯ ಪಾತ್ರವೇನು ಎಂಬ ಅಂಶವನ್ನು ಕುರಿತು ವಿವರಿಸಿ ವಿಶ್ಲೇಷಿಸಲಾಗಿದೆ. ತೆರಿಗೆಯು ರಾಜ್ಯಕ್ಕೆ ಯಾವ ರೀತಿಯಿಂದ ಉಪಯುಕ್ತವಾಗಿತ್ತು ಯುದ್ಧ ಮತ್ತು ಕ್ಷಾಮದ ಸಂದರ್ಭದಲ್ಲಿ ತೆರಿಗೆ ಸ್ವರೂಪ ಯಾವ ರೀತಿಯಿತ್ತು ಎಂಬುದನ್ನು ಕುರಿತಂತೆ ಇಲ್ಲಿ ಚರ್ಚಿಸಲಾಗಿದೆ. ಈ ವಿಜಯನಗರೋತ್ತರ ಕಾಲಘಟ್ಟದಲ್ಲಿ ಕರ್ನಾಟಕದ ಕರಾವಳಿ ಮತ್ತು ಇತರೇ ಭಾಗಗಳಲ್ಲಿ ಯುರೋಪಿಯನ್ನರು ತಮ್ಮ ವಸಾಹತುಗಳನ್ನು ಕಂಡುಕೊಂಡಿದ್ದು, ಕರ್ನಾಟಕದ ಈ ಭಾಗದಲ್ಲಿ ಸಾಮಂತ ಪ್ರಭುತ್ವಗಳ ತೆರಿಗೆಯ ಸ್ವರೂಪ ಬದಲಾಯಿತೇ ಎಂಬಂತಹ ವಿಚಾರಗಳ ಮೂಲಕ ವಿಜಯನಗರೋತ್ತರ ಕಾಲದ ತೆರಿಗೆಪದ್ಧತಿಯನ್ನು ಕುರಿತಂತೆ ಇಲ್ಲಿ ಚರ್ಚಿಸಲಾಗಿದೆ.

ವಿಜಯನಗರೋತ್ತರ ಕಾಲವು ಸಾಮಂತ ಪ್ರಭುತ್ವಗಳು ಸಾರ್ವಭೌಮರಾಗುವ ಪ್ರಕ್ರಿಯೆಯ ಕಾಲವಾಗಿದ್ದು, ಈ ಕಾಲದಲ್ಲಿ ತಮ್ಮ ಅಸ್ತಿತ್ವಕ್ಕಾಗಿ ಉಳಿವಿಗಾಗಿ ಸಂಸ್ಥಾನದ ಭದ್ರತೆಗಾಗಿ ಹೋರಾಡುವ ಕಾಲವೆಂದು ಹೇಳಬಹುದು. ಇಲ್ಲಿ ಹೆಚ್ಚಿನ ಯುದ್ಧಗಳು ತಮ್ಮ ಅಸ್ತಿತ್ವಕ್ಕಾಗಿ ನಡೆದರೆ ಆ ಯುದ್ಧಗಳ ಪರಿಣಾಮ ಅಂದಿನ ಸಮಾಜದ ಮೇಲಾಗುತ್ತಿತ್ತು. ಇಂತಹ ಸಂದರ್ಭದಲ್ಲಿ ಸಾರ್ವಭೌಮ ಸಾಮಂತ ಪ್ರಭುತ್ವಗಳು ಹಲವಾರು ರೀತಿಯ ತೆರಿಗೆಗಳನ್ನು ವಿಧಿಸುತ್ತಿದ್ದರು. ಈ ಮೂಲಕ ಭೂಕಂದಾಯ, ಕೃಷಿ ಮೂಲದ ತೆರಿಗೆಗಳು, ಕೃಷಿಯೇತರ ತೆರಿಗೆಗಳು, ಬಿಟ್ಟಿಸೇವೆ ಎಂಬ ವಿವಿಧ ವಿಭಾಗಗಳಲ್ಲಿ ವಿವರಿಸಿ ವಿಶ್ಲೇಷಿಸಲಾಗಿದೆ.

ವಿಜಯನಗರ ಕಾಲದಲ್ಲಿ ಭೂಕಂದಾಯವು ಪರಿಣಾಮಕಾರಿಯಾಗಿತ್ತು. ಭೂಕಂದಾಯವೇ ರಾಜ್ಯಾದಾಯದ ಮೂಲ. ಕಂದಾಯ ವಸೂಲಿಯು ಅಠವಣೆ ಎಂಬ ವಿಭಾಗದ ಅಧಿಕಾರಕ್ಕೆ ಒಳಪಟ್ಟಿತ್ತು. ರಾಜ್ಯದ ಉತ್ಪತ್ತಿಯ ಸುಮಾರು ಷಷ್ಟಾಂಶವು ೧/೩ ರಾಜ್ಯ ಕೋಶಕ್ಕೆ ಸೇರಬೇಕಾಗಿತ್ತು(ಕೇಶವಭಟ್, ಕೃಷ್ಣರಾವ್, ೧೯೯೪:೯೨). ಭೂಮಿಯನ್ನು ಸರ್ವೆ ಮಾಡಿ ಕಂದಾಯ ನಿಗದಿ ಮಾಡುವುದನ್ನು ಇಲ್ಲಿ ಕಾಣಬಹುದು. ರಾಯರೇಖ ಪದ್ಧತಿ ಮತ್ತು ಬೀಜವರಿ ಪದ್ಧತಿ ಎಂಬ ಎರಡು ರೀತಿಯ ಕಂದಾಯ ವಸೂಲಿಯು ಈ ಕಾಲದಲ್ಲಿ ಅಸ್ತಿತ್ವದಲ್ಲಿತ್ತು(ಷೇಕ್ ಅಲಿ.ಬಿ,೨೦೧೭:೨೩೮). ಬೀಜವರಿ ನಿಗದಿ ಎಂದರೆ ಒಂದು ಜಮೀನು ಉತ್ಪಾದಿಸಬಹುದೆಂದು ಅಂದಾಜು ಮಾಡಿರುವ ಅಥವಾ ಒಂದು ಜಮೀನಿಗೆ ಎಷ್ಟು ಬಿತ್ತನೆ ಬೀಜ ಬೇಕು ಎನ್ನುವುದರ ಆಧಾರದ ಮೇಲೆ ಕಂದಾಯವನ್ನು ನಿಗದಿಪಡಿಸಬಹುದು. ಜಮೀನಿನ ಬಿತ್ತನೆ ಸಾಮರ್ಥ್ಯವನ್ನು ಅಳೆಯುವ ಮಾಪನಗಳು ಸ್ಥಳದಿಂದ ಸ್ಥಳಕ್ಕೆ ಬೇರೆಯಾಗುತ್ತಿದ್ದವು. ಖಂಡುಗ, ಕೊಳಗ, ಸಲಗೆ, ಒಳ್ಳ ಮತ್ತು ಮುಡೆ, ಒಂದು ಖಂಡುಗದ ಜಮೀನು ಎಂದರೆ ಒಂದು ಖಂಡುಗ ಧಾನ್ಯಬಿತ್ತನೆ ಮಾಡಬಹುದಾದ ಭೂಮಿ(ಷೇಕ್ ಅಲಿ.ಬಿ,೨೦೧೮:೨೨೬)

ಕೆಳದಿಯ ಅರಸರು ಮೂರು ರೀತಿಯ ತೆರಿಗೆ ನಿಗದಿ ಮಾಡುತ್ತಿದ್ದರು. ರೇಖಾ ನಿಗದಿ, ಬೀಜವರಿ ಮತ್ತು ಶಿಸ್ತುನಿಗದಿ. ಈ ಶಿಸ್ತುನಿಗದಿಯನ್ನು ಶಿವಪ್ಪನಾಯಕನು ಜಾರಿಗೆ ತಂದನು. ಕೆಳದಿ ರಾಜವಂಶದ ಅತ್ಯಂತ ಶ್ರೇಷ್ಠ ರಾಜನೆನಿಸಿದ ಶಿವಪ್ಪನಾಯಕನನ್ನು ಹೊಸ ಭೂಕಂದಾಯ ನಿಗದಿಪಡಿಸಿದ ದೊರೆ ಎಂದು ಕರೆಯಲಾಗುತ್ತದೆ. ಅವನ ಶಿಸ್ತುನಿಗದಿ ಪದ್ಧತಿಯು ೧೬೬೦ರಿಂದ ಮೂವತ್ತೊಂಬತ್ತು ವರ್ಷ ಕಾಲ ಮುಂದುವರಿಯಿತು(ಷೇಕ್ ಅಲಿ.ಬಿ, ೨೦೧೮:೨೩೯) .

ಕೆಳದಿಯ ರಾಜರು ಬೀಜವರಿ ಪದ್ಧತಿಯ ನಿಗದಿಯನ್ನು ಅನುಸರಿಸಿದರು. ಒಂದು ಜಮೀನಿಗೆ ಎಷ್ಟು ಬಿತ್ತನೆ ಬೇಕು ಎನ್ನುವುದರ ಆಧಾರದ ಮೇಲೆ ಕಂದಾಯ ನಿಗದಿಯನ್ನು ನಿರ್ಧರಿಸಲಾಗುತ್ತಿತ್ತು. ಜಮೀನನ್ನು ಅಳತೆ ಮಾಡುತ್ತಿರಲಿಲ್ಲ. ಆದರೆ ಅದರ ಸಾಮರ್ಥ್ಯವನ್ನು ಅಂದಾಜು ಮಾಡಲಾಗುತ್ತಿತ್ತು. ಹೀಗೆ ಭೂಕಂದಾಯವು ವಸೂಲಿಯಾಗುತ್ತಿತ್ತು. ಭೂಕಂದಾಯವನ್ನು ಸಿದ್ದಾಯ ಎಂದು ಕರೆಯುತ್ತಿದ್ದರು. ಭೂಕಂದಾಯವನ್ನು ಧಾನ್ಯ ಮತ್ತು ನಗದು ರೂಪದಲ್ಲಿ ಪಡೆಯಲಾಗುತ್ತಿತ್ತು. ಭೂಕಂದಾಯಕ್ಕೆ ಹೊಲದೆರೆ, ಮೇಲಾದಾಯ ಮುಂತಾದ ಹೆಸರುಗಳಿಂದಲೂ ವಿಂಗಡಿಸಿದ್ದರು(ಅರುಣ್ ೨೦೦೬,೪೦). ಈ ಮೂಲಕ ಕೆಳದಿ ನಾಯಕರು ಭೂಕಂದಾಯ ವಸೂಲಿ ಮಾಡುತ್ತಿದ್ದರು.

ಭೂಕಂದಾಯವನ್ನು ಕೆಲವೊಂದು ವೇಳೆ ಕೃಷಿಗೆ ಒಳಪಡದ ಭೂಮಿಯನ್ನು ಕೃಷಿಯೋಗ್ಯ ಭೂಮಿಯನ್ನಾಗಿ ಮಾರ್ಪಡಿಸಿ ಐದು ವರ್ಷಗಳು ಕಂದಾಯದಿಂದ ವಿನಾಯಿತಿ ಪಡೆಯುತ್ತಿದ್ದರು. ನಂತರ ಕಂದಾಯವನ್ನು ಉತ್ಪನ್ನದ ಆಧಾರದ ಮೇಲೆ ಆಯಾ ಕಾಲಕ್ಕೆ ತಕ್ಕಂತೆ ನಿರ್ಧರಿಸುತ್ತಿದ್ದರು.

ಕರ್ನಾಟಕದ ಭೂಕಂದಾಯದಲ್ಲಿ ಕೆಳದಿ ನಾಯಕರ ಭೂಕಂದಾಯವು ಪ್ರಮುಖವಾಗಿದೆ. ಶಿವಪ್ಪನಾಯಕ ವಿಜಯನಗರದ ಅರಸರ ಪೂರ್ವ ಮರ್ಯಾದೆಯನ್ನು ಪಾಲಿಸುತ್ತಾ ಕೆಲವು ಹೊಸ ವಿಧಾನಗಳನ್ನು ಅನುಸರಿಸಿದನು. ಈ ಮೂಲಕ ಶಿಸ್ತು ಎನ್ನುವ ಹೊಸ ವಿಧಾನವನ್ನು

ಅಳವಡಿಸಿಕೊಂಡನು. ಹೀಗೆ ವಿಜಯನಗರೋತ್ತರ ಕಾಲದ ಕಂದಾಯವ್ಯವಸ್ಥೆಯಲ್ಲಿ ಕೆಳದಿಯ ನಾಯಕರನ್ನು ಪ್ರಮುಖವಾಗಿ ಗುರುತಿಸಲಾಗಿದೆ. ಆಡಳಿತದ ಮೂಲ ಘಟಕ ಹಳ್ಳಿಯಾಗಿತ್ತು. ಭೂಕಂದಾಯ ಪದ್ಧತಿಯಲ್ಲಿ ಶಾನುಭೋಗ ಬಹುಮುಖ್ಯ ವ್ಯಕ್ತಿಯಾಗಿದ್ದನು. ಹಳ್ಳಿಯ ಲೆಕ್ಕದ ವ್ಯವಹಾರವನ್ನು ಇವನೇ ನೋಡಿಕೊಳ್ಳುತ್ತಿದ್ದನು. ಭೂಕಂದಾಯ ಪ್ರತಿಯೊಂದು ದಾಖಲೆ ಇವನ ಹತ್ತಿರ ಇರುತ್ತಿತ್ತು. ಇವನಿಗೆ ರಾಜರಿಂದ ಭೂಮಿ ಸಿಗುತ್ತಿತ್ತೆಂದು ಕೆಲವು ಶಾಸನಗಳು ತಿಳಿಸುತ್ತವೆ. ಇವನಿಗೆ ತೆರಿಗೆಗಳಲ್ಲಿ ವಿನಾಯಿತಿ ಇರುತ್ತಿತ್ತು. ಇವನಿಗೆ ಸರಿಸಮನಾದ ಇನ್ನೊಬ್ಬ ಗ್ರಾಮ ಅಧಿಕಾರಿ ಗೌಡ. ಇವನು ಕಂದಾಯದ ಅಧಿಕಾರಿಯಾಗಿದ್ದನು. ಗೌಡನನ್ನು ರಾಜನು ಎಲ್ಲ ಜನರ ಸಮ್ಮುಖದಲ್ಲಿ ಆರಿಸುತ್ತಿದ್ದನು. ಅದನ್ನು ಜನರು ಬೆಂಬಲಿಸಬೇಕಿತ್ತು. ನಿಗದಿಯಾದಂತಹ ಒಟ್ಟು ಕಂದಾಯದಲ್ಲಿ ಗೌಡನ ವೇತನವನ್ನು ಕಳೆಯಲಾಗುತ್ತಿತ್ತು.

ಕೆಳದಿ ಅರಸರ ತೆರಿಗೆಪದ್ಧತಿಯು ಅವರು ರಾಜ್ಯದ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳ ಮೇಲೆ ಪರಿಣಾಮವನ್ನು ಉಂಟುಮಾಡಿತ್ತು. ಇವರ ತೆರಿಗೆಪದ್ಧತಿಗಳು ವೈಯಕ್ತಿಕ ಭೂಹಿಡುವಳಿ ಹೆಚ್ಚಿಸಲು ಕಾರಣವಾಯಿತು. ಇವರ ತೆರಿಗೆಪದ್ಧತಿಯು ವಾಣಿಜ್ಯ ಬೆಳೆಗಳ ಕೃಷಿಗೆ ಪ್ರೋತ್ಸಾಹ ನೀಡಿತು. ಇದರಿಂದ ಕೆಳದಿ ರಾಜ್ಯ ಬಲಿಷ್ಠವಲ್ಲದಿದ್ದರೂ ಶ್ರೀಮಂತವಾಗಿತ್ತೆಂದು ಗೋವಾದ ವೈಸ್‌ರಾಯ್ ೧೭೫೧ರಲ್ಲಿ ತನ್ನ ಪತ್ರದಲ್ಲಿ ತಿಳಿಸಿದ್ದಾನೆ. ಭೂಕಂದಾಯದಲ್ಲಿ ವಾಣಿಜ್ಯ ಬೆಳೆಗಳನ್ನು ಪ್ರೋತ್ಸಾಹಿಸಲು ಅವಕಾಶ ಮಾಡಿಕೊಟ್ಟಿದ್ದನ್ನು ಗಮನಿಸಬಹುದಾಗಿದೆ. ಕೆಳದಿಯ ನಾಯಕರು ತೆರಿಗೆಯ ದರವನ್ನು ವಿಮರ್ಶಿಸುತ್ತಿದ್ದರು. ತೆರಿಗೆಯಲ್ಲಿ ಅದಾಲಮಿ, ಮೂಲವೀಸ ಮತ್ತು ಕೊಡವೀಸ ಎಂದು ಮೂರು ವಿಧದ ತೆರಿಗೆಯಿತ್ತು. ವಿದೇಶಿಯರಿಂದ ವಸೂಲಿ ಮಾಡುವ ತೆರಿಗೆಗೆ ಅದಾಲಮಿ ಎಂಬ ಹೆಸರಿತ್ತು. ಒಂದು ಹೇರು ಎತ್ತು ಅಥವಾ ಹೇರು ಹೊರುವ ಪ್ರಾಣಿಗೆ ಒಂದು ವೀಸ ತೆರಿಗೆಯನ್ನು ವಿಧಿಸುತ್ತಿದ್ದರು. ಇದಕ್ಕೆ ಮೂಲವೀಸ ಎಂಬ ಹೆಸರಿತ್ತು. ಮಹಾನಾಡುಸೆಟ್ಟಿಯರು ನಡೆಸುತ್ತಿದ್ದ ಅಡಿಕೆ ಮತ್ತು ಕರಿಮೆಣಸಿನಕಾಳು ವ್ಯಾಪಾರಕ್ಕೆ ಘಟ್ಟದ ಮೇಲೆ ಸ್ಥಳೀಯ ತೆರಿಗೆ ಒಂದು ವೇಳೆ ಉಳಿದ ಸರಕುಗಳಿಗೆ ಹಾಕುವುದೇ ಅರ್ಧವೀಸ ಎಂದು ವಸೂಲಿ ಮಾಡುತ್ತಿದ್ದರು. ಇದಕ್ಕೆ ಕೊಡವೀಸ ಎಂಬ ಹೆಸರಿತ್ತು(ಕಲಬುರ್ಗಿ, ಕೇಶವಭಟ್ಟ, ೧೯೯೪:೩೧೧). ಈ ಮೂಲಕ ಕೆಳದಿ ನಾಯಕರು ವಿದೇಶಿಯರನ್ನೊಳಗೊಂಡಂತೆ ತೆರಿಗೆಯನ್ನು ವಸೂಲಿ ಮಾಡುತ್ತಿದ್ದರು.

ಬ್ರಿಟಿಶರ ಈಸ್ಟ್ ಇಂಡಿಯಾ ಕಂಪನಿ ಅಧಿಕಾರಿ ಕ್ರೌಮ್‌ಲಿನ್ ಎಂಬುವವನ್ನು ಅಕ್ಕಿಯನ್ನು ಕೊಂಡಾಗ ೧ ಕೋರ್ಜಿಗೆ ೧ ವರಹ ತೆರಿಗೆ ನೀಡಬೇಕಾಗಿತ್ತು. ಹಾಗೆಯೇ ಬ್ರಿಟಿಶರ ಹಡಗುಗಳು ಕರ್ನಾಟಕ ಕರಾವಳಿ ಭಾಗದಲ್ಲಿ ಸಂಚರಿಸಲು ವ್ಯಾಪಾರ ಮಾಡಲು ತೆರಿಗೆಯನ್ನು ಕೊಡಬೇಕಾಗಿತ್ತು. ಈ ಮೂಲಕ ತಿಳಿಯುವ ಅಂಶವೆಂದರೆ ಯುರೋಪಿಯನ್ನರು ಸ್ಥಳೀಯ ಸಂಸ್ಥಾನಕ್ಕೆ ತೆರಿಗೆಯನ್ನು ಕೊಡುತ್ತಿದ್ದರೆಂದು ತಿಳಿಯಬಹುದು.

ಭೂಕಂದಾಯದಲ್ಲಿ ಭೂಮಿಯ ಫಲವತ್ತತೆ ಮತ್ತು ಬೆಳೆಗಳ ಆಧಾರದ ಮೇಲೆ ಭೂತೆರಿಗೆಯನ್ನು ವಿಧಿಸಲಾಗುತ್ತಿತ್ತು. ಭೂಮಿಯನ್ನು ಅಳತೆ ಮಾಡಿದ ಬಳಿಕ ಅವುಗಳಿಗೆ ನಿರ್ದಿಷ್ಟ ಸಂಖ್ಯೆಯನ್ನು

ಕೊಡುವ ಪದ್ಧತಿಯಿತ್ತು. ಕೃಷಿಕರು ಕೊಡಬೇಕಾಗಿದ್ದ ತೆರಿಗೆಯು ಭೂಮಿಯ ಫಲವತ್ತತೆಗೆ ಅನುಗುಣವಾಗಿ ಬದಲಾಗುತ್ತಿತ್ತು. ಅದೇ ರೀತಿ ಒಂದೊಂದು ಪ್ರಭುತ್ವಗಳ ಆಳ್ವಿಕೆಯಲ್ಲಿ ಒಂದೊಂದು ತೆರಿಗೆಗಳನ್ನು ಬದಲಾಯಿಸುತ್ತಿದ್ದರು(ರೈ, ೨೦೧೭:೨೮).

ಕೆಳದಿ ನಾಯಕರ ಕಾಲದಲ್ಲಿ ಶಿವಪ್ಪನಾಯಕ ಜಾರಿಗೆ ತಂದ ಕಂದಾಯದ ಸ್ವರೂಪವೆ ಇಡೀ ಕರ್ನಾಟಕ ಚರಿತ್ರೆಗೆ ಮಾದರಿಯಾಗಿರುವಂತಹದ್ದು. ಭೂಮಿಗೆ ಕಂದಾಯ ವಿಧಿಸುವುದಕ್ಕೂ ಮೊದಲು ಭೂಮಿಯ ಬೆಳೆಯ ಯೋಗ್ಯತೆ ಅಳತೆ ಮಾಡಿ ೫ ಭಾಗಗಳಾಗಿ ವಿಭಾಗಿಸಿದ್ದರು. ಹೀಗೆ ವಿಭಾಗಿಸಿ ಸಾಗುವಳಿಯ ಖರ್ಚು ಲೆಕ್ಕ ಇಟ್ಟುಕೊಳ್ಳುತ್ತಿದ್ದ ಐದು ವರ್ಷಗಳ ನಂತರ ಅದರ ಫಲವತ್ತತೆ ಎಷ್ಟು ಎಂದು ನಿಗದಿಪಡಿಸುತ್ತಿದ್ದರು. ಆ ಮೂಲಕ ವಿಧಿಸುವುದು ಒಂದಂಶವಾದರೆ ತೋಟದ ಬೆಳೆಗೆ ಇನ್ನೊಂದು ವಿಧಾನವನ್ನು ಅಳವಡಿಸಿ ಅದರಲ್ಲಿ ಅಡಿಕೆ ತೋಟಕ್ಕೆ ಹೆಚ್ಚಿನ ಪ್ರೋತ್ಸಾಹವನ್ನು ನೀಡಿದ್ದನು.

ಕೆಳದಿ ನಾಯಕರು ಒಂದು ಸಾವಿರ ಅಡಿಕೆ ಮರಗಳಿರುವ ತೋಟವನ್ನು ಒಂದು ಅಳತೆಯನ್ನಾಗಿ ತೆಗೆದುಕೊಂಡು ಇಂತಹ ತೋಟದಲ್ಲಿ ಒಂದು ಮರಕ್ಕೂ ಇನ್ನೊಂದು ಮರಕ್ಕೂ ಇರುವ ಅಂತರ ಹದಿನೆಂಟುವರೆ ಅಡಿಗಳು ಇರತಕ್ಕದೆಂದು ನಿರ್ಧರಿಸಿ ಇಕ್ಕೇರಿಯ ಅಘೋರೇಶ್ವರ ದೇವಾಲಯಕ್ಕೆ ಹೋಗಲು ಮಾಡಿರುವ ೧೮ ಮೆಟ್ಟಿಲುಗಳ ಉದ್ದವೂ ೧೮ ೧/೨ ಅಡಿಗಳಷ್ಟೇ ಇದೆ. ಆ ಉದ್ದವನ್ನೇ ತೆರಿಗೆ ನಿಗದಿಗೊಳಿಸಿದ ಈ ಮೂಲಕ ಹೊಸ ಮಾದರಿಯ ಕಂದಾಯ ವಿಧಾನವನ್ನು ರಾಜ್ಯಕ್ಕೆ ಪರಿಚಯಿಸಿದ ಈ ಮಾದರಿಯು ದಕ್ಷಿಣ ಭಾರತದ ಚರಿತ್ರೆಯಲ್ಲಿಯೇ ಪರಿಚಿತವಾಗಿರುವುದನ್ನು ನೋಡಬಹುದು.

ಚಿತ್ರದುರ್ಗ ಪಾಳೆಯಗಾರರು ವಿಜಯನಗರೋತ್ತರ ಕಾಲದಲ್ಲಿ ಸ್ವತಂತ್ರ ನಾಯಕ ಸಂಸ್ಥಾನವಾಗಿ ಬೆಳವಣಿಗೆಯನ್ನು ಹೊಂದಿದೆ. ಯಾವುದೇ ಹೊಸ ರೀತಿಯ ಭೂಕಂದಾಯವನ್ನು ಪ್ರಯೋಗಿಸದೆ ಹಿಂದಿನ ಕಂದಾಯ ವಿಧಾನವನ್ನೇ ಮುಂದುವರಿಸಿದರು. ಚಿತ್ರದುರ್ಗದಲ್ಲಿ ಭೂಕಂದಾಯವು ಭೂಮಿಯ ಹುಟ್ಟುವಳಿಯ ಮೂರನೇ ಒಂದು ಭಾಗವನ್ನು ಮೀರುತ್ತಿರಲಿಲ್ಲ. ಪ್ರತಿ ನೇಗಿಲಿಗೂ ಒಂದೂವರೆ ದುರ್ಗಿ ವರಹ ನಗದು ಕಂದಾಯವನ್ನು ವಸೂಲಿ ಮಾಡುತ್ತಿದ್ದರು(ಶ್ಯಾಮಲ,೨೦೧೭:೫೧೦).

ಚಿತ್ರದುರ್ಗದ ನಾಯಕರ ಅರಸರ ಕಾಲದಲ್ಲಿ ಪ್ರತಿ ಎಂಟು ಅಥವಾ ಹದಿನಾರು ಹಳ್ಳಿಗಳಿಗೆ ಒಂದರಂತೆ ಸ್ಥಾಪನೆಯಾದ ಸೀಮೆಗಳು ಕೇವಲ ಆಡಳಿತಾತ್ಮಕ ವಿಭಾಗೀಕರಣವಲ್ಲದೆ ಕಂದಾಯ ಸಂಗ್ರಹಣೆಯ ಘಟಕಗಳೂ ಆಗಿದ್ದವು. ಚಿತ್ರದುರ್ಗ ನಾಯಕರು ಸುಗ್ಗಿಯಲ್ಲಿ ಕಾಳನ್ನು ಬೇರ್ಪಡಿಸುವ ವೇಳೆಯಲ್ಲಿ ಭೂಕಂದಾಯವನ್ನು ವಸೂಲಿ ಮಾಡುತ್ತಿದ್ದರು. ಕಂದಾಯ ವಸೂಲಿಯಲ್ಲಿ ನೇಗಿಲುಗಳ ಸಂಖ್ಯೆಯ ಆಧಾರದ ಮೇಲೆ ನಿರ್ಧರಿಸಲಾಗುತ್ತಿತ್ತು(ಎ.ಕ.೧೧, ಚಿ:೫೧). ಭೂಮಿಯ ಫಲವತ್ತತೆ ಮತ್ತು ಬೆಳೆಯನ್ನು ಆಧರಿಸಿ ಭೂಕಂದಾಯವನ್ನು ನಿಗದಿಪಡಿಸುತ್ತಿದ್ದರು. ನೇಗಿಲುಗಳು ಉಳುಮೆಯ ಸಾಧನಗಳಾಗಿದ್ದು, ಇವುಗಳು ಎಷ್ಟು ಅಳತೆ ಪ್ರಮಾಣವನ್ನು ಹೊಂದಿವೆ ಎಂಬುದನ್ನು ನಿರ್ಧರಿಸಿ

ತೆರಿಗೆ ವಿಧಿಸಿಸುತ್ತಿದ್ದರು. ಪ್ರತಿ ನೇಗಿಲಿಗೆ ಎರಡರಿಂದ ಮೂರು ಗದ್ಯಾಣವರೆಗೆ ತೆರಿಗೆ ವಿಧಿಸುತ್ತಿದ್ದರು. ಅಲ್ಲದೆ ಭೂಕಂದಾಯ ಭೂಮಿಯ ಒಟ್ಟು ಆದಾಯದ ೧/೩ ಭಾಗವನ್ನು ವಿಧಿಸುತ್ತಿದ್ದರು. ಪ್ರತಿ ನೇಗಿಲಿಗೆ ಒಂದೂವರೆ ದುರ್ಗಿ ವರಹವನ್ನು ನಗದು ರೂಪದಲ್ಲಿ ಗ್ರಾಮ ಚಾವಡಿಗಳ ಮೂಲಕ ಸಂಗ್ರಹಿಸುತ್ತಿದ್ದರು(ಶ್ರೀನಿವಾಸ, ತೆಲಗಾವಿ,೧೯೭೬:೪೪). ಚಿತ್ರದುರ್ಗದ ತಿಮ್ಮಣ್ಣನಾಯಕನು ಆಡಳಿತ ಪ್ರದೇಶಗಳನ್ನು ವಿವಿಧ ಚಿಕ್ಕ ಘಟಕಗಳಾಗಿ ವಿಭಜಿಸಿ ಆಡಳಿತದಲ್ಲಿ ಗ್ರಾಮವು ಆಡಳಿತದ ಕೊನೆಯ ಘಟಕವಾಗಿತ್ತು. ಈ ಗ್ರಾಮದಲ್ಲಿ ಶಾನುಭೋಗ ಮತ್ತು ಗೌಡರು ತೆರಿಗೆಯನ್ನು ಸಂಗ್ರಹಿಸುವ ಮತ್ತು ವಿಧಿಸುವ ಎರಡೂ ಕಾರ್ಯಗಳನ್ನು ನಿರ್ವಹಿಸುತ್ತಿದ್ದರು.

೧. ಒಂದು ಹೊಲ
೨. ಕೆರೆಹಿಂದೆ ಗದ್ದೆ(ಹೆಚ್ಚಿನ ಆದಾಯ ಬರುವ ಈ ಭೂಮಿಯನ್ನು ದಲಿತರಿಗೆ ನೀಡದೇ ಉನ್ನತವರ್ಗದವರ ಪಾಲಾಗುತ್ತಿತ್ತು)
೩. ಪ್ರತಿಯೊಂದು ಗ್ರಾಮದಲ್ಲಿರುವ ತೋಟಗಳಲ್ಲಿ ಒಂದು ತೋಟ
೪. ಮಳಲು ಗ್ರಾಮದಲ್ಲಿ ಎರಡು ಎತ್ತಿನ ಗಳೆ ೧ಕ್ಕೆ ಅಳೆವತ್ತ
೫. ಎರೆಗ್ರಾಮದಲ್ಲಿ ಎಂಟೆತ್ತಿನ ಗಳೆ ೧ಕ್ಕೆ ಅಳೆವತ್ತ ಹತ್ತು ಕೊಳಗ, ಹೊರೆಹುಲ್ಲು ಮಾರೆಬತ್ತ, ಬೊಗೆವತ್ತ, ಸೂಲಗೆ ೩
೬. ರೈತರು ತೆರುವ ಕಂದಾಯಕ್ಕೆ ದುರ್ಗಿ–೧ ವರಹಕ್ಕೆ ರುಸ್ತುಂ ಹಾಗದ ಕಾಸು
೭. ಜಾಡರ ಮಗ್ಗ ೧ಕ್ಕೆ ೧ ಹಾಗದ ಕಾಸು
೮. ಅಂಗಡಿ ೧ಕ್ಕೆ ದಿನ ೧ಕ್ಕೆ ದುಗ್ಗಾಣೆ ತೂಕಡಕೆ, ೧೦ ವೀಳಯದೆಲೆ.
೯. ಗೊಲ್ಲರಹಟ್ಟಿ ೧ಕ್ಕೆ ವರುಷ ೧ಕ್ಕೆ ೧ ಕುರಿ(ಪುಟ್ಟಣ್ಣ, ೧೯೭೯:೧೯)

ಈ ಮೂಲಕ ಚಿತ್ರದುರ್ಗದ ತಿಮ್ಮಣ್ಣನಾಯಕನು ಹೊಸ ರೀತಿಯಾದ ಕಂದಾಯ ದರವನ್ನು ಈ ಸಂದರ್ಭದಲ್ಲಿ ವಿಧಿಸಿದ್ದನೆಂದು ಹೇಳಬಹುದು.

ಚಿತ್ರದುರ್ಗ ನಾಯಕರು 'ರುಸ್ತು' ಎಂಬ ಕಂದಾಯವನ್ನು ವಸೂಲಿ ಮಾಡುತ್ತಿದ್ದರು. ಈ ಕಂದಾಯವು ಸೈನ್ಯವನ್ನು ಸಂಘಟನೆ ಮಾಡುವುದಕ್ಕಾಗಿ ವಿಧಿಸಿದ ಕಂದಾಯವೆಂದು ಹೇಳಬಹುದು. ಈ ಕಂದಾಯವನ್ನು ವಸೂಲಿ ಮಾಡುವುದಕ್ಕೆ ಮುಖ್ಯ ಕಾರಣವೆಂದರೆ ಸಂಸ್ಥಾನವು ಪದೇ ಪದೇ ದಾಳಿಗೆ ತುತ್ತಾಗುತ್ತಿರುವ ಸಂದರ್ಭದಲ್ಲಿ ಹಾಗೂ ಯುದ್ಧದ ಸಂದರ್ಭದಲ್ಲಿ ಖರ್ಚನ್ನು ಬರಿಸುವುದಕ್ಕಾಗಿ ಹೆಚ್ಚಿನ ತೆರಿಗೆಗಳನ್ನು ವಿಧಿಸುತ್ತಿದ್ದರು. ಈ ಮೂಲಕ ಯುದ್ಧಗಳು ಅಂದಿನ ಸಮಾಜದ ರಾಜಕೀಯ ಉದ್ದೇಶವನ್ನು ಮಾತ್ರ ಹೊಂದಿರದೆ ಆರ್ಥಿಕ ಮೂಲಗಳಾಗಿ ಗೆದ್ದ ಪ್ರದೇಶದಿಂದ ಸಂಪತ್ತು ತಂದಾಗ ಆದಾಯ ಹೆಚ್ಚಾಗುತ್ತಿತ್ತು. ಹಾಗೆಯೇ ಕೆಲವು ವೇಳೆ ಸೋತಾಗ ಖರ್ಚು ಭರಿಸುವುದಕ್ಕೆ ರಾಜ್ಯದ ಜನರ ಮೇಲೆ ತೆರಿಗೆಯ ಹೊರೆಯು ಹೆಚ್ಚಾಗುತ್ತಿತ್ತು.

ಚಿತ್ರದುರ್ಗ ನಾಯಕರು ವ್ಯಾಪಾರ ವಾಣಿಜ್ಯದ ಮೇಲೆ ತೆರಿಗೆಯನ್ನು ಹಾಕುತ್ತಿದ್ದರು. ಸ್ಥಳೀಯ ಸುಂಕ, ಹುಲ್ಲುಬನ್ನಿ, ತಂಬಾಕು ಸುಂಕ, ಇಟ್ಟಿಗೆ ಗೂಡಿನ ಸುಂಕ, ಅಬಕಾರಿ ಸುಂಕಗಳು

ಸರ್ಕಾರದ ಮೂಲಗಳಾಗಿದ್ದವು. ಸ್ಥಳೀಯವಾಗಿ ಒಂದು ನಿರ್ದಿಷ್ಟ ಪ್ರದೇಶದಲ್ಲಿ ನಿಗದಿಪಡಿಸಿದ ಸಮಯದಲ್ಲಿ ಸಂತೆ ನಡೆಯುತ್ತಿತ್ತು. ಸಂತೆಗೆ ಬರುವ ಸರಕುಗಳ ಮೇಲೆ "ಮಾರಾಟಸುಂಕ" ಹಾಕುತ್ತಿದ್ದರು(ಗೋಪಾಲ್, ೨೦೦೫:೨೫೮).

ಕರ್ನಾಟಕದಲ್ಲಿ ಮರಾಠರು ಬೆಂಗಳೂರು ಪ್ರದೇಶವನ್ನು ತಮ್ಮ ನೆಲೆಯನ್ನಾಗಿ ಮಾಡಿಕೊಂಡು ಒಕ್ಕಲುತನದ ತೆರಿಗೆ, ಸಾರಿಗೆ ಸಾಗಾಣಿಕೆ ಮೇಲಿನ ತೆರಿಗೆ, ವೃತ್ತಿ ತೆರಿಗೆ ಎಂಬ ತೆರಿಗೆಗಳನ್ನು ವಿಧಿಸುತ್ತಿದ್ದರು. ಭೂಕಂದಾಯದಲ್ಲಿ ಉತ್ತರ ಕರ್ನಾಟಕದಲ್ಲಿ ಮರಾಠರು ಮಲೆವಣ ಬೆಳೆಗಳ ಮೇಲೆ ವಿಧಿಸಿದ ಕರ, ವನಚರಾಯಿ, ಹುಲ್ಲುಗಾವಲಿನ ತೆರಿಗೆ, ದನ ಮೇಯಿಸುವ ಕರ, ಕಡಬಾ ಪಟ್ಟಿ, ಮೇವಿನ ಮೇಲಿನ ತೆರಿಗೆ ಈ ರೀತಿಯ ಕೃಷಿ ಮೂಲದ ತೆರಿಗೆಗಳನ್ನು ವಿಜಯನಗರೋತ್ತರ ಕಾಲದ ಉತ್ತರ ಕರ್ನಾಟಕದ ಭಾಗದಲ್ಲಿ ಮರಾಠರ ಕಾಲದಲ್ಲಿ(ಸಾವಂತ,೧೯೯೮:೨೫೪).

ವಿಜಯನಗರೋತ್ತರ ಕಾಲಾವಧಿಯಲ್ಲಿ ವ್ಯಾಪಾರ ವಾಣಿಜ್ಯವನ್ನು ಕುರಿತಂತೆ ಮೊಹತರ್ಫಾ(ವಾಣಿಜ್ಯ ತೆರಿಗೆ), ಒಸಕ್(ವರ್ತಕರ ಖಾಯಂ ಅಂಗಡಿಗಳ ಮೇಲೆ ವಿಧಿಸಲಾದ ತೆರಿಗೆ), ಬಜಾರ ಬೈರಾಕ್(ಜಾತ್ರೆಗಳಲ್ಲಿ ಅಥವಾ ಉತ್ಸವಗಳಲ್ಲಿ ಹಾಕಿದ ಅಂಗಡಿಗಳ ತೆರಿಗೆ) ಇವುಗಳ ಹೊರತಾಗಿ ಉಭಾಮಾರ್ಗ ಅಥವಾ ಮಾರ್ಗಸುಂಕ ಅಂದರೆ ವಸ್ತುಗಳನ್ನು ಒಂದು ಕಡೆಯಿಂದ ಮತ್ತೊಂದು ಕಡೆಗೆ ಸಾಗಿಸುವಾಗ ಸ್ಥಳಭರಿತ ಸುಂಕವನ್ನು ವಸೂಲಿ ಮಾಡುತ್ತಿದ್ದರು. ಮೊಹತರ್ಫಾ ಎಂಬ ವಾಣಿಜ್ಯ ತೆರಿಗೆಯನ್ನು ವಸೂಲಿ ಮಾಡುತ್ತಿದ್ದರು. ಮೊಹತರ್ಫಾ ಇದು ಅರೇಬಿಕ್ ಪದ ಇದನ್ನು ಕನ್ನಡದಲ್ಲಿ ವಾಣಿಜ್ಯ ತೆರಿಗೆ ಎಂದು ಕರೆಯುತ್ತಿದ್ದರು(ವಿಲ್ಸನ್, ೧೮೮೯:೫೦೪). ಈ ಮೂಲಕ ಕರ್ನಾಟಕದಲ್ಲಿ ಮರಾಠರು ತೆರಿಗೆಯನ್ನು ಗೌಡ, ಪಟೇಲ ಹಾಗೂ ಶಾನುಭೋಗ, ಕುಲಕರ್ಣಿ ಇವರಿಂದ ವಸೂಲಿ ಮಾಡುತ್ತಿದ್ದರು. ಇವರಿಗೆ ಅದರ ಸಲುವಾಗಿ ತೆರಿಗೆ ವಿನಾಯಿತಿ ದೊರಕುತ್ತಿತ್ತು. ಮುಂದೆ ಇವರ ಸಂಬಂಧಿಕರಿಗೆ ಇವರ ಬಾಡಿಗೆದಾರರಿಗೆ ಕೂಡ ಮೊಹತರ್ಫಾದಿಂದ ವಿನಾಯಿತಿ ನೀಡಲಾಯಿತು. ಉದಾ: ರಾಣೆಬೆನ್ನೂರಿನಲ್ಲಿ ನಾಲ್ವರು ಪಾಟೀಲರು, ಇಬ್ಬರು ಕುಲಕರ್ಣಿಗಳು ಸೇರಿ ಇವರು ಅನೇಕ ಮನೆಗಳನ್ನು ಕಟ್ಟಿ ಶ್ರೀಮಂತ ವ್ಯಾಪಾರಸ್ಥರಿಗೆ ಬಾಡಿಗೆಗೆ ನೀಡಿದ್ದರು. ಪಟೇಲರದು ೫೯ ಮನೆಗಳು, ಕುಲಕರ್ಣಿಯವರದು ೭೭ ಹಾಗೂ ಸೇಠಿಯವರದು ೧೪ ಈ ಎಲ್ಲಾ ೧೫೦ ಮನೆಗಳು ಮೇಲಿನಧಿಕಾರಿ ವರ್ಗದವರಿಗೆ ಸಂಬಂಧಿಸಿದ್ದರಿಂದ ಈ ಮನೆಗಳ ಮೇಲೆ ಮೊಹತರ್ಫಾ ವಿಧಿಸಲಾಗಿಲ್ಲ. ಜೊತೆಗೆ ಅವರಿಗೆ ಇತರ ಹಕ್ಕುಗಳು ಮತ್ತು ಸೌಲಭ್ಯಗಳನ್ನು ನೀಡಲಾಗಿತ್ತು. ಉದಾ; ಇವರು ಪ್ರತೀ ಎಣ್ಣೆಗಾಣದಿಂದ ವರ್ಷಕ್ಕೆ ೧೮ ಸೇರು ಎಣ್ಣೆ ಪಡೆಯುತ್ತಿದ್ದರು.

ಈ ವಾಣಿಜ್ಯ ತೆರಿಗೆ ನೀಡುವವರು ಬ್ಯಾಂಕಿನ ವ್ಯವಹಾರ ನಡೆಸುವವರೂ ವ್ಯಾಪಾರಸ್ಥರೂ ಆಗಿದ್ದರು. ಉದಾ: ಹುಬ್ಬಳ್ಳಿಯ ಶ್ರೀಮಂತ ವ್ಯಾಪಾರಿ ನಂದನಾಯ್ಕ ೧೧೫ ರೂ. ವಾರ್ಷಿಕ ವಾಣಿಜ್ಯ ತೆರಿಗೆ ನೀಡುತ್ತಿದ್ದರು. ನವಲಗುಂದದ ಒಬ್ಬ ಬನಿಯಾ ೨೫೨ ರೂ. ತೆರಿಗೆ ನೀಡುತ್ತಿದ್ದು, ಅವನು ೧೧ ಅಂಗಡಿ ಮತ್ತು ಮೂರು ಮನೆಗಳನ್ನು ಹೊಂದಿದ್ದ. ಗೋಕಾಕದ ರೇಷ್ಮೆ ವ್ಯಾಪಾರಿ ೬೯ ರೂ. ನೀಡುತ್ತಿದ್ದನು. ಈ ಮೂಲಕ ಕರ್ನಾಟಕದಲ್ಲಿ ವಾಣಿಜ್ಯ ತೆರಿಗೆಗಳನ್ನು ವಸೂಲಿ

ಮಾಡುತ್ತಿದ್ದರು. ಪ್ರಸ್ತುತ ಕರ್ನಾಟಕದಲ್ಲಿ ವ್ಯಾಪಾರದಲ್ಲಿ ಮರಾಠರ ಪ್ರಭಾವ ಹೆಚ್ಚಾಗಿದ್ದು, ಪ್ರಮುಖ ವರ್ತಕ ಸಮುದಾಯವಾಗಿ ಈ ವರ್ತಕರು ಗುರುತಿಸಿಕೊಂಡಿರುವುದನ್ನು ನೋಡಬಹುದು. ವಾಣಿಜ್ಯ ತೆರಿಗೆಯಾದ ಈ ತೆರಿಗೆಯು ಕರ್ನಾಟಕದಲ್ಲಿ ಕಮ್ಮಾರ, ಬಡಗಿ, ಗಾಣಿಗರು, ನೀಲಗಾರರು ನೀಡಬೇಕಾಗಿತ್ತು. ಹೀಗೆ ಕರ್ನಾಟಕವು ಮರಾಠರ ಕಾಲದಲ್ಲಿ ವಿವಿಧ ರೀತಿಯ ತೆರಿಗೆಗಳನ್ನು ಹಾಕುತ್ತಿದ್ದರು(ಅನಂತರಾಮಯ್ಯ,೨೦೧೨:೧೮೮).

ಈ ಮೂಲಕ ಕರ್ನಾಟಕವನ್ನಾಳಿದ ಮರಾಠರು ಆರಂಭದಲ್ಲಿ ದೊಡ್ಡಬಳ್ಳಾಪುರ, ಸಿರಾ, ಬೆಂಗಳೂರು ಪ್ರದೇಶಗಳನ್ನು ವಶಪಡಿಸಿಕೊಂಡರು. ಅವರ ತೆರಿಗೆಯ ಸ್ವರೂಪವು ಅಷ್ಟಾಗಿ ಪ್ರಭಾವ ಬೀರಲಿಲ್ಲ. ಷಹಜಾನ್ ಮತ್ತು ಪೇಶ್ವೆಗಳ ಆಳ್ವಿಕೆಯ ಕಾಲದಲ್ಲಿ ಕರ್ನಾಟಕ ಅದರಲ್ಲಿ ಉತ್ತರ ಕರ್ನಾಟಕದ ಬಾಗಲಕೋಟೆ, ಬೆಳಗಾವಿ, ವಿಜಯಪುರ, ಧಾರವಾಡ, ಹುಬ್ಬಳ್ಳಿಗಳಲ್ಲಿ ಮರಾಠರ ಆಳ್ವಿಕೆಯ ಪ್ರಭಾವವನ್ನು ಮರೆಯುವಂತಿಲ್ಲ. ಕರ್ನಾಟಕದ ವ್ಯಾಪಾರ ಅಭಿವೃದ್ಧಿಯಲ್ಲಿಯೂ ಇವರು ಮುಖ್ಯರಾಗಿದ್ದು, ವಸಾಹತು ಕಾಲಘಟ್ಟದಲ್ಲಿ ವರ್ತಕ ಸಮುದಾಯವಾಗಿ ಕರ್ನಾಟಕ ವ್ಯಾಪಾರ ವಾಣಿಜ್ಯದಲ್ಲಿ ಗುರುತಿಸಿಕೊಂಡಿದೆ. ಪ್ರಾಚೀನ ಕಾಲದಿಂದಲೂ ಹೆಚ್ಚಿನ ವಾಣಿಜ್ಯ ತೆರಿಗೆಯನ್ನು ಈ ಮಾರವಾಡಿ ಸಮುದಾಯ ಕೊಟ್ಟಿದೆ ಎಂದರೆ ತಪ್ಪಾಗಲಾರದು.

ಹರಪನಹಳ್ಳಿ ಪಾಳೆಯಗಾರರ ಶಾಸನಗಳು ಉಲ್ಲೇಖಿಸುವ ಭೂಮಾಪನಗಳಿಂದಾಗಿ ಮೌಲ್ಯಮಾಪನ ಮಾಡಿದ ನಂತರವೇ ತೆರಿಗೆ ಪ್ರಮಾಣವನ್ನು ನಿರ್ಧರಿಸಲಾಗುತಿತ್ತು. ಇದನ್ನು ಸೂಕ್ತಿ ಸಿದ್ದಾಯವೆಂದು ಕರೆದಿದ್ದಾರೆ. ಇವರ ಕಾಲದ ಶಾಸನಗಳಲ್ಲಿ ಕಂಡುಬರುವ ಕರಭೂಮಿ, ಹೊಲದೆರೆ, ಅರುವಣ, ದಶವಂದ, ಮೂರಲೊಂದು ಪಣ ಮುಂತಾದವು ಭೂಕಂದಾಯವನ್ನು ಸೂಚಿಸುವ ಪದಗಳಾಗಿವೆ. ಸಿದ್ದಾಯವೆಂಬ ತೆರಿಗೆ ಫಲವತ್ತಾದ ಭೂಮಿಯ ಮೇಲೆ ವಿಧಿಸುತ್ತಿದ್ದ ವಾರ್ಷಿಕ ಕಂದಾಯವಾಗಿದ್ದು, ವಿಜಯನಗರೋತ್ತರ ಕಾಲದಲ್ಲಿಯೂ ಮುಂದುವರೆದಿದೆ. ಇದನ್ನು ಕೃಷಿಯ ಆದಾಯವೆನ್ನುತ್ತಾರೆ(ಮಲ್ಲಿಕಾರ್ಜುನಪ್ಪ, ೨೦೧೬:೧೧೬). ವಿಜಯನಗರೋತ್ತರ ಕಾಲದಲ್ಲಿ ಗುರುತಿಸಿಕೊಂಡ ಹಂಡೆ ಪಾಳೆಯಗಾರರು ೧೭೭೬ರಲ್ಲಿ ಹಿರೇ ರಾಮಪ್ಪನಾಯಕರು ತೊಲಮಾಮಿಡಿ, ಸಂಗನಕಲ್ಲು ಮತ್ತು ಚಾಗನೂರು ಗ್ರಾಮಗಳನ್ನು ತನ್ನ ಹಿರಿಯರಿಗೆ ಸುಕೃತವಾಗಬೇಕೆಂದು ಕೊಟ್ಟೂರುಸ್ವಾಮಿಗೆ ದಾನ ನೀಡುತ್ತಾನೆ. ರಾಜನು ಈ ಊರಿನ ಭೂಮಿಗಳ ಉತ್ಪತ್ತಿಯನ್ನು ನಿಗದಿ ಮಾಡಿ ಆ ಉತ್ಪತ್ತಿಯನ್ನು ಬಳ್ಳಾರಿಯ ಕೊಟ್ಟೂರು ಮಠದ ದಾಸೋಹಕ್ಕೆ ನೀಡಿದ್ದರು(ದೇವರಕೊಂಡಾರೆಡ್ಡಿ, ಕ.ವಿ.ವಿ. ಶಾ.ಸಂ. ಹೊ–೬:೧೮೩). ಈ ಮೂಲಕ ವಿಜಯನಗರೋತ್ತರ ಕಾಲಾವಧಿಯಲ್ಲಿ ಅನೇಕ ಸ್ಥಳೀಯ ಪಾಳೆಯಪಟ್ಟುಗಳು ಕರ್ನಾಟಕದಲ್ಲಿ ವಿಜಯನಗರದ ಸಾಮಂತ ಪ್ರಭುತ್ವಗಳಾಗಿ ಪೂರ್ವ ಮರ್ಯಾದೆಯನ್ನು ಪಾಲಿಸುತ್ತಿದ್ದಂತೆ ಕೆಲವು ಹೊಸ ತೆರಿಗೆಗಳನ್ನು ವಿಧಿಸುತ್ತಾ ತಮ್ಮ ಸಂಸ್ಥಾನಗಳನ್ನು ಭದ್ರಗೊಳಿಸುವ ಕಾರ್ಯವನ್ನು ನಿರ್ವಹಿಸಿದರು. ತೆರಿಗೆಪದ್ಧತಿಯು ಪ್ರಾಚೀನ ಕಾಲದಿಂದಲೂ ಅನೇಕ ಮೂಲಗಳಿಂದ ಸಂಗ್ರಹವಾಗುತ್ತಿದ್ದು, ವಿಜಯನಗರೋತ್ತರ ಕಾಲದಲ್ಲಿಯೂ ಮುಂದುವರಿದಿದೆ. ಕರ್ನಾಟಕದಲ್ಲಿ ವಿಜಯನಗರೋತ್ತರ

ಕಾಲಾವಧಿಯು ಯುರೋಪಿಯನ್ನರ ಕರ್ನಾಟಕದಲ್ಲಿ ತಮ್ಮ ನೆಲೆ ಕಂಡುಕೊಳ್ಳುವ ಕಾಲವಾಗಿದ್ದು, ಇಲ್ಲಿನ ತೆರಿಗೆಯ ವ್ಯವಸ್ಥೆಯ ಮೇಲೆ ಅವರ ಪ್ರಭಾವವನ್ನು ಮರೆಯುವಂತಿಲ್ಲ. ವ್ಯಾಪಾರದ ಮೇಲೆ ಬೇರೆ ಬೇರೆ ಸ್ಥಳಸುಂಕ, ಮಾರುಕಟ್ಟೆ ಸುಂಕಗಳನ್ನು ಏರಿದರು.

ಕಂದಾಯ ವ್ಯವಸ್ಥೆಯಲ್ಲಿ ಪೂರ್ವಮರ್ಯಾದೆಯನ್ನು ಪಾಲಿಸುವ ಜೊತೆಗೆ ಕೆಲವು ಹೊಸ ತೆರಿಗೆಗಳನ್ನು ಪ್ರಯೋಗಿಸಿ ಅಭಿವೃದ್ಧಿಪಡಿಸಿದವರಲ್ಲಿ ಮೈಸೂರಿನ ಒಡೆಯರು ಪ್ರಮುಖರು. ಮೈಸೂರು ಒಡೆಯರು ಹಿಂದೂ ಸ್ಮೃತಿಗಳನ್ನು, ಶಾಸ್ತ್ರಗಳನ್ನು ಅತಿಕ್ರಮಿಸಿ ನಡೆಯಲಿಲ್ಲ ಎಂದು ವಿಲ್ಸ್ ಹೇಳುತ್ತಾನೆ(ಷೇಕ್ ಆಲಿ, ಸಂ.೩, ೨೦೧೮:೨೪೪). ಏನೇ ವಾದವಿವಾದಗಳಿದ್ದರು ವಿಜಯನಗರ ಅರಸರ ಕಾಲದಲ್ಲಿದ್ದ ತೆರಿಗೆಯ ಪ್ರಮಾಣಕ್ಕಿಂತ ಇವರ ಕಾಲದಲ್ಲಿ ಕಡಿಮೆ ಇದ್ದವು.

ಈ ರಾಜರ ಭೂಕಂದಾಯ ನಿಗದಿಗೆ ಆಧಾರವಾಗಿದ್ದದ್ದು ಮುಖ್ಯವಾಗಿ ನೆಲದ ಫಲವತ್ತತೆ. ಭೂಕಂದಾಯ ವ್ಯವಸ್ಥೆಗೆ ತಳಹದಿ ಹಾಕಿದವರು ಚಿಕ್ಕದೇವರಾಜ ಒಡೆಯರು. ಜಮೀನನ್ನು ಉತ್ತಮ, ಮದ್ಯಮ ಹಾಗೂ ಕನಿಷ್ಠ ಕೆಳಮಟ್ಟದ್ದು ಎಂದು ಮೂರು ವಿಧಗಳಾಗಿ ವಿಂಗಡಿಸಿದ್ದರು. ಕೃಷಿಭೂಮಿಯ ಈ ಬಗೆಯ ವರ್ಗೀಕರಣಕ್ಕೆ ಕರ್ನಾಟಕಕ್ಕೆ ಹೊಸದಲ್ಲ. ವಿಜಯನಗರ ಕಾಲದಲ್ಲಿಯೇ ಇತ್ತು. ಕಪ್ಪು ಮಣ್ಣಿನ ನೆಲ, ತೋಟಗಳು, ಬಂಜರುಭೂಮಿ, ಹಿತ್ತಲುಗಳು, ಉಪ್ಪು ಮಣ್ಣಿನ ನೆಲ, ಇವೆಲ್ಲವನ್ನೂ ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ನೆಲ, ಪರೀಕ್ಷಿಸಿ ಕಂದಾಯ ನಿಗದಿ ಮಾಡಲಾಯಿತು. ಅವರು ೨೦೦ ಕುಂಬ ನೆಲಕ್ಕೆ ೬.೪ ಮತ್ತು ೨ ಹಣವನ್ನು ಸರಕಾರಿ ಭಾಗವಾಗಿ ನಿಗದಿಪಡಿಸಿದರು. ನಿಗದಿಯ ಸಮಯದಲ್ಲಿ ನೆಲದ ಫಲವಂತಿಕೆ ಮತ್ತಿತರ ಪರಿಸ್ಥಿತಿಗಳನ್ನು ಗಣನೆಗೆ ತೆಗೆದುಕೊಂಡು ಅವುಗಳಿಗೆ ತಕ್ಕಂತೆ ಬದಲಾವಣೆ ಮಾಡಲಾಗುತ್ತಿತ್ತು.

ಚಿಕ್ಕದೇವರಾಜ ಒಡೆಯರು ಕಂದಾಯವನ್ನು ಆಮೂಲಾಗ್ರವಾಗಿ ವ್ಯವಸ್ಥೆ ಮಾಡಿದರು. ಸಮಸ್ತ ಆಡಳಿತವನ್ನು ೧೮ ಇಲಾಖೆಗಳನ್ನಾಗಿ ಅವರು ರೂಪಿಸಿದರು. ಅಠಾರ ಕಛೇರಿ ಎನ್ನುವುದು ಅದೇ ಆಗಿದೆ. ಈ ಪದವು ಇಂದಿಗೂ ಮೈಸೂರು ಸಂಸ್ಥಾನದಲ್ಲಿ ಜನಪ್ರಿಯವಾಗಿದ್ದು, ಈ ಕಛೇರಿಯ ಕಲ್ಪನೆಯು ಮೊಗಲರ ಔರಂಗಜೇಬ್ ಆಡಳಿತದ ಪ್ರಭಾವದಿಂದ ಅಳವಡಿಸಿಕೊಂಡರು. ಸುಂಕದ ಚಾವಡಿಯು ಕಂದಾಯದ ಲೆಕ್ಕಪತ್ರಗಳ ನೀಡುವ ಚಾವಡಿಯಾಗಿತ್ತು.

ಚಿಕ್ಕದೇವರಾಜ ಒಡೆಯರು ರೈತರಿಗೆ ಬೇಕಾದಷ್ಟು ವಿನಾಯಿತಿಗಳನ್ನು ನೀಡಿ ಅವರು ಬಂಜರು ಭೂಮಿಯನ್ನು ಸಾಗುವಳಿಗೆ ಹೊಸದಾಗಿ ತರಲು ಪ್ರೋತ್ಸಾಹಿಸಿದರು. ಅಂತಹ ರೈತರಿಂದ ಚಿಕ್ಕದೇವರಾಜರು ಮುಂದಿನ ಮೂರು ವರ್ಷಗಳ ಕಾಲ ಉತ್ಪನ್ನದ ೧/೩ ಕಂದಾಯವನ್ನು ಭಾಗ ಕಂದಾಯವನ್ನು ಸರ್ಕಾರಕ್ಕೆ ಕೊಡುತ್ತಿದ್ದರು. ಮಧ್ಯಮ ಗುಣದ ಜಮೀನು ೧೬ ಹಣ ಉತ್ಪನ್ನವನ್ನು ನೀಡುತ್ತಿದ್ದರೆ, ಐದು ವರ್ಷಗಳ ಕಾಲ ೧/೪ ಭಾಗವನ್ನು ಕಂದಾಯವಾಗಿ ಪಾವತಿ ಮಾಡಬೇಕಾಗಿತ್ತು. ಅದಾದ ಮೇಲೆ ಮಾಮೂಲು ದರದಲ್ಲಿ ತೆರಿಗೆ ವಸೂಲಾಗುತ್ತಿತ್ತು(ಕೃಷ್ಣರಾವ್, ಕೇಶವಭಟ್ಟ, ೧೯೭೦:೯೩೬).

ಮೈಸೂರು ಒಡೆಯರು ತೋಟಗಳ ಮೇಲೆ ಕಂದಾಯ ವಿಧಿಸುವ ಪದ್ಧತಿ ಇತ್ತು. ಆ ಕಡೆಯಲ್ಲಿ ಅಡಿಕೆ, ತೆಂಗುಗಳೆರಡರ ಮೇಲೆ ಫಸಲಿನ ಅರ್ಧಾಂಶವನ್ನು ಕಂದಾಯವಾಗಿ ವಿಧಿಸುತ್ತಿದ್ದರು. ತೆಂಗಿನ ಮರಗಳು ಮಾತ್ರ ಕಂದಾಯಕ್ಕೆ ಗುರಿಯಾಗುತ್ತಿದ್ದ ಕಡೆ ಅಡಿಕೆ ಮರಗಳ ಮೇಲೆ ಆಯಾ ದೇಶಾಚಾರಕ್ಕೆ ತಕ್ಕಂತೆ ಕಂದಾಯ ವಿಧಿಸಿದ್ದರು. ವಿಜಯನಗರ ಕಾಲಾವಧಿಗೆ ಹೋಲಿಸಿದರೆ ಮೈಸೂರು ಒಡೆಯರು ತೆರಿಗೆ ಪ್ರಮಾಣವನ್ನು ಕಡಿಮೆಗೊಳಿಸಿದರು. ಮೈಸೂರಿನ ಚಿಕ್ಕದೇವರಾಜ ಒಡೆಯರ ನಂತರ ಹೈದರ್ ಮತ್ತು ಟಿಪ್ಪು ಆಳ್ವಿಕೆಯ ವೇಳೆಗೆ ಕಂದಾಯ ಪ್ರಮಾಣದಲ್ಲಿ ಸಂಪೂರ್ಣ ಬದಲಾವಣೆಯಾಗಿದ್ದು, ಟಿಪ್ಪು ಕಂದಾಯವನ್ನು ಸಮಗ್ರ ಭೂಮಿಯ ಮೇಲೆ ಹಕ್ಕು ಸಾಧಿಸಿ ಫಸಲಿನ ಮುಕ್ಕಾಲಂಶವನ್ನು ಕಂದಾಯವಾಗಿ ಸೆಳೆದುಕೊಳ್ಳುತ್ತಿದ್ದನು.

ಮೈಸೂರು ಸಂಸ್ಥಾನದ ಸ್ಥಾಪಕರಾದ ರಾಜ ಒಡೆಯರು ಪಾಳೆಯಗಾರರ ಕಾಲದ ಕಂದಾಯ ವ್ಯವಸ್ಥೆಯನ್ನೇ ಅನುಸರಿಸಿಕೊಂಡು ಬಂದಿದ್ದರೆಂದು ತಿಳಿಯುತ್ತದೆ. ಆದಿ ಒಡೆಯರು ಭೂಮಿಯ ಒಟ್ಟು ಫಸಲಿನ ನಾಲ್ಕನೆಯ ಒಂದಂಶವನ್ನು ಕಂದಾಯವಾಗಿ ಪಡೆಯುತ್ತಿದ್ದರೆಂದು ತೋರುತ್ತದೆ(ಕೃಷ್ಣರಾವ್, ಕೇಶವಭಟ್ಟ, ೧೯೭೦:೯೩). ವಿಜಯನಗರದ ಕಂದಾಯವನ್ನು ಗಮನಿಸಿ ಮೈಸೂರು ಒಡೆಯರ ಕಾಲದ ಕಂದಾಯವನ್ನು ಹೋಲಿಸಿದಾಗ ಕೆಲವೊಂದು ಭಿನ್ನತೆಯ ಅಂಶಗಳನ್ನು ಗುರುತಿಸಬಹುದಾಗಿದೆ. ವಿಜಯನಗರದಲ್ಲಿ ೧/೬ ಭಾಗವನ್ನು ಕಂದಾಯವಾಗಿ ವಿಧಿಸಿದರೆ ಮೈಸೂರು ಒಡೆಯರ ಕಾಲದಲ್ಲಿ ೧/೪ ಭಾಗವನ್ನು ಕಂದಾಯವಾಗಿ ವಸೂಲಿ ಮಾಡುತ್ತಿದ್ದರು. ಈ ರೀತಿಯ ಬದಲಾವಣೆಗೆ ಕಾರಣವೆಂದರೆ ಗೆದ್ದ ಪ್ರಾಂತ್ಯಗಳಲ್ಲಿ ತಮ್ಮ ಪ್ರಭಾವವನ್ನು ಸ್ಥಿರಪಡಿಸಿಕೊಳ್ಳಲು ಈ ರೀತಿಯ ಕಂದಾಯದ ಭಾರವನ್ನು ತಗ್ಗಿಸಿರಬಹುದು.

ಮೈಸೂರು ಸಂಸ್ಥಾನದಲ್ಲಿ ಪ್ರಚಲಿತವಿದ್ದ ಇನ್ನಿತರೇ ತೆರಿಗೆಗಳಲ್ಲಿ ಸಾಮಾಜಿಕ ತೆರಿಗೆಯು ಒಂದು. ಸಮಯಾಚಾರ- ಪ್ರಜಾ ಸಮುದಾಯ ಸಾಂಪ್ರದಾಯಿಕವಾದ ಆಚರಣೆಗಳ ಮೇಲಣ ತೆರಿಗೆ, ಕೂಟಾಚಾರ- ಸಂಘಸಂಸ್ಥೆಗಳ ಹಕ್ಕು ಭಾದ್ಯತೆಗಳ ಮೇಲಣ ತೆರಿಗೆ, ಜಾತಿಮಾನ್ಯ- ಬೇರೆ ಬೇರೆ ಜಾತಿಗಳ ಹಕ್ಕು ಬಾಧ್ಯತೆಗಳ ಮೇಲಣ ತೆರಿಗೆ, ಮದುವೆತೆರಿಗೆ, ವೃತ್ತಿತೆರಿಗೆ, ಆಸ್ತಿತೆರಿಗೆ, ಈ ಮೂಲಕ ಮೈಸೂರು ಸಂಸ್ಥಾನದ ಈ ರೀತಿಯ ತೆರಿಗೆಗಳನ್ನು ಗುರುತಿಸಬಹುದಾಗಿದೆ. ಈ ತೆರಿಗೆಗಳನ್ನು ಗುತ್ತಿಗೆಗೆ ಕೊಟ್ಟು ಸಂಗ್ರಹಿಸಲಾಗುತ್ತಿತ್ತು.

ಹದಿನೆಂಟನೆಯ ಶತಮಾನದಲ್ಲಿ ಬ್ರಾಹ್ಮಣ ನಿವೇಶನಗಳ ಮೇಲಣ ತೆರಿಗೆ, ಊಳಿಗಮಾನ್ಯದ ಅರೆವಾಸಿ ತೆರಿಗೆ, ಮಾನ್ಯದ ಜೋಡಿ, ಪಟ್ಟೆಕಾಣಿಕೆ, ಮುದ್ರೆಕಾಣಿಕೆ, ಸೊಪ್ಪಿನ ತೋಟಗಳ ಮೇಲಣ, ಚಿಲುವಣ ಪೈರುಗಳ ಮೇಲಣ ತೆರಿಗೆ, ತಿಪ್ಪೆಕಂದಾಯ, ದಂಡಿನ ಕಾಣಿಕೆ, ಕುರಿ ತೆರಿಗೆ, ಮನೆ ತೆರಿಗೆ, ಬಾಲತೆರಿಗೆ ಹೀಗೆ ಮೈಸೂರು ಒಡೆಯರು ವಿವಿಧ ರೀತಿಯ ತೆರಿಗೆಗಳನ್ನು ವಿಧಿಸಿರುವುದನ್ನು ನೋಡಬಹುದು. ಈ ತೆರಿಗೆಗಳು ಒಡೆಯರ ಕಾಲದಲ್ಲಿ ಹೆಚ್ಚು ಪರಿಚಿತವಾದವು.

ಮೈಸೂರು ಒಡೆಯರ ಕಾಲದಲ್ಲಿ ಅಬಕಾರಿ ಶುಲ್ಕ ಎಂಬ ಕಂದಾಯವನ್ನು ವಿಧಿಸುತ್ತಿದ್ದರು. ಭಟ್ಟಿತೆರಿಗೆ ಇಲ್ಲವೇ ಈಚಲಕಂದಾಯ ಎಂಬ ಹೆಸರಿತ್ತು. ಉಪ್ಪಿನ ಮಾಳದ ತೆರಿಗೆ, ಹೊಗೆಸೊಪ್ಪಿನ

ತೆರಿಗೆ, ಆಯಾತ ನಿರ್ಯಾತ ಕರಗಳಿಗೆ ಒಳವರು ಮತ್ತು ಹೊರವರು ಎಂಬ ಹೆಸರುಗಳಿದ್ದವು. ಸರಕುಗಳ ಮೇಲೆ ಕಿರಾಣಿ, ಗಂದಿಗೆ, ಗೇಣಸು, ಜವಳಿ ಮತ್ತು ವಿವಿಧ ಬಗೆಯ ಸರಕುಗಳ ಮೇಲಿನ ಇವರ ಕಾಲದ ಮುಖ್ಯ ಬದಲಾವಣೆಯೆಂದರೆ ತೆರಿಗೆಪದ್ಧತಿ ಆಯಾ ಅರಸರ ಕಾಲಕ್ಕೆ ಒಂದೊಂದು ರೀತಿಯಲ್ಲಿ ಬದಲಾವಣೆಗಳಾಗುತ್ತಿದ್ದವು. ಪರಿಸ್ಥಿತಿಗೆ ತಕ್ಕಂತೆ ತೆರಿಗೆಯನ್ನು ವಸೂಲಿ ಮಾಡುತ್ತಿದ್ದರೆಂದು ಹೇಳಬಹುದು. ಈ ಮೂಲಕ ಮೈಸೂರಿನ ಒಡೆಯರ ಕಾಲದಲ್ಲಿ ತೆರಿಗೆಯು ನಿರ್ಧರಿತವಾಗುತ್ತಿತ್ತು. ತೆರಿಗೆಯು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಭಿನ್ನವಾಗಿರುತ್ತಿತ್ತು. ಸನ್ನಿವೇಶಕ್ಕೆ ತಕ್ಕಂತೆ ತೆರಿಗೆಯು ಒಂದು ಹಂತದಿಂದ ಇನ್ನೊಂದು ಹಂತಕ್ಕೆ ಭಿನ್ನತೆಯನ್ನು ಹೊಂದಿದೆ.

ದಳವಾಯಿಗಳ ಕಾಲದಲ್ಲಿ ಜೀತಗಾರರು, ಸಂಬಳಗಾರರು ಸುಂಕವನ್ನು ನೀಡಬೇಕಿತ್ತು. ಮೈಸೂರು ಒಡೆಯರ ಕಾಲಾವಧಿಯಲ್ಲಿದ್ದಂತೆ ದಳವಾಯಿಗಳ ಕಾಲದಲ್ಲಿಯೂ ತೆರಿಗೆ ಮುಂದುವರಿದಿದ್ದು, ಅಂತಹ ಏನೂ ವ್ಯತ್ಯಾಸಗಳನ್ನು ಗುರುತಿಸಲಾಗುವುದಿಲ್ಲ.

ಕಳಲೆ ನಂಜರಾಜನ ಕಾಲದಲ್ಲಿ ನಜರಾನ ಎಂಬ ವಿಶಿಷ್ಟ ರೀತಿಯ ಹೊಸ ಕಂದಾಯವನ್ನು ಜಾರಿಗೊಳಿಸಿದ್ದನು. ರಾಜ್ಯದ ಬೊಕ್ಕಸಕ್ಕೆ ಅನಿವಾರ್ಯ ಕಾರಣಗಳಿಂದ ಹಣದ ಅವಶ್ಯಕತೆ ಇದ್ದ ಸಂದರ್ಭದಲ್ಲಿ ಆರ್ಥಿಕ ಸಮತೋಲನವನ್ನು ಕಾಪಾಡುವ ಸಲುವಾಗಿ ಆಯ್ದ ಪ್ರಜೆಗಳು, ಅಧಿಕಾರಿಗಳಿಂದ ಈ ವಿಶಿಷ್ಟ ರೀತಿಯ ಕರ ವಿಧಿಸಲಾಗುತ್ತಿತ್ತು(ಸುಧಾಮಣಿ, ೨೦೦೯:೧೩೪).

೧೭೫೯ರಲ್ಲಿ ಮರಾಠರು ಮೈಸೂರಿನ ಮೇಲೆ ಆಕ್ರಮಣ ಮಾಡಿದ ಸಂದರ್ಭದಲ್ಲಿ ಅವರಿಗೆ ನೀಡಬೇಕಾಗಿದ್ದ ೩೨ ಲಕ್ಷ ರೂ.ಗಳನ್ನು ಕೊಡಲು ಹಣ ಸಾಲದೆ ಹತ್ತು ಜಿಲ್ಲೆಗಳನ್ನು ತಾತ್ಕಾಲಿಕವಾಗಿ ಬಿಟ್ಟು ಕೊಡಲಾಯಿತು. ನಂತರ ದಳವಾಯಿ ನಂಜರಾಜನ ಆದೇಶದ ಮೇರೆಗೆ ಹೈದರಾಲಿಯು ಮರಾಠರಿಗೆ ಹಣ ಕೊಟ್ಟು ಅವರ ಅಧೀನದಲ್ಲಿದ್ದ ಜಿಲ್ಲೆಗಳನ್ನು ಹಿಂದಿರುಗಿಸಿ ಪಡೆಯಲು ೩೨ ಲಕ್ಷ ರೂಪಾಯಿಗಳ ಮೊತ್ತದ ಹಣವನ್ನು ನಜರಾನದ ಮೂಲಕ ಸಂಗ್ರಹಿಸಿದನು. ಆ ವೇಳೆಯಲ್ಲಿ ನಜರಾನವನ್ನು ನೀಡಿದ್ದವರಲ್ಲಿ ರಾಜ್ಯದ ಎಲ್ಲ ಮುಖ್ಯ ಅಧಿಕಾರಿಗಳು ಇದ್ದರು. ಸಂಸ್ಥಾನದ ಪ್ರತಿಯೊಬ್ಬ ಅಧಿಕಾರಿಯೂ ತನ್ನ ಅಂತಸ್ತು ಮತ್ತು ವೇತನಕ್ಕೆ ಅನುಗುಣವಾಗಿ ನಜರಾನದ ಲೆಕ್ಕಕ್ಕೆ ಹಣ ಪಾವತಿ ಮಾಡಬೇಕಾಯಿತು.

ಪ್ರಾಚೀನ ಕಾಲದಿಂದಲೂ ಯುದ್ಧಗಳು ಚರಿತ್ರೆಯಲ್ಲಿ ಪ್ರಮುಖ ಪಾತ್ರ ವಹಿಸಿವೆ. ಈ ಯುದ್ಧದಲ್ಲಿ ಸಾಮ್ರಾಜ್ಯದ ಗಡಿಗಳನ್ನು ವಿಸ್ತರಿಸುವ ಒಂದು ಉದ್ದೇಶವನ್ನು ಹೊಂದಿದ್ದರಿಂದ ಇನ್ನೊಂದೆಡೆ ರಾಜ್ಯದ ಸಂಪತ್ತನ್ನು ಹೆಚ್ಚಿಸುವ ಉದ್ದೇಶವು ಸಹ ಇರುತ್ತದೆ. ಅನ್ಯರ ಆಕ್ರಮಣಗಳಿಂದ ಆದ ನಷ್ಟವನ್ನು ತುಂಬಿಸುವ ಉದ್ದೇಶವು ಈ ಯುದ್ಧಗಳಿಗಿರುತ್ತದೆ. ಇದರಿಂದ ತಂದ ಸಂಪತ್ತು ಸಹ ರಾಜ್ಯಾಧಾಯಕ್ಕೆ ಸೇರ್ಪಡೆಯಾಗುತ್ತಿತ್ತು.

ಈ ಮೂಲಕ ಮೈಸೂರು ಒಡೆಯರು ಮತ್ತು ದಳವಾಯಿಗಳ ಆಳ್ವಿಕೆಯ ಕಾಲದ ತೆರಿಗೆಯ ಸ್ವರೂಪ ಒಂದು ರೀತಿಯಾದರೇ ೧೭೬೧ರ ನಂತರ ಮೈಸೂರು ಸಂಸ್ಥಾನದ ತೆರಿಗೆಯ ಸ್ವರೂಪ

ಬೇರೆ ವಿಭಿನ್ನ ಆಯಾಮಗಳನ್ನು ಪಡೆದು ವಸಾಹತು ಮೈಸೂರು ಸಂಸ್ಥಾನವಾಗಿ ಇಂಗ್ಲಿಶರ ಆಳ್ವಿಕೆಗೆ ಒಳಪಟ್ಟಿರುವುದನ್ನು ಗುರುತಿಸಬಹುದು.

ಹೈದರ್‌ನ ಕಾಲಾವಧಿಯು ಸಂಸ್ಥಾನಗಳೊಂದಿಗೆ ಕಾದಾಟದಲ್ಲಿಯೇ ಕಳೆಯಬೇಕಾಯಿತು. ಭೂಕಂದಾಯ ಮತ್ತಿತರ ತೆರಿಗೆಗಳ ಕಡೆ ಯಾವುದೇ ಗಮನ ಕೊಡಲಿಲ್ಲ. ಹಾಗಾಗಿ ಚಿಕ್ಕದೇವರಾಜ ಒಡೆಯರು ರೂಪಿಸಿದ ಕಂದಾಯವನ್ನೇ ಹೈದರ್ ತನ್ನ ಆಳ್ವಿಕೆಯುದ್ದಕ್ಕೂ ಮುಂದುವರಿಸಿದನು. ತಂದೆ ಕಾಲದಲ್ಲಿ ಟಿಪ್ಪು ಕಂದಾಯ ವಸೂಲಿಗಾರನಾಗಿ ಕೆಲವು ಪ್ರಾಂತ್ಯಗಳಲ್ಲಿ ಕಾರ್ಯ ನಿರ್ವಹಿಸಿದನು. ಟಿಪ್ಪು ಜಾರಿಗೆ ತಂದ ಮುಖ್ಯವಾದ ಬದಲಾವಣೆಯೆಂದರೆ ಭೂಕಂದಾಯ. ಇದು ಸರ್ಕಾರಕ್ಕೂ ರೈತರಿಗೂ ನೇರವಾಗಿ ಸಂಬಂಧಿಸಿರುವಂತೆ ಮಾಡಿದ್ದು, ರಾಜ್ಯಾದಾಯದ ಬಹುಭಾಗವನ್ನು ನುಂಗಿಬಿಡುತ್ತಿದ್ದ ಮಧ್ಯವರ್ತಿಗಳ ಹಾವಳಿಯನ್ನು ತಡೆದಿದ್ದು(ಷೇಕ್ ಅಲಿ,ಬಿ,೨೦೧೮:೬೪೪). ರಾಜ್ಯದ ಆದಾಯವನ್ನು ಹೆಚ್ಚಿಸುವ ಸಲುವಾಗಿ ಮೈಸೂರು ರಾಜ್ಯದಲ್ಲಿ ಬಳಕೆಯಿದ್ದ ಮತ್ತು ಮೊಘಲ್ ಮಾದರಿಯ ಅಂಶಗಳನ್ನು ಜೊತೆಗೂಡಿಸಿ ವ್ಯಾವಸಾಯಿಕ ಕಂದಾಯವನ್ನು ಕೇಂದ್ರೀಕರಿಸಲು ಸ್ಥಳೀಯ ಅಧಿಕಾರಿಗಳನ್ನು ದೇಶಮುಖರನ್ನು ಅಧಿಕಾರದಿಂದ ತೆಗೆದು ರೈತಾಪಿ ಕಂದಾಯವನ್ನು ನೇರವಾಗಿ ಸಂಗ್ರಹಿಸಲು ಕ್ರಮ ಕೈಗೊಂಡನು.

ಈ ಮೂಲಕ ಪ್ರಾಚೀನ ಕಾಲದಿಂದಲೂ ಅಸ್ತಿತ್ವದಲ್ಲಿದ್ದ ಮಧ್ಯಮವರ್ಗದ ಅಧಿಕಾರಿಗಳು ತಮ್ಮ ಅಸ್ತಿತ್ವವನ್ನು ಕಳೆದುಕೊಂಡರು. ಕಂದಾಯ ಸಂಗ್ರಹಣೆ ಮತ್ತು ವಸೂಲಿಯ ಬಗ್ಗೆ ಅಪಾರ ಜ್ಞಾನವನ್ನು ಹೊಂದಿದ್ದ ಟಿಪ್ಪು ಸುಲ್ತಾನ್ ಯಾವ ಭಾಗದಲ್ಲಿ ರೈತರಿಗೆ ತೊಂದರೆ ಆಗುತ್ತಿದೆ ಎಂಬುದನ್ನು ಮನಗಂಡು ಆ ಮೂಲಕ ಕಂದಾಯ ಸುಧಾರಣೆಯ ಕಡೆ ಗಮನ ಹರಿಸಿದ್ದರು.

ಟಿಪ್ಪು ಕಾಲದಲ್ಲಿ ಇಡೀ ರಾಜ್ಯದ ಒಡೆತನದ ಭೂಮಿಯನ್ನು ರೈತರಿಗೆ ಗೇಣಿಗೆ ನೀಡಲಾಗುತ್ತಿತ್ತು. ನಿರ್ದಿಷ್ಟಪಡಿಸಿದ ಗೇಣಿಯನ್ನು ರಾಜ್ಯಕ್ಕೆ ನೀಡುವಲ್ಲಿ ವಿಫಲವಾದ ಸಂದರ್ಭಲ್ಲಿ, ಆ ಭೂಮಿಯನ್ನು ಬೇರೆ ಇತರೆ ರೈತರಿಗೆ ಗೇಣಿಗೆ ನೀಡಲಾಗುತ್ತಿತ್ತು. ಈ ಮೂಲಕ ಇದುವರೆಗೂ ಪ್ರಭುತ್ವವು ರಾಜ್ಯದ ಭೂಮಿಯನ್ನು ಮಧ್ಯವರ್ತಿಗಳ ಮೂಲಕ ರೈತರಿಗೆ ತಲುಪುತ್ತಿದ್ದರೆ, ಟಿಪ್ಪು ಕಾಲದಲ್ಲಿ ನೇರವಾಗಿ ರೈತರಿಗೆ ಆ ಭೂಮಿಯು ತಲುಪುತ್ತಿತ್ತು. ಇದರಿಂದ ಬಂದ ಆದಾಯದ ಬೆಳೆಯಲ್ಲಿ ನಿಗದಿಪಡಿಸಿದ ಕಂದಾಯವನ್ನು ರೈತರು ಸರ್ಕಾರಕ್ಕೆ ಸಲ್ಲಿಸುತ್ತಿದ್ದರು.

ಟಿಪ್ಪು ಸುಲ್ತಾನನ ಆರ್ಥಿಕ ನೀತಿಯ ಇನ್ನೊಂದು ಮುಖ್ಯಾಂಶವೆಂದರೆ ಸಂಸ್ಥಾನದ ಕೃಷಿ ಕೂಲಿಯಾಗಲೀ ವ್ಯಾಪಾರವಾಗಲೀ ಅಥವಾ ಕೈಗಾರಿಕೋದ್ಯಮವಾಗಲೀ ಯಾವುದೇ ಆರ್ಥಿಕ ಕ್ರಮಗಳನ್ನು ತನ್ನ ಜರೂರಿನ ರಾಜಕೀಯ ಉದ್ದೇಶಗಳಿಗೆ ಅನುಗುಣವಾಗಿ ಬಳಸಿ ರೂಪಿಸಿದನು.

ಕೂಡು ಬಂಡವಾಳಶಾಹಿ ನೀತಿಯನ್ನು ರೂಪಿಸಿದ್ದರಿಂದ ಕಂಪನಿಗಳನ್ನು ಬಳಸಿಕೊಂಡ ಬ್ರಿಟಿಶ್ ಈಸ್ಟ್ ಇಂಡಿಯಾ ಕಂಪನಿಯು ಶ್ರೀಮಂತವಾಗಿ ಬೆಳೆದು ವಸಾಹತುಶಾಹಿ ಪ್ರಭುತ್ವದ ವಿಸ್ತರಣಾ ನೀತಿಯನ್ನು ರಾಜಕೀಯ ಆಧಿಪತ್ಯಕ್ಕೆ ಸಾಧನವನ್ನಾಗಿ ಬಳಸಿಕೊಂಡಿದ್ದನು.

ಪ್ರತಿವರ್ಷ ಭೂಮಿಯನ್ನು ಅಳತೆ ಮಾಡಿ ಅಲ್ಲಿ ಬೆಳೆಯುತ್ತಿದ್ದ ಬೆಳೆಯ ಫಸಲಿನ ಆಧಾರದ ಮೇಲೆ ಕಂದಾಯವನ್ನು ವಿಧಿಸಲಾಗುತ್ತಿತ್ತು. ರಾಜನೇ ನೇರವಾಗಿ ರೈತರಿಂದ ಭೂಕಂದಾಯವನ್ನು

ವಸೂಲಿ ಮಾಡುತ್ತಿದ್ದನು. ಅಧಿಕಾರಿಗಳು ರೈತರ ದೈನಂದಿನ ಆಂತರಿಕ ವಿಚಾರದಲ್ಲಿ ತಲೆಹಾಕುವಂತಿರಲಿಲ್ಲ. ಅಲ್ಲದೇ ಕಂದಾಯ ವಸೂಲಿ ಸಂದರ್ಭದಲ್ಲಿಯೂ ಅವರನ್ನು ಶೋಷಿಸುವಂತಿರಲಿಲ್ಲ. ಶಾಂತಿ ಮತ್ತು ಸೌಹಾರ್ದಯುತವಾಗಿ ಕಂದಾಯ ವಸೂಲಿ ಮಾಡುವ ಕಟ್ಟಾಜ್ಞೆ ರಾಜ್ಯದಿಂದ ಹೊರಡಿಸಲಾಗುತ್ತಿತ್ತು(ಚಂದ್ರಶೇಖರ, ರಾವ್, ೨೦೧೬:೭೭).

ಟಿಪ್ಪುಸುಲ್ತಾನನು ೧೭೮೮ರಲ್ಲಿ ವ್ಯಾಪಕವಾದ ಕಂದಾಯ ಸರ್ವೆಯನ್ನು ನಡೆಸಿ ಅನಧಿಕೃತವಾದ ಭೂಮಿಯನ್ನು ತನ್ನ ಸರ್ಕಾರದ ಸ್ವಾಧೀನಕ್ಕೊಳಪಡಿಸಿಕೊಂಡನು. ಹೆಚ್ಚುವರಿ ಭೂಮಿಯನ್ನು ಅಭಿವೃದ್ಧಿಗೊಳಿಸಿ ಉಳುಮೆ ಯೋಗ್ಯವಾದ ಭೂಮಿಯನ್ನಾಗಿ ಪರಿವರ್ತಿಸಿ ರೈತಾಪಿ ಮತ್ತು ಅಧಿಕಾರಿಗಳಿಗೆ ವಿತರಿಸಿ ವಾಣಿಜ್ಯ ಮತ್ತು ನಗದು ಬೆಳೆಗಳ ಕೃಷಿಗೆ ಬೆಂಬಲಿತವಾಗಿ ಅನೇಕ ಸುಧಾರಣಾ ಕ್ರಮಗಳನ್ನು ಕೈಗೊಂಡನು(ವಸು, ೨೦೦೯:೨೨೦).

ಟಿಪ್ಪು ತನ್ನ ಸಂಸ್ಥಾನದಾದ್ಯಂತ ಬಂಜರುಭೂಮಿ, ಬೆಟ್ಟಗುಡ್ಡಗಳ ತಪ್ಪಲಿನ ಒರಟು ಭೂಮಿಯನ್ನು ಸಹ ಸಾಗುವಳಿ ಮಾಡಲು ರೈತರನ್ನು ಪ್ರೋತ್ಸಾಹಿಸಿದನು. ಅಂತಹ ಭೂಮಿಯನ್ನು ಸಾಗುವಳಿಗೆ ಯೋಗ್ಯಗೊಳಿಸಿ ಉಳುಮೆ ಮಾಡಲು ಮುಂದಾಗುವ ರೈತರಿಗೆ ಮೊದಲ ವರ್ಷ ಕಂದಾಯ ವಸೂಲಿಯಿಂದ ವಿನಾಯಿತಿ ನೀಡಿದನು. ಎರಡನೇ ವರ್ಷದಲ್ಲಿ ಆ ಸಾಗುವಳಿಗೊಳಿಸಿದ ಭೂಮಿಯನ್ನು ಪರಿಶೀಲನೆ ಮಾಡಿ ಕೇವಲ ಆದಾಯದ ಕಾಲು ಭಾಗದಷ್ಟು ಮಾತ್ರ ಕಂದಾಯ ವಸೂಲಿ ಮಾಡುವಂತೆ ಸೂಚಿಸಿದನು. ಅಂತೆಯೇ ಮೂರನೇ ಸಾಗುವಳಿ ವರ್ಷದಲ್ಲಿ ಆದಾಯದ ಅರ್ಧದಷ್ಟನ್ನು ಕಂದಾಯವಾಗಿ ನೀಡಬೇಕಿತ್ತು. ಸಾಗುವಳಿ ನಾಲ್ಕನೇ ವರ್ಷದಿಂದ ರಾಜ್ಯ ವಿಧಿಸುವ ಸಂಪೂರ್ಣ ತೆರಿಗೆಯನ್ನು ಸಂದಾಯ ಮಾಡಬೇಕಿತ್ತು(ಚಂದ್ರಶೇಖರ, ರಾವ್, ೨೦೧೬:೭೭).

ಈ ಮೂಲಕವಾಗಿ ವಿಜಯನಗರೋತ್ತರ ಕಾಲದಲ್ಲಿ ವಿಜಯನಗರದಲ್ಲಿದ್ದಂತಹ ತೆರಿಗೆಪದ್ಧತಿಯನ್ನು ಕೆಲವರು ಮುಂದುವರಿಸಿದರು. ಇನ್ನೂ ಕೆಲವು ಸಾಮಂತ ಮನೆತನಗಳು ಕೆಲವು ಹೊಸ ವಿಧಾನಗಳನ್ನು ಅಳವಡಿಸಿಕೊಳ್ಳುವ ಮೂಲಕ ತೆರಿಗೆಯನ್ನು ವಸೂಲಿ ಮಾಡಲಾರಂಭಿಸಿದರು. ಪ್ರಭುತ್ವಕೇಂದ್ರಿತ ಚರಿತ್ರೆಯಲ್ಲಿ ಪ್ರಭುತ್ವ ವಿಧಿಸಿದ ಕಂದಾಯವನ್ನು ಕಟ್ಟುವ ಕರ್ತವ್ಯವನ್ನು ಅಂದಿನ ಸಾಮಾಜಿಕ ವರ್ಗಗಳು ನಿರ್ವಹಿಸಿದವು. ತೆರಿಗೆಯು ರಾಜ್ಯಾದಾಯದ ಮೂಲವಾಗಿದ್ದು, ತನ್ನ ಪ್ರಭುತ್ವದ ರಕ್ಷಣೆ ಮತ್ತು ಸ್ಥಿರತೆಗಾಗಿ ಕಂದಾಯವನ್ನು ವಿಧಿಸಬೇಕಾಗಿತ್ತು. ಈ ಮೂಲಕ ವಿಜಯನಗರೋತ್ತರ ಕಾಲದ ತೆರಿಗೆಯ ಸ್ವರೂಪವು ಪ್ರಭುತ್ವ ಕೇಂದ್ರಿತ ನೆಲೆಯಲ್ಲಿ ಭೂಕಂದಾಯ ಮತ್ತಿತರ ಸಾಮಾಜಿಕ ತೆರಿಗೆಗಳನ್ನು ಜನರಿಗೆ ವಿಧಿಸುತ್ತಿದ್ದರು. ಜನರು ಆ ತೆರಿಗೆಯನ್ನು ಕಟ್ಟಲು ನಿರಾಕರಿಸಿದ ಉದಾಹರಣೆಗಳೂ ಅಷ್ಟಾಗಿ ಕಂಡುಬಂದಿಲ್ಲ.

ಕರ್ನಾಟಕದಲ್ಲಿ ವಿಜಯನಗರೋತ್ತರ ಕಾಲದಲ್ಲಿ ಪ್ರಮುಖವಾಗಿ ಗುರುತಿಸಿಕೊಂಡ ಯಲಹಂಕ ನಾಡಪ್ರಭುಗಳು ವಿಜಯನಗರ ಸಾಮ್ರಾಜ್ಯದಲ್ಲಿ ಅಸ್ತಿತ್ವದಲ್ಲಿದ್ದಂತಹ ತೆರಿಗೆ ಪದ್ಧತಿಯನ್ನು ಮುಂದುವರಿಸಿದರು. ವಿಜಯನಗರ ಕಾಲದಲ್ಲಿ ರಾಯರೇಖ ಮತ್ತು ಬೀಜಾವರಿ ತೆರಿಗೆಗಳಿರುವಂತೆ ಕೆಂಪೇಗೌಡನ ಆಳ್ವಿಕೆಯಲ್ಲಿಯೂ ತೆರಿಗೆಯಲ್ಲಿ ಇದೇ ನಿಯಮಗಳನ್ನು ಅನುಸರಿಸಿದ್ದನು. ಕೆಂಪೇಗೌಡನು

ನಾಡು, ನುಡಿ, ಸಂಸ್ಕೃತಿ ಚಿಂತನೆಗಳ ಬಗ್ಗೆ ಗಮನ ಹರಿಸಿದ್ದ. ಸಾಮಾನ್ಯ ಜನರಿಗೆ ಅನುಕೂಲವಾಗುವಂತಹ ತೆರಿಗೆಗಳನ್ನು ವಸೂಲಿ ಮಾಡಿದನು. ಭೂಕಂದಾಯದ ಜೊತೆ ವ್ಯಾಪಾರಿ ಸುಂಕ, ಸರಕು ಸೇವಾಸುಂಕ, ವರ್ತಕರು ಮತ್ತು ಕುಶಲಕಸುಬುಗಳ ಮೇಲೆ ಸುಂಕ ಹೀಗೆ ಹಲವಾರು ವಿಧಾನಗಳಿಂದ ತೆರಿಗೆಯನ್ನು ವಸೂಲಿ ಮಾಡುತ್ತಿದ್ದನು.

ಕೆಳದಿ ನಾಯಕರ ಕಾಲದಲ್ಲಿ ಭೂಕಂದಾಯವನ್ನು ವಿಧಿಸುವುದರ ಜೊತೆಗೆ ಕೃಷಿ ಮೂಲಕ ಸಂಬಂಧಿಸಿದ ಠಾಣೆಗಳ, ಮಾರ್ಗಗಳ ಸುಂಕ, ಎತ್ತಿನ ಮಾನ್ಯ, ಅರಣ್ಯಮೂಲದ ಉತ್ಪನ್ನದ ಸುಂಕ, ತೆರಿಗೆ ವಿನಾಯಿತಿ ಸಂದರ್ಭ ಕೃಷಿಯ ತೆರಿಗೆಗಳ ಜೊತೆ ಕೃಷಿಯೇತರ ತೆರಿಗೆಗಳನ್ನು ಕೆಳದಿಯ ನಾಯಕರು ವಿಧಿಸಿದ್ದರು. ಮದುವೆಸುಂಕ, ರಪ್ತು, ಆಮದುಸುಂಕ, ಆಲೆದೆರೆ. ಮುಂತಾದವುಗಳನ್ನು ವಿಧಿಸುತ್ತಿದ್ದರು.

ವಿಜಯನಗರೋತ್ತರ ಕಾಲದಲ್ಲಿ ನಾಯಕರ ಆಳ್ವಿಕೆಯ ಕಾಲದಲ್ಲಿ ಪ್ರಮುಖವಾಗಿ ಗುರುತಿಸಿಕೊಂಡ ಯುರೋಪಿಯನ್ನರು ತೆರಿಗೆಯ ಸ್ವರೂಪದಲ್ಲಿ ಗುರುತಿಸಿಕೊಳ್ಳುತ್ತಾರೆ. ಬ್ರಿಟಿಶ್ ಅಧಿಕಾರಿ ಕ್ರಾಮಲಿನ ಎಂಬುವನು ಅಕ್ಕಿಯ ಒಂದು ಕೋರ್ಜೆಗೆ ಒಂದು ವರಹ ತೆರಿಗೆ ನೀಡಿದ(ಚಟ್ನೀಸ್, ೧೯೭೪:೮೦). ಕೆಳದಿಯ ವೀರಮ್ಮಾಜಿ ಕಾಲದಲ್ಲಿ ಅದಾಲಾಮಿ ತೆರಿಗೆಯನ್ನು ನೀಡಲು ನಿರಾಕರಿಸಿದ ವಿದೇಶಿ ವ್ಯಾಪಾರಿ ಲುಕಾಸ್‌ರೋಟ್ರಸಿಕಾಸ್ ಎಂಬುವವನಿಗೆ ಸೆರೆಮನೆ ಶಿಕ್ಷೆ ವಿಧಿಸಿ ಬೆದರಿಕೆ ಹಾಕಲಾಗಿತ್ತು(ಚಟ್ನೀಸ್, ೧೯೭೪,ಅನುಬಂಧ-೨). ಆಯಗಾರ ವೃತ್ತಿಯವರಿಗೆ ತೆರಿಗೆಯನ್ನು ವಿಧಿಸುತ್ತಿದ್ದರು. ಪ್ರತಿಯೊಂದು ವೃತ್ತಿಯವರು ಇಂತಿಷ್ಟು ತೆರಿಗೆಯನ್ನು ನೀಡಬೇಕೆಂಬ ನಿಯಮವಿತ್ತೆಂಬುದು ಈ ಮೂಲಕ ತಿಳಿಯುತ್ತದೆ. ದೇಶೀಯ ಮತ್ತು ವಿದೇಶೀಯ ತೆರಿಗೆಯನ್ನು ಕಡ್ಡಾಯವಾಗಿ ಕಟ್ಟಬೇಕಾಗಿತ್ತು.

"ವಿಜಯನಗರೋತ್ತರ ಕಾಲದಲ್ಲಿ ವೀರಮ್ಮಾಜಿಯು ಇಂಗ್ಲಿಶ್ ವ್ಯಾಪಾರಿ ಕಂಪನಿಗೆ ನೀಡಿದ ಫರ್ಮಾನಿನಂತೆ ಕೆಲವು ಪ್ರಮುಖ ವಸ್ತುಗಳಿಗೆ ಶೇಕಡ ೨/೧೧ರಷ್ಟು ತೆರಿಗೆ ವಿಧಿಸುತ್ತಿದ್ದಳು. ಪೋರ್ಚುಗೀಸರಿಗೆ ಮಾರುವ ಅಕ್ಕಿಯ ಮೇಲೆ ತೆರಿಗೆ ವಿನಾಯಿತಿ ನೀಡುತ್ತಿದ್ದಳು.ಚಟ್ನೀಸ್, ೧೯೭೪:೯೯). ವಿಜಯನಗರೋತ್ತರ ಕಾಲದಲ್ಲಿ ಗುರುತಿಸಿಕೊಂಡ ಕಿತ್ತೂರಿನ ದೇಸಾಯಿಗಳ ಮತ್ತು ಕಿತ್ತೂರಿನಲ್ಲಿ ರಾಣಿಚೆನ್ನಮ್ಮಳ ಆಳ್ವಿಕೆಯ ಕಾಲದಲ್ಲಿ ಪ್ರಮುಖ ನಿಷ್ಠಾವಂತ ಅಧಿಕಾರಿಯಾದ ರಾಯಣ್ಣನು ಬ್ರಿಟಿಶರು ವಿಧಿಸುತ್ತಿದ್ದ ಕಂದಾಯ ನೀತಿಯನ್ನು ವಿರೋಧಿಸಿದ. ಬ್ರಿಟಿಶರ ಕೈಗೊಂಬೆಗಳಂತೆ ಗುಲಾಮರಾಗಿ ಕಾರ್ಯನಿರ್ವಹಿಸುತ್ತಿದ್ದ ಕುಲಕರ್ಣಿಗಳು ಜನಸಾಮಾನ್ಯರನ್ನು ಹೆಚ್ಚಿನ ತೆರಿಗೆ ಕೊಡುವಂತೆ ಹಿಂಸೆಗೆ ಒಳಪಡಿಸುತ್ತಿರುವುದು ಚರಿತ್ರೆಯ ಪುಟದಲ್ಲಿದೆ. ಇವರು ಕಂದಾಯವನ್ನು ವಸೂಲಿ ಮಾಡುವುದು ಹಾಗೂ ಮಾಡಿದ್ದನ್ನು ಮುಂಬೈಗೆ ಕಳಿಸಿಕೊಡುವುದು ಇವರ ಕೆಲಸವಾಗಿತ್ತು. ಪಾಳೆಯಗಾರರು ಕಡ್ಡಾಯವಾಗಿ ತೆರಿಗೆಯನ್ನು ಬ್ರಿಟಿಶ್ ಕಲೆಕ್ಟರ್‌ಗಳಿಗೆ ಅಲ್ಲಿನ ಕುಲಕರ್ಣಿಗಳು ಕಳುಹಿಸಬೇಕಾಗುತ್ತಿತ್ತು. ಈ ಮೂಲಕ ಮಧ್ಯಕಾಲೀನ ಕರ್ನಾಟಕದ ಆರ್ಥಿಕ ಪರಿಸ್ಥಿತಿಯಲ್ಲಿ ವಿಜಯನಗರೋತ್ತರ ಕಾಲದ ಬ್ರಿಟಿಶ್ ಆಡಳಿತವನ್ನು ಗಮನಿಸಿದರೆ ಇವರ ಆಳ್ವಿಕೆಯಲ್ಲಿ ತೆರಿಗೆ ಸ್ವರೂಪವು ಅಂದಿನ ಕರ್ನಾಟಕದ ಜನರಿಗೆ ಹೆಚ್ಚಾಗಿತ್ತೆಂದು ಭಾವಿಸಬಹುದು.

ಬ್ರಿಟಿಶರು ಕರ್ನಾಟಕವನ್ನು ವಶಪಡಿಸಿಕೊಂಡ ನಂತರ ಬೆಳಗಾವಿ ಜಿಲ್ಲೆಯ ಸೌದತ್ತಿಯಲ್ಲಿ ದೇಸಾಯಿ ಕುಟುಂಬದವರಿದ್ದರು. ವಸಾಹತು ಕರ್ನಾಟಕದಲ್ಲಿ ತಲ್ಲೂರು ಎನ್ನುವ ಒಂದು ಗ್ರಾಮದಲ್ಲಿ ದೇಸಾಯಿಗಳು ಇನಾಂ ಪಡೆದಿದ್ದರು. ಇಲ್ಲಿ ೧೦,೬೦೦ ಎಕರೆ ಭೂಮಿಯಿತ್ತು. ೬೦೦೦ ಎಕರೆ ಕಾಡು, ೪೦೦೦ ಎಕರೆ ಕೃಷಿಭೂಮಿಯಿತ್ತು. ಸರ್ಕಾರಕ್ಕೆ ೨೨೦೦ ರೂಪಾಯಿ ವಾರ್ಷಿಕ ತೆರಿಗೆ ಕಟ್ಟಬೇಕಾಗಿತ್ತು. ಇದರಲ್ಲಿ ಪರಿಹಾರಾರ್ಥವಾಗಿ ೧೯೨ ರೂಪಾಯಿಗಳನ್ನು ಬ್ರಿಟಿಷ್ ಸರ್ಕಾರ ಹಿಂದಿರುಗಿಸುತ್ತಿತ್ತು. ಹೀಗೆ ತಲ್ಲೂರು ದೇಸಾಯಿಗಳ ತೆರಿಗೆಯನ್ನು ಗೌಡರು ಬ್ರಿಟಿಶರಿಗೆ ವರ್ಗಾಯಿಸುತ್ತಿದ್ದ. ವಸಾಹತು ಕರ್ನಾಟಕ ಮತ್ತು ವಸಾಹತುಪೂರ್ವ ಕರ್ನಾಟಕದಲ್ಲಿ ತೆರಿಗೆಯ ಸ್ವರೂಪದಲ್ಲಾದ ಒಂದು ಮುಖ್ಯ ಬದಲಾವಣೆಯೆಂದರೆ ದವಸಧಾನ್ಯ ರೂಪದ ಬದಲಾಗಿ ನಗದು ರೂಪದಲ್ಲಿ ಮಾತ್ರ ತೆರಿಗೆಯನ್ನು ಸಂಗ್ರಹಿಸಲಾರಂಭಿಸಿದರು(ಸಾಕಿ,೨,೧೯೯೮:೫೫).

ಕರ್ನಾಟಕದಲ್ಲಿ ವಿಜಯನಗರೋತ್ತರ ಕಾಲದಿಂದ ವಸಾಹತು ಕರ್ನಾಟಕವಾಗುವ ಪ್ರಕ್ರಿಯೆಯ ಕಾಲದಲ್ಲಿ ಕರ್ನಾಟಕದಲ್ಲಿದ್ದಂತಹ ಹಲವಾರು ತೆರಿಗೆಗಳು ನಾಶವಾಗಿ ಬೆಳೆ ತೆರಿಗೆಯು ಕೃಷಿ ತೆರಿಗೆಯಾಗಿ ಅನೇಕ ಹೊಸ ಹೊಸ ಸ್ವರೂಪಗಳ ಹುಟ್ಟಿಗೂ ಕಾರಣವಾಯಿತು.

ವಿಜಯನಗರೋತ್ತರ ಕಾಲದಲ್ಲಿ ಗುರುತಿಸಿಕೊಂಡ ಆದಿಲ್‌ಶಾಹಿಗಳು ಯಾವುದೇ ಕಂದಾಯ ವ್ಯವಸ್ಥೆಯಲ್ಲಿ ಬದಲಾವಣೆ ತಂದಂತೆ ತಿಳಿಯುವುದಿಲ್ಲ. ಕೃಷಿತೆರಿಗೆಯನ್ನು ೧/೬ ಭಾಗ ವಿಧಿಸಿದರೆ, ಇದನ್ನು ಹೊರತುಪಡಿಸಿ ಯಾವುದೇ ತೆರಿಗೆ ವಿಧಿಸುವಂತಿರಲಿಲ್ಲ. ಜಮೀನನ್ನು ಉಳುಮೆ ಮಾಡುವುದಕ್ಕೆ ಗುತ್ತಿಗೆ ಮತ್ತು ಕಟ್ಟು ಗುತ್ತಿಗೆ ವಿಧಾನವನ್ನು ಅನುಸರಿಸಿದ್ದರು(ಗಾರಂಪಳ್ಳಿ,೨೦೧೯:೩೦).

ಗ್ರಾಮಗಳಲ್ಲಿ ಮುಖ್ಯಸ್ಥನಿಗೆ ಜಮೀನನ್ನು ನೀಡಿ ಆತನಿಗೆ ವತನ ಎಂದು ಕರೆಯುತ್ತಿದ್ದರು. ಕುಲಕರ್ಣಿಗೆ ನೀಡಿದ ಜಮೀನನ್ನು ಮೀರಾ ಎಂದು ಕರೆಯುತ್ತಿದ್ದರು. ಹೀಗೆ ಕುಲಕರ್ಣಿಗಳ ಅಧೀನದಲ್ಲಿರುವ ಜಮೀನು ಕೃಷಿ ಕಾರ್ಮಿಕರ ಕೈಗೆ ದೊರೆಯುತ್ತಿತ್ತು.

ಈ ಮೂಲಕ ವಿಜಯನಗರೋತ್ತರ ಕಾಲಾವಧಿಯಲ್ಲಿ ಬೀಜಾವರಿ ಮತ್ತು ರಾಯರೇಖ ಪದ್ಧತಿಯ ಮೂಲಕ ಹಲವಾರು ಹೊಸ ತೆರಿಗೆಗಳು ಸಂಸ್ಥಾನಗಳಲ್ಲಿ ಕಂಡುಬಂದವೆಂದು ಹೇಳಬಹುದು. ಮುಖ್ಯವಾಗಿ ಕರ್ನಾಟಕದಲ್ಲಿ ಈ ಕಾಲಘಟ್ಟದಲ್ಲಿ ಅಡಿಕೆ ಮತ್ತು ತೆಂಗಿನ ಬೆಳೆ ಅಧಿಕವಾಗಿತ್ತು. ಆದ್ದರಿಂದ ಶಿವಪ್ಪನಾಯಕನು ತನ್ನದೇ ಆದ ಭೂಕಂದಾಯವನ್ನು ಜಾರಿಗೊಳಿಸುವ ಮೂಲಕ ಇಡೀ ದಕ್ಷಿಣ ಭಾರತಕ್ಕೆ ಭೂಕಂದಾಯದಲ್ಲಿ ಮಾದರಿ ಸಂಸ್ಥಾನವಾಗಿ ಕೆಳದಿ ಗುರುತಿಸಿಕೊಂಡಿದೆ.

ವಿಜಯನಗರ ಕಾಲದಲ್ಲಿ ತೆರಿಗೆಯ ಹೊರೆ ಹೆಚ್ಚಾಗಿತ್ತು. ತೆರಿಗೆ ಹೊರೆ ಹೆಚ್ಚಾದಾಗ ಬೇರೊಂದು ಪ್ರದೇಶಕ್ಕೆ ಹೋದ ಕುರುಗೋಡಿನ ಒಂದು ಶಾಸನದಲ್ಲಿ ಮಾಹಿತಿ ಇದೆ. ಆದರೆ ವಿಜಯನಗರೋತ್ತರ ಕಾಲದ ಯಾವ ಸಂಸ್ಥಾನಗಳಲ್ಲಿ ತೆರಿಗೆಯನ್ನು ವಿರೋಧಿಸಿ ಹೋರಾಡಿದ ಉದಾಹರಣೆಗಳಿಲ್ಲ. ವಿಜಯನಗರೋತ್ತರ ಕಾಲವು ಹಲವಾರು ಯುದ್ಧ ಒಪ್ಪಂದಗಳ ಕಾಲವಾಗಿದ್ದು ಆಕ್ರಮಿಸಿಕೊಂಡ ಪ್ರದೇಶದಿಂದಲೇ ಹೆಚ್ಚಿನ ಆದಾಯ ಬರುತ್ತಿತ್ತೆಂದು ಹೇಳಬಹುದು. ವಿಜಯನಗರೋತ್ತರ ಕಾಲದಲ್ಲಿ ಹಲವಾರು ತೆರಿಗೆಗಳು ಹೆಚ್ಚು ಪರಿಚಿತವಾಗಿದ್ದು ನಾಮಸುಂಕ ಎಂಬ ತೆರಿಗೆಯನ್ನು ಮೈಸೂರು ಒಡೆಯರು ಹೊಸ ತೆರಿಗೆಯ ಪದ್ಧತಿಯೂ ಕಂಡುಬರುತ್ತದೆ.

## ಅಧ್ಯಾಯ - ಐದು

# ವಿಜಯನಗರೋತ್ತರ ಕಾಲದ ವ್ಯಾಪಾರ-ವಾಣಿಜ್ಯ

## ಅಧ್ಯಾಯ - ಐದು

# ವಿಜಯನಗರೋತ್ತರ ಕಾಲದ ವ್ಯಾಪಾರ -ವಾಣಿಜ್ಯ

ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದ ಇತಿಹಾಸದ ಅಧ್ಯಯನದಲ್ಲಿ ವ್ಯಾಪಾರ-ವಾಣಿಜ್ಯವು ಪ್ರಮುಖ ಸ್ಥಾನ ಪಡೆದುಕೊಂಡಿತ್ತು. ವ್ಯಾಪಾರ-ವಾಣಿಜ್ಯವು ಒಂದು ದೇಶದ ಆರ್ಥಿಕ ಪ್ರಗತಿಗೆ ಪೂರಕವಾಗುತ್ತದೆ. ಗ್ರಾಮ ಮತ್ತು ನಗರಗಳ ಆರ್ಥಿಕ ಜೀವನದ ಒಂದು ಮುಖ್ಯವಾದ ಲಕ್ಷಣವೆಂದರೆ ವ್ಯಾಪಾರ-ವಾಣಿಜ್ಯ ಚಟುವಟಿಕೆಗಳು. ಇವು ವಿಜಯನಗರೋತ್ತರ ಕಾಲದಲ್ಲಿಯೇ ಮುಖ್ಯ ಬೆಳವಣಿಗೆಯಾಗಿ ಗೋಚರಿಸಿದವು. ರಾಜ್ಯವು ಉತ್ತಮ ಆಡಳಿತ ನಿರ್ವಹಿಸಲು ಆರ್ಥಿಕತೆ ಮುಖ್ಯವಾಗಿರುತ್ತದೆ. ಅಭಿವೃದ್ಧಿಯು ಆರ್ಥಿಕ ಪ್ರಗತಿಯ ಜೊತೆ ಜೊತೆಯೇ ನಡೆಯುತ್ತವೆ. ಇಂದಿಗೂ ಕೂಡ ವಿಶ್ವ ಮಾರುಕಟ್ಟೆಯಲ್ಲಿ ವ್ಯಾಪಾರ-ವಾಣಿಜ್ಯದಲ್ಲಿ ಭಾರತವು ತನ್ನ ಸ್ಥಾನವನ್ನು ಗುರುತಿಸಿಕೊಂಡಿದೆ. ದೇಶದ ಆರ್ಥಿಕ ವ್ಯವಸ್ಥೆಯನ್ನು ಉನ್ನತ ಹಂತಕ್ಕೆ ತರುವಲ್ಲಿ ಮುಖ್ಯ ಸಾಧನಗಳಾದ ಕೃಷಿ, ಕೈಗಾರಿಕೆ ಮತ್ತು ಅವುಗಳಿಗೆ ಪೂರಕವಾದ ವ್ಯಾಪಾರ-ವಾಣಿಜ್ಯವು ಪ್ರಮುಖ ಪಾತ್ರ ವಹಿಸುತ್ತವೆ.

### ೫.೧. ವ್ಯಾಪಾರ-ವಾಣಿಜ್ಯ

ವ್ಯಾಪಾರ-ವಾಣಿಜ್ಯದಿಂದ ವಿಜಯನಗರೋತ್ತರ ಕಾಲದಲ್ಲಿ ನಗರೀಕರಣ ಪ್ರಕ್ರಿಯೆಗೆ ಒಳಗಾಗಿ ಪೇಟೆ-ಪಟ್ಟಣಗಳು ಉಗಮವಾಗಲು ಸಾಧ್ಯವಾಯಿತು. ಹೊಸನಗರಗಳ ಹುಟ್ಟು, ಜನಸಂಖ್ಯೆಯ ಹೆಚ್ಚಳ, ವರ್ತಕರು, ವರ್ತಕ ಶ್ರೇಣಿಗಳು, ರಫ್ತು ಆಮದು, ವ್ಯಾಪಾರ, ರಸ್ತೆಗಳು, ನಾಣ್ಯ, ಅಳತೆ, ತೂಕ, ಈ ಎಲ್ಲ ಅಂಶಗಳು ವ್ಯಾಪಾರ-ವಾಣಿಜ್ಯದ ಮೂಲಕ ನಗರೀಕರಣ ಪ್ರಕ್ರಿಯೆಯಲ್ಲಿ ಗುರುತಿಸಿಕೊಳ್ಳುವಂತಹವುಗಳಾಗಿವೆ. ವ್ಯಾಪಾರ-ವಾಣಿಜ್ಯದಲ್ಲಿ ಮಾರುಕಟ್ಟೆಕೇಂದ್ರಿತ ಹೊಸ ಅರ್ಥವ್ಯವಸ್ಥೆಯೊಂದು ರೂಪ ಪಡೆದಿರುತ್ತದೆ. ಈ ಅರ್ಥವ್ಯವಸ್ಥೆಯಲ್ಲಿ ಬಂಡವಾಳಗಾರರೆಂಬ ಕೆಲವು ಅಧಿಕಾರಿಗಳು ಅಥವಾ ಮಧ್ಯವರ್ತಿಗಳು ಗುರುತಿಸಿಕೊಳ್ಳುತ್ತಾರೆ. ಈ ಮಧ್ಯವರ್ತಿ ವ್ಯಾಪಾರಿಗಳ ಮೂಲಕ ರೈತರು ಮಾರುಕಟ್ಟೆಗೆ ತಮ್ಮ ವಸ್ತುಗಳನ್ನು ತಂದು ಮಾರುವಾಗ ಕಡಿಮೆ ಬೆಲೆಗೆ

ಕೊಂಡು ಲಾಭಾಂಶವನ್ನು ಮಧ್ಯವರ್ತಿಗಳು ಪಡೆಯುತ್ತಿದ್ದರು. ಈ ಪ್ರಕ್ರಿಯೆ ವಸಾಹತೋತ್ತರ ಕಾಲದಲ್ಲಿ ಗಟ್ಟಿಯಾಗಿ ನೆಲೆಗೊಳ್ಳಲಾರಂಭಿಸಿತು.

೧೬ನೆಯ ಶತಮಾನದಲ್ಲಿ ಭಾರತ ಮತ್ತು ಪಾಶ್ಚಿಮಾತ್ಯ ರಾಷ್ಟ್ರಗಳೊಂದಿಗೆ ವ್ಯಾಪಾರ ಸಂಬಂಧ ಹೊಂದಿತ್ತು. ಯುರೋಪ್‌ಕೇಂದ್ರಿತ ಹೊಸ ಅರ್ಥವ್ಯವಸ್ಥೆಯೊಂದರ ಉಗಮಕ್ಕೂ ಈ ಕಾಲಘಟ್ಟ ಮುಖ್ಯವಾಗಿದೆ. ಭಾರತವನ್ನು ವಸಾಹತು ಕೇಂದ್ರವನ್ನಾಗಿಸುವ ಪ್ರಕ್ರಿಯೆಗಳು ನಿರಂತರವಾಗಿ ನಡೆದು ೧೮೦೦ರ ವೇಳೆ ಕರ್ನಾಟಕವನ್ನು ಒಳಗೊಂಡಂತೆ ಭಾರತದಲ್ಲಿ ತಮ್ಮ ಅಸ್ತಿತ್ವ ಕಂಡುಕೊಂಡ ಯುರೋಪಿಯನ್ನರು ಇಲ್ಲಿನ ವ್ಯಾಪಾರದ ಮೇಲೆ ಗಾಢ ಪ್ರಭಾವವನ್ನು ಬೀರಿದರು. ವ್ಯಾಪಾರ-ವಾಣಿಜ್ಯದ ಸ್ವರೂಪವು ಹಂತದಿಂದ ಹಂತಕ್ಕೆ ಭಿನ್ನತೆಯನ್ನು ಹೊಂದಿರುತ್ತದೆ. ವ್ಯಾಪಾರ-ವಾಣಿಜ್ಯ ನಗರ ಅರ್ಥವ್ಯವಸ್ಥೆಯ ಬೆಳವಣಿಗೆಯ ಪ್ರಮುಖ ಕೇಂದ್ರವು ಆಗಿರುತ್ತದೆ. ಒಂದು ಪ್ರಭುತ್ವವು ತನ್ನ ಅಸ್ತಿತ್ವವನ್ನು ಭದ್ರವಾಗಿ ನೆಲೆಯೂರಬೇಕೆಂದರೆ ಅವರು ವ್ಯಾಪಾರ-ವಾಣಿಜ್ಯಕ್ಕೆ ಕೊಟ್ಟ ಪ್ರಾಮುಖ್ಯತೆಯಿಂದ ಪ್ರಗತಿಯನ್ನು ಕಂಡಿದ್ದು ಅನೇಕ ನೆಲೆಗಳಲ್ಲಿ ಗುರುತಿಸಬಹುದು. ವ್ಯಾಪಾರದ ಅಭಿವೃದ್ಧಿಗೆ ಸ್ತ್ರೀ ಪುರುಷರೆಂಬ ಭೇದ ಭಾವನೆಗಳಿಲ್ಲದೆ ಸಮಾನ ಸ್ಥಾನಮಾನ ಹೊಂದಿರುವುದು ಪ್ರಾಚೀನ ಕಾಲದಿಂದಲೂ ಕಂಡುಬರುತ್ತದೆ.

ವಿಜಯನಗೋರತ್ತರ ಕಾಲವು ವ್ಯಾಪಾರ-ವಾಣಿಜ್ಯದಲ್ಲಿ ಹೊಸ ಅರ್ಥವ್ಯವಸ್ಥೆಯ ಹುಟ್ಟಿಗೂ ಕಾರಣವಾದ ಕಾಲವೆಂದು ಹೇಳಬಹುದು. ಈ ಕಾಲಘಟ್ಟದಲ್ಲಿ ಕರ್ನಾಟಕದ ರಾಜಕೀಯ ಅಸ್ಥಿರತೆಯನ್ನು ಉಪಯೋಗಪಡಿಸಿಕೊಂಡು ತಮ್ಮ ನೆಲೆಯನ್ನು ಗಟ್ಟಿಗೊಳಿಸಿ ಕರ್ನಾಟಕವನ್ನು ವಸಾಹತುಕೇಂದ್ರವನ್ನಾಗಿ ಮಾರ್ಪಡಿಸಿಕೊಂಡ ಪೋರ್ಚುಗೀಸರು, ಡಚ್ಚರು, ಇಂಗ್ಲಿಶರು, ಫ್ರೆಂಚರು ತಮ್ಮದೇ ಆದ ನೀತಿಗಳನ್ನು ಭಾರತದ ವ್ಯಾಪಾರದಲ್ಲಿ ತಂದರು.

ಈ ಅಧ್ಯಾಯದಲ್ಲಿ ವ್ಯಾಪಾರ-ವಾಣಿಜ್ಯದ ವಿವಿಧ ಸ್ವರೂಪಗಳಾದ ದೇಶೀಯ ಮತ್ತು ವಿದೇಶೀಯ ವ್ಯಾಪಾರದಲ್ಲಿ, ಕುಶಲಕರ್ಮಿಗಳು ಮತ್ತು ಕೈಗಾರಿಕೆಗಳು, ವ್ಯಾಪಾರದ ಮಾಧ್ಯಮ, ಸಾರಿಗೆ ಸಂಪರ್ಕ, ವರ್ತಕರು ಅವರ ಕೊಡುಗೆ, ನಗರೀಕರಣ, ಮೊದಲಾದ ಅಂಶಗಳನ್ನು ಕುರಿತಂತೆ ವಿಜಯನಗರೋತ್ತರ ಕಾಲದಲ್ಲಿ ಇವುಗಳ ಸ್ವರೂಪದ ಬಗ್ಗೆ, ಪ್ರಭುತ್ವಗಳ ಅಭಿವೃದ್ಧಿಗೆ ಇವುಗಳ ಕೊಡುಗೆಗಳನ್ನು, ಪೇಟೆ-ಪಟ್ಟಣಗಳ ಉಗಮದಿಂದ ಗ್ರಾಮೀಣ ಆರ್ಥಿಕತೆಯ ಮೇಲೆ ವ್ಯಾಪಾರ-ವಾಣಿಜ್ಯದ ಪರಿಣಾಮವನ್ನು ಕುರಿತಂತೆ ವಿವರಿಸಲಾಗಿದೆ. ವ್ಯಾಪಾರ-ವಾಣಿಜ್ಯವೆಂದರೆ ಅದು ಸಾಮಾಜಿಕ ಚಲನೆಯನ್ನು ಅವಲಂಬಿಸಿರುವಂತದ್ದು. ವ್ಯಾಪಾರ-ವಾಣಿಜ್ಯದಿಂದ ನಗರ ಕೇಂದ್ರಗಳು ಬೆಳೆದು ಗ್ರಾಮಗಳು ಕಿರಿದಾಗಲಾರಂಭಿಸಿದ ಕಾಲವೆಂದು ಪರಿಗಣಿಸಬೇಕಾಗುತ್ತದೆ. ಕಾರಣ ವ್ಯಾಪಾರ-ವಾಣಿಜ್ಯ ನಗರಕೇಂದ್ರದ ಹೊಸ ಅರ್ಥವ್ಯವಸ್ಥೆಯೊಂದರ ಹುಟ್ಟಿಗೂ ಕಾರಣವಾಗುತ್ತದೆ.

**೫.೧.೧. ದೇಶೀಯ ವ್ಯಾಪಾರ**

ದೇಶೀಯ ವ್ಯಾಪಾರವೆಂದರೆ ರಾಜ್ಯದಲ್ಲಿಯೇ ಒಂದು ಸ್ಥಳದಿಂದ ಮತ್ತೊಂದು ಪ್ರದೇಶಕ್ಕೆ ಹೋಗಿ ವ್ಯಾಪಾರ ಚಟುವಟಿಕೆಗಳನ್ನು ಕೈಗೊಳ್ಳುವುದು. ಒಳನಾಡಿನ ವ್ಯಾಪಾರವು ಮುಖ್ಯವಾಗಿ

ಸಂತೆ, ಪೇಟೆ, ಮಾರುಕಟ್ಟೆಗಳಲ್ಲಿ ನಡೆಯುತ್ತಿತ್ತು. ವಿದೇಶೀಯ ವ್ಯಾಪಾರಕ್ಕಿಂತಲೂ ಮುಖ್ಯವಾಗಿ ಒಳನಾಡಿನ ವ್ಯಾಪಾರಕ್ಕೆ ಹೆಚ್ಚಿನ ಮಹತ್ವ ಕೊಡುತ್ತಿದ್ದರು. ಪ್ರಭುತ್ವಗಳು ತಮ್ಮ ಅವಶ್ಯಕತೆಗಳನ್ನು ಒಳನಾಡು ವ್ಯಾಪಾರದ ಕೇಂದ್ರಗಳಾದ ಸಂತೆಗಳಲ್ಲಿ ತಮ್ಮ ವ್ಯಾಪಾರ ವಿನಿಮಯವನ್ನು ಅಳವಡಿಸಿಕೊಂಡಿದ್ದು ಕಾಣುತ್ತದೆ. ದೇಶೀಯ ವ್ಯಾಪಾರದಲ್ಲಿ ಮುಖ್ಯವಾಗಿ ಶಾಸನಗಳು ಹೆಚ್ಚಿನ ಮಾಹಿತಿಯನ್ನು ಒದಗಿಸುತ್ತವೆ. ಈ ಒಳನಾಡು ವ್ಯಾಪಾರದಲ್ಲಿ ಮಾನವನಿಗೆ ದಿನನಿತ್ಯದ ಅವಶ್ಯಕ ವಸ್ತುಗಳಾದ ಆಹಾರಧಾನ್ಯಗಳ ವ್ಯಾಪಾರ ನಡೆಯುತ್ತಿತ್ತು.

ಮುಖ್ಯವಾಗಿ ಆಹಾರ ವಸ್ತುಗಳಾದ ಬೇಳೆಕಾಳು, ಗೋಧಿ, ತರಕಾರಿ, ಉಪ್ಪು, ಸಂಬಾರು ಪದಾರ್ಥಗಳು, ತೆಂಗಿನಕಾಯಿ, ತುಪ್ಪ, ಬೆಲ್ಲ, ಸಕ್ಕರೆ, ವೀಳ್ಯದೆಲೆ, ಅಡಿಕೆ ಮತ್ತು ಸೊಪ್ಪು ತರಕಾರಿಗಳು, ಬಣ್ಣ ಕೊಡುವ ವಸ್ತುಗಳು, ಕಬ್ಬಿಣ, ಸೀಸ, ತಾಮ್ರದಂತಹ ಲೋಹಗಳು, ಹತ್ತಿಯಂತಹ ಕಚ್ಚಾಸಾಮಗ್ರಿ, ಭತ್ತದ ಬೆಳೆಗಳು, ಹತ್ತಿನೂಲು ಮತ್ತು ಗೋಣಿಚೀಲಗಳು ಇವುಗಳ ಉತ್ಪಾದನೆ ಪೂರಕವಾಗಿ ಚರ್ಚೆಗಳಾಗಿವೆ.

೧೭೪೪ರ ಅರಸೀಕೆರೆಯ ಒಂದು ಶಾಸನವು ಒಳನಾಡು ವ್ಯಾಪಾರ ಕೇಂದ್ರಗಳನ್ನು ತಿಳಿಸಿದೆ (ಎ.ಕ.೧೦,ಅ:೧೩೪). ಅವುಗಳೆಂದರೆ ಬಳ್ಳಾರಿ, ಬೂದಗುಂಟೆ, ತೆಲಕು, ಕೋಟೆ, ಆದ್ವಾನಿ, ಗುಂಡಮಟ್ಟಕಲ್ಲು, ನಾರಾಯಣಪೇಟೆ, ಪಂಚವಳ್ಳಿ, ಮೂಕೆ ಚಿಂತ್ರಿಕೆ, ಚಟಿನಹಳ್ಳಿ, ಹುಬ್ಬದಳ್ಳಿ, ಸಿಡಿದುರ್ಗ, ತಪಟರನಾಳು, ತಾಡಪತ್ರೆ, ಸಾಗರ, ಚನ್ನರಾಯಪಟ್ಟಣ, ನರಸೀಪುರ, ಅರಕಲಗೂಡು, ಬೆಳಗೋಡು, ಹುಲುಗುಲಿಗೆ, ಬೆದನೆ ಬೇಲೂರು, ಶಿಂಗಾಪುರ, ಯಸಳೂರು, ಹೊಸಪೇಟೆ, ಅಣ್ಣಿಗೇರಿ, ಗುರುಗಲಕ್ಷ್ಮೇಶ್ವರ, ಕುರ್ತುಕೋಟೆ, ಶಿರ್ಪಿ, ಬೆಳಗುಪ್ಪೆ, ಹಳೆಬೀಡು, ಶಿವಪುರ, ಪುಂಗನೂರು, ರಾಮಸಮುದ್ರ, ಚೀಟಿಪಾಳ್ಯ, ಬೆಂಗಳೂರು, ಹಿರೆಬಳ್ಳಾಪುರ, ಗುಂಚಿಗುಂಟ್ಯಾ, ನಾಗಮಂಗಲ, ಕೊರಟಗೆರೆ, ರಾಮದುರ್ಗ, ಐಮಂಗಳ, ನಿಜಗಲ್ಲು, ನಲ್ಲೂರು, ಹೊಸದುರ್ಗ, ಕಣ್ಣಿಸಮುದ್ರ, ನಾರಾಯಣಪೇಟೆ, ಅರಳೆಪೇಟೆ, ಬಾಗವಾರ ಪ್ರಮುಖವಾದವುಗಳು.

ವಿಜಯನಗರ ಮತ್ತು ವಿಜಯನಗರೋತ್ತರ ಕಾಲದಲ್ಲಿ ಕೃಷಿ ಉತ್ಪನ್ನಗಳು ಹೆಚ್ಚಾದ ಪರಿಣಾಮವಾಗಿ ಸಂತೆಗಳು ಮತ್ತು ಮಾರುಕಟ್ಟೆ ಪಟ್ಟಣಗಳು, ಜಾತ್ರೆಗಳು ಹೆಚ್ಚಾಗಿ ಮಾರುಕಟ್ಟೆ ಕೇಂದ್ರಿತ ಹೊಸ ಅರ್ಥವ್ಯವಸ್ಥೆಯೊಂದರ ಉಗಮಕ್ಕೆ ಕಾರಣವಾಯಿತು. ವಿಜಯನಗರೋತ್ತರ ಕಾಲದಲ್ಲಿ ಸಂತೆಗಳು ಮತ್ತು ಮಾರುಕಟ್ಟೆಗಳು ಗ್ರಾಮೀಣ ಆರ್ಥಿಕ ವ್ಯವಸ್ಥೆಯಲ್ಲಿ ಪ್ರಮುಖವಾಗಿವೆ. ಸಂತೆಗಳು ಆಂತರಿಕ ವ್ಯಾಪಾರದಲ್ಲಿ ಪ್ರಧಾನವಾದ ಸ್ಥಾನ ಗಳಿಸಿದವು. ಇವು ಸಾಮಾನ್ಯವಾಗಿ ಸ್ಥಳೀಯ ಮುಖ್ಯಸ್ಥರಿಂದ ಅಸ್ತಿತ್ವಕ್ಕೆ ಬರುತ್ತಿದ್ದವು. ಪ್ರತಿ ತಾಲೂಕಿನಲ್ಲೂ ಅನುಕೂಲವಾಗಿರುವ ಸ್ಥಳಗಳಲ್ಲಿ ವಾರದಲ್ಲಿ ಒಂದು ನಿಗದಿತ ದಿನ ಸಂತೆ ನಡೆಯುತ್ತಿತ್ತು. ಸಂತೆಗಳನ್ನು ಸಾಮಾನ್ಯವಾಗಿ ಕೆಲವು ಕಡೆ ಸ್ಥಳೀಯ ಮುಖಂಡರು ನಿಯಂತ್ರಿಸುತ್ತಿದ್ದರೆ. ೧೭೪೦ರ ಕಡತದಲ್ಲಿ ಕೆಲವು ಸುಂಕಠಾಣೆಗಳು ಘಟ್ಟದ ಕೆಳಗೆ ಇದ್ದ ತಿಳಿಸುತ್ತದೆ. ಅವುಗಳೆಂದರೆ ಹೊಸಂಗಡಿ, ನರಸೀಪುರ, ಸೋಮಶೇಖರ, ಕಾರ್ಕಳ, ಮೂಡಬಿದ್ರಿ, ಸುಬ್ರಮಣ್ಯ, ಕುಂಬಳೆ, ಮಂಜೇಶ್ವರ, ಉಳ್ಳಾಲ, ಕೊಡಯಾಲ, ಪಣಂಬೂರು ಮೊದಲಾದ ಕಡೆ ಸುಂಕದ ಕಟ್ಟೆಗಳನ್ನು ಸ್ಥಾಪಿಸಿದರು(ಕೃಷ್ಣಮೂರ್ತಿ,ಲಕ್ಷ್ಮಿ೨೦೦೦ :೨೯೦).

ಹುಬ್ಬಳ್ಳಿಯಲ್ಲಿ ನೆಲೆಸಿದ ಆಗಿನ ಪ್ರಮುಖ ವರ್ತಕರ ಹೆಸರುಗಳು ಇಂತಿವೆ. ದೇಶಮುಖ ವೆಂಕಾಜಿ, ಮುರಾರ, ತಿಮ್ಮಾಜ, ಲಕ್ಷ್ಮಣ ದೇಶಪಾಂಡೆ, ಬಾಪೂಜಿ ಭವಾನಿ ಶಂಕರ ದೇಸಾಯಿ ಕುಲಕಣಿ, ಇವರುಗಳಲ್ಲಿ ಪಟ್ಟಣಶೆಟ್ಟಿ ಮತ್ತು ಅವಟಿ ಇವರು ಸರಕಾರದಿಂದ ನೇಮಿಸಲ್ಪಟ್ಟ ಮಾರುಕಟ್ಟೆಯ ಅಧಿಕಾರಿಗಳು(ಕೃಷ್ಣಮೂರ್ತಿ,ಲಕ್ಷ್ಮಿ ೨೦೦೦:೩೯೦). ಪಟ್ಟಣಶೆಟ್ಟಿ-ಶಾಂತಿ ಸುವ್ಯವಸ್ಥೆ ಮಾಡುವ ಕೆಲಸ ನಿರ್ವಹಿ ಸಮಾಜದ ತಂಟೆತಕರಾರು ಬಗೆಹರಿಸುತ್ತಿದ್ದ. ಅವಟಿ ತೂಕ ಮತ್ತು ಅಳತೆಯ ಅಧಿಕಾರಿಗಳಾಗಿದ್ದರು. ಟಿಪ್ಪು ಆಳ್ವಿಕೆಯಲ್ಲಿ ಬಳ್ಳಾರಿ, ಅದೋನಿ, ಧಾರವಾಡ, ಹುಬ್ಬಳ್ಳಿ, ನರಗುಂದ ಮತ್ತು ನವಲಗುಂದ ನಗರಗಳು ರೇವು ಪಟ್ಟಣದಿಂದ ಸಮುದ್ರ ಮಾರ್ಗದ ಮುಖಾಂತರವಾಗಿ ಇಲ್ಲಿಗೆ ಆಮದಾಗುತ್ತಿದ್ದ ವಿದೇಶ ಸರಕುಗಳನ್ನು ಖರೀದಿಸಿ ನಿಜಾಮನ ರಾಜ್ಯ, ದಕ್ಷಿಣ ಕೃಷ್ಣಾನದಿ ಪ್ರದೇಶ ಮರಾಠ ಭಾಗಗಳಲ್ಲಿ ಮಾರಾಟ ಮಾಡುತ್ತಿದ್ದರು. ಈ ವರ್ತಕರು ವರ್ಣರಂಜಿತ ಹತ್ತಿ ಉತ್ಪನ್ನಗಳನ್ನು ಕಲ್ಲಿಕೋಟೆ ರೇವು ಪಟ್ಟಣಗಳಲ್ಲಿ ಮಾರಾಟ ಮಾಡುತ್ತಿದ್ದರು (ಚಂದ್ರಶೇಖರ್,ರಾವ್,೨೦೧೬:೬೦). ಮತ್ತೆ ಕೆಲವು ಕಡೆ ವರ್ತಕ ಸಂಘಗಳು ಈ ಸಂತೆಗಳನ್ನು ನಿಯಂತ್ರಿಸುತ್ತಿದ್ದವು. ಸಂತೆಗಳು ಮಧ್ಯಕಾಲೀನ ಕರ್ನಾಟಕದಲ್ಲಿ ಪ್ರಮುಖವಾಗಿದ್ದು ಗ್ರಾಮೀಣ ಆರ್ಥಿಕತೆಯನ್ನು ನಿರ್ವಹಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ಪ್ರಾಚೀನ ಕಾಲದಿಂದಲೂ ನಿರ್ವಹಿಸಿಕೊಂಡು ೧೮ನೇ ಶತಮಾನದ ಪೂರ್ವಾರ್ಧದಲ್ಲಿ ನಡೆಯುತ್ತಿದ್ದ ಸಂತೆಗಳಲ್ಲಿ ವಿಜಯನಗರೋತ್ತರ ಕಾಲದಲ್ಲಿ ಹಲವಾರು ಪ್ರದೇಶಗಳು ಗುರುತಿಸಿಕೊಂಡಿವೆ. ವಿಜಯನಗರೋತ್ತರ ಕಾಲದಲ್ಲಿ ಸ್ಥಳೀಯ ವ್ಯಾಪಾರದಲ್ಲಿ ಸಂತೆಗಳು ನಡೆಯುವ ಸ್ಥಳಗಳೆಂದರೆ, ಚಿಕ್ಕನಾಯಕನಹಳ್ಳಿ ಹರಿಹರ, ಹೊಳಲ್ಕೆರೆ, ಚನ್ನಗಿರಿ, ರಾಣೆಬೆನ್ನೂರು, ಬ್ಯಾಡಗಿ, ನ್ಯಾಮತಿ, ವಸ್ತಾರೆ, ಕಡೂರು, ಬಾಣಾವರ, ಬೇಲೂರು, ಸಂತೆಬೆನ್ನೂರು, ಕುಬಟೂರು, ಸಾಗರ, ಕುಂಸಿ, ಕೌಲೆದುರ್ಗ, ಆರಗ, ಶಿರಸಿ, ಆನಂದಪುರ, ಆಯನೂರು ಮೊದಲಾದ ಕಡೆ ಸಂತೆಗಳ ಮೂಲಕ ವ್ಯಾಪಾರ ನಡೆಯುತ್ತಿತ್ತು. ಹಾಸನ, ಸುಬ್ರಹ್ಮಣ್ಯ, ಸೀತಾನದಿ, ರಾಮಪುರ, ಕೊಡಲಿ ಮುಂತಾದ ಊರುಗಳು ಎತ್ತು ಮತ್ತು ಜಾನುವಾರುಗಳ ವ್ಯಾಪಾರಕ್ಕೆ ಪ್ರಸಿದ್ಧಿ ಪಡೆದಿದ್ದವು. ಈ ಸ್ಥಳಗಳಲ್ಲಿ ಜಾತ್ರೆಗಳು ನಡೆಯುತ್ತಿತ್ತು.

ಕ್ರಿ.ಶ. ೧೮ನೆಯ ಶತಮಾನದಲ್ಲಿ ದಾವಣಗೆರೆ ನಗರವಾಗಿದ್ದು, ಆರ್ಥಿಕ ಚಟುವಟಿಕೆಯ ಪ್ರಮುಖ ವ್ಯಾಪಾರ ಕೇಂದ್ರವಾಗಿತ್ತು. ಇಲ್ಲಿ ವಾರದ ಸಂತೆ ನಡೆಯುತ್ತಿತ್ತು. ಇಲ್ಲಿ ಸ್ಥಳೀಯ ಉತ್ಪನ್ನಗಳ ಮಾರಾಟದೊಂದಿಗೆ ಹೊರಗಿನಿಂದ ಬಂದ ವಸ್ತುಗಳು ಸೇರುತ್ತಿದ್ದವು. ಹೆಚ್ಚು ಸರುಕುಗಳು ಬಂದಾಗ ಬೆಲೆಯು ಕಡಿಮೆಯಾಗಿ ಗ್ರಾಹಕರಿಗೆ ವಿನಿಮಯ ಅನುಕೂಲವಾಗುತ್ತಿತ್ತು(ಸಂತೋಷ್ ೨೦೦೯:೨೫೧). ಈ ಪಟ್ಟಣವು ವಸಾಹತು ಕಾಲದಲ್ಲಿ ಪ್ರಮುಖ ವ್ಯಾಪಾರ ಕೇಂದ್ರವಾಗಿ ಬ್ರಿಟಿಶ್ ಹತ್ತಿ ಕಾರ್ಖಾನೆಗಳು ಇಲ್ಲಿ ಸ್ಥಾಪಿತವಾದವು.

ಸಂತೆಯ ಕೇಂದ್ರಗಳಲ್ಲಿ ದವಸಧಾನ್ಯಗಳನ್ನು ರಾಶಿ ರಾಶಿಯಾಗಿ ಕೂಡಿಹಾಕುತ್ತಿದ್ದರು. ವಸ್ತುಗಳನ್ನು ತೂಗಿ ಎಣಿಸಿ ಇಲ್ಲವೇ ಅಳೆದು ಮಾರುತ್ತಿದ್ದರು. ತೂಗಲು ತಕ್ಕಡಿ, ಬೆನಕಗಳಿದ್ದವು. ಇನ್ನು ಕೆಲವು ವಸ್ತುಗಳನ್ನು ಕೈಪಿಡಿ ಅಥವಾ ಎಣಿಕೆಗಳಿಂದ ಅಳೆಯುತ್ತಿದ್ದರು. ಹೀಗೆ ಸಂತೆ ಪ್ರವೇಶಿಸುವ

ವಸ್ತುಗಳ ಮೇಲೆ ತೆರಿಗೆ ವಿಧಿಸುತ್ತಿದ್ದರು. ಇದನ್ನು ಪ್ರವೇಶಿಕ ತೆರಿಗೆ ಅಥವಾ ಸ್ಥಳನಿಬಂಧಿ ಎಂದು ಕರೆಯುತ್ತಿದ್ದರು. ಈ ಮೂಲಕ ೧೭-೧೮ನೇ ಶತಮಾನದಲ್ಲಿ ಆರ್ಥಿಕ ಕೇಂದ್ರಗಳಾಗಿ ಈ ಸಂತೆಗಳು ಗುರುತಿಸಿಕೊಂಡಿದ್ದು, ಸಂತೆಗಳ ಮೂಲಕ ಗ್ರಾಮೀಣ ಆರ್ಥಿಕತೆಯ ವಿಭಿನ್ನತೆಯನ್ನು ಗುರುತಿಸಬಹುದು. ಸ್ಥಳನಿಬಂಧಿ ಸುಂಕವನ್ನು ಆಧುನಿಕ ಸಂದರ್ಭದಲ್ಲಿ ಆಯಾ ಪಂಚಾಯಿತಿಗಳ ಮೂಲಕ ಜಕಾತಿ ರೂಪದಲ್ಲಿ ವಸೂಲಿ ಮಾಡಲಾಗುತ್ತಿದೆ.

ವಿಜಯನಗರೋತ್ತರ ಕಾಲದಲ್ಲಿ ಹುಬ್ಬಳ್ಳಿಯು ಒಂದು ಪ್ರಮುಖ್ಯ ವ್ಯಾಪಾರ ಕೇಂದ್ರವಾಗಿತ್ತು. ವಿಜಯನಗರ ಕಾಲದಲ್ಲಿ ತಮ್ಮ ಅಸ್ತಿತ್ವ ಕಂಡುಕೊಂಡ ಈ ನಗರವು ಪೇಶ್ವೆಗಳ ಕಾಲದಲ್ಲಿ ಪ್ರಮುಖ ವ್ಯಾಪಾರ ಕೇಂದ್ರವಾಗಿ ಗುರುತಿಸಿಕೊಂಡಿದೆ. ಈ ಪ್ರದೇಶವು ವಿಜಯನಗರ ಅರಸರು ಕ್ರಿ.ಶ.೧೫೪೭ರಲ್ಲಿ ವಿಜಯನಗರದ ಅರಸನಿಗೂ ಹಾಗೂ ಪೋರ್ಚುಗೀಸರಿಗೂ ಆದ ಒಪ್ಪಂದದಲ್ಲಿ ಹುಬ್ಬಳ್ಳಿಯಲ್ಲಿ ಉಪ್ಪಿನ ವ್ಯಾಪಾರ ತುಂಬಾ ನಡೆಯುತ್ತಿತ್ತೆಂಬ ಬಗ್ಗೆ ದಾಖಲೆ ಇದೆ(ಸಾವಂತ,೧೯೯೩:೧೭೯).

ಹುಬ್ಬಳ್ಳಿಯು ವಿಜಯನಗರೋತ್ತರ ಕಾಲದ ಸಂತೆ ನಡೆಯುವ ಕೇಂದ್ರಗಳಲ್ಲಿ ಇದು ಪ್ರಮುಖವಾದ ಪ್ರದೇಶವಾಗಿತ್ತು. ಆಗಿನ ಕಾಲದ ಸಂತೆ, ಅಂಗಡಿ, ವ್ಯಾಪಾರಮಾರ್ಗ, ಸರಕು, ವ್ಯಾಪಾರ ವಿಧಾನ ಒಳನಾಡು-ಹೊರನಾಡಿನ ವ್ಯಾಪಾರದ ಬಗ್ಗೆ ಮಾಹಿತಿ ಸಂಗ್ರಹಿಸಲಾಗಿದೆ. ಈ ನಗರವು ಸಂತೆಯ ಕೇಂದ್ರವಾಗಿ ಮಧ್ಯಕಾಲೀನ ಕಾಲಘಟ್ಟದಿಂದ ಗುರುತಿಸಿಕೊಂಡಿದ್ದು, ವಿಜಯನಗರೋತ್ತರ ಕಾಲದ ಸಂತೆ ಕೇಂದ್ರವಾಗಿ ನಂತರ ಪೇಟೆ-ಪಟ್ಟಣವಾಗಿ ವಿವಿಧ ಸ್ವರೂಪಗಳಲ್ಲಿ ಬೆಳವಣಿಗೆಯಾಗಿರುವುದನ್ನು ಗಮನಿಸಬಹುದು. ಈ ನಗರವು ಪ್ರಸ್ತುತ ಪ್ರಮುಖ ಮಾರುಕಟ್ಟೆಯ ಕೇಂದ್ರವಾಗಿದೆ. ಪ್ರತಿ ಶನಿವಾರದಂದು ಸಂತೆಯು ನಡೆಯುತ್ತದೆ. ಹೊಸ ಸಂತೆ ಮತ್ತು ಪಟ್ಟಣಗಳು ನಿರ್ಮಾಣವಾಗುವ ಸ್ಥಳೀಯ ವರ್ತಕರಿಗೆ ಹೆಚ್ಚಿನ ಪ್ರಾಶಸ್ತ್ಯ ಕೊಡಲಾಗುತ್ತಿತ್ತು. ಅಂದರೆ ಅವರಿಗೆ ಒಪ್ಪಂದದ ಪ್ರಕಾರ ಪೇಟೆಯನ್ನು ಸ್ಥಾಪಿಸಲು ಅನುಮತಿ ಕೊಡಲಾಗುತ್ತಿತ್ತು. ಪೇಟೆಯ ಮುಖ್ಯ ಸ್ಥಳದಲ್ಲಿ ಧ್ವಜವನ್ನು ನಿಲ್ಲಿಸಲಾಗುತ್ತಿತ್ತು. ಒಂದು ಯಾದಿಯ ಪ್ರಕಾರ ಮಂಗಳವಾರ ಪೇಟೆಯಲ್ಲಿ ಧ್ವಜ ನಿಲ್ಲಿಸಲು ತಗುಲಿದ ಖರ್ಚು ೧.೪.೦ ಧಾರವಾಡಿ ಹೊನ್ನು, ವಾಸೋಡಿ(ಶಾಲು) ತೆಂಗಿನಕಾಯಿ ಅರಿಸಿನ ಕುಂಕುಮ ತಂದು ಬ್ರಾಹ್ಮಣರು ಪೂಜೆ ಮಾಡುತ್ತಿದ್ದರು. ಜಂಗಮರಿಗೆ ದಕ್ಷಿಣೆಯನ್ನು ನೀಡಲಾಗುತ್ತಿತ್ತು. ಈ ಪದ್ಧತಿ ಎಲ್ಲ ಪೇಟೆಗಳಲ್ಲಿ ಇತ್ತು. ಈ ರೀತಿಯಾದ ಪೂಜೆ ಪುನಸ್ಕಾರದ ನಂತರ ವ್ಯಾಪಾರ ನಡೆಯುತ್ತಿತ್ತೆಂದು ಹೇಳಬಹುದು(ಸಾವಂತ,೧೯೯೩:೧೭೦). ಈ ಮೂಲಕ ಕರ್ನಾಟಕದ ಸ್ಥಳೀಯ ವ್ಯಾಪಾರದ ಸಂತೆ ಮತ್ತು ಮಾರುಕಟ್ಟೆಗಳು ಇದೇ ರೀತಿಯಾದಂತಹ ವ್ಯವಸ್ಥೆಯನ್ನು ಹೊಂದಿರಬಹುದೆಂದು ಹೇಳಬಹುದು. ಇದಕ್ಕೆ ಮುಖ್ಯ ಕಾರಣವೆಂದರೆ ವಿಜಯನಗರ ಮತ್ತು ವಿಜಯನಗರಪೂರ್ವದಲ್ಲಿದ್ದ ಅಗ್ರಹಾರದ ನಿರ್ಮಾಣದ ಪರಿಕಲ್ಪನೆಯನ್ನು ಗಮನಿಸಿದರೆ. ವಿಜಯನಗರೋತ್ತರ ಕಾಲದಲ್ಲಿ ಅಷ್ಟಾಗಿ ನಿರ್ಮಾಣವಾಗಿಲ್ಲದಿದ್ದರೂ ಕರ್ನಾಟಕ ಪಾಳೆಯಗಾರರು ಬ್ರಾಹ್ಮಣಶಾಹಿಯನ್ನು ಪ್ರೋತ್ಸಾಹಿಸಿದರೆಂದರೆ ತಪ್ಪಾಗಲಾರದು ಹಾಗೂ ಬ್ರಿಟಿಶರು ಕಾರವಾರದಲ್ಲಿರುವ ಅವರ ವ್ಯಾಪಾರಿ ಕೇಂದ್ರವನ್ನು ೧೬೬೩ರಲ್ಲಿ ಹುಬ್ಬಳ್ಳಿಗೆ ಸ್ಥಳಾಂತರಿಸಿದ್ದರು(ಜಾದುನಾಥ್,೧೯೨೯:೨೩೮). ಕಾರಣ

ಉತ್ತರ ಕರ್ನಾಟಕ ಭಾಗದ ಹತ್ತಿ ಉತ್ಪಾದನೆಯನ್ನು ಸಂಗ್ರಹಿಸಲು ಮತ್ತು ಬಾಂಬೆಗೆ ನೇರ ಸಂಪರ್ಕವನ್ನು ಒದಗಿಸುವ ಪ್ರಮುಖ ವ್ಯಾಪಾರಿ ಕೇಂದ್ರವಾಗಿತ್ತು.

ವಿಜಯನಗರ ಕಾಲದಲ್ಲಿ ಸಾಮಂತ ಸಂಸ್ಥಾನವಾದ ಕೆಳದಿ ರಾಜ್ಯವು ಕೃಷಿ ಉತ್ಪನ್ನಗಳ ಪ್ರಮುಖ ವ್ಯಾಪಾರ ಕೇಂದ್ರವಾಗಿತ್ತು. ವ್ಯಾಪಾರದಿಂದ ಹೆಚ್ಚಿನ ಆದಾಯ ಬರುತ್ತಿತ್ತು. ಇಲ್ಲಿ ದೊರೆಯುವ ಸಂಬಾರು ಪದಾರ್ಥಗಳಿಗೆ ವಿದೇಶಿಯರು ಪೈಪೋಟಿ ನಡೆಸುತ್ತಿದ್ದರು. ಕಾಳುಮೆಣಸಿನಿಂದ ರಾಜ್ಯಕ್ಕೆ ಹೆಚ್ಚಿನ ಆದಾಯ ಬರುತ್ತಿತ್ತು. ಕೃಷಿ ಉತ್ಪನ್ನಗಳಿಗೆ ಹೆಚ್ಚು ಬೇಡಿಕೆ ಇತ್ತು. ಶಿವಮೊಗ್ಗ, ಸಾಗರ ಹಾಗೂ ಗೇರುಸೊಪ್ಪೆಗಳಲ್ಲಿ ಹೆಚ್ಚಾಗಿ ಮೆಣಸನ್ನು ಉತ್ಪಾದಿಸಲಾಗುತ್ತಿತ್ತು. ಕರಾವಳಿ ಬಂದರುಗಳಾದ ಮಂಗಳೂರು, ಬಾರಕೂರುಗಳಿಗೆ ಯುರೋಪ್ ದೇಶದಿಂದ ವ್ಯಾಪಾರ ನಡೆಸಲು ವರ್ತಕರು ಭೇಟಿ ಕೊಡುತ್ತಿದ್ದರು. ಕೆಳದಿ ರಾಜ್ಯವು ಬೇರೆ ಬೇರೆ ಕಡೆ ಕೃಷಿ ವ್ಯಾಪಾರ ನಡೆಸಲು ಸಂಬಂಧ ಹೊಂದಿತ್ತು.  ವಾಲಾಜುಪೇಟೆ, ಕಂಬದಪೇಟೆ, ತಾಡಿಪತ್ರ, ಕಡಪ, ಕಡಲಬಾಳು, ಖಂಡಮೂರು, ಕಡಮಲಪೇಟೆ, ನಗರಗೇರಿ, ಮೊಳಕಾಲ್ಮೂರು, ರಾಮದುರ್ಗ, ಬರವಗೊಂಡ, ಬಂಗನಹಳ್ಳಿ, ಕಾಜಪೇಟೆ, ಜರಿಮಲ್, ಬಳ್ಳಾರಿ. ಇವು ಆ ಕಾಲದ ಕೃಷಿ ಉತ್ಪನ್ನದ ವ್ಯಾಪಾರದ ಸ್ಥಳೀಯ ವ್ಯಾಪಾರಿ ಕೇಂದ್ರಗಳಾಗಿದ್ದವು(ಕ್ವಾಟರಿ ಜರ್ನಲ್ ಆಫ್ ಮಿಥಿಕ್-೧೨:೫). ಇವುಗಳ ಮಾರ್ಗಗಳನ್ನು ಕುರಿತಂತೆ ಸಾರಿಗೆ ಸಂಪರ್ಕಗಳನ್ನು ವಿಸ್ತರಿಸಲಾಗಿತ್ತು.

ವಿದೇಶಿಯ ಪ್ರವಾಸಿಗನಾದ ಪಿಯತ್ರೋದೆಲ್ಲಾವಲ್ಲೆ ತಾನು ನೋಡಿದ ಸಂತೆಯನ್ನು ಈ ರೀತಿ ವಿವರಿಸಿದ್ದಾನೆ. ಈ ದಿನ ಅಂದರೆ ಭಾನುವಾರ ಸಾಗರದಲ್ಲಿ ಸಂತೆ, ಇಕ್ಕೇರಿಯಲ್ಲಿ ಶುಕ್ರವಾರ ಸಂತೆ. ಬಹಳ ಜನ ಸಂತೆಗೆ ಬಂದಿದ್ದರು. ಆದರೆ ಹೊಟ್ಟೆ-ಬಟ್ಟೆಗೆ ಸಾಮಾನುಗಳಲ್ಲದೆ ಬೇರೆ ಸಾಮಾನುಗಳು ಸಂತೆಗೆ ಬಂದಿರಲಿಲ್ಲ(ನಾಗೇಗೌಡ,(೪),೨೦೦೭:೨೨೭). ಎಂದು ಹೇಳಿದ್ದಾನೆ. ಈ ಮೂಲಕ ವಿಜಯನಗರೋತ್ತರ ಕಾಲದಲ್ಲಿ ಈ ಸಂತೆಗಳು ಪ್ರಮುಖ ಕೇಂದ್ರಗಳಾಗಿ ಗುರುತಿಸಿಕೊಂಡವು. ಈ ಪ್ರದೇಶಗಳು ವಾಣಿಜ್ಯ ವ್ಯವಸ್ಥೆಯಲ್ಲಿ ಚುರುಕುಗೊಂಡು ನಗರೀಕರಣ ಪ್ರಕ್ರಿಯೆಗೆ ಒಳಗಾಗಿ ದೊಡ್ಡ ವ್ಯಾಪಾರಿ ಕೇಂದ್ರಗಳಾಗಿ ಬೆಳವಣಿಗೆ ಹೊಂದಿದ್ದವು. ಮುಂದುವರಿದು ಹೊನ್ನಾವರದ ಹೊರಗಡೆ ಒಂದು ಬಜಾರ್ ಅಥವಾ ಮಾರುಕಟ್ಟೆ ಇದೆ. ಅಷ್ಟೇನೂ ಮುಖ್ಯವಲ್ಲದ ಜನರ ನಿತ್ಯ ಅವಶ್ಯಕ ವಸ್ತುಗಳು ದೊರೆಯುತ್ತಿದ್ದವು ಎಂದು ಹೇಳಿದ್ದಾನೆ.

ಚಿಕ್ಕದೇವರಾಜ ಒಡೆಯರು ವ್ಯಾಪಾರಿ ವರ್ಗಗಳನ್ನು ಬೆಂಬಲಿಸಿ ಹೆಚ್ಚಿನ ಆದಾಯ ಬರುವಂತೆ ಮಾಡಿದರು. ಒಂದು ಕಡೆ ಪಾಳೆಯಗಾರರ ನಿರಂತರ ಮಾರುಕಟ್ಟೆ ವಿಸ್ತರಣೆ ಆದಂತೆ ಸ್ಥಳೀಯ ವ್ಯಾಪಾರಕ್ಕೆ ಕಳೆಗೊಂಡಿತ್ತು. ಆದರೆ ಚಿಕ್ಕದೇವರಾಜ ಒಡೆಯರು ಅದನ್ನು ಪುನಶ್ಚೇತನಗೊಳಿಸಿದರು. ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಸರಕು ಉತ್ಪಾದನೆ ಹೆಚ್ಚಾಗಿದ್ದರಿಂದ ವ್ಯಾಪಾರಿನೆಲೆಗಳು ರಚನೆಗೊಂಡವು. ಕನಿಷ್ಠ ಎರಡುನೂರು ಸಂತೆಗಳು ಅಸ್ತಿತ್ವಕ್ಕೆ ಬರುವಂತೆ ಮಾಡಿತ್ತು(ಸಾಕಿ,(೨)೧೯೯೮ :೩೬೬). ಈ ಮೂಲಕ ಇದು ವಿಜಯನಗರಕ್ಕಿಂತ ವಿಜಯನಗರೋತ್ತರ ಕಾಲದಲ್ಲಿ ಕಂಡುಬಂದ ಹೊಸ ಬದಲಾವಣೆಯಾಗಿದೆ. ತೆರಿಗೆಯನ್ನು ನಗದು ರೂಪದಲ್ಲಿ ಸಂಗ್ರಹಣೆ ಮಾಡಲಾರಂಭಿಸಿದರು.

ಹೀಗೆ ಗ್ರಾಮಾಂತರ ಮಟ್ಟದಲ್ಲಿ ಸಂತೆಗಳು ಪುನಃ ಚೇತರಿಸಿಕೊಂಡು ಹೆಚ್ಚು ಹೆಚ್ಚು ರೈತ ಮತ್ತು ಮಾಲೀಕ ವರ್ಗವನ್ನು ಸೃಷ್ಟಿಸಿದವು.

ಮೈಸೂರು ಸಂಸ್ಥಾನದಲ್ಲಿ ನಗರ ಆರ್ಥಿಕತೆಯನ್ನು ತೋರಿಸುವಂತಹ ಸಂದರ್ಭದಲ್ಲಿ ನಗರ ಜೀವನಕ್ಕೆ ಬೇಕಾದ ಅಗತ್ಯ ವಸ್ತುಗಳ ಮಾರುಕಟ್ಟೆಗಳ ವ್ಯಾಪಾರ ನಡೆಯುತ್ತಿತ್ತು. ಮೈಸೂರು ಅರಸರು ಆರಂಭದಿಂದ ಚಿಕ್ಕದೇವರಾಜ ಒಡೆಯರ ಆಳ್ವಿಕೆಯವರೆಗೂ ಗ್ರಾಮೀಣ ಮತ್ತು ನಗರ ಕೇಂದ್ರಿತ ವ್ಯಾಪಾರ-ವಾಣಿಜ್ಯ ನಡೆಯುತ್ತಿತ್ತು. ಬಿಜಾಪುರ ಅವನತಿಯ ನಂತರ ಹೊಸದೊಂದು ಮಾರುಕಟ್ಟೆಕೇಂದ್ರಿತ ಆರ್ಥಿಕತೆಯು ಅಸ್ತಿತ್ವಕ್ಕೆ ಬಂದಿದ್ದು ಇದು ಮೈಸೂರು ಒಡೆಯರ ಕಾಲದಲ್ಲಿ. ಶ್ರೀರಂಗಪಟ್ಟಣ, ಮೈಸೂರು, ಬೆಂಗಳೂರು, ಮಾರುಕಟ್ಟೆಯ ಕೇಂದ್ರಗಳಾಗಿ ಅಭಿವೃದ್ಧಿ ಹೊಂದಿದ್ದವು.

ಮೈಸೂರಿನ ಚಿಕ್ಕದೇವರಾಜ ಒಡೆಯರು ಹಿಂದುಳಿದಿದ್ದ ವ್ಯಾಪಾರಿಗಳನ್ನು ಪುನಶ್ಚೇತನಗೊಳಿಸಿ ಪುನಃ ಅವರ ಕಸುಬು ಮುಂದುವರಿಸಲು ಅವಕಾಶ ನೀಡಿದ್ದ ಔರಂಗಜೇಬನ ಅಧಿಕಾರಿಯಾಗಿ ಖಾಸಿಂಖಾನನಿಂದ ಬೆಂಗಳೂರು ನಗರವನ್ನು ೩ ಲಕ್ಷಕ್ಕೆ ಕೊಂಡು ಬಟ್ಟೆ ಕೈಗಾರಿಕೆಯನ್ನು ಪ್ರೋತ್ಸಾಹಿಸಿ, ಹತ್ತಿ ಬೆಳೆಯುವ ಕೇಂದ್ರಗಳಾಗಿದ್ದ ಧಾರವಾಡ, ಬಿಜಾಪುರ, ಶಿವಮೊಗ್ಗ ಮತ್ತು ಬೀದರ್‌ನಲ್ಲಿ ಹೊಸ ಮಾರುಕಟ್ಟೆಗಳಾಗಿ ಮರುರಚನೆಗೊಂಡವು. ಇವುಗಳ ಜೊತೆ ಧಾರವಾಡ ಮತ್ತು ಶಿವಮೊಗ್ಗ ನಗರಗಳು ಅವರ ಅಧೀನದಿಂದ ಹೊರಹೋದಾಗ ಬಿಜಾಪುರ, ಬಳ್ಳಾರಿ, ಬೀದರ್, ಗುಲ್ಬರ್ಗ ಹೊಸ ಕೇಂದ್ರಗಳಾಗಿ ನಿರ್ಮಾಣವಾದವು. ಮಾರುಕಟ್ಟೆಯ ಕೇಂದ್ರಗಳು ಅಲ್ಲಿನ ವರ್ತಕರ ಜವಾಬ್ದಾರಿಗೆ ಬಿಟ್ಟಿದ್ದರು. ವರ್ತಕರನ್ನು ಪ್ರೋತ್ಸಾಹಿಸಿದರೆ ಅವರ ಸಾಮ್ರಾಜ್ಯ ಆರ್ಥಿಕವಾಗಿ ಬೆಳೆಯುತ್ತದೆ ಎಂಬ ನಂಬಿಕೆ ಪ್ರಭುತ್ವದಾಗಿತ್ತು(ಸಾಕಿ,೧೯೯೮:೩೬೭-೩೬೮).

ಚಿಕ್ಕದೇವರಾಜ ಒಡೆಯರ ನಂತರ ಕರ್ನಾಟಕದ ವ್ಯಾಪಾರ-ವಾಣಿಜ್ಯವನ್ನು ಹೈದರಾಲಿ ಮತ್ತು ಟಿಪ್ಪು ಸುಲ್ತಾನ ಇದೇ ಮಾದರಿಯ ವ್ಯಾಪಾರ-ವಾಣಿಜ್ಯವನ್ನು ಅಭಿವೃದ್ಧಿಗೊಳಿಸಿ ವಿದೇಶಿ ವ್ಯಾಪಾರವನ್ನು ಸಾಗರಗಳ ಮೂಲಕ ಚುರುಕುಗೊಳಿಸಿದನು.

ಟಿಪ್ಪು ಕಾಲಾವಧಿಯಲ್ಲಿ ಶಿರಾ ಪ್ರಮುಖ ವ್ಯಾಪಾರಿ ಕೇಂದ್ರವಾಗಿದ್ದು, ಬೆಂಗಳೂರು ಮತ್ತು ಶ್ರೀರಂಗಪಟ್ಟಣದ ಜೊತೆಗೆ ಸಂಪರ್ಕ ಹೊಂದಿದ್ದು. ಈ ಕಾಲದಲ್ಲಿ ಅಭಿವೃದ್ಧಿ ಹೊಂದಿತ್ತು (ಚಂದ್ರಶೇಖರ್,ರಾವ್:೨೦೧೬೫೯). ವಿಜಯನಗರೋತ್ತರ ಕಾಲದ ಮುಂಬೈ ಕರ್ನಾಟಕವೆಂದು ಗುರುತಿಸಿಕೊಂಡು ಧಾರವಾಡ, ಮಹಾರಾಷ್ಟ್ರ, ವಿಜಯಪುರ, ಕಾನಡ ಜಿಲ್ಲೆಗಳ ವಿವಿಧ ಭಾಗಗಳಲ್ಲಿ ಸಂತೆಗಳು ನಡೆಯುತ್ತಿದ್ದವು. ಸಿಂದಗಿ, ವಿಜಯಪುರ ಇವುಗಳಾಗಿದ್ದವು. ಬಟ್ಟೆಯ ವ್ಯಾಪಾರಕ್ಕೆ ಪ್ರಾಮುಖ್ಯತೆಯನ್ನು ಪಡೆದ ಸ್ಥಳ ಮುದ್ದೇಬಿಹಾಳ, ನಾಲವತವಾಡ, ತಾಳೀಕೋಟೆ, ಬಾಗಲಕೋಟೆ, ಬೇಲೂರು, ಗಜೇಂದ್ರಗಡ, ಗುಳೇದಗುಡ್ಡ, ಕೆರೂರು, ಹುನಗುಂದ, ಕಮತಗಿ, ಅಮೀನಗಡ, ಬೆಳಗಾವಿ, ಬೈಲಹೊಂಗಲ, ಖಾನಾಪುರ, ನಂದಗಡ, ಸವದತ್ತಿ, ಮುರುಗೋಡು, ಚಿಕ್ಕೋಡಿ, ಗೋಕಾಕ, ಅಥಣಿ, ನಿಪ್ಪಾಣಿ, ಸಂಕೇಶ್ವರ, ಧಾರವಾಡ, ಹುಬ್ಬಳ್ಳಿ, ಗದಗ, ಬ್ಯಾಡಗಿ, ಮುಂಡರಗಿ, ನವಲಗುಂದ, ನರಗುಂದ ಮೊದಲಾದ ಭಾಗಗಳಲ್ಲಿ ವಿಜಯನಗರೋತ್ತರ ಕಾಲದಲ್ಲಿ ಸಂತೆಗಳು

ನಡೆಯುತ್ತಿದ್ದವು. ಈ ಎಲ್ಲ ಪ್ರದೇಶ ಒಂದೊಂದು ವಸ್ತುವಿನ ವ್ಯಾಪಾರಕ್ಕೆ ಪ್ರಾಮುಖ್ಯತೆಯನ್ನು ಪಡೆದಿದ್ದವು. ಉತ್ತರ ಕರ್ನಾಟಕವು ಮುಂಬೈ ಕರ್ನಾಟಕ ವ್ಯಾಪ್ತಿಗೆ ಸೇರಿದ್ದು, ಬಾಂಬೆಯ ಜೊತೆ ವ್ಯಾಪಾರ ಸಂಪರ್ಕವನ್ನು ಹೊಂದಿದ್ದು, ಇಲ್ಲಿನ ಸರಕುಗಳನ್ನು ಅಲ್ಲಿಗೆ ರವಾನಿಸುತ್ತಿದ್ದರು (ವೆಂಕಟರಾಂಗೊಕಟ್ಟಿ,೧೯೯೩,೩೦೧,೩೦೨)

ಗುಬ್ಬಿ ಸಂತೆಯು ಅತ್ಯಂತ ಪ್ರಮುಖವಾದುದಾಗಿತ್ತು. ಈ ಸಂತೆಯನ್ನು ವೀಕ್ಷಿಸಿದ್ದ ಬುಕಾನನ್ ಸಂತೆಯ ಬಗ್ಗೆ ದೀರ್ಘವಾದ ವಿವರಣೆ ನೀಡಿದ್ದಾನೆ. ಗುಬ್ಬಿಯಲ್ಲಿ ಪ್ರತಿವಾರ ಸಂತೆಯು ನಡೆಯುತ್ತಿತ್ತು. ಈ ಸಂತೆಗೆ ದೂರದೂರದ ಮೂಡಬಿದರೆ, ಸುಬ್ರಹ್ಮಣ್ಯ, ತಾಡಪತ್ರಿ, ಮಲಯಾಳದಿಂದ ವರ್ತಕರು ಬರುತ್ತಿದ್ದರು ಎಂಬುದಾಗಿ ತಿಳಿಸಿದ್ದಾನೆ(ಬುಕಾನನ್,೧,೧೮೦೭:೧೫೦). ಶ್ರೀರಂಗಪಟ್ಟಣ, ಬೆಂಗಳೂರು, ಕೋಲಾರಗಳ ವರ್ತಕರು ಕೂಡ ಗುಬ್ಬಿ ಸಂತೆಗೆ ಹೋಗುತ್ತಿದ್ದರೆಂದು ತಿಳಿದುಬಂದಿದೆ. ಹೊರಗಿನಿಂದ ಬಂದ ಈ ವರ್ತಕರು, ಏಲಕ್ಕಿ, ಶುಂಠಿ, ಕರಿಮೆಣಸು, ಗೋಧಿ, ಬಂಗಾಳದ ಅಡಿಕೆ, ಕಸ್ತೂರಿಗಳನ್ನು ತಂದು ಗುಬ್ಬಿ ಸಂತೆಯಲ್ಲಿ ಮಾರುತ್ತಿದ್ದರು. ಅಲ್ಲದೆ ಅಡಿಕೆ, ವೀಳ್ಯದೆಲೆ, ಬೆಲ್ಲ, ಹತ್ತಿ ಬಟ್ಟೆಗಳು, ಕಂಬಳಿಗಳನ್ನು ಕೊಂಡುಹೋಗುತ್ತಿದ್ದರು. ಅಂದಿನ ಸಂತೆಗಳಲ್ಲಿ ಹಲವಾರು ಸರಕು ಸಾಮಗ್ರಿಗಳು ಮಾರಾಟವಾಗುತ್ತಿದ್ದವು. ಮುಖ್ಯವಾಗಿ ಸ್ಥಳೀಯ ಸಂತೆಯ ದಿನವೇ ತಮಗೆ ಬೇಕಾದ ಸರಕುಗಳನ್ನು ತಂದು ಸಂಗ್ರಹಿಸಿಕೊಳ್ಳುತ್ತಿದ್ದರು. ಸಂತೆಗಳು ಪ್ರಮುಖವಾಗಿ ಅಭಿವೃದ್ಧಿಯಾಗುವುದಕ್ಕೆ ಕೆಲವು ಅಧಿಕಾರಿಗಳನ್ನು ಇಲ್ಲವೇ ವರ್ತಕರನ್ನು ನೇಮಿಸುತ್ತಿದ್ದರು. ಸಂತೆ ಅಥವಾ ಪೇಟೆಗಳ ಮೇಲ್ವಿಚಾರಣೆಗೆ ಪಟ್ಟಣ ಶೆಟ್ಟಿ ಎಂಬ ಅಧಿಕಾರಿಗಳನ್ನು ನೇಮಕ ಮಾಡುತ್ತಿದ್ದರು(ಸಾವಂತ,೧೯೯೩:೧೭೧). ಇವರು ಸ್ಥಳಸುಂಕ ಎಂಬ ತೆರಿಗೆ ವಸೂಲಿ ಮಾಡುತ್ತಿದ್ದರು. ಹಾಗೆಯೆ ಸಂತೆಗೆ ಬರುವ ಜನರಿಗೆ ನೀರಿನ ಸೌಲಭ್ಯವನ್ನು ಒದಗಿಸುತ್ತಿದ್ದರು . ಸಂತೆಗೆ ಬರುವ ಜನರಿಗೆ ಶಾಂತಿ ಸುವ್ಯವಸ್ಥೆ ಕಾಪಾಡುವುದು. ವರ್ತಕರ ನಡುವಿನ ವ್ಯಾಜ್ಯ ಬಗೆಹರಿಸುವುದು ತಪ್ಪಿತಸ್ಥರಿಗೆ ದಂಡಿಸುವುದು ಸ್ಥಳೀಯ ಅಧಿಕಾರಿಯ ಕೆಲಸವಾಗಿತ್ತು.

ಸಂತೆಯ ಬಯಲು ಅಂಗಡಿಯಲ್ಲಿ ಅಕ್ಕಿ ವ್ಯಾಪಾರ ಮಾಡುತ್ತಿದ್ದರು. ಮಧ್ಯಕಾಲೀನ ಕರ್ನಾಟಕದ ಬೇರೆ ಬೇರೆ ಪ್ರದೇಶಗಳಲ್ಲಿ ವಸ್ತುಗಳಿಗೆ ಸಂತೆಯ ಸುಂಕವನ್ನು(ಆಯ), ಹಣ ಮತ್ತು ವಸ್ತುಗಳ ರೂಪದಲ್ಲಿ ವಿಧಿಸುತ್ತಿದ್ದರು. ಒಂದೇ ಶತಮಾನದಲ್ಲಿ ಕೆಲವು ಕಡೆ ಏಕರೂಪತೆ, ಇನ್ನು ಕೆಲವು ಕಡೆ ಬಹುರೂಪತೆಯಿಂದ ತೆರಿಗೆಯನ್ನು ಸಂಗ್ರಹಿಸುತ್ತಿದ್ದುದ್ದನ್ನು ಕಾಣಬಹುದು. ಕೃಷಿ ಉತ್ಪನ್ನಗಳಾದ ಭತ್ತ, ರಾಗಿ, ಜೋಳ, ಸಕ್ಕರೆ, ಬೆಲ್ಲ, ಎಲೆ, ಅಡಿಕೆ, ಹತ್ತಿ, ಸಾಸಿವೆ, ಜೀರಿಗೆ, ಶುಂಠಿ, ಅರಿಷಿಣ, ಮೆಣಸು, ಗಂಧದ ಎಣ್ಣೆ, ಇಂಗು ಮುಂತಾದ ಸರಕುಗಳನ್ನು ಸ್ಥಳೀಯ ಮಾರುಕಟ್ಟೆಯಲ್ಲಿ ಮಾರಾಟವಾಗುತ್ತಿದ್ದವು(ಹಿರೇಮಠ,೧೯೮೬:೧೨೩).

ಸಂತೆಗಳ ಮೂಲಕ ಪೇಟೆ ಪಟ್ಟಣಗಳು ಪ್ರಮುಖವಾಗಿ ಗುರುತಿಸಿಕೊಂಡಿದ್ದವು. ದಕ್ಷಿಣ ಭಾರತದ ಮಧ್ಯಕಾಲೀನ ಚರಿತ್ರೆಯಲ್ಲಿ ಪೇಟೆ ಪಟ್ಟಣಗಳು ವ್ಯಾಪಾರಲ್ಲಿ ಮುಖ್ಯವಾದ ಪಾತ್ರವನ್ನು ನಿರ್ವಹಿಸುತ್ತಿದ್ದವು. ಈ ಪೇಟೆ ಪಟ್ಟಣಗಳು ಪ್ರಾಚೀನ ಕಾಲದಿಂದಲೂ ಆರ್ಥಿಕ ಕೇಂದ್ರಗಳಾಗಿ,

ರಾಜಕೀಯ, ಧಾರ್ಮಿಕ ಕೇಂದ್ರಗಳಾಗಿ ಗುರುತಿಸಿಕೊಂಡು ತಮ್ಮ ಕಾರ್ಯವನ್ನು ನಿರ್ವಹಿಸುತ್ತಿದ್ದವು. ಹಳೆ ಪಟ್ಟಣಗಳ ವಿನಾಶ ಹೊಸ ಪಟ್ಟಣಗಳ ನಿರ್ಮಾಣ ಪ್ರಕ್ರಿಯೆ ನಿರಂತರವಾಗಿ ನಡೆಯುತ್ತಿತ್ತು.

ಕೆಳದಿ ನಾಯಕರು ವ್ಯಾಪಾರ ಸುಗಮವಾಗಿ ನಡೆಯಲು ಅನೇಕ ರೀತಿಯ ಪೇಟೆಗಳನ್ನು ನಿರ್ಮಿಸುತ್ತಿದ್ದರು. ೧೮ನೆಯ ಶತಮಾನದಲ್ಲಿ ಕೆಳದಿ ನಾಯಕರು ಪ್ರಮುಖ ಮಾರುಕಟ್ಟೆಯ ಪ್ರದೇಶಗಳಲ್ಲಿ ಕವಲೇದುರ್ಗವು ಒಂದು. ಇಕ್ಕೇರಿಯು ಸಹ ವ್ಯಾಪಾರ ಕೇಂದ್ರವಾಗಿದ್ದು, ಇಲ್ಲಿ ಭತ್ತದ ಪೇಟೆ ಇತ್ತು. ಕೃಷಿ ಉತ್ಪನ್ನಗಳನ್ನು ಹಳ್ಳಿಗಳಲ್ಲಿ ವಾಸಿಸುತ್ತಿದ್ದ ರೈತರಿಂದ ಸಂಗ್ರಹಿಸಲು ಅನುಕೂಲವಾಗುವಂತೆ ಅಲ್ಲಲ್ಲಿ ಪೇಟೆಗಳನ್ನು ನಿರ್ಮಿಸುತ್ತಿದ್ದರು. ಸಾಗರದ ಬಳಿ ರತ್ನಾಪುರ ಪೇಟೆ ಇತ್ತು. ಇದು ಇಲ್ಲಿನ ಕೃಷಿ ಉತ್ಪಾದನೆಯನ್ನು ಸಂಗ್ರಹಿಸುವ ಕೇಂದ್ರವಾಗಿತ್ತು. ಪೇಟೆಗಳಲ್ಲಿ ಸೋಮವಾರಪೇಟೆ, ಮಂಗಳವಾರಪೇಟೆ, ದುಬಾರಿಪೇಟೆ, ಚಿಕ್ಕಪೇಟೆ, ಚಿನಿವಾರಪೇಟೆ, ಹೊಸಪೇಟೆ, ಗುಜರಿಪೇಟೆ, ಕೊಟೆಗೇರಿ, ನೊಲಗೇರಿ ಮುಂತಾದ ಹೆಸರುಗಳಿದ್ದವು. ಇಕ್ಕೇರಿ ಮತ್ತು ಬಿದನೂರು ದೊಡ್ಡ ಮಾರುಕಟ್ಟೆಗಳಾಗಿದ್ದವು. ಇಲ್ಲಿ ಕೆಲವು ವಿದೇಶಿ ವ್ಯಾಪಾರಿಗಳೂ ನೆಲೆಸಿದ್ದರು. ಈ ನಗರಗಳಲ್ಲಿ ಜವಳಿ, ಎಣ್ಣೆ, ಧಾನ್ಯಗಳು, ರೇಷ್ಮೆ, ಬೆಲ್ಲ ಮುಂತಾದ ವಸ್ತುಗಳನ್ನು ಮಾರಲು ಪ್ರತ್ಯೇಕ ಮಾರುಕಟ್ಟೆಗಳಿದ್ದವು. ಬಿದನೂರಿನಲ್ಲಿದ್ದ ಅಕ್ಕಿಪೇಟೆ, ತರಗುಪೇಟೆ, ಚಿನಿವಾರಪೇಟೆ, ಹೊಸಪೇಟೆ, ಸೋಮವಾರಪೇಟೆ, ಚಿಕ್ಕಪೇಟೆ, ಜವಳಿಪೇಟೆ ಮೊದಲಾದ ಹೆಸರುಗಳು ಈಗಲೂ ಪ್ರಚಲಿತವಾಗಿವೆ. ಪಶ್ಚಿಮ ತೀರದಿಂದ ಅಕ್ಕಿ, ಮೀನು, ತೆಂಗು, ಕೊಬ್ಬರಿ, ಗೋಡಂಬಿ ಮುಂತಾದ ವಸ್ತುಗಳು ಒಳನಾಡಿನ ಮಾರುಕಟ್ಟೆಗೆ ಬರುತ್ತಿದ್ದವು(ಕಲಬುರ್ಗಿ,ರಾಮಭಟ್ಟ ೧೯೯೪:೩೦೮).

ಕೆಳದಿ ರಾಜ್ಯವು ಘಟ್ಟಗಳ ಮೇಲೆ ಹಾಗೂ ಕೆಳಗೆ ವಿಸ್ತರಿಸಿಕೊಂಡಿತ್ತು. ಘಟ್ಟದ ಮೇಲಿನ ಮಲೆನಾಡು ಪ್ರದೇಶಗಳಲ್ಲಿ ಬೆಳೆದ ಅಡಿಕೆ ಮತ್ತು ಮೆಣಸುಗಳನ್ನು ಘಟ್ಟದ ಕೆಳಗಿನ ಕರಾವಳಿ ಪ್ರದೇಶಕ್ಕೆ ಸಾಗಿಸಿ ಅಲ್ಲಿಂದ ವಿದೇಶಿಗಳಿಗೆ ರಫ್ತು ಮಾಡಲಾಗುತ್ತಿತ್ತು. ಆರಗ, ಹೊನ್ನಾಳಿ, ಶಿವಮೊಗ್ಗ, ಭಟ್ಕಳ, ಆನಂದಪುರ, ಕುಂಸಿ, ಹೊನ್ನಾವರ ಸಾಗರ, ಗೇರುಸೊಪ್ಪೆ, ಕುಂದಾಪುರ, ಗಂಗೊಳ್ಳಿ, ಬಾರಕೂರು, ಬಸ್ರೂರು, ಮಂಗಳೂರು, ಕಾಸರಗೋಡು ಇತರ ಸ್ಥಳಗಳಲ್ಲಿ ಮಾರುಕಟ್ಟೆಗಳಿದ್ದವು (ಅರುಣ್ ೨೦೦೬:೭೪) ಈ ಮಾರುಕಟ್ಟೆಗಳು ನಗರ ಜೀವನದ ಆರ್ಥಿಕತೆಯನ್ನು ಬಿಂಬಿಸುವ ಕೆಲಸವನ್ನು ನಿರ್ವಹಿಸುತ್ತಿದ್ದವು. ರಾಜ್ಯಕ್ಕೆ ಹೆಚ್ಚಿನ ಆದಾಯ ಬರುವ ಕಾರಣದಿಂದ ವ್ಯಾಪಾರಕ್ಕೆ ಪ್ರೋತ್ಸಾಹವನ್ನು ನೀಡಿದ್ದರು. ವ್ಯಾಪಾರದಲ್ಲಿ ವಿದೇಶಿಯರು ಪರವಾನಿಗೆ ಪಡೆದು ಈ ಮಾರುಕಟ್ಟೆಯಲ್ಲಿ ವ್ಯಾಪಾರ ಮಾಡಬೇಕಿತ್ತು.

ವ್ಯಾಪಾರ ಮಾಡುವ ಸ್ಥಳಗಳನ್ನು ಎರಡು ರೀತಿಯಲ್ಲಿ ಗುರುತಿಸಲಾಗಿದೆ. ಒಂದು ಸಂತೆಯಲ್ಲಿದ್ದರೆ ಇನ್ನೊಂದು ಪಟ್ಟಣದಲ್ಲಿರುತ್ತಿತ್ತು. ವಾರದಲ್ಲೊಂದು ದಿನ ಸಂತೆಯು ನೆರೆದಾಗ ಹೊರಪೇಟೆಯಲ್ಲೂ ಉಳಿದ ದಿನಗಳಲ್ಲಿ ಒಳಪೇಟೆಯಲ್ಲೂ ವ್ಯಾಪಾರ ನಡೆಯುತ್ತಿತ್ತು. ಪೇಟೆಗೆ ಚತುಸ್ಸೀಮೆಯನ್ನು ಗೊತ್ತುಪಡಿಸುತ್ತಿದ್ದರು. ಅಂದರೇ ಊರಿನ ಗಡಿಭಾಗದ ಉಲ್ಲೇಖದ ಹಾಗೆ ಸಂತೆ ಮತ್ತು ಪೇಟೆಗಳಿಗೆ ಒಂದು ನಿರ್ದಿಷ್ಟವಾದ ಸ್ಥಳವನ್ನು ಗುರುತಿಸಿ ಆ ಸ್ಥಳದಲ್ಲಿಯೇ ವ್ಯಾಪಾರ ಮಾಡಬೇಕೆಂದು

ಸೂಚಿಸುತ್ತಾರೆ. ಪ್ರಸ್ತುತ ಆಧುನಿಕ ಸಂದರ್ಭದಲ್ಲಿ ಕೃಷಿ ಉತ್ಪನ್ನ ಮತ್ತು ಮಾರಾಟಕ್ಕೆ ಸಂತೆ ಮತ್ತು ಮಾರುಕಟ್ಟೆಗಳಿವೆ. ಹಳೆಯ ಮಾದರಿಯ ವಿಧಾನ ಪ್ರಸ್ತುತ ಮುಂದುವರಿದಿದೆ ಎಂದರೆ ತಪ್ಪಾಗಲಾರದು.

೧೬೮೩ರಲ್ಲಿ ಚಿತ್ರದುರ್ಗದ ೫ನೆಯ ಮದಕರಿನಾಯಕನು ಜಗಳೂರು ಸೀಮೆಯಲ್ಲಿ ಕಸವನಹಳ್ಳಿಯನ್ನು, ಕ್ರಿ.ಶ.೧೭೧೧ರಲ್ಲಿ ಭರಮಣ್ಣನಾಯಕರು ಗಂಡ ಮುತ್ತೇನಹಳ್ಳಿಯನ್ನು ಅಗ್ರಹಾರ ಪುರಗಳನ್ನಾಗಿ ನಿರ್ಮಿಸಿದ್ದರು(ಎ.ಕ.೧೧,ದಾ :೧೩೦). ಇಲ್ಲಿ ಗಮನಿಸಬೇಕಾಗಿರುವುದು ಅಗ್ರಹಾರ ಮತ್ತು ಪುರಗಳ ಪಕ್ಕದಲ್ಲಿಯೇ ಪೇಟೆಗಳು ಮತ್ತು ಸಂತೆಗಳು ನಿರ್ಮಾಣವಾಗುತ್ತಿದ್ದವು. ಆದರೆ ಪ್ರಸ್ತುತ ಈ ನಗರಗಳು ಒಂದು ಸಾಮಾನ್ಯ ಹಳ್ಳಿಯ ಸ್ವರೂಪದಲ್ಲಿರುವುದನ್ನು ನೋಡಬಹುದು. ಕೆಳದಿಯ ನಾಯಕರ ವ್ಯಾಪಾರವನ್ನು ಗಮನಿಸಿದರೆ ವಿದೇಶಿ ವ್ಯಾಪಾರ ಮಾಡುತ್ತಿರುವುದು ಚಿತ್ರದುರ್ಗದ ನಾಯಕರು ಅಷ್ಟಾಗಿ ಸಂತೆ ಮತ್ತು ಮಾರುಕಟ್ಟೆ ಕೇಂದ್ರಗಳು ನಿರ್ಮಾಣವಾದಂತೆ ಕಂಡುಬರುವುದಿಲ್ಲ. ಆದರೆ ಕೆಳದಿಯು ಕರಾವಳಿ ಭಾಗದಲ್ಲಿದ್ದರಿಂದ ಸಾಗರೋತ್ತರ ವ್ಯಾಪಾರದಲ್ಲಿ ಪ್ರಮುಖವಾಗಿ ಗುರುತಿಸಿಕೊಂಡಿದೆ.

ಪ್ರಾಚೀನ ಕಾಲದಿಂದ ವಿಜಯನಗರೋತ್ತರ ಕಾಲಾವಧಿಯವರೆಗೆ ವಿವಿಧ ಹಂತಗಳಲ್ಲಿ ವ್ಯಾಪಾರ –ವಾಣಿಜ್ಯ ಕೇಂದ್ರವಾಗಿ ಹರಿಹರ ಗುರುತಿಸಿಕೊಂಡಿದೆ. ಹರಿಹರ ತರೀಕೆರೆ ಪಾಳೆಯಗಾರರು, ಸವಣೂರಿನ ನವಾಬರು, ಬಿದನೂರಿನ ಪಾಳೆಯಗಾರರು ಹೈದರಾಲಿ ಮತ್ತು ಟಿಪ್ಪು ಕಾಲದಲ್ಲಿಯೂ ವಾಣಿಜ್ಯ ಕೇಂದ್ರವಾಗಿ, ಧಾರ್ಮಿಕ ಕೇಂದ್ರವಾಗಿ ಸ್ಥಳೀಯ ಆಡಳಿತ ಕೇಂದ್ರವಾಗಿಯೂ ಗುರುತಿಸಿರುವುದನ್ನು ನೋಡಬಹುದು. ವಸಾಹತು ಕಾಲಘಟ್ಟದ ವೇಳೆಗೆ ಹರಿಹರ ತನ್ನ ಹಳೆ ಸ್ವರೂಪವನ್ನು ಕಳೆದುಕೊಂಡು ದಾವಣಗೆರೆಯು ಹತ್ತಿ ಕೈಗಾರಿಕೆಗಳ ಮೂಲಕ ವ್ಯಾಪಾರ ವಾಣಿಜ್ಯದಲ್ಲಿ ಪ್ರಮುಖವಾಗಿ ಕಂಡುಬರುತ್ತದೆ.

ಸಂತೆಯಲ್ಲಿ ಎಲ್ಲ ಜಾತಿಯ ಸ್ತ್ರೀಯರು ಹತ್ತಿ ಖರೀದಿ ಮಾಡಿ, ನೂಲು ತಯಾರಿಸಿ ಮಾರಿ ತಮ್ಮ ಮನೆಗೆ ಬೇಕಾದ ಸಾಮಾನು ಖರೀದಿಸುತ್ತಾರೆ. ಈ ನೂಲು ತಮ್ಮ ಬಟ್ಟೆಗಳಿಗೆ ಬೇಕಾದುದಕ್ಕಿಂತ ಹೆಚ್ಚಿನದು. ಬ್ರಾಹ್ಮಣ ಹೆಂಗಸರು ಮಾತ್ರ ನೂಲುವುದಿಲ್ಲ. ಅವರ ಗಂಡಸರು ಗದ್ದೆ ಉಳುಮೆ ಮಾಡುವುದಿಲ್ಲ. ಈ ನೂಲು ಬಳ್ಳಾರಿ ಕೃಷ್ಣ ಪರಿಸರದಿಂದ ಬರುವ ನೂಲಿಗಿಂತ ಹೆಚ್ಚು ನಯವಾಗಿ ಇರುತ್ತಿತ್ತು. ಇಡೀ ದಿನ ನೂಲುವ ಒಬ್ಬ ಹೆಂಗಸಿಗೆ ಕೃಷಿ ಕಾರ್ಮಿಕನಷ್ಟೇ ಪ್ರತಿಫಲ ಸಿಗುವುದೆಂದು ಬೇರೆಡೆ ಬುಕಾನನ್ ಹೇಳುತ್ತಾನೆ(ಕಾಮತ್,೨೦೦೬:೧೩೭).

ಕೃಷಿ ಉತ್ಪನ್ನಗಳಾದ ಅಕ್ಕಿ, ಭತ್ತ, ರಾಗಿ, ಉಪ್ಪು, ಹುಣಸೆ, ಬೇಳೆಕಾಳು, ಬೂಸಾ, ಎಣ್ಣೆ, ತುಪ್ಪ, ಬೆಲ್ಲ, ತೆಂಗಿನಕಾಯಿ, ಹೊಗೆಸೊಪ್ಪು, ಖರ್ಜೂರ, ಇಂಗು, ಜೀರಿಗೆ, ಈರುಳ್ಳಿ, ಬೆಳ್ಳುಳ್ಳಿ, ಅರಿಸಿಣ, ಶುಂಠಿ, ಅಡಕೆ, ಮೆಣಸು, ವೀಳ್ಯದೆಲೆ, ಸಾಸಿವೆ, ಮೆಂತ್ಯೆ, ಎಲಕ್ಕಿ, ಗಂಧ ಉತ್ತುತ್ತೆ ಇನ್ನಿತರ ವಸ್ತುಗಳನ್ನು ಸ್ಥಳೀಯ ಮಾರುಕಟ್ಟೆಯ ವ್ಯಾಪಾರ ವಾಣಿಜ್ಯದಲ್ಲಿ ಗುರುತಿಸಿಕೊಂಡಿದ್ದವು. ಈ ಕೃಷಿ ಉತ್ಪನ್ನಗಳು ಒಂದು ಸ್ಥಳದಲ್ಲಿ ಬೆಳೆದ ಬೆಳೆಯು ಇನ್ನೊಂದು ಸ್ಥಳಗಳಲ್ಲಿ ಬೆಳೆಯದ ಕಾರಣ ಅವರು ಬೆಳೆದ ಉತ್ಪನ್ನವನ್ನು ನೀಡಿ ಬೇಕಾದನ್ನು ಪಡೆಯುತ್ತಿದ್ದರು. ಕೃಷಿ ಉತ್ಪನ್ನಗಳ ಬೆಳೆಗೆ

ಭೌಗೋಳಿಕ ಅಂಶಗಳು ಮುಖ್ಯವಾದ ಪಾತ್ರ ವಹಿಸುತ್ತವೆ. ನಿಸರ್ಗದತ್ತವಾಗಿ ದೊರೆಯುವ ಪ್ರಾಕೃತಿಕ ಸಂಪತ್ತುಗಳ ಪಾತ್ರವು ಮುಖ್ಯವಾಗಿರುತ್ತವೆ. ಬಯಲುಸೀಮೆಯಲ್ಲಿ ಬೆದ್ದಲು ಕೃಷಿ ಉತ್ಪನ್ನಗಳನ್ನು ನೀಡುತ್ತಿದ್ದರೆ ಮಲೆನಾಡು ಪ್ರದೇಶಗಳಲ್ಲಿ ತೋಟದ ಬೆಳೆಗೆ ಹೆಚ್ಚು ಸೂಕ್ತವಾಗಿತ್ತು. ಸಂಜಯ್ ಸುಬ್ರಮಣ್ಯಂ ಅವರು ಕುಂದಾಪುರ ಬಳಿ ಇರುವ ಬಸ್ರೂರು ಮೂರು ನದಿಗಳ ಮುಖಜಗಳಿಂದ ಕೂಡಿದೆ ಎಂದಿದ್ದಾರೆ. ಇಲ್ಲಿನ ಭೂಮಿಯು ಕರಾವಳಿಯ ಭಾಗಕ್ಕೆ ಹತ್ತಿರವಿರುವ ಕಣಿವೆ ಪ್ರದೇಶವಾಗಿದ್ದು ಭತ್ತದ ಕೃಷಿಗೆ ಸಮೃದ್ಧವಾಗಿದೆ ಎಂದಿದ್ದಾರೆ. ಒಂದು ರೀತಿಯ ವಸ್ತುವಿನಿಮಯ ವ್ಯಾಪಾರ ಸ್ಥಳೀಯ ಸಂತೆ ಮತ್ತು ಪೇಟೆ ಪಟ್ಟಣಗಳಲ್ಲಿ ನಡೆಯುತ್ತಿತ್ತು. ಚಿತ್ರದುರ್ಗ ಮತ್ತು ಶ್ರೀರಂಗಪಟ್ಟಣದ ಕೆಲವು ಕಡೆ ಭತ್ತವನ್ನು ಬೆಳೆಯುತ್ತಿದ್ದರು. ಪ್ರತಿದಿನ ೭೦ ಎತ್ತಿನ ಗಾಡಿಗಳಲ್ಲಿ ದವಸ ಸರಬರಾಜಾಗುತ್ತಿತ್ತು. ಕೊಡಗಿನಿಂದ ಶ್ರೀರಂಗಪಟ್ಟಣಕ್ಕೆ ಭತ್ತವನ್ನು ಸರಬರಾಜು ಮಾಡುವಾಗ ಪಿರಿಯಾಪಟ್ಟಣದಲ್ಲಿದ್ದ ಸುಂಕದಕಟ್ಟೆಯಲ್ಲಿ ಸುಂಕವನ್ನು ಪಾವತಿಸಬೇಕಾಗಿತ್ತು. ಕೊಡಗಿನಿಂದ ಶ್ರೀರಂಗಪಟ್ಟಣಕ್ಕೆ ವರ್ಷದಲ್ಲಿ ಐದು ಸಾವಿರದಿಂದ ಆರು ಸಾವಿರ ಎತ್ತಿನಗಾಡಿಗಳಲ್ಲಿ ಭತ್ತವು ಸರಬರಾಜು ಆಗುತ್ತಿತ್ತು(ಮಹಾದೇವಮ,೨೦೦೮:೪೯). ಸುಂಕದ ಕಟ್ಟೆಯು ರಾಜ್ಯದ ಹೆದ್ದಾರಿ ಮಾರ್ಗಗಳಲ್ಲಿ ಸ್ಥಳೀಯ ವ್ಯಾಪಾರ ಕೇಂದ್ರಗಳ ಕಡೆ ನಿರ್ಮಿಸಿಕೊಂಡಂತೆ ಕಂಡುಬರುತ್ತದೆ. ಕರ್ನಾಟಕದಲ್ಲಿ ವಿಜಯನಗರೋತ್ತರ ಆಳ್ವಿಕೆಯಲ್ಲಿ ಕಂಡುಬಂದ ಪ್ರತಿ ಪಾಳೆಯಪಟ್ಟಿನ ಆಳ್ವಿಕೆಯಲ್ಲಿ ಸುಂಕದ ಕಟ್ಟೆ ಇದೆ. ಪ್ರವಸಿಗನಾದ ಡೆಲ್ಲವೆಲ್ಲಾನು ನಗರ ಪ್ರದೇಶದಲ್ಲಿರುವ ಸುಂಕದ ಕಟ್ಟೆಯನ್ನು ಕುರಿತಂತೆ ವಿವರಿಸಿದ್ದಾನೆ.

ಹತ್ತಿ ಬೆಳೆಯುವ ಪ್ರದೇಶಗಳಾದ ಧಾರವಾಡ, ಬೆಳಗಾವಿ, ಬಿಜಾಪುರ, ಬಳ್ಳಾರಿ, ರಾಯಚೂರಿನ ಪ್ರದೇಶಗಳಾಗಿದ್ದು ಇಲ್ಲಿ ಚರಕದ ಉದ್ಯಮ ಇತ್ತು. ೧೮ನೆಯ ಶತಮಾನದ ಕೊನೆಯ ವೇಳೆಗೆ ಮೈಸೂರು ರಾಜ್ಯದಲ್ಲಿ ರೈತ ಮಹಿಳೆ ನೂಲುವುದು ಒಂದು ಪ್ರಮುಖ್ಯ ಉದ್ಯೋಗವಾಗಿತ್ತು. ಬೆಂಗಳೂರಿನ ಒಳಸಂತೆಗಳಲ್ಲಿ ಬ್ರಾಹ್ಮಣರನ್ನು ಹೊರತುಪಡಿಸಿ ಇತರೆ ಬಡ ಮಹಿಳೆಯರು ಹತ್ತಿ, ಎಣ್ಣೆಯನ್ನು ತಯಾರಿಸಿ ಚಿಕ್ಕ ಪ್ರಮಾಣದಲ್ಲಿ ಮಾರಾಟ ಮಾಡುತ್ತಿದ್ದರು(ಬುಕಾನಾನ್,(೨), ೧೮೦೭:೨೦೭).

ವಿಜಯನಗರೋತ್ತರ ಕಾಲದ ಅರ್ಥವ್ಯವಸ್ಥೆಯಲ್ಲಿ ತೊಡಗಿಕೊಂಡಿದ್ದ ಈ ವರ್ತಕರೆಂದರೆ ಸೆಟ್ಟಿಗಳು, ಬಣಜಿಗರು, ಮಾಪಿಳ್ಳೆಗಳು, ಅರೇಬಿಯನ್ನರು, ನವಾಯತರು, ಪೋರ್ಚುಗೀಸರು ಡಚ್ಚರು, ಇಂಗ್ಲಿಶರು, ಫ್ರೆಂಚರು ಮತ್ತು ಅಂತರರಾಜ್ಯ ವ್ಯಾಪಾರಿಗಳಾದ ಬನಿಯಾ, ಕೊಮಟಿಗರು ಗೌಡಸಾರಸ್ವತರು ದೇಶಿಯ ಮತ್ತು ವಿದೇಶೀಯ ವ್ಯಾಪಾರದಲ್ಲಿ ವಿಜಯನಗರೋತ್ತರ ಕಾಲದಲ್ಲಿ ಗುರುತಿಸಿಕೊಳ್ಳುತ್ತಾರೆ. ಪಂಚಮ ಬಣಜಿಗರು ಈ ಅವಧಿಯಲ್ಲಿ ಪ್ರಾಬಲ್ಯಕ್ಕೆ ಬಂದು ಧಾನ್ಯ ವರ್ತಕರಾದ ಸಾಲುಮೂಲೆ ಬಣಜಿಗರನ್ನು ಸ್ಥಳಾಂತರಿಸಿಗೊಳಿಸಿ ಬೆಂಗಳೂರು ಹತ್ತಿಬಟ್ಟೆಯ ತಯಾರಿಕೆಯ ಕೇಂದ್ರವಾಗಿ ಬೆಳೆಯಲು ಇವರು ಪ್ರಮುಖ ಪಾತ್ರವಹಿಸುತ್ತಿದ್ದರು(ಚಂದ್ರಶೇಖರ್, ರಾವ್‌ಲ,೨೦೧೬:೪೧).

ರಾಜ್ಯದ ವ್ಯಾಪಾರವನ್ನು ವ್ಯಾಪಾರಿ ಶ್ರೇಣಿಗಳು ನಿರ್ವಹಿಸುತ್ತಿದ್ದವು. ಇವುಗಳಲ್ಲಿ ೫೬ ದೇಶ ವ್ಯಾಪಾರಿ ಮತ್ತು ಮಹಾನಾಡು ವರ್ತಕ ಶ್ರೇಣಿ ಮುಖ್ಯವಾಗಿದ್ದವು. ರಾಜ್ಯದ ವಾಣಿಜ್ಯ ಚಟುವಟಿಕೆಗಳನ್ನು ಇವರು ನಿರ್ವಹಿಸುತ್ತಿದ್ದರು. ಸಂಪೂರ್ಣ ಮಾರುಕಟ್ಟೆ ಜವಾಬ್ದಾರಿ ಅವರದಾಗಿದ್ದು, ಅವರು ತಮ್ಮ ವ್ಯಾಪಾರವನ್ನು ನಿರ್ವಹಿಸುತ್ತ ಪ್ರಭುತ್ವಕ್ಕೆ ನಿಷ್ಠೆಯನ್ನು ತೋರಿಸುತ್ತಾ ಬಂದಿದ್ದಾರೆ. ಶ್ರೇಣಿಗಳು ಮಾರುಕಟ್ಟೆಯಲ್ಲಿ ಉಂಟಾಗುತ್ತಿದ್ದ ತೀವ್ರ ಪೈಪೋಟಿಯನ್ನು ನಿಯಂತ್ರಿಸುತ್ತಿದ್ದವು ವ್ಯಾಪಾರಿ ವಸ್ತುಗಳ ಬೆಲೆಗಳನ್ನು ವ್ಯಾಪಾರಿಕೇಂದ್ರಗಳಲ್ಲಿ, ನಿಯಂತ್ರಣ ಮಾರುಕಟ್ಟೆಗಳಲ್ಲಿ ನಿಗದಿ ಮಾಡಿದ ನಂತರ ಮಾರಾಟ ಮಾಡಬೇಕಾಗಿತ್ತು. ಈ ಮೂಲಕ ರೈತರು ಮಧ್ಯವರ್ತಿಗಳಿಂದ ಶೋಷಣೆಗೆ ಒಳಗಾಗುವುದನ್ನು ತಡೆಯಲಾಗುತ್ತಿತ್ತು. ೧೭೦೯ರಲ್ಲಿ ಚಿತ್ರದುರ್ಗ ಭರಮಣ್ಣನಾಯಕರು ಹರಪನಹಳ್ಳಿಪೇಟೆಯನ್ನು ವಶಪಡಿಸಿಕೊಂಡನು. ನಂತರ ಅದು ವ್ಯಾಪಾರದ ಪ್ರಮುಖ ಕೇಂದ್ರವಾಗಿ ಗುರುತಿಸಿಕೊಂಡಿದ್ದನ್ನು ಕಾಣಬಹುದು. ಕ್ರಿ.ಶ. ೧೭೯ರಲ್ಲಿ ಸುಬೇದಾರ ರಂಗಪ್ಪನು ಇಲ್ಲಿನ ಚೆನ್ನಮ್ಮನಪೇಟೆಯಲ್ಲಿ ಹೊಸದಾಗಿ ಮಠ ಕಟ್ಟಿಸಿದನು. ಹೊಯ್ಸಳರ ನಂತರ ಮಠಗಳು ಸಹ ವ್ಯಾಪಾರ-ವಾಣಿಜ್ಯದಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಚಿತ್ರದುರ್ಗದ ನಾಯಕರ ಆಳ್ವಿಕೆಯಲ್ಲಿ ಪೇಟೆಗಳಲ್ಲಿ ವ್ಯಾಪಾರ ವಾಣಿಜ್ಯ ನಡೆಯುತ್ತಿತ್ತೆಂದು ಸ್ಪಷ್ಟವಾಗುತ್ತದೆ. ವಿಜಯನಗರ ಮತ್ತು ವಿಜಯನಗರೋತ್ತರ ಕಾಲದಲ್ಲಿ ಭೂ ಆಧಾರಿತ ಅರ್ಥವ್ಯವಸ್ಥೆಯಲ್ಲಿ ಹೆಚ್ಚುವರಿ ಉತ್ಪಾದನೆಯಲ್ಲಿ ಪೇಟೆ-ಪಟ್ಟಣಗಳ ಪಾತ್ರ ಮುಖ್ಯವಾಗಿದೆ. ದಾವಣಗೆರೆ, ಹರಿಹರ, ಉಚ್ಚಂಗಿದುರ್ಗ, ಸಂತೇಬೆನ್ನೂರು, ಚಿತ್ರದುರ್ಗ, ಬಿಳಿಚೋಡು, ಜಗಳೂರು, ಬಾಗಳಿ, ದುಮ್ಮಿ, ತುರುವ, ಬಸವಾಪಟ್ಟಣ, ಸಾಗರಪೇಟೆ, ಮಲೆಬೆನ್ನೂರು, ಚನ್ನಗಿರಿ, ಹೊಳೆಹೊನ್ನೂರು, ಹೊನ್ನಾಳಿ, ಕುಂಸಿ, ಶಿವಮೊಗ್ಗ, ಶಿಕಾರಿಪುರ ಈ ಭಾಗದ ಪ್ರಮುಖ ಪೇಟೆ ಪಟ್ಟಣಗಳಾಗಿದ್ದವು. ಈ ಪಟ್ಟಣಗಳಲ್ಲಿ ಅಂದಿನ ವ್ಯಾಪಾರ ವಾಣಿಜ್ಯವು ಯಾವ ಸ್ವರೂಪದಲ್ಲಿತ್ತೆಂದು ತಿಳಿಸುತ್ತದೆ. ಈ ಪೇಟೆಪಟ್ಟಣಗಳಲ್ಲಿ ಮಾರುಕಟ್ಟೆಕೇಂದ್ರಿತ ಹೊಸ ಅರ್ಥವ್ಯವಸ್ಥೆಯು ರೂಪ ಪಡೆದಿತ್ತು.

ಕ್ರಿ.ಶ. ೧೫೫೪ರ ಒಂದು ಶಾಸನದಲ್ಲಿ ಬಾಗೂರಿನ ಹೊರಪೇಟೆಯನ್ನು ಕಟ್ಟಿಸಿದ ಉಲ್ಲೇಖವಿದೆ. ಈ ಸ್ಥಳವು ಪ್ರಮುಖ ವ್ಯಾಪಾರಿಸ್ಥಳವಾದ್ದರಿಂದ ಇಂತಹ ಸ್ಥಳಗಳ ಅಭಿವೃದ್ಧಿಗೆ ಅಧಿಕಾರಿಗಳು ಹೆಚ್ಚಿನ ಗಮನ ನೀಡುತ್ತಿದ್ದರು. ಹೊರಪೇಟೆ ಬಲವಾದಾಗ ಸ್ಥಳೀಯ ನಾಯಕರು ಲಿಂಗಣಗವುಡ, ಸೇನಬೋವ ತಿಮ್ಮಪ್ಪ, ಹಸ್ತಿ ಬಡಿಗೆಯ ಮಾದಪನಸೆಟ್ಟಿ, ಮಲ್ಲಸೆಟ್ಟಿ ಮುಂತಾದವರನ್ನು ಕರೆಸಿಕೊಂಡು ಪೇಠೆಯನ್ನು ಕಟ್ಟಿಸಿದ್ದನ್ನು ತಿಳಿಸುತ್ತದೆ. ಮಠಾಠಪುರಗಳು ಆರ್ಥಿಕ ಕೇಂದ್ರಗಳಾಗಿ ಗುರುತಿಸಿಕೊಂಡವು. ವಿಜಯನಗರೋತ್ತರ ಕಾಲಾವಧಿಯಲ್ಲಿ ಹೆಚ್ಚಿನ ಮಠಗಳು ನಿರ್ಮಾಣವಾಗಿದ್ದರಿಂದ ಈ ಮಠಗಳು ಸ್ಥಳೀಯ ವ್ಯಾಪಾರವನ್ನು ನಿರ್ವಹಿಸುತ್ತಿದ್ದವು. ಒಂದು ಕಡೆಯಿಂದ ಇನ್ನೊಂದು ಕಡೆಗೆ ವ್ಯಾಪಾರಿಗಳು ಬಂದು ನೆಲೆಸಿ ಮಠಗಳಲ್ಲಿ ತಂಗುತ್ತಿದ್ದರು. ಇಲ್ಲಿಯೇ ಪರಸ್ಪರ ವ್ಯಾಪಾರ ವಿನಿಮಯ ಕಾರ್ಯ ನಡೆಯಿತು ಹಾಗೂ ಆ ಮಠಗಳು ವರ್ತಕರಿಂದ ದೇಣಿಗೆ ಪಡೆದು ಆರ್ಥಿಕ ಕೇಂದ್ರಗಳಾಗಿ ಪರಿವರ್ತಿತವಾಗುತ್ತಿದ್ದವು. ಹೀಗೆ ಚಿತ್ರದುರ್ಗದ ನಾಯಕರ ಆಳ್ವಿಕೆಯಲ್ಲಿ ಪೇಟೆಗಳು ನಿರ್ಮಾಣವಾದವು.

ಈ ಪೇಟೆಗಳನ್ನು ಅಲ್ಲಿನ ಪ್ರಭುತ್ವಗಳು ಮಧ್ಯವರ್ತಿ ವ್ಯಾಪಾರಿಗಳ ಮೂಲಕ ನಡೆಯುತ್ತಿತ್ತು. ಚಿತ್ರದುರ್ಗದ ಭರಮಣ್ಣನಾಯಕನ ಆಳ್ವಿಕೆಯಲ್ಲಿ ಕೋಟೆಪರಿಸರದಲ್ಲಿ ಮುರುಘಾಮಠ ಸ್ಥಾಪನೆಯಾಯಿತ್ತು ಈ ಮಠವು ಪ್ರಸ್ತುತ ಆಧುನಿಕ ಸಂದರ್ಭದಲ್ಲಿ ಶೈಕ್ಷಣಿಕ ಕೇಂದ್ರವಾಗಿ ಕಾರ್ಯ ನಿರ್ವಯಿಸುತ್ತಿದೆ (ಗೋಪಾಲ್,೨೦೦೫:೨೬೯).

ಚನ್ನಗಿರಿ ತಾಲೂಕಿನ ಸಂತೆಬೆನ್ನೂರಿಗೆ ಹಿಂದೆ ರಂಗಾಪುರವೆಂಬ ಹೆಸರಿದ್ದಿತು. ವಿಜಯನಗರ ಅರಸರಿಂದ ರಂಗಪ್ಪನಾಯಕನು ಸಂತೆಬೆನ್ನೂರು ಸುತ್ತಮುತ್ತಲಿನ ಪ್ರದೇಶವನ್ನು ಅಮರಮಾಗಣಿಯಾಗಿ ಪಡೆದು ಅಲ್ಲಿ ಕೋಟೆ ಕಟ್ಟಿಸಿ, ರಾಮತೀರ್ಥ ಸರೋವರ ಕಟ್ಟಿಸಿದನು. ಈ ಸ್ಥಳವು ಮುಂದೆ ವ್ಯಾಪಾರಕೇಂದ್ರವಾಗಿ ಬೆಳವಣಿಗೆ ಹೊಂದಿತು. ಧಾರ್ಮಿಕ ಕೇಂದ್ರಗಳು ಯಾವಾಗಲೂ ವ್ಯಾಪಾರದ ಹಿನ್ನೆಲೆಯಿಂದ ಬಂದವುಗಳು. ಇದಕ್ಕೆ ಉದಾಹರಣೆಗಳು ಹಲವಾರು ದೊರೆಯುತ್ತವೆ. ಹಂಪಿ, ತಿರುಪತಿ, ತಾಡಪತ್ರಿ, ಶ್ರೀರಂಗಪಟ್ಟಣ, ಹರಿಹರ ಇವೆಲ್ಲವು ಇದೇ ಮಾದರಿಯ ಕೇಂದ್ರಗಳಾಗಿವೆ.

ಚಿತ್ರದುರ್ಗದ ಅರಸ ತಿಮ್ಮಣ್ಣನಾಯಕನು ಚಿತ್ರದುರ್ಗವನ್ನು ತನ್ನ ರಾಜಕೀಯ ಮತ್ತು ಆಡಳಿತ ಕೇಂದ್ರವನ್ನಾಗಿ ಮಾಡಿಕೊಂಡು ಚಿತ್ರದುರ್ಗದಲ್ಲಿ ನೀರಿನ ಆಸರೆಗಳನ್ನು ನಿರ್ಮಿಸಿದನು. ಹಲವಾರು ದೇವಾಲಯಗಳನ್ನು ಜೀರ್ಣೋದ್ಧಾರ ಮಾಡಿಸಿದನು. ರಕ್ಷಣೆಗಾಗಿ ಏಳುಸುತ್ತಿನ ಕೋಟೆ ಕಟ್ಟಿಸಿದನು. ಆ ಕೋಟೆಯಲ್ಲಿ ಚಿಕ್ಕಪೇಟೆಯಲ್ಲಿ ವ್ಯಾಪಾರ ನಡೆಯುತ್ತಿತ್ತು(ಸಂತೋಷ,೨೦೦೯:೨೨೮). ಚಿತ್ರದುರ್ಗ ಸಂತೆ ನಡೆಯುವ ವ್ಯಾಪಾರಿ ಕೇಂದ್ರಸ್ಥಳವಾಗಿತ್ತೆಂದು ತಿಳಿದುಬರುತ್ತದೆ.

ಚಿತ್ರದುರ್ಗ ಹೊರಪೇಟೆಯಲ್ಲಿ ವಾರದಲ್ಲಿ ಒಂದು ದಿನ ಸಂತೆ ನಡೆದರೆ ಒಳಪೇಟೆಯಲ್ಲಿ ಪ್ರತಿದಿನ ಸಂತೆ ನಡೆಯುತ್ತಿತ್ತು. ವ್ಯಾಪಾರ ಸಾಗಾಟವು ಎತ್ತಿನ ಬಂಡಿಗಳಲ್ಲಿ ಊರಿಂದ ಊರಿಗೆ ವಸ್ತುಗಳನ್ನು ಸಾಗಿಸುತ್ತಿದ್ದರು. ವೃತ್ತಿನಿರತ ಕಸುಬುದಾರರಾದ ಕುಂಬಾರ, ಕಮ್ಮಾರ, ಅಕ್ಕಸಾಲಿಗ, ಬಡಿಗ, ಚಮ್ಮಾರ, ಕುರುಬ, ನೇಕಾರ, ಗಾಣಿಗರು ಇತ್ಯಾದಿ ವಸ್ತುಗಳನ್ನು ತಯಾರಿಸಿಕೊಂಡು ಸಂತೆಯಲ್ಲಿ, ಪೇಟೆಗಳಲ್ಲಿ ವ್ಯಾಪಾರ ಮಾಡುತ್ತಿದ್ದರು(ಪುಟ್ಟಣ್ಣ,೧೯೭೭:೬೦-೬೧). ಬೆಂಗಳೂರಿನ ವ್ಯಾಪಾರ ಪೇಟೆಗಳಾದ ಅರಳೆಪೇಟೆ, ಮುತ್ಯಾಲಪೇಟೆ ಇವುಗಳ ಜೊತೆಗೆ ಇತರೆ ವ್ಯಾಪಾರಿ ಪೇಟೆಗಳಾದ ಉಪ್ಪಾರಪೇಟೆ ತಿಗಳರಪೇಟೆ, ಕುರುಬಪೇಟೆ, ಸುಣಕಲ್ಲು ಪೇಟೆ, ಗೊಲ್ಲಾರಪೇಟೆ, ಗಾಣಿಗರ ಪೇಟೆ ಇನ್ನು ಹಲವಾರು ಪೇಟೆಗಳಲ್ಲಿ ವ್ಯಾಪಾರ ವಹಿವಾಟು ನಡೆಯುತ್ತಿತ್ತು. ಯಲಹಂಕ ನಾಡಪ್ರಭುಗಳ ಕಾಲದಲ್ಲಿ ಪೇಟೆಗಳು ತಮ್ಮ ವ್ಯಾಪಾರ ವಹಿವಾಟು ನಡೆಯುತ್ತಿತ್ತೆಂದು ದಾಖಲೆಗಳ ಮೂಲಕ ತಿಳಿಯುತ್ತದೆ(ಕಾಮತ್,೨೦೦೫,:೧೩).

ಬೆಂಗಳೂರು ಮತ್ತು ಮೈಸೂರಿನ ಪಶ್ಚಿಮ ಭಾಗಗಳ ನಡುವೆಯೂ ಗಣನೀಯ ಪ್ರಮಾಣ ವ್ಯಾಪಾರವು ನಡೆಯುತ್ತಿತ್ತು. ಅಡಿಕೆ, ಕರಿಮೆಣಸು, ಶ್ರೀಗಂಧ, ಏಲಕ್ಕಿ, ಧಾನ್ಯಗಳು, ತಂಬಾಕು, ಅರಿಷಿನ, ಕಂಬಳಿಗಳು, ಮುಂಡಾಸುಗಳು, ಬಣ್ಣದ ಹತ್ತಿ ವ್ಯಾಪಾರವಾಗುತ್ತಿತ್ತು. ಬಳ್ಳಾರಿ, ಆದೋನಿ, ಧಾರವಾಡ, ಹುಬ್ಬಳ್ಳಿ, ನರಗುಂದ, ನವಲಗುಂದಗಳಲ್ಲಿನ ವರ್ತಕರು ಈ ವ್ಯಾಪಾರದಲ್ಲಿ ನಿರತರಾಗಿರುತ್ತಿದ್ದರು. ಸಾಂಸ್ಕೃತಿಕ ನಗರವಾದ ಮೈಸೂರು ೧೮೪೯ರ ನಂತರದ ದಿನಗಳಲ್ಲಿ ವ್ಯಾಪಾರ ವಾಣಿಜ್ಯದ ಪ್ರಮುಖ ಕೇಂದ್ರವಾಗಿದೆ.

ಹತ್ತಿ ಬಟ್ಟೆ ಮತ್ತು ರೇಷ್ಮೆ ಬಟ್ಟೆಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಉತ್ಪಾದಿಸಲಾಗುತ್ತಿತ್ತು. ಧರ್ಮಾವರಂ, ತಾಡಪ್ರತಿ, ಆದ್ವಾನಿ, ಗುತ್ತಿ, ಬಳ್ಳಾರಿ ಭಾಗಗಳಲ್ಲಿ ಹೇರಳವಾಗಿ ತಯಾರಾಗುತ್ತಿತ್ತು. ಈ ಭಾಗದಲ್ಲಿ ಬೇಳೆಕಾಳುಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಬೆಳೆಯಲಾಗುತ್ತಿತ್ತು. ಶ್ರೀರಂಗಪಟ್ಟಣ ಮತ್ತಿತರ ನೆರೆಯ ಪ್ರದೇಶಗಳಿಗೆ ರಫ್ತಾಗುತ್ತಿತ್ತು. ಇಲ್ಲಿಗೆ ರಫ್ತಾಗುತ್ತಿದ್ದ ಈ ಎಲ್ಲ ಉತ್ಪನ್ನಗಳನ್ನು ಹೆಚ್ಚಿನ ಲಾಭಕ್ಕಾಗಿ ಮಾರಾಟ ಮಾಡಲಾಗುತ್ತಿತ್ತು. ಈ ಮೂಲಕ ಪೇಟೆ ಪಟ್ಟಣಗಳು ಅಭಿವೃದ್ಧಿಯನ್ನು ಹೊಂದಿ ಬೆಳವಣಿಗೆಯಾಗಿವೆ.

ಸಂತೆಗಳು ಮತ್ತು ಮಾರುಕಟ್ಟೆಗಳು ಜನಕೇಂದ್ರಿತ ವಲಯವಾಗಿದ್ದರಿಂದ ಸಹಜವಾಗಿಯೇ ವ್ಯಾಪಾರಿ ಹಿತಾಸಕ್ತಿಯನ್ನು ಆಕರ್ಷಿಸಿತ್ತು. ಬಹುಬೇಗ ಅವು ದೊಡ್ಡ ವ್ಯಾಪಾರ ಕೇಂದ್ರಗಳಾಗಿ ಬೆಳೆದವು. ಅವುಗಳ ಸುತ್ತ ನೂತನ ಪಟ್ಟಣಗಳು ಮತ್ತು ನಗರಕೇಂದ್ರಗಳು ಹುಟ್ಟಿಕೊಂಡವು. ಇದು ನಗರ ಅರ್ಥವ್ಯವಸ್ಥೆ ಹೊಂದಿ ಉದಯೋನ್ಮುಖವಾಗಿದ್ದ ನಗರೀಕರಣ ಮತ್ತ ನಗರ ಅರ್ಥವ್ಯವಸ್ಥೆಯನ್ನು ದೃಢಪಡಿಸುತ್ತದೆ. ವಿಜಯನಗರ ಪ್ರದೇಶದಲ್ಲಿ ವಿಜಯನಗರ ಪಟ್ಟಣ, ದ್ವಾರಸಮುದ್ರ, ಗುತ್ತಿ, ಆದೋನಿ, ಹೊನ್ನಾವರ, ಚಂದ್ರಗುತ್ತಿ, ಪೆನುಗೊಂಡ, ಉದಯಗಿರಿ, ಆನೆಗೊಂದಿ, ಇಕ್ಕೇರಿ, ಮಂಗಳೂರು, ಬಾರಕೂರು, ಅಣ್ಣಿಗೇರಿ, ಹುಲಿಗೇರಿ, ಶ್ರೀರಂಗಪಟ್ಟಣ, ಶಿವನಸಮುದ್ರ, ಅಂಕೋಲಾ, ಮೀರ್‌ಜಾನ್, ಬಂಕಾಪುರ, ಹರಿಹರ, ಆರಗ ಉದಯಗಿರಿ ಇವು ವಿಜಯನಗರ ಕಾಲದಲ್ಲಿ ಸಂತೆ ಮಾರುಕಟ್ಟೆಗಳ ವ್ಯಾಪಾರ ಕೇಂದ್ರಗಳಾಗಿದ್ದವು(ಷೇಕ್ ಅಲಿ,(ಇ),೨೦೧೮ :೨೭೫). ವಿಜಯನಗರೋತ್ತರ ಕಾಲದಲ್ಲಿ ಇವು ವ್ಯಾಪಾರಕೇಂದ್ರಗಳಾಗಿ ಮುಂದುವರಿದಿರುವುದನ್ನು ನೋಡಬಹುದು. ಹೀಗೆ ಒಳನಾಡು ವ್ಯಾಪಾರ-ವಾಣಿಜ್ಯದಲ್ಲಿ ಉಂಟಾದ ಅಪಾರ ಸಂಖ್ಯೆಯಲ್ಲಿ ಹೆಚ್ಚಳವಾದ ಸಂತೆಗಳು ಮತ್ತು ಮಾರುಕಟ್ಟೆಗಳ ವಿಸ್ತೀರ್ಣ ವ್ಯಾಪಾರ ಕೇಂದ್ರಗಳಾಗಿ ಬೆಳೆದವು. ಹೊಸಪೇಟೆಗಳು ನಗರಗಳು ಬಿರುಸಾಗಿ ಬೆಳೆಯುತ್ತಿದ್ದವು. ವಿಜಯನಗರೋತ್ತರ ಕಾಲದ ಮುಖ್ಯ ಸ್ಥಿತ್ಯಂತರವೆಂದು ಗುರುತಿಸಬಹುದಾದ ವ್ಯಾಪಾರವು ಪ್ರಾಚೀನ ಕಾಲದಿಂದಲೂ ವಸ್ತು ವಿನಿಮಯ ರೂಪದಲ್ಲಿತ್ತು. ಆದರೆ ವಸಹಾತುಕಾಲಘಟ್ಟದ ವೇಳೆಗೆ ನಗದುರೂಪದಲ್ಲಿ ತೆರಿಗೆ ಸಂಗ್ರಹಿಸುವ ನಾಣ್ಯವ್ಯವಸ್ಥೆ ಬೆಳವಣಿಗೆಯಾಯಿತು. ಹಾಗಾಗಿ ವಿಜಯನಗರೋತ್ತರ ಕಾಲದಲ್ಲಿ ತೆರಿಗೆಯನ್ನು ನಗದಾಗಿ ವಸೂಲಿ ಮಾಡಲಾಂಭಿಸಿದರು.

೧೮ನೇ ಶತಮಾನದ ನಂತರ ಈ ಸಂತೆ ಮತ್ತು ಮಾರುಕಟ್ಟೆಗಳಲ್ಲಿ ಸರಕುಗಳ ಮಾರಾಟದ ಮೇಲೆ ವಿಧಿಸಿದ ಕರದಿಂದ ಸಂತೆಗಳಲ್ಲಿ ಸಂಗ್ರಹಿಸಿದ ಪ್ರದೇಶ ಸುಂಕಗಳಿಂದ ರಾಜ್ಯಸರ್ಕಾರದ ವರಮಾನಕ್ಕೆ ಗಣನೀಯವಾದ ಕೊಡುಗೆ ಸಂದಾಯವಾಗುತ್ತಿತ್ತು. ಸಂತೆ ಮತ್ತು ಮಾರುಕಟ್ಟೆಗಳಲ್ಲಿ ವಿಧಿಸುವ ಕರವನ್ನು ಕುರಿತಂತೆ ಅಲ್ಲಿನ ಶಾಸನ ಮತ್ತು ವಿದೇಶಿಯ ಬರಹಗಳಿಂದ ಗಮನಿಸಬಹುದು. ಸಂತೆಗಳು ಅಂದಿನ ಜನಜೀವನದ ವಿನಿಮಯದ ಕೇಂದ್ರಗಳಾಗಿ ಕಾರ್ಯ ನಿರ್ವಹಿಸುತ್ತಿದ್ದವು. ಇವು ಗ್ರಾಮೀಣ ಆರ್ಥಿಕತೆಯಲ್ಲಿ ಪ್ರಮುಖ ಪಾತ್ರ ವಹಿಸಿದ್ದವು.

ಹಾಗಲವಾಡಿ ನಾಯಕರ ಕಾಲದಲ್ಲಿ ನೊಣವಿನಕೆರೆ, ಶೆಟ್ಟಿಕೆರೆ, ಹಾಗಲವಾಡಿ, ಕಂದಿಕೆರೆ ಪ್ರಮುಖ ವ್ಯಾಪಾರ ಕೇಂದ್ರಗಳಾಗಿದ್ದವು. ಇತರೆ ಊರುಗಳಲ್ಲಿ ಸಂತೆಗಳು ನಡೆಯುತ್ತಿದ್ದವು. ವ್ಯಾಪಾರವನ್ನು ಬಣಜಿಗರು, ಶೆಟ್ಟರು, ವೀರಶೈವ ವರ್ತಕರು ನಿರ್ವಹಣೆ ಮಾಡುತ್ತಿದ್ದರು. ಈ ಮೂಲಕ ಸಂತೆಗಳು, ಪೇಟೆ ಪಟ್ಟಣ, ಜಾತ್ರೆಗಳು ವಿಜಯನಗರೋತ್ತರ ಕಾಲದಲ್ಲಿ ಕಂಡುಬಂದವು. ಈ ಮೂಲಕ ಕಂಡುಕೊಂಡ ಕರ್ನಾಟಕದ ವ್ಯಾಪಾರ ವಾಣಿಜ್ಯದ ಸ್ವರೂಪವು ಒಂದು ಕಡೆಯಾದರೆ, ಇನ್ನೊಂದು ಕಡೆ ವ್ಯಾಪಾರ ವಾಣಿಜ್ಯದ ಸ್ವರೂಪವು ಬೇರೆ ಪರಿಸ್ಥಿತಿಯನ್ನು ಹೊಂದಿತ್ತೆಂದುೇಳಬಹುದು. ಹೇಳಬಹುದು. ಯುರೋಪಿಯನ್ನರು ಭಾರತಕ್ಕೆ ಆಗಮಿಸಿದ್ದರಿಂದ ಭಾರತದ ವ್ಯಾಪಾರ ವಾಣಿಜ್ಯದಲ್ಲಿ ಸ್ಥಿತ್ಯಂತರವಾಯಿತು.

ಬ್ರಿಟಿಶರು ಕರ್ನಾಟಕವನ್ನು ಮುಖಾಮುಖಿಯಾಗಿ ಮಾಡಿದಾಗ ಕರ್ನಾಟಕದಲ್ಲಿ ವಾಣಿಜ್ಯ ಬೆಳೆಗಳನ್ನು ಬೆಳೆಯುವ ಪ್ರದೇಶಗಳಿಗೆ, ಬೇರೆ ಪ್ರದೇಶಗಳಲ್ಲಿ ಬೆಳೆಯುವ ಆಹಾರಧಾನ್ಯಗಳನ್ನು ರವಾನಿಸಿ ಅಲ್ಲಿಂದ ವಾಣಿಜ್ಯ ಬೆಳೆಗಳನ್ನು ತರಿಸಿಕೊಳ್ಳುತ್ತಿದ್ದರು. ಇದು ಸ್ಥಳೀಯ ಕೃಷಿ ಅರ್ಥವ್ಯವಸ್ಥೆ ಮತ್ತು ಸ್ಥಳೀಯ ವ್ಯಾಪಾರದ ಮೇಲೆ ಪ್ರತಿಕೂಲ ಪರಿಣಾಮವನ್ನುಂಟು ಮಾಡಿತು. ಬಲವಂತದ ವಾಣಿಜ್ಯೀಕರಣದ ಪ್ರಕ್ರಿಯೆಯಿಂದಾಗಿ ಆಹಾರಧಾನ್ಯಗಳು ಬೆಳೆ ಕಡಿಮೆಯಾಗಿ ರಾಜ್ಯದಲ್ಲಿ ಹೊಸದೊಂದು ಅರ್ಥವ್ಯವಸ್ಥೆ ಉಗಮವಾಯಿತು.

ವಸಾಹತು ಆಳ್ವಿಕೆಯ ಉಗಮವು ಭಾರತದಲ್ಲಿ ಸ್ಥಳೀಯ ವ್ಯಾಪಾರದಲ್ಲಿ ಗುರುತಿಸಿಕೊಂಡಿದ್ದ ಪೇಟೆ ಪಟ್ಟಣಗಳು ನಾಶ ಹೊಂದಲು ಕಾರಣವಾದವು. ಹಾಗೆಯೇ ಗ್ರಾಮೀಣ ಕೈಗಾರಿಕೆಗಳು ತಮ್ಮ ಅಸ್ತಿತ್ವವನ್ನು ಕಳೆದುಕೊಳ್ಳುತ್ತ ಬಂಡವಾಳಕೇಂದ್ರಿತ ಹೊಸದೊಂದು ಅರ್ಥವ್ಯವಸ್ಥೆಗೆ ಹೊಂದಿಕೊಳ್ಳಲಾರಂಭಿಸಿದರು. ವಾಣಿಜ್ಯ ಬೆಳೆಗೆ ಒತ್ತು ನೀಡಿದದ್ದರಿಂದ ಕೈಗಾರಿಕಾ ಕ್ಷೇತ್ರವು ಹೆಚ್ಚಾಗಿ ಬೆಳೆಯಲು ಅವಕಾಶವಾಯಿತು. ಹೀಗೆ ವಿಜಯನಗರೋತ್ತರ ಮಧ್ಯಕಾಲೀನ ಆರ್ಥಿಕ ಪರಿಸ್ಥಿತಿಗಳಲ್ಲಿ ಪ್ರಮುಖ ವಾಣಿಜ್ಯ ಕೇಂದ್ರಗಳಾಗಿ ಗುರುತಿಸಿಕೊಂಡಿದ್ದ ಸಂತೆ, ಪೇಟೆ-ಪಟ್ಟಣಗಳು ವರ್ತಕರ ನೇತೃತ್ವದಲ್ಲಿ ತಮ್ಮ ಅಸ್ತಿತ್ವವನ್ನು ಹೊಂದಿದ್ದರು. ಆದರೆ ವಸಹಾತಶಾಹಿ ಆಳ್ವಿಕೆಗೆ ಮಾರ್ಪಾಟ್ಟಾಗ ವರ್ತಕರು ಸಹ ಬ್ರಿಟಿಶರ ಅಧೀನದಲ್ಲಿ ತಮ್ಮ ಕಾರ್ಯವನ್ನು ನಿರ್ವಹಿಸುತ್ತಾ ಪ್ರಾಚೀನ ಕಾಲದಿಂದಲೂ ಮುಂದುವರಿದುಕೊಂಡು ಬಂದ ವ್ಯಾಪಾರ ವೃತ್ತಿಯನ್ನು ತೊರೆದು ಬೇರೆ ವೃತ್ತಿಗಳಲ್ಲಿ ಸ್ಥಾನಪಲ್ಲಟವಾಗಿರುವುದನ್ನು ವಿಜಯನಗರೋತ್ತರ ಕಾಲದಲ್ಲಿ ಗುರುತಿಸಬಹುದಾಗಿದೆ.

ಜಾತ್ರೆಗಳು ಸಾಂಪ್ರದಾಯಿಕ ವಿವರಗಳಿಂದ ಆರಂಭಗೊಂಡರೂ ಇದರ ಸ್ವರೂಪ ಬೇರೆಯದೆ ಆಗಿರುತ್ತದೆ. ಜಾತ್ರೆಯನ್ನು ಕೇವಲ ಧಾರ್ಮಿಕ ದೃಷ್ಟಿಕೋನದಿಂದ ಮಾತ್ರ ನೋಡದೇ ಸಾಮಾಜಿಕ, ಆರ್ಥಿಕ ದೃಷ್ಟಿಕೋನದಿಂದಲೂ ಗ್ರಹಿಸಬೇಕಾಗುತ್ತದೆ. ಇಲ್ಲಿ ರೈತರು ತಾವು ಬೆಳೆದ ಧಾನ್ಯಗಳನ್ನು ಜಾತ್ರೆಗಳಲ್ಲಿ ತೆಗೆದುಕೊಂಡು ಹೋಗುತ್ತಿದ್ದರು. ಅಲ್ಲಿ ಮಾರಾಟ ಮಾಡಿ ತಮ್ಮ ಆರ್ಥಿಕ ಭದ್ರತೆಯನ್ನು ಸುಧಾರಿಸಿಕೊಳ್ಳುವರು. ದವಸ-ಧಾನ್ಯಗಳನ್ನು ಮಾರಾಟ ಮಾಡಿದ ಹಣದಿಂದ ಅಗತ್ಯವಾದ ವಸ್ತುಗಳನ್ನು ಕೊಂಡುಕೊಳ್ಳುವುದು ವಾಡಿಕೆಯಾಗಿದೆ. ಹೀಗಾಗಿ ಜಾತ್ರೆಯ ಬಹುತೇಕ ಸ್ಥಳಗಳು ವ್ಯಾಪಾರ ಕೇಂದ್ರಗಳಾಗಿರುತ್ತವೆ.

ಜಾತ್ರೆಯ ಸಮಯದಲ್ಲಿ ಜನಸಾಮಾನ್ಯರು ವ್ಯವಹಾರಕ್ಕಾಗಿಯೇ ಬರುವುದರಿಂದ ವ್ಯಾಪಾರ ಮಳಿಗೆಗಳು ಅಧಿಕವಾಗುವುದನ್ನು ಕಾಣಬಹುದು. ಜಾತ್ರೆ ಜರುಗುವ ಎದುರುಗಡೆ ಅದರ ಎಡ-ಬಲಗಳಲ್ಲಿ ಬಯಲು ಜಾಗವೇ ವ್ಯಾಪಾರದ ಕೇಂದ್ರ ಸ್ಥಳವಾಗಿರುತ್ತಿತ್ತು. ತಾವು ತಂದ ದವಸ-ಧಾನ್ಯ ಅಲ್ಲದೇ ಜಾತ್ರೆಗಳಲ್ಲಿ ಗೃಹೋಪಯೋಗಿ ವಸ್ತುಗಳನ್ನು ಖರೀದಿ ಮಾಡಬೇಕೆಂಬ ನಿಯಮದಂತೆ ವ್ಯವಹಾರ ಮಾಡುವರು. ಇದಕ್ಕೆ ಸೂಕ್ತ ಅಂಗಡಿ ಮುಂಗಟ್ಟುಗಳು ಇಲ್ಲದಿದ್ದರೆ ವಿಶಾಲವಾದ ಸ್ಥಳದಲ್ಲಿ ತಾತ್ಕಾಲಿಕ ಶೆಡ್ಡುಗಳನ್ನು ನಿರ್ಮಿಸಿಕೊಂಡು ತಾವು ತಂದ ವಸ್ತುಗಳನ್ನು ಮಾರಾಟ ಮಾಡಿಕೊಂಡು ಹೋಗುವುದು ಜಾತ್ರೆಯಲ್ಲಿ ಕಂಡುಬರುವ ದೃಶ್ಯವಾಗಿದೆ. ವಿಜಯನಗರೋತ್ತರ ಕಾಲದಲ್ಲಿ ಇಂತಹ ಜಾತ್ರೆಗಳು ವ್ಯಾಪಾರ ಕೇಂದ್ರಗಳಾಗಿರುವುದನ್ನು ಗಮನಿಸಬಹುದಾಗಿದೆ.

ಕಲ್ಲೇದೇವಪುರ, ಸೀಬಾರ, ನಾಯಕನಹಟ್ಟಿ, ಹೊಸದುರ್ಗ, ಬಿಜಾಪುರ, ಇಳಕಲ್, ನವಲಗುಂದ ಗೋಕರ್ಣ, ಸಿರಸಿ, ಮಹಾಬಳೇಶ್ವರ, ಸದಾಶಿವಗಡ, ಕುಮಟಾ, ಅಂಕೋಲಾ, ಕಾರವಾರ, ಶ್ರೀರಂಗಪಟ್ಟಣ, ಕಾನಡಾ ಜಿಲ್ಲೆಯಲ್ಲಿ ಹಡಗಡೋಣದಲ್ಲಿ ಎತ್ತಿನ ವ್ಯಾಪಾರ ನಡೆಯುತ್ತಿದ್ದು, ಈ ಮೂಲಕ ಕರ್ನಾಟಕದ ಇನ್ನು ಹಲವಾರು ಭಾಗಗಳಲ್ಲಿ ಜಾತ್ರೆಗಳು ನಡೆಯುತ್ತವೆ. ಅಂದಿನ ಸಮಾಜದ ಧಾರ್ಮಿಕ ಸಂಪ್ರದಾಯವನ್ನು ತಿಳಿಸುವುದರ ಜೊತೆ ಆರ್ಥಿಕ ಕೇಂದ್ರಗಳಾಗಿಯೂ ಗುರುತಿಸಿಕೊಂಡಿವೆ.

ಒಳನಾಡಿನ ವ್ಯಾಪಾರವು ಸಾಮಾನ್ಯವಾಗಿ ಹೇರೆತ್ತುಗಳ ಮೂಲಕ ನಡೆಯುತ್ತಿತ್ತು. ವ್ಯಾಪಾರಿಗಳು ನೂರಾರು ಎತ್ತುಗಳ ಗುಂಪಿನೊಂದಿಗೆ ಊರಿಂದ ಊರಿಗೆ ಪ್ರಯಾಣ ಮಾಡುತ್ತಿದ್ದರು. ೫೦ ಎತ್ತುಗಳ ಒಂದು ಗುಂಪಿಗೆ ಎತ್ತು ನಡೆ ಎಂಬ ಹೆಸರಿತ್ತು. ಈ ಹೇರೆತ್ತುಗಳಲ್ಲಿ ಅಡಿಕೆ, ಮೆಣಸಿನಕಾಯಿ, ಕೊಬ್ಬರಿ, ಉಪ್ಪು, ಬೆಲ್ಲ, ಎಣ್ಣೆ, ತಂಬಾಕು, ಜವಳಿ, ಗೋಧಿ ಮತ್ತು ಕಡಲೆಯ ಬೂಸಾ ಮುಂತಾದ ವಸ್ತುಗಳನ್ನು ಸಾಗಿಸುತ್ತಿದ್ದರು. ಹಿರಿಯ ವೆಂಕಟಪ್ಪ ನಾಯಕ(೧೫೮೬-೧೬೩೦)ನ ಕಾಲದಲ್ಲಿ ಸರಕುಗಳ ಸಾಗಣೆಗೆ ಗಾಡಿಗಳನ್ನು ಬಳಸುತ್ತಿದ್ದರು. ಕಿರಿಯ ಬಸಪ್ಪ ನಾಯಕನ ಕಾಲದಲ್ಲಿ ಎತ್ತಿನ ಗಾಡಿಗಳ ಬಳಕೆ ಇನ್ನಷ್ಟು ಹೆಚ್ಚಿತ್ತು(ಕಲಬುರ್ಗಿ,ರಾಮಭಟ್ಟ,೧೯೯೪:೨೦೭).

ಎತ್ತಿನ ಗಾಡಿ ಮಾನ್ಯದಲ್ಲಿ ಗಢಸಿನ ಸರಕುಗಳಾದ ಅಡಿಕೆ, ಮೆಣಸು, ಜೆಲ್ಲಿಪಟ್ಟೆ, ಕೊಬ್ಬರಿಗಳನ್ನು ತೆರಿಗೆ ರಿಯಾಯಿತಿಯಿಂದ ಹೊರತುಪಡಿಸಿದ್ದನು. ಚನ್ನಮ್ಮಾಜಿಯ ಕಾಲದ ಕ್ರಿ.ಶ. ೧೬೭೪ರ ಒಂದು ಶಾಸನವು ಮಾರ್ಗದ ಸುಂಕದ ಬಗ್ಗೆ ವಿವರವನ್ನು ತಿಳಿಸುತ್ತದೆ. ಈ ಮಾರ್ಗದ ಸುಂಕದ ಮೂಲ ವೀಸಾವನ್ನು ಮಠಧರ್ಮಕ್ಕೆ ಶಿವಾರ್ಪಿತವಾಗಿ ಬದಲಾಯಿಸಲಾಯಿತು ಎಂಬುದಾಗಿ ತಿಳಿಸುತ್ತದೆ (ಅರುಣ್,೨೦೦೬:೭೭).

೧೬೦೮ರ ಒಂದು ಶಾಸನದ ಪ್ರಕಾರ ಹತ್ತು ಎತ್ತಿನ ಮೇಲೆ ಅಡಿಕೆ, ಮೆಣಸು, ಬೆಲ್ಲ ಪೆಟ್ಟಿ, ಕವಾಡ, ಜಿನಿಸು, ಅಕ್ಕಿ, ಭತ್ತ, ರಾಗಿ, ಉಪ್ಪು ಮೊದಲಾದ ವಸ್ತುಗಳನ್ನು ಇಕ್ಕೇರಿಯಿಂದ ಘಟ್ಟಭಾಗದ ಕೆಳಗೆ ತೆಗೆದುಕೊಂಡು ಹೋಗಲಾಗುತ್ತಿತ್ತು.

ಪ್ರಾಚೀನ ಕಾಲದಿಂದಲೂ ಇದ್ದ ರಸ್ತೆ ಮಾರ್ಗಗಳು ಮೈಸೂರು ಒಡೆಯರ ಕಾಲದಲ್ಲಿ ಅಭಿವೃದ್ಧಿಗೊಂಡವು.

೧. ಶ್ರೀರಂಗಪಟ್ಟಣದಿಂದ ಗುಂಡ್ಲುಪೇಟೆ ಮತ್ತು ಕೊಯಮತ್ತೂರು ದಕ್ಷಿಣ ಮೈಸೂರಿನ ವ್ಯಾಪಾರಿ ಕೇಂದ್ರಗಳಾದ ಪಲುಕಾಡಪೇಟೆ, ಕೊಡುವೈಪೇಟೆ, ಕೊಲ್ಲಂಗುಡುಪೇಟೆ, ನರ್ರ್ವಾಪೇಟೆ ಇತ್ಯಾದಿ ಕೇಂದ್ರಗಳನ್ನು ಸಂಪರ್ಕಿಸುವ ರಸ್ತೆ.

೨. ವಿಜಯನಗರದಿಂದ ಶಿವನಸಮುದ್ರ ಮತ್ತು ಶ್ರೀರಂಗಪಟ್ಟಣದ ನಡುವೆ.

೩. ಪೂರ್ವದಲ್ಲಿ ಸೇಲಂನಿಂದ ಪಶ್ಚಿಮದಲ್ಲಿ ಸಕ್ಕರೆ ಪಟ್ಟಣ ಮತ್ತು ಉತ್ತರದಲ್ಲಿ ಚಿಕ್ಕನಾಯಕನಹಳ್ಳಿ ಮುಂದೆ ಧರ್ಮಪುರಿಯವರೆಗೆ ರಸ್ತೆಯನ್ನು ಹೊಂದಿದ್ದು ಬ್ರಿಟಿಶರ ವರದಿಯಲ್ಲಿ ದಾಖಲಾಗಿರುವುದು ಇದರ ಪ್ರಾಮುಖ್ಯತೆ ಹೆಚ್ಚಿಸಿದೆ.

೪. ಬೆಂಗಳೂರು ಮಾರ್ಗವಾಗಿ ನೈನೇರಿಯಾದ ಮೈಸೂರು ರಸ್ತೆ ಶ್ರೀರಂಗಪಟ್ಟಣದಿಂದ ಸಿರಾ ಮತ್ತು ಬಳ್ಳಾರಿ ಮತ್ತು ಬೆಂಗಳೂರಿನಿಂದ ಹರಿಹರದವರೆಗೆ.

ರಸ್ತೆ ಮಾರ್ಗಗಳ ಇಲ್ಲವೇ ನಡಿಗೆಯ ಮಾರ್ಗಗಳು ಒಂದು ಹಳ್ಳಿಯಿಂದ ಇನ್ನೊಂದು ಹಳ್ಳಿಗೆ ಹೋಗುವುದಕ್ಕೆ ಮಾರ್ಗಗಳನ್ನು ಮಾಡಿಕೊಂಡಿರುತ್ತಾರೆ. ಸ್ಥಳೀಯ ಮಾರ್ಗಗಳನ್ನು ನಿರ್ಮಿಸುವ ಉದ್ದೇಶವೇ ವ್ಯಾಪಾರವಾಗಿದ್ದು, ವ್ಯಾಪಾರಿಗಳು ಸರಕುಗಳನ್ನು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಸಂಚರಿಸುವುದಕ್ಕೆ ಮಾರ್ಗಗಳನ್ನು ಅಭಿವೃದ್ಧಿಪಡಿಸಿರುತ್ತಿದ್ದರು. ಈ ಮಾರ್ಗಗಳೇ ಮುಂದೆ ಪ್ರಮುಖ ವ್ಯಾಪಾರಿ ಮಾರ್ಗಗಳಾಗಿ ವಸಾಹತು ಕಾಲಘಟ್ಟದಲ್ಲಿ ಗುರುತಿಸಿಕೊಂಡಿವೆ. ನದಿ ಮಾರ್ಗಗಳನ್ನು ಅಲ್ಲಲ್ಲಿ ಸಂಧಿಸುವ, ಗ್ರಾಮದಿಂದ ಗ್ರಾಮಕ್ಕೆ ಮಾರ್ಗಗಳನ್ನು ನಿರ್ಮಿಸಿರುವುದನ್ನು ಗಮನಿಸಬಹುದು.

ಸ್ಥಳೀಯ ಮಾರುಕಟ್ಟೆಗಳನ್ನು ನಾಶಪಡಿಸುವುದು ಕರ್ನಾಟಕವನ್ನು ಆಕ್ರಮಿಸಿದ ಬ್ರಿಟಿಶರ ಗುರಿಗಳಲ್ಲೊಂದಾಗಿತ್ತು. ಸ್ಥಳೀಯ ಮಾರುಕಟ್ಟೆಗಳು ನಾಶವಾಗದೆ ಪ್ರಾಂತ್ಯದಾದ್ಯಂತ ವಸಾಹತು ಮಾರುಕಟ್ಟೆಯನ್ನು ವಿಸ್ತರಿಸುವುದು ಸಾಧ್ಯವಾಗುತ್ತಿರಲಿಲ್ಲ. ಕರ್ನಾಟಕದ ಸ್ಥಳೀಯ ಮಾರುಕಟ್ಟೆಯ ಅಸ್ತಿತ್ವವನ್ನು ನಾಶಪಡಿಸುವ ಸಲುವಾಗಿ ರಾಜಕೀಯ ಮುಖಂಡರನ್ನು ಮೊದಲು ಗುರಿಯಾಗಿಸಲಾಯಿತು. ಹೈದರ್ ಮತ್ತು ಟಿಪ್ಪುವಿನ ಆಳ್ವಿಕೆಯನ್ನು ಗುರಿಯಾಗಿಸಲಾಯಿತು(ಸಾಕಿ, ೧೯೯೮:೮೮). ಕರ್ನಾಟಕವನ್ನು ರಾಜಕೀಯವಾಗಿ ಛಿದ್ರಗೊಳಿಸಿದ್ದು, ಸ್ಥಳೀಯ ಮಾರುಕಟ್ಟೆಯ ವಿಸ್ತರಣೆಯ ಮೇಲೆ ನಕಾರಾತ್ಮಕ ಪರಿಣಾಮ ಉಂಟುಮಾಡಿತ್ತು. ಉತ್ಪನ್ನವು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶ ತಲುಪಲು ಅನೇಕ ಕಡೆ ತೆರಿಗೆ ಮತ್ತು ಟೋಲ್ ಕಟ್ಟಬೇಕಾಯಿತು. ಇಷ್ಟೆಲ್ಲ ತೆರಿಗೆ ಕಟ್ಟಿದ ನಂತರ ಗ್ರಾಹಕನ ಕೈ ಸೇರುವಷ್ಟರಲ್ಲಿ ಉತ್ಪನ್ನದ ಬೆಲೆ ಹೆಚ್ಚಾಗಿಬಿಡುತ್ತಿತ್ತು ಮತ್ತು ಸ್ಥಳೀಯ ಉತ್ಪನ್ನಗಳು ಬ್ರಿಟಿಶರ ಉತ್ಪನ್ನಗಳ ವಿರುದ್ಧದ ಬೆಲೆ ಸಮರದಲ್ಲಿ ಸೋತು ಮರೆಯಾಗಿ ಹೋದವು.

ಬ್ರಿಟಿಶ್ ವಸಾಹತುಶಾಹಿಯ ಆರ್ಥಿಕ ಗುರಿಯಾಗಿದ್ದಿದ್ದು ದೇಶೀಯ ವರ್ತಕರು, ಬಂಡವಾಳಶಾಹಿ ಉತ್ಪಾದನೆಯ ವರ್ಗ, ಮಾಲೀಕರು ಮತ್ತು ವಿವಿಧ ಉತ್ಪನ್ನಗಳನ್ನು ತಯಾರಿಸುತ್ತಿದ್ದ ಕಸಬುದಾರರು, ದೇಶಿಯ ವರ್ತಕರು ಮತ್ತು ಮಾಲೀಕರ ವರ್ಗ ಪತನ ಅವರನ್ನು ಪೋಷಿಸುತ್ತಿದ್ದ ರಾಜಕಾರಣಿಗಳ

ಅಂತ್ಯದೊಂದಿಗೆ ಅತಿ ಶೀಘ್ರವಾಗಿ ನಡೆದುಹೋಯಿತು. ಬ್ರಿಟಿಶ್ ಆಕ್ರಮಣದ ಕೆಲವೇ ವರುಷಗಳಲ್ಲಿ ಬಣಜಿಗ ಶೆಟ್ಟರು ಕಳಂಕದೊಂದಿಗೆ ಕುಸಿತ ಕಂಡರು. ಅವರು ಬಂಡವಾಳಶಾಹಿತನಕ್ಕೆ ಕೊಡುತ್ತಿದ್ದ ಬೆಂಬಲವೆಲ್ಲವೂ ಮರೆಯಾಗಿ ಹೋಯಿತು. ಬಣಜಿಗರು ವ್ಯಾಪಾರ-ವಾಣಿಜ್ಯದಲ್ಲಿ ಸ್ಥಿತ್ಯಂತರವನ್ನು ಕಂಡು ವಿವಿಧ ಕಸುಬುಗಳಲ್ಲಿ ತೊಡಗಿದರು.

ಬಂಡವಾಳಶಾಹಿತನದ ಬರುವಿಕೆಯನ್ನು ಸೂಚಿಸುವಂತಹ ಉತ್ಪಾದನೆ ಸಂಘಟನೆಯಲ್ಲಿನ ಮುಂದುವರಿದ ರೂಪಗಳನ್ನು ತೊಡೆದುಹಾಕಲಾಯಿತು. ಇದರೊಂದಿಗೆ ಸ್ಥಳೀಯ ಮಾರುಕಟ್ಟೆಯನ್ನು ಒಟ್ಟಾಗಿಸಿ ಕೇಂದ್ರೀಕೃತಗೊಳಿಸಿದ ರಾಜಕೀಯ ಶಕ್ತಿಗಳನ್ನು ಸೋಲಿಸುವುದರ ಜೊತೆಗೆ ಈ ಒಗ್ಗಟ್ಟಿನಿಂದ ಸುಭದ್ರ ಆರ್ಥಿಕ ಬುನಾದಿಯನ್ನು ಹಾಕಿದ್ದ ಸಾಮಾಜಿಕ ವರ್ಗಗಳನ್ನು ಒಡೆಯಲಾಯಿತು. ಈ ವರ್ಗಗಳ ನಾಶದೊಂದಿಗೆ ಬ್ರಿಟಿಶ್ ವಸಾಹತುಶಾಹಿಯ ಆರ್ಥಿಕ ಗುರಿಗಳು ಹೆಚ್ಚು ಕಡಿಮೆ ಗೆದ್ದಂತಾಗಿತ್ತು. ಸಶಕ್ತ ವರ್ತಕವರ್ಗದ ಸೋಲು ಮತ್ತು ನಂತರದ ಬಂಡವಾಳಶಾಹಿ ಉತ್ಪಾದನೆಯ ನಾಶದ ನಂತರ ಸ್ಥಳೀಯ ಮಾರುಕಟ್ಟೆಯನ್ನು ಒಟ್ಟಾಗಿಟ್ಟ ಪ್ರಮುಖ ವರ್ಗವೇ ಇಲ್ಲವಾಗಿತ್ತು. ನಂತರದ ದಿನಗಳಲ್ಲಿ ಕಸುಬುದಾರರ ಮೇಲೆ ದಾಳಿ ಆದಾಗಲೇ ಪಾರ್ಶ್ವವಾಯು ಪೀಡಿತವಾಗಿದ್ದ ಕರ್ನಾಟಕದ ಸ್ಥಳೀಯ ಮಾರುಕಟ್ಟೆಯನ್ನು ಸ್ವಚ್ಛಗೊಳಿಸಲು ನಡೆಸಿದ ಕಾರ್ಯವಾಗಿತ್ತಷ್ಟೇ. ಇದು ಬ್ರಿಟಿಶ್ ಬಂಡವಾಳಶಾಹಿತನದ ಉತ್ಪನ್ನಗಳು ಮಾರುಕಟ್ಟೆ ಪ್ರವೇಶಿಸುವುದಕ್ಕಾಗಿ ಮಾಡಿದ ಕೆಲಸವಷ್ಟೇ. ಇದು ವಸಾಹತುಶಾಹಿ ಬೆಳೆಸಿದ ಮೂಲಭೂತ ಸಂಬಂಧ. ರಫ್ತು ಮಾಡುವ ದೇಶವಾಗಿದ್ದ ಭಾರತ ಆಮದು ಮಾಡಿಕೊಳ್ಳುವ ದೇಶವಾಯಿತು. ಉತ್ಪಾದಕ ರಾಷ್ಟ್ರವಾಗಿ ಚಿಗುರುತ್ತಿದ್ದ ಭಾರತ ಮತ್ತೆ ಪೂರ್ಣ ಕೃಷಿ ದೇಶವಾಗುವೆಡೆಗೆ ಮರಳಿತು. ನಗರಗಳ ಜನಸಂಖ್ಯೆ ಕಡಿಮೆಯಾಯಿತು ರೈತರು ಚಿಕ್ಕ ಚಿಕ್ಕ ಜಮೀನುಗಳ ಮೇಲೆ ಅವಲಂಬಿತರಾದರು. ಮತ್ತವರು ಉತ್ಪಾದನೆ ಹಸಿವನ್ನು ಕೊಂಚ ನೀಗಿಸುತ್ತಿತ್ತು. ಇವೆಲ್ಲವನ್ನು ಉಪಯೋಗಿಸಿಕೊಂಡು ಪ್ರಗತಿಪರ ಬ್ರಿಟನ್ನನ್ನು ಕಟ್ಟಲಾಯಿತು. ೧೮೫೦ರಷರ್ಪ್ಪರಲ್ಲಿ ಬ್ರಿಟನ್ನಿನ ಹತ್ತಿ ರಫ್ತಿನ ನಾಲ್ಕನೇ ಒಂದಂಶದಷ್ಟು ಭಾರತದ ಮಾರುಕಟ್ಟೆಗೆ ಹೋಗುತ್ತಿತ್ತು. ಇಂಗ್ಲೆಂಡಿನ ಜನಸಂಖ್ಯೆಯ ಎಂಟನೇ ಒಂದಂಶದಷ್ಟು ಜನರಿಗೆ ಉದ್ಯೋಗ ನೀಡಿದ್ದ ಹತ್ತಿ ಉದ್ಯಮ ರಾಷ್ಟ್ರದ ಆದಾಯಕ್ಕೆ ಹನ್ನೆರಡನೇ ಒಂದಂಶದಷ್ಟು ಕಾಣಿಕೆ ನೀಡುತ್ತಿತ್ತು (ಸಾಕಿ,೧೯೯೮:೮೯).

ದೇಶೀಯ ವರ್ತಕರ ನಾಶ ಮತ್ತು ಬಂಡವಾಳಶಾಹಿ ಉತ್ಪಾದನೆಯ ಆರಂಭದಿಂದ ತಕ್ಷಣದ ಪರಿಣಾಮವೆಂದರೆ ಕರ್ನಾಟಕದೊಳಗಿದ್ದ ವಿವಿಧ ಬಂಧಗಳನ್ನು ಕಡಿದುಹಾಕಿದ್ದು. ಕರ್ನಾಟಕದಲ್ಲಿ ಭೌಗೋಳಿಕವಾಗಿ ವಿಭಿನ್ನವಾಗಿದ್ದ ಮಾರುಕಟ್ಟೆಯನ್ನು ಕೃಷಿ ಮತ್ತು ಕೈಗಾರಿಕೆ ಒಂದುಗೂಡಿಸಿತ್ತು. ಈ ಒಗ್ಗಟ್ಟಿನ ಬಂಧವನ್ನು ಮೊದಲು ಕಡಿಯಲಾಯಿತು. ಉತ್ತರವನ್ನು ದಕ್ಷಿಣದಿಂದ ಬೇರ್ಪಡಿಸಲಾಯಿತು. ಪೂರ್ವವನ್ನು ಪಶ್ಚಿಮದಿಂದ ಸ್ಥಳೀಯ ಮಾರುಕಟ್ಟೆಯನ್ನು ಹೀಗೆ ಛಿದ್ರಪಡಿಸಿದ್ದು, ಕರ್ನಾಟಕವನ್ನು ವಿಭಾಗಿಸಲಾಯಿತು. ಹತ್ತಿ ಬೆಳೆಗಾರರ ಮತ್ತು ನೇಕಾರರ ನಡುವಿನ ಸಂಬಂಧ ಬೀಜೋತ್ಪಾದಕರ ಮತ್ತು ಎಣ್ಣೆ ತೆಗೆಯುವವರ ನಡುವಿನ ಸಂಬಂಧ ಕುರಿ ಸಾಕುವವರು ಮತ್ತು

ಕಂಬಳಿ ನೇಯುವವರ ನಡುವಿನ ಸಂಬಂಧವನ್ನು ಕೊನೆಗಾಣಿಸಲಾಯಿತು. ಈ ಮೂಲಕ ವಸಾಹತುಶಾಹಿ ಆಳ್ವಿಕೆಯು ಗ್ರಾಮೀಣ ಆರ್ಥಿಕತೆಯ ಮೇಲೆ ತನ್ನ ಸ್ಥಿಮಿತತೆಯನ್ನು ಗುರುತಿಸಬಹುದಾಗಿದೆ. ಸ್ಥಳೀಯ ಮಾರುಕಟ್ಟೆಯಲ್ಲಿದ್ದ ಕೃಷಿ ಚಕ್ರದ ನಿರಂತರತೆಯನ್ನು ಮುರಿದು ಹಾಕಿದ್ದು ವಸಾಹತುಶಾಹಿಯ ಮಧ್ಯ ಪ್ರವೇಶದಿಂದಾದ ಮತ್ತೊಂದು ಪ್ರಮುಖ ವಿರೂಪ. ಈ ನೈಸರ್ಗಿಕ ನಿರಂತರತೆಯು ಒಂದು ವಲಯದ ಅಭಿವೃದ್ಧಿ ಮತ್ತೊಂದರ ಅಭಿವೃದ್ಧಿಯನ್ನು ಪೋಷಿಸಿತ್ತು. ಕೃಷಿಯಲ್ಲಿನ ಈ ಪ್ರವೃತ್ತಿ ನಿಧಾನವಾಗಿ ರೈತರ ತರ್ಕಬದ್ಧ ಎಚ್ಚರಿಕೆಗೆ ಕಾರಣವಾಗಿತ್ತು ಮತ್ತು ಕನ್ನಡ ದೇಶದ ಏಳ್ಗೆಗೆ ಕಾಣಿಕೆ ನೀಡಿತು. ವ್ಯಾಪಾರ ಮತ್ತು ಉತ್ಪಾದನೆಯ ಮೇಲೆ ದಾಳಿ ನಡೆಸಿದ ವಸಾಹತುಶಾಹಿ ಕೃಷಿ ಮತ್ತು ಕೈಗಾರಿಕೆ ನಡುವಿನ ಈ ಸಂಬಂಧವನ್ನು ಮುರಿದುಹಾಕಿತು. ಒಂದೆಡೆ ಪರಸ್ಪರರ ಮೇಲೆ ಅವಲಂಬಿತವಾಗಿದ್ದ ಕೃಷಿ ಮತ್ತು ಕೈಗಾರಿಕೆಯನ್ನು ಬಿಕ್ಕಟ್ಟಿಗೆ ದೂಡಿದ ವಸಾಹತುಶಾಹಿ ಮತ್ತೊಂದೆಡೆ ಈ ಮುರಿದು ಹಾಕುವಿಕೆಯ ಕಾರಣದಿಂದಲೇ ವಸಾಹತುಶಾಹಿ ಕರ್ನಾಟಕದ ಮಾರುಕಟ್ಟೆಯನ್ನು ತನ್ನ ವ್ಯಾಪಾರಕ್ಕಾಗಿ ಪ್ರವೇಶಿಸುವುದು ಸಾಧ್ಯವಾಯಿತು. ನಮ್ಮ ಕೃಷಿಯನ್ನು ತಮ್ಮ ಉತ್ಪಾದನೆಯ ಆಸಕ್ತಿಗಳಿಗೆ ಅನುಗುಣವಾಗಿ ಗುಲಾಮರನ್ನಾಗಿಸಿಕೊಂಡಿತು. ಈ ಮೂಲಕ ವಿಜಯನಗರೋತ್ತರ ಕಾಲದ ಸ್ಥಳೀಯ ಮಾರುಕಟ್ಟೆಗಳು ತಮ್ಮ ಅಸ್ತಿತ್ವವನ್ನು ಕಳೆದುಕೊಳ್ಳುವಂತಾಯಿತು.

**೫.೧.೨. ವಿದೇಶೀಯ ವ್ಯಾಪಾರ**

ಪ್ರಾಚೀನ ಕಾಲದಿಂದಲೂ ಭಾರತದ ವಿದೇಶೀಯ ವ್ಯಾಪಾರವನ್ನು ಕುರಿತಂತೆ ಮಾಹಿತಿ ದೊರೆಯುತ್ತದೆ. ವಿದೇಶಿಯ ವ್ಯಾಪಾರವು ಪ್ರಾಚೀನ ಕಾಲದಿಂದಲೂ ನಡೆದುಬಂದಿರುವ ಚಟುವಟಿಕೆಯಾಗಿದ್ದು ವಿದೇಶದಿಂದ ಉತ್ಪನ್ನಗಳನ್ನು ಆಮದು ಮಾಡಿಕೊಳ್ಳಲು ಸಮುದ್ರಮಾರ್ಗವನ್ನು ಆರಂಭಿಕ ವ್ಯಾಪಾರಿಗಳು ಪತ್ತೆ ಹಚ್ಚಿದರು. ಈ ವ್ಯಾಪಾರಕ್ಕೆ ಹೆಚ್ಚಿನ ಆಸಕ್ತಿಯನ್ನು ತೋರಿಸುವ ಮೂಲಕ ವಿದೇಶೀಯ ವ್ಯಾಪಾರಕ್ಕೆ ಹೆಚ್ಚಿನ ಮಹತ್ವವನ್ನು ನೀಡಿದರು. ಸ್ಥಳೀಯ ವ್ಯಾಪಾರದಿಂದ ಪಡೆದ ಸರಕುಗಳನ್ನು ವಿದೇಶಕ್ಕೆ ಕೊಂಡೊಯ್ಯುತ್ತಿದ್ದರು. ಈ ಸಲುವಾಗಿಯೇ ದೇಶೀಯ ಮೂಲಕ ನಡೆಯುತ್ತಿದ್ದ ವ್ಯಾಪಾರವು ವಿದೇಶಿಯ ಸ್ವರೂಪವನ್ನು ಪಡೆದುಕೊಂಡಿತ್ತು. ಸಮುದ್ರಮಾರ್ಗದ ವ್ಯಾಪಾರವನ್ನು ಕುರಿತಂತೆ ಪೇರಿಪ್ಲಿಸ್ಸ್ ಆಫ್ ಎರಿತ್ರಿಯನ್ ಸಿ ಕೃತಿಯು ಮೊದಲು ಸಮುದ್ರ ಮಾರ್ಗದ ವಿವರವನ್ನು ತಿಳಿಸುತ್ತದೆ. ಈ ಕೃತಿಯಲ್ಲಿ ಹಿಂದೂ ಮಹಾಸಾಗರದ ಸುತ್ತಲಿನ ಜಲಪ್ರದೇಶವು ಕೆಂಪುಸಮುದ್ರ, ಪರ್ಷಿಯಾ ಕೊಲ್ಲಿ ಮತ್ತು ಅರಬ್ಬಿ ಸಮುದ್ರ ಇವೆಲ್ಲವೂ ಸೇರಿದವು: ಈ ಮಾರ್ಗಗಳ ಮೂಲಕ ಭಾರತದ ವಿದೇಶಿಯ ವ್ಯಾಪಾರವು ನಡೆಯುತ್ತಿತ್ತು. ಪ್ರಾಚೀನ ಕಾಲದಿಂದಲೂ ಆರಂಭವಾದ ಈ ವ್ಯಾಪಾರ ಮಧ್ಯಕಾಲೀನ ಭಾರತದ ವೇಳೆ ವ್ಯಾಪಾರದ ಸ್ವರೂಪದಲ್ಲಿ ಹಲವಾರು ಬದಲಾವಣೆಗಳು ಕಂಡುಬಂದಿದ್ದರಿಂದ ವ್ಯಾಪಾರದ ಸ್ವರೂಪದಲ್ಲಾದ ಅಂಶವನ್ನು ಗುರುತಿಸಬಹುದು. ಹೊಯ್ಸಳ ಸಾಮ್ರಾಜ್ಯ ಮಧ್ಯಕಾಲೀನ ದಕ್ಷಿಣ ಭಾರತದಲ್ಲಿ ಸ್ಥಾಪನೆಯಾಗುವ ವೇಳೆಗೆ ಕೃಷಿಯಲ್ಲಿ ಅಭಿವೃದ್ಧಿಯಾಗಿತ್ತು. ವ್ಯಾಪಾರ ವಾಣಿಜ್ಯವು ಹೆಚ್ಚಿನ ಪ್ರಮಾಣದಲ್ಲಿ

ಕಾಣಿಸಿಕೊಳ್ಳಲಾರಂಭಿಸಿತು. ಕ್ರಿ.ಶ.ಆರನೇ ಶತಮಾನದಲ್ಲಿ ಅಲೆಗ್ಸಾಂಡ್ರಿಯಾದ ಕಾಸ್‌ಮಸ್ ಎಂಬ ವರ್ತಕನು ಭಾರತದ ಪಶ್ಚಿಮತೀರದ ಪ್ರದೇಶಗಳನ್ನು ಸಂದರ್ಶಿಸಿ ಅಲ್ಲಿನ ವ್ಯಾಪಾರವನ್ನು ಕುರಿತು ಮಾಹಿತಿ ನೀಡಿದ್ದಾನೆ. ಮಾರ್ಕೋಪೋಲೋ ಕ್ರಿ.ಶ.೧೨೮೮ ಮತ್ತು ೧೨೯೩ರಲ್ಲಿ ದಕ್ಷಿಣ ಭಾರತಕ್ಕೆ ಬೇಟಿ ನೀಡಿದ್ದನ್ನು. ಅವನು ದಖ್ಖನ್ನಿನ ವ್ಯಾಪಾರಗ ಬಗ್ಗೆ ವರ್ಣಿಸಿದ್ದಾನೆ. ಪ್ರಭುತ್ವದ ಹಿನ್ನೆಲೆಯಿಂದ ಕರ್ನಾಟಕವು ವಿದೇಶದೊಂದಿಗೆ ಹೊಂದಿದ ವ್ಯಾಪಾರ ಸಂಬಂಧವನ್ನು ಗಮನಿಸಿದಾಗ ಮೌರ್ಯ ಸಾಮ್ರಾಜ್ಯದೊಂದಿಗೆ ಕರ್ನಾಟಕದ ವಿದೇಶಿ ವ್ಯಾಪಾರ ವಾಣಿಜ್ಯವನ್ನು ಗುರುತಿಸಬಹುದು.

ಶ್ರೀಕಂಠಶಾಸ್ತ್ರೀ ಎಸ್. ಅವರು ಭಾರತೀಯ ಸಂಸ್ಕೃತಿ ವಿದೇಶಗಳಲ್ಲಿ ಪ್ರಸಾರವಾಯಿತು. ಖಡ್ಗ ಹಿಡಿದು ಸಾಮ್ರಾಜ್ಯ ಸ್ಥಾಪನೆಯಾಗಲಿ ಅಥವಾ ವಿದೇಶಿಯರು ಐಶ್ವರ್ಯವನ್ನು ಕೊಳ್ಳೆ ಹೊಡೆಯಲಿಕ್ಕಾಗಲೀ ಭಾರತೀಯರು ವಿದೇಶಗಳೊಡನೆ ಸಂಪರ್ಕ ಹೊಂದಿರಲಿಲ್ಲ. ಬದಲಾಗಿ ಭಾರತೀಯ ಸಂಸ್ಕೃತಿಯನ್ನು ವಿದೇಶಗಳಲ್ಲಿ ಹರಡುವ ಮೂಲಕ ವಿದೇಶಿಯ ವ್ಯಾಪಾರದ ಮಹತ್ವವನ್ನು ಒತ್ತಿ ಹೇಳಿದ್ದಾರೆ(ಜ್ಞಾನಪ್ರಕಾಶ್,೨೦೦೫:೧೩೪). ಹೊಯ್ಸಳರ ಆಳ್ವಿಕೆಯ ವೇಳೆಗೆ ತೀವ್ರತರವಾದ ಬದಲಾವಣೆಯನ್ನು ವಿದೇಶೀಯ ವ್ಯಾಪಾರದಲ್ಲಿ ಗುರುತಿಸಬಹುದಾಗಿದೆ. ಏಷ್ಯಾದ ವ್ಯಾಪಾರದಲ್ಲಿ ಅರಬ್ಬರಿಗೆ ತೀವ್ರ ಪ್ರತಿಸ್ಪರ್ಧೆಯನ್ನು ಒಡ್ಡಿದ ಯುರೋಪಿನ ವರ್ತಕರು ದಕ್ಷಿಣ ಭಾರತದ ಪಶ್ಚಿಮ ಕರಾವಳಿಯಲ್ಲಿ ಮೊದಲಿಗೆ ಗುರುತಿಸಿಕೊಂಡರು. ನಂತರ ಪೂರ್ವಕರಾವಳಿಯಲ್ಲಿ ವ್ಯಾಪಾರ ವ್ಯವಹಾರ ಪ್ರಕ್ರಿಯೆಗಳನ್ನು ಆರಂಭಿಸಿದರು. ಹಂತ ಹಂತವಾಗಿ ಇಡೀ ಭಾರತದ ವ್ಯಾಪಾರ ಕ್ಷೇತ್ರವನ್ನು ಪೋರ್ಚುಗಲ್, ಡಚ್ಚರು, ಇಂಗ್ಲಿಶರು ಮತ್ತು ಫ್ರೆಂಚರು ಆಕ್ರಮಿಸಿಕೊಳ್ಳುವುದರ ಮೂಲಕ ಅರಬ್ಬರು ಭಾರತದ ವ್ಯಾಪಾರ ವಾಣಿಜ್ಯದಿಂದ ಕ್ಷೀಣಿಸಲಾಂಭಿಸಿದರು. ಹೀಗೆ ಕರ್ನಾಟಕವು ಪ್ರಾಚೀನ ಕಾಲದಿಂದ ವಸಾಹತು ಕಾಲಘಟ್ಟದವರೆಗೆ ವಿವಿಧ ಪಾಶ್ಚಿಮಾತ್ಯ ರಾಷ್ಟ್ರಗಳೊಡನೆ ರಾಜತಾಂತ್ರಿಕ ರಾಯಭಾರ, ವ್ಯಾಪಾರ ವಾಣಿಜ್ಯ ಸಂಪರ್ಕಗಳನ್ನು ಭಾರತ ಹೊಂದಿತ್ತು. ಹೊಯ್ಸಳರ ಕಾಲಾವಧಿಯ ನಗರ ಕೇಂದ್ರಗಳ ಹುಟ್ಟು ಮತ್ತು ಬೆಳವಣಿಗೆಯಲ್ಲಿ ಗಮನಾರ್ಹ ಬದಲಾವಣೆಗಳಾಗಿದ್ದವು. ರಾಜ್ಯದೊಳಗಿನ ವ್ಯಾಪಾರ ಕೇಂದ್ರಗಳು ಕರಾವಳಿ ಪ್ರದೇಶದ ಮೂಲಕ ವಿದೇಶ ವರ್ತಕರೊಂದಿಗೆ ಸಂಪರ್ಕವಿತ್ತು. ೧೨ನೇ ಶತಮಾನದಲ್ಲಿ ಹೊಯ್ಸಳ ಸಾಮ್ರಾಜ್ಯವು ಅಭೂತಪೂರ್ವ ರೀತಿಯಲ್ಲಿ ವಿಸ್ತಾರಗೊಂಡಿತ್ತು. ಅದೇ ಸಮಯಕ್ಕೆ ವಿದೇಶಿ ವರ್ತಕರ ಸಂಪರ್ಕವೂ ಅಧಿಕವಾಯಿತು. ೧೨ನೇ ಶತಮಾನದಲ್ಲಿ ವಿದೇಶಿ ವರ್ತಕರು ಕೆನರಾ ಕರಾವಳಿಗೆ ತಪ್ಪದೇ ಬರುತ್ತಿದ್ದರು. ಕೆನರಾ ಕರಾವಳಿಯಲ್ಲಿ ಈ ವರ್ತಕರಿಗೆ ಬೇಕಾಗಿದ್ದ ವಸ್ತುಗಳ ಸ್ವರೂಪದಿಂದಾಗಿ ಅವರು ಒಳನಾಡಿನೊಂದಿಗೆ ಅಂದರೆ ಮಲೆನಾಡು ಮತ್ತು ಮೈದಾನ ಪ್ರದೇಶಗಳೊಂದಿಗೆ ನಿಕಟ ಸಂಪರ್ಕವನ್ನಿಟ್ಟುಕೊಂಡರು. ಮುತ್ತು, ಅಡಿಕೆ, ಸಂಬಾರ ಪದಾರ್ಥಗಳು ಮತ್ತು ಹತ್ತಿ ಇಂತಹ ಸ್ಥಳೀಯ ಉತ್ಪಾದಿತ ವಸ್ತುಗಳನ್ನು ಅಂತಾರಾಷ್ಟ್ರೀಯ ವಿನಿಮಯವುಳ್ಳ ಕರಾವಳಿ ಕೇಂದ್ರಗಳಿಗೆ ತಲುಪುವಂತೆ ಮಾಡಬೇಕಾಗಿತ್ತು(ಷೇಕ್ ಅಲಿ,೨,೨೦೧೮ :೬೮). ಹೀಗೆ ಹೊಯ್ಸಳರ ಆಳ್ವಿಕೆಯ ವೇಳೆಗೆ ಕರ್ನಾಟಕದ ವ್ಯಾಪಾರ ವಾಣಿಜ್ಯದಲ್ಲಿ ಮಹತ್ವದ ಬದಲಾವಣೆಗಳಾಗಿರುವುದು ಕಂಡುಬರುತ್ತದೆ.

ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ವೇಳೆಗೆ ಹಲವಾರು ರಾಜಕೀಯ, ಆರ್ಥಿಕ ಸ್ಥಿತ್ಯಂತರಗಳು ಈ ಕಾಲಘಟ್ಟದಲ್ಲಿ ಸಂಭವಿಸಿದವು. ಯುರೋಪಿಯನ್ನರಾದ ಪೋರ್ಚುಗೀಸರು ಭಾರತಕ್ಕೆ ಆಗಮಿಸಿದ್ದು ಒಂದು ಮುಖ್ಯ ಸ್ಥಿತ್ಯಂತರ ಘಟ್ಟವಾಗಿದೆ. ವಿಜಯನಗರ ಸಾಮ್ರಾಜ್ಯವು ದಕ್ಷಿಣ ಭಾರತದ ಚರಿತ್ರೆಯಲ್ಲಿ ಆರ್ಥಿಕ ಸ್ಥಿರತೆಯನ್ನು ತಂದು ಕೊಟ್ಟಕಾಲವೆಂದು ಚರಿತ್ರೆಯಲ್ಲಿ ಗುರುತಿಸಿದ್ದಾರೆ. ವಿದೇಶೀಯ ವ್ಯಾಪಾರದಲ್ಲಿ ಪ್ರಮುಖವಾಗಿ ಗುರುತಿಸಿಕೊಂಡಿದ್ದ ಅರಬ್ಬರನ್ನು ಹಿಂದಿಕ್ಕಿ ಆ ಸ್ಥಾನದಲ್ಲಿ ಪೋರ್ಚುಗೀಸರು ಗುರುತಿಸಿಕೊಂಡರು. ೧೪೯೮ರಲ್ಲಿ ವಾಸ್ಕೋಡಗಾಮನು ಕೇರಳದ ಕಲ್ಲಿಕೋಟೆಗೆ ಜಲಮಾರ್ಗದ ಮೂಲಕ ಬಂದು ತಲುಪಿದ ನಂತರ ಭಾರತದ ವ್ಯಾಪಾರ ವಾಣಿಜ್ಯದಲ್ಲಿ ಹಲವಾರು ಸ್ಥಿತ್ಯಂತರಕ್ಕೆ ಒಳಗಾಗಿದ್ದರಿಂದ ವಿಜಯನಗರೋತ್ತರ ಕಾಲದಲ್ಲಿ ವಿದೇಶಿಯ ವ್ಯಾಪಾರದ ನೀತಿಯನ್ನು ಹಲವಾರು ಹಂತಗಳಲ್ಲಿ ಗಮನಿಸುವುದು ಅವಶ್ಯಕವೆನಿಸುತ್ತದೆ. ಪೋರ್ಚುಗೀಸರು ತಮ್ಮದೇಯಾದ ನೀಲಿ ಜಲನೀತಿಯನ್ನು ರೂಪಿಸುವುದರ ಮೂಲಕ ಸಮುದ್ರಗಳ ಮೇಲೆ ಹಿಡಿತ ಸಾಧಿಸುವ ಛಲ ಹೊಂದಿದ್ದರು. ಸಮುದ್ರಗಳ ಮೇಲೆ ಹಿಡಿತ ಸಾಧಿಸಿ ಭಾರತ ವ್ಯಾಪಾರ ವಾಣಿಜ್ಯವನ್ನು ತಮ್ಮ ತೆಕ್ಕೆಗೆ ತಂದುಕೊಳ್ಳಬೇಕೆಂಬುದು ಅವರ ಬಯಕೆಯಾಗಿತ್ತು. ಇತರೇ ದೇಶಗಳಿಗೆ ಭಾರತದಿಂದ ಹೋಗುವ ಹಡಗುಗಳ ಮೇಲೆ ನಿಯಂತ್ರಣ ಸಾಧಿಸುವ ಛಲವನ್ನೂ ಪೋರ್ಚುಗೀಸರು ಹೊಂದಿದ್ದರು. ಇವರ ನೀಲಿ ಜಲನೀತಿಯನ್ನು ಮುರಿಯಲು ಇಂಗ್ಲಿಶರು ತಮ್ಮದೇ ತತ್ವ ಸಿದ್ಧಾಂತಗಳ ಮೂಲಕ ವಿದೇಶೀಯ ವ್ಯಾಪಾರದಲ್ಲಿ ತಮ್ಮ ಅಸ್ತಿತ್ವವನ್ನು ಕಂಡುಕೊಂಡು ಭಾರತವನ್ನು ತಮ್ಮ ವಸಾಹತು ಕೇಂದ್ರವನ್ನಾಗಿ ಮಾಡಿಕೊಡಿದ್ದರು. ಭಾರತದ ಕಚ್ಚಾವಸ್ತುಗಳನ್ನು ಯುರೋಪಿಗೆ ಕೊಂಡೊಯ್ಯುವ ಮೂಲಕ ಬಂಡವಾಳಕೇಂದ್ರಿತ ಅಥವಾ ಯೂರೋಪ್‌ಕೇಂದ್ರಿತ ಹೊಸ ಅರ್ಥವ್ಯವಸ್ಥೆಯೊಂದು ವಿದೇಶೀಯ ವ್ಯಾಪಾರದಲ್ಲಿ ಗುರುತಿಸಿದ ಕಾಲವಾಗಿತ್ತು. ಮಾರುಕಟ್ಟೆ ಕೇಂದ್ರಿತ ಯುರೋಪಿನ ಅರ್ಥವ್ಯವಸ್ಥೆಯು ವಿಜಯನಗರೋತ್ತರ ಕಾಲದಲ್ಲಿ ಪ್ರಮುಖವಾಗಿ ಗುರುತಿಸಿಕೊಂಡಿತು. ಪೋರ್ಚುಗೀಸರು, ಡಚ್ಚರು, ಇಂಗ್ಲಿಶರು, ಫ್ರೆಂಚರು ಈ ಕಾಲಘಟ್ಟದಲ್ಲಿ ಪ್ರಮುಖವಾಗಿ ಕಂಡುಬರುತ್ತದೆ.

ಪೋರ್ಚುಗೀಸರು ಭಾರತಕ್ಕೆ ಬರುವ ಪೂರ್ವದಲ್ಲಿ ಅರಬ್ಬರು ಭಾರತದ ವಿದೇಶಿಯ ವ್ಯಾಪಾರದಲ್ಲಿ ಗುರುತಿಸಿಕೊಂಡಿದ್ದರು. ಕುದುರೆಗಳನ್ನು ದೇಶಿಯ ಅರಸರಿಗೆ ರವಾನಿಸುತ್ತಾ ಇಲ್ಲಿನ ಮುತ್ತು ರತ್ನ ವಜ್ರಗಳನ್ನು ವಿದೇಶಕ್ಕೆ ಕೊಂಡ್ಯೊಯಲಾಗುತ್ತಿತ್ತು. ಪ್ರಮುಖವಾಗಿ ಮಧ್ಯಯುಗದಲ್ಲಿ ಯೂರೋಪ್ ಮತ್ತು ಭಾರತ ಮತ್ತು ಆಗ್ನೇಯ ಏಷ್ಯಾ ನಡುವೆ ವ್ಯಾಪಾರ ವಾಣಿಜ್ಯವನ್ನು ವಿವಿಧ ಮಾರ್ಗಗಳ ಮೂಲಕ ನಡೆಸುತ್ತಿದ್ದರು. ಆ ಮಾರ್ಗಗಳೆಂದರೆ ಸಮುದ್ರದ ಮೂಲಕ ಪರ್ಷಿಯನ್ ಕೊಲ್ಲಿ ಯುದ್ದಕ್ಕೂ ದೇಶೀಯ ವ್ಯಾಪಾರದಿಂದ ಇರಾಕ್ ಮತ್ತು ಟರ್ಕಿಯಿಂದ ನಂತರ ಸಮುದ್ರದ ಮೂಲಕ ವೆನಿಸ್ ಮತ್ತು ಜಿನೋವಕ್ಕೆ ಸಮುದ್ರಮಾರ್ಗವನ್ನು ಕಂಡುಹಿಡಿಯಲಾಯಿತು. ಈ ಮೂಲಕ ಮಧ್ಯಯುಗೀನ ಕಾಲಘಟ್ಟದ ವೇಳೆಗೆ ಯುರೋಪಿಯನ್ನರು ಪ್ರಮುಖ ಭಾರತದ ವ್ಯಾಪಾರ ವಾಣಿಜ್ಯದ ಮೇಲೆ ತಮ್ಮ ಗಮನವನ್ನು ಹರಿಸಿದರು. ವಿಜಯನಗರಪೂರ್ವದಲ್ಲಿ ವಿದೇಶಿಯ ವ್ಯಾಪಾರದಲ್ಲಿ ನಾನಾದೇಶಿಗಳು, ಐಯ್ಯವೊಳೆ ೫೦೦ ಸಂಘಗಳು ವ್ಯಾಪಾರ ನಡೆಸುತ್ತಿದ್ದವು.

೧೫ ಮತ್ತು ೧೬ನೇ ಶತಮಾನದಲ್ಲಿ ವ್ಯಾಪಾರವು ಬದಲಾವಣೆಯನ್ನು ತಂದಿತು. ಹೊಸ ಬಂದರು ಪಟ್ಟಣಗಳಾದ ಭಟ್ಕಳ ಮತ್ತು ಹೊನ್ನಾವರಗಳು ವಿಜಯನಗರ ಕಾಲದಲ್ಲಿ ಅಸ್ತಿತ್ವಕ್ಕೆ ಬಂದವು ಭಟ್ಕಳ ಬಂದರಿಗೆ ವಿಜಯನಗರದಿಂದ ನೇರ ಸಂಪರ್ಕವಿತ್ತು. ವ್ಯಾಪಾರಿಗಳಾದ ಕೋಮಟಿಗರು ಮತ್ತು ನವಾಯಿತರೆಂಬ ವ್ಯಾಪಾರಸ್ಥ ಕುಟುಂಬಗಳು ಈ ಬಂದರು ಪಟ್ಟಣಕ್ಕೆ ವಲಸೆ ಬಂದರು. ಗೌಡ ಸಾರಸ್ವತರೆಂಬ ಜನಾಂಗದವರು ಪೋರ್ಚುಗೀಸರು ವಿದೇಶೀಯ ವ್ಯಾಪಾರದಲ್ಲಿ ಗುರುತಿಸಿಕೊಳ್ಳುತ್ತಾರೆ. ಗೌಡ ಸಾರಸ್ವತ ಜನಾಂಗದವರು ಕೆಳದಿಯ ನಾಯಕರ ಸಾಗರೋತ್ತರ ವ್ಯಾಪಾರ ವಾಣಿಜ್ಯದಲ್ಲಿ ಮುಖ್ಯವಾಗಿ ಗುರುತಿಸಿಕೊಂಡಿದ್ದವರು. ಪೋರ್ಚುಗೀಸರು ಭಾರತಕ್ಕೆ ಮತ್ತು ಕರ್ನಾಟಕಕ್ಕೆ ಬರುವ ಹಂತದಲ್ಲಿ ಕರ್ನಾಟಕದಲ್ಲಿ ಹಲವಾರು ಸ್ಥಳೀಯ ಮನೆತನಗಳು ಆಳ್ವಿಕೆ ಮಾಡುತ್ತಿದ್ದವು. ಗೇರುಸೊಪ್ಪೆಯ ಕರಾವಳಿಯ ಬಳಿ ತಿಮ್ಮಾಜಿ ಎಂಬ ನಾವಿಕನೊಡನೆ ವಾಸ್ಕೋಡಗಾಮನು ಸಂಘರ್ಷ ನಡೆಸಿದ್ದನೆಂದು ತಿಳಿದುಬರುತ್ತದೆ. ದಾಡುಹಳ್ಳಿ ಭಟ್ಕಳ ದೊರೆಯೊಡನೆ ಹೋರಾಡಿ ಕೊನೆಗೆ ಒಪ್ಪಂದ ಮಾಡಿಕೊಂಡನೆಂದು ತಿಳಿಯುತ್ತದೆ(ಮಂಜುನಾಥ,೨೦೧೯:೧೯). ಪೋರ್ಚುಗೀಸರು ಈ ಮೂಲಕ ಕರಾವಳಿ ಕರ್ನಾಟಕದ ಪ್ರತಿಯೊಂದು ಬಂದರುಗಳಲ್ಲಿಯೂ ತಮ್ಮ ಅಸ್ತಿತ್ವ ಕಂಡುಕೊಳ್ಳಲು ಆರಂಭಿಸಿದರು. ೧೫೦೫ರಲ್ಲಿ ಹೊನ್ನಾವರದ ಮೇಲೆ ದಾಳಿ ಮಾಡಿ ಕಪ್ಪ ಸಂಗ್ರಹಿಸಿದರು. ಆ ವೇಳೆಯಲ್ಲಿ ಪೋರ್ಚುಗೀಸರ ವೈಸ್‌ರಾಯ್ ಅಲ್ಲೇಡಾ ಕಾರವಾರ ಸಮೀಪದ ಅಂಜದ್ವೀಪ ವಶಪಡಿಸಿಕೊಂಡನು.

ಪೋರ್ಚುಗೀಸರಿಗೆ ವಿಜಯನಗರ ಕಾಲದಲ್ಲಿ ಓನಾರ(ಹೊನ್ನಾವರ), ಕುಂದಾಪುರ (ಬಾರ್ಸೆಲೂರು) ಮತ್ತು ಮಂಗಳೂರು ಮುಖ್ಯ ವ್ಯಾಪಾರಿ ಕೇಂದ್ರಗಳಾಗಿದ್ದವು. ಹೊನ್ನಾವರದ ಮೂಲಕ ಕರಿಮೆಣಸಿನ ವ್ಯಾಪಾರವನ್ನು ಮಾಡುತ್ತಿದ್ದರು. ಇಲ್ಲಿ ಅವರು ವ್ಯಾಪಾರ ಕೇಂದ್ರ ತೆರೆಯಲು ಮುಖ್ಯ ಕಾರಣವೆಂದರೆ ಇಲ್ಲಿಗೆ ೩೫ ಕಿ.ಮೀ. ದೂರದಲ್ಲಿರುವ ಗೇರುಸೊಪ್ಪೆಯಲ್ಲಿ ಬಾರಿ ಪ್ರಮಾಣದಲ್ಲಿ ಕರಿಮೆಣಸು ಲಭ್ಯವಾಗುತ್ತಿತ್ತು. ಆದ ಕಾರಣ ಪೋರ್ಚುಗೀಸರು ಇಲ್ಲಿ ಕರಿಮೆಣಸಿನ ತೂಕದ ಘಟಕ ಸ್ಥಾಪಿಸಿದ್ದರು. ಅಲ್ಲಿಂದ ತೂಕ ಮಾಡಿದ ಕರಿಮೆಣಸನ್ನು ಹೊನ್ನಾವರಕ್ಕೆ ರಫ್ತು ಮಾಡುತ್ತಿದ್ದರು. ಈ ಮೂಲಕ ಗೋವಾ ಮಾರ್ಗವಾಗಿ ಯುರೋಪ್‌ಗೆ ರಫ್ತಾಗುತ್ತಿತ್ತು.

ಇಟಲಿಯ ಪ್ರವಾಸಿಗನಾದ ಡೆಲ್ಲಾವೆಲ್ಲಾ ಗೇರುಸೊಪ್ಪೆಯನ್ನು ಕುರಿತು ಬರೆಯುತ್ತಾನೆ. ಈ ದೇಶದಲ್ಲಿ ಅತಿ ಹೇರಳವಾಗಿ ಕಾಳುಮೆಣಸು ಬೆಳೆಯುವ ಪ್ರದೇಶ ಇದಾಗಿದೆ. ಆದ್ದರಿದಂಲೇ ಪೋರ್ಚುಗೀಸರು ಇಲ್ಲಿನ ರಾಣಿ ಚೆನ್ನ ಭೈರಾದೇವಿಯನ್ನು 'ಮೆಣಸಿನ ರಾಣಿ' ಎಂದು ಕರೆದರು(ನಾಗೇಗೌಡ,೨೦೦೭:೧೬೭). ಕೆಳದಿಯ ನಾಯಕರು ಕರಾವಳಿ ಕರ್ನಾಟಕದ ಕರಿಮೆಣಸಿನ ವ್ಯಾಪಾರದಲ್ಲಿ ತಮ್ಮನ್ನು ಗುರುತಿಸಿಕೊಂಡರು. ಪೋರ್ಚುಗೀಸರ ನೀಲಿ ಜಲನೀತಿಯ ಪ್ರಕಾರ ಅವರ ಅನುಮತಿ ಇಲ್ಲದೇ ಹಿಂದೂ ಮಹಾಸಾಗರದಲ್ಲಿ ಯಾವುದೇ ಹಡಗು ಚಲಿಸುವಂತಿರಲಿಲ್ಲ. ಸ್ಥಳೀಯ ಅರಸರ ವಿದೇಶ ವ್ಯಾಪಾರ ಪೋರ್ಚುಗೀಸರ ಮೂಲಕವೇ ನಡೆಯಬೇಕೆಂಬ ಪರಿಸ್ಥಿತಿಯು ನಿರ್ಮಾಣವಾಗಿತ್ತು(ಗೋವಿಂದರಾಜು,೨೦೧೧:೧೮).

ಕರ್ನಾಟಕದ ಕರಾವಳಿ ಭಾಗಗಳಲ್ಲಿ ವಿದೇಶೀಯ ವ್ಯಾಪಾರ ನಡೆಯಲು ಒಂದು ಮುಖ್ಯ ಕಾರಣವೆಂದರೆ ವಿಜಯನಗರಕ್ಕೆ ಮತ್ತು ಸ್ಥಳೀಯ ನಾಯಕರಿಗೆ ಬೇಕಾದ ಕುದುರೆ ಮತ್ತು ಆನೆಗಳನ್ನು ಒದಗಿಸುವುದು ಇವರ ಕೆಲಸವಾಗಿತ್ತು ಆದರೆ ವಿಜಯನಗರವು ೧೫೬೫ರಲ್ಲಿ ಪತನದ ನಂತರ ಪೋರ್ಚುಗೀಸರ ವ್ಯಾಪಾರವು ಮತ್ತೆ ಸುಧಾರಿಸಿಕೊಳ್ಳಲಾರದಷ್ಟು ನಷ್ಟವನ್ನು ಅನುಭವಿಸಿತು. ಒಂದರ್ಥದಲ್ಲಿ ಪ್ರಸಿದ್ಧ ಮಾರುಕಟ್ಟೆ ಎನಿಸಿಕೊಂಡಿದ್ದ ಗೋವಾ ಮುಂದೆ ಎಂದೂ ಹಿಂದಿನ ಸ್ಥಾನವನ್ನು ಪಡೆಯಲಿಲ್ಲ. ಆದ್ದರಿಂದ ಅವರ ನಂತರದ ವ್ಯಾಪಾರವು ಕರ್ನಾಟಕದ ಕರಾವಳಿ ಭಾಗದಲ್ಲಿ ಬೆಳೆಯುತ್ತಿದ್ದ ಕರಿಮೆಣಸಿನ ವ್ಯಾಪಾರಕ್ಕೆ ಕೇಂದ್ರೀಕರಿಸಿ ಈ ವ್ಯಾಪಾರದಲ್ಲಿಯೇ ನಂತರ ಗುರುತಿಸಿಕೊಂಡರು.

ಕ್ರಿ.ಶ.೧೫ ಮತ್ತು ೧೬ನೇ ಶತಮಾನಗಳಲ್ಲಿ ನಡೆಯುತ್ತಿದ್ದ ವಿದೇಶೀಯ ವ್ಯಾಪಾರವು ಕರ್ನಾಟಕದ ಪಶ್ಚಿಮ ಕರಾವಳಿಯಲ್ಲಿ ಕೇಂದ್ರಿಕೃತವಾಗಿತ್ತು. ಅರೇಬಿಯನ್ ಮತ್ತು ಪರ್ಶಿಯನ್ ದೇಶಗಳ ವರ್ತಕರು ವಿವಿಧ ವಸ್ತುಗಳನ್ನು ಪಶ್ಚಿಮ ಕರಾವಳಿಗೆ ತರುತ್ತಿದ್ದರು. ಇಡೀ ವ್ಯಾಪಾರ ಮಾರ್ಗವು ಅರೇಬಿಯನ್ ಮತ್ತು ಪರ್ಶಿಯನ್ ವರ್ತಕರ ಕೈಯಲ್ಲಿತ್ತು. ಕ್ರಿ.ಶ.೧೫೧೦ರಲ್ಲಿ ಆಲ್ಬುಕರ್ಕನು ಬಿಜಾಪುರದ ಆದಿಲ್‌ಶಾಹಿನಿಂದ ಗೋವಾವನ್ನು ವಶಪಡಿಸಿಕೊಂಡದ್ದು ಮಹತ್ತರವಾದ ಬದಲಾವಣೆಗೆ ಕಾರಣವಾಯಿತು. ಇದು ಮುಸ್ಲಿಮರ ವ್ಯಾಪಾರದ ಮೇಲಿನ ಏಕಸ್ವಾಮ್ಯವನ್ನು ಮುರಿಯಿತು. ಇದರಿಂದಾಗಿ ಬಿಜಾಪುರ ಮತ್ತು ವಿಜಯನಗರ ಸಾಮ್ರಾಜ್ಯಗಳು ತಮ್ಮ ವಿದೇಶಿ ವಸ್ತುಗಳ ಬೇಡಿಕೆಗಾಗಿ ಸಂಪೂರ್ಣವಾಗಿ ಪೋರ್ಚುಗೀಸರನ್ನು ಅವಲಂಬಿಸುವಂತಾಯಿತು. ಪೋರ್ಚುಗೀಸರು ವಿಜಯನಗರ ಮತ್ತು ಬಿಜಾಪುರದ ಅರಸರ ಅರೇಬಿಯನ್ ಮತ್ತು ಪರ್ಶಿಯಾ ದೇಶಗಳ ಕುದುರೆಗಳನ್ನು ಒದಗಿಸುತ್ತಿದ್ದರು. ಕುದುರೆ ವ್ಯಾಪಾರವು ಅಂದಿನ ಅತ್ಯಂತ ಬೇಡಿಕೆಯ ಹಾಗೂ ಲಾಭದಾಯಕ ವ್ಯಾಪಾರವಾಗಿತ್ತು. ಕಾರಣ ಮಧ್ಯಯುಗೀನ ಕಾಲಘಟ್ಟವು ರಾಜಕೀಯ ಸ್ಥಿತ್ಯಂತರಕ್ಕೆ ಒಳಪಟ್ಟ ಕಾಲವಾಗಿದ್ದರಿಂದ ಯುದ್ಧ ಮತ್ತು ಒಪ್ಪಂದಗಳು ನಿರಂತರವಾಗಿ ನಡೆಯುತ್ತಿದ್ದವು.

ಕೃಷಿ ಉತ್ಪನ್ನಗಳಾದ ಮೆಣಸು, ಅಕ್ಕಿ, ಅಡಿಕೆ, ಸಂಬಾರ ಪದಾರ್ಥಗಳು ಪ್ರಮುಖ ಸರಕುಗಳಾಗಿದ್ದವು. ವಿದೇಶಿಯರು ಮೀನನ್ನು ಕೊಳ್ಳುತ್ತಿದ್ದರು. ಚಿನ್ನ ಮತ್ತು ಆಭರಣಗಳು ದಂತ ಮತ್ತು ಶ್ರೀಗಂಧದ ವಸ್ತುಗಳು, ಕೆಲವು ಮರದ ಸಲಕರಣೆಗಳು ಗೃಹ ಕೈಗಾರಿಕಾ ಉತ್ಪನ್ನಗಳಾಗಿದ್ದವು. ಅರಣ್ಯದಿಂದ ಮರಗಳಿಗೆ ಬೇಡಿಕೆಯಿತ್ತು. ಹೊಗೆಸೊಪ್ಪು ಸಹ ವ್ಯಾಪಾರದ ವಸ್ತುವಾಗಿತ್ತು. ಕರ್ನಾಟಕದ ಕರಾವಳಿಯ ಜಿಲ್ಲೆಗಳಾದ ಮಂಗಳೂರು, ಕಾಸರಗೋಡು, ಮಂಜೇಶ್ವರ, ಕುಂದಾಪುರ, ಗಂಗೊಳ್ಳಿ, ಭಟ್ಕಳ, ಹೊನ್ನಾವರ, ಕುಮುಟ, ಗೋಕರ್ಣ ಮತ್ತು ಕಾರವಾರ ವಿದೇಶಿಯ ವ್ಯಾಪಾರದ ಪ್ರಮುಖ ಕೇಂದ್ರಗಳಾಗಿದ್ದವು. ಬಸ್ರೂರು, ಬಂಟವಾಳ, ಗೇರುಸೊಪ್ಪೆ ಒಳನಾಡಿನ ಜಲಮಾರ್ಗಗಳಾಗಿದ್ದವು. ಈ ಮೂಲಕ ವಿಜಯನಗರೋತ್ತರ ಕಾಲದ ವಿದೇಶೀಯ ವ್ಯಾಪಾರವು ಒಳನಾಡಿನಲ್ಲಿ ಜಲ ಮತ್ತು ಭೂಮಾರ್ಗದ ಮೂಲಕ ನಡೆಯುತ್ತಿದ್ದ ಘಟ್ಟ ಪ್ರದೇಶದಿಂದ ಬಂದರು ಪಟ್ಟಣಗಳಿಗೆ ಸರಕುಗಳನ್ನು ನದಿಮಾರ್ಗಗಳ ಮೂಲಕ ಸಾಗಿಸುತ್ತಿದ್ದರು(ಕಲಬುರ್ಗಿ, ರಾಮಭಟ್ಟ,೧೯೯೪:೨೯೧). ಪ್ರತಿಯೊಂದು ಬಂದರು ಪಟ್ಟಣಗಳಿಂದಲೂ ಹಿನ್ನಾಡಿಗೆ ಸಂಪರ್ಕ ಕಲ್ಪಿಸುವ ಮಾರ್ಗಗಳಿದ್ದವು.

ಪೋರ್ಚುಗೀಸರು ಕರ್ನಾಟಕದಲ್ಲಿ ಕರಿಮೆಣಸು ಮತ್ತು ಅಕ್ಕಿ ವ್ಯಾಪಾರದಲ್ಲಿ ಗುರುತಿಸಿಕೊಂಡಿದ್ದರು. ಇವರ ಕರಿಮೆಣಸಿನ ವ್ಯಾಪಾರವು ಏಷ್ಯಾದ ಮಸಾಲೆ ವ್ಯಾಪಾರದ ಬೆನ್ನೆಲುಬಾಗಿತ್ತು. ಇದನ್ನು ಅವರು 'ರಾಯಲ್ ಏಕಸ್ವಾಮ್ಯದ ಪ್ರಧಾನ ಸರಕು' ಎಂದು ಘೋಷಿಸಿದ್ದಾರೆ. ಪೋರ್ಚುಗೀಸರ ಈ ವ್ಯಾಪಾರದಲ್ಲಿ ೧೬ನೇ ಶತಮಾನದಿಂದ ಗುರುತಿಸಿಕೊಂಡವರು ನಂತರ ೧೮ನೇ ಶತಮಾನದಲ್ಲಿ ವೇಳೆಗೆ ಮೆಣಸಿನ ವ್ಯಾಪಾರದಲ್ಲಿ ಕಣ್ಮರೆಯಾದರು. ಇದಕ್ಕೆ ಕಾರಣವೆಂದರೆ ಬಿಳಿಮೆಣಸು ಮಾರುಕಟ್ಟೆಗೆ ಪ್ರವೇಶಿಸಿದ್ದೇ ಕಾರಣ. ಕರಿಮೆಣಸು ೧೭ನೇ ಶತಮಾನದಲ್ಲಿ ಕರ್ನಾಟಕದಲ್ಲಿ ಅತಿ ದೊಡ್ಡ ಮಾರುಕಟ್ಟೆಯನ್ನು ಹೊಂದಿತ್ತು. ಅಂತಾರಾಷ್ಟ್ರೀಯ ವ್ಯಾಪಾರ ಸ್ಪರ್ಧೆಯ ಒಂದು ವಸ್ತುವಾಗಿಯೂ ಗುರುತಿಸಿಕೊಂಡಿತು. ಈ ಮಾರುಕಟ್ಟೆಯಲ್ಲಿ ಪೋರ್ಚುಗೀಸರಿಗೆ ಸ್ಪರ್ಧಿಗಳಾಗಿ ಡಚ್ಚರು, ಇಂಗ್ಲಿಶರು ಮತ್ತು ಫ್ರೆಂಚರು ಇದ್ದರು.

ರಾಜ್ಯ ಸರ್ಕಾರವು ವಿದೇಶಗಳಿಗೆ ರಫ್ತು ಮಾಡುತ್ತಿದ್ದ ವಸ್ತುಗಳ ಬೆಲೆಯನ್ನು ಅಧಿಕೃತವಾಗಿ ನಿರ್ಧರಿಸುತ್ತಿತ್ತು. ಬೆಲೆ ಆಗಾಗ ಮಾರ್ಪಾಡಾಗುತ್ತಿತ್ತು. ಸರ್ಕಾರವೇ ಇದನ್ನು ರೈತರಿಂದ ಅಥವಾ ಉತ್ಪಾದಕರಿಂದ ಕೊಂಡು ಮಾರಾಟ ಮಾಡುತ್ತಿತ್ತು. ಆದರೂ ಖಾಸಗಿ ವಾಣಿಜ್ಯ ಸಂಸ್ಥೆಗಳು ವ್ಯಾಪಾರ ನಡೆಸುತ್ತಿದ್ದರು. ಕ್ರಿ.ಶ.೧೭೨೭ರಲ್ಲಿ ಪೋರ್ಚುಗೀಸರು ಪಣಜಿಯಲ್ಲಿ ನಿರ್ಬಂಧಿಸಿದ ಈಶ್ವರಿ ಮಹಾಮಾಡು ಎಂಬ ಹಡಗು ಬಿದನೂರಿನ ರಾಜ ಪ್ರತಿನಿಧಿ ನಿರ್ವಾಣಯ್ಯನಿಗೆ ಸೇರಿತ್ತು. ಅರೇಬಿಯಾದಲ್ಲಿ ಕುದುರೆಗಳನ್ನು ಕೊಂಡು ಬಿದನೂರಿಗೆ ಈ ಹಡಗಿನಲ್ಲಿ ಸಾಗಿಸುತ್ತಿದ್ದರು. ಇದಕ್ಕೆ ತಮ್ಮ ಅನುಮತಿಯಿರಲಿಲ್ಲ ಎಂದು ಪೋರ್ಚುಗೀಸರು ಕಾರಣ ನೀಡಿದರು.(ಶಾಸ್ತ್ರಿ,೧೯೭೨:೧೫೩), ಅಂದರೆ ಸ್ಥಳೀಯ ಸಂಸ್ಥಾನಗಳು ಯುರೋಪಿಯನ್ನರೊಂದಿಗೆ ವ್ಯಾಪಾರ ಒಪ್ಪಂದ ಮಾಡಿಕೊಳ್ಳಬೇಕಿತ್ತು. 'ಮಂಗಳೂರಿನ' ವಿಷ್ಣುದಾಸನು ನಾಲ್ಕು ಹಡಗುಗಳ ಒಡೆಯನಾಗಿದ್ದನು. ಪೋರ್ಚುಗೀಸರಿಗೆ ಅವಶ್ಯಕವಾದ ಬಹುಪಾಲು ವಸ್ತುಗಳನ್ನು ಇವನೇ ಪೂರೈಕೆ ಮಾಡುತ್ತಿದ್ದನು. ಇವನು ಪೋರ್ಚುಗೀಸರಿಂದ ಜಲಯಾನದ ಅಧಿಕಾರವನ್ನು ಪಡೆದು ಪರ್ಶಿಯಾ ದೇಶಗಳೊಂದಿಗೂ ವ್ಯಾಪಾರ ನಡೆಸುತ್ತಿದ್ದನು(ಕಲಬುರ್ಗಿ,ರಾಯಭಟ್ಟ,೧೯೯೪:೨೯೨). ಪರವಾನಿಗೆಯ ಪತ್ರವಿಲ್ಲದೆ ಯಾವುದೇ ಹಡಗುಗಳು ಸರಕುಗಳನ್ನು ವಿದೇಶಕ್ಕೆ ಸಾಗಿಸುತ್ತಿರಲ್ಲ.

ಪೋರ್ಚುಗೀಸರು ಸಾಗರೋತ್ತರ ವ್ಯಾಪಾರ ಕುರಿತಂತೆ ತಮ್ಮದೇ ಆದ ನಿಯಮಗಳನ್ನು ರೂಪಿಸಿದ್ದರು. ಅವರು ಸಮುದ್ರಗಳ ಮೇಲೆ ಹಿಡಿತ ಸಾಧಿಸಬೇಕೆಂಬ ಹಂಬಲದಿಂದ ಬೇರೆ ಯಾವ ಹಡಗುಗಳು ಸಮುದ್ರದ ಮೇಲೆ ಅವರ ಒಪ್ಪಿಗೆ ಇಲ್ಲದೆ ಹೋಗುವ ಆಗಿರಲಿಲ್ಲ. ಪೋರ್ಚುಗೀಸರು ಜಲಮಾರ್ಗಗಳ ಮೂಲಕ ನಡೆಯುವ ವ್ಯಾಪಾರದಲ್ಲಿ ತಮ್ಮ ಸ್ಥಾನ ಗಿಟ್ಟಿಗೊಳಿಸಿಕೊಂಡಿದ್ದರು ಎಂಬುದಕ್ಕೆ ಸಂಜಯ್ ಸುಬ್ರಮಣ್ಯಂ ಅವರ ಬರವಣಿಗೆಯ ಮೂಲಕ ಗಮನಿಸಬಹುದು ಹಾಗೂ ಪೋರ್ಚುಗೀಸರ ಸುಂಕದ ಠಾಣವನ್ನು ಗೋವಾದಲ್ಲಿ ಆರಂಭಿಸಿದ್ದರು. ೧೬೦೮ರ ಒಂದು ಆದೇಶವು ಈ ಮಾಹಿತಿಯನ್ನು ಸ್ಪಷ್ಟಪಡಿಸುತ್ತದೆ. ಅಕ್ಕಿ ವ್ಯಾಪಾರದಲ್ಲಿ ಪ್ರಸಿದ್ಧವಾಗಿದ್ದ ಬಂದರು ಪ್ರದೇಶವಾದ ಬಸ್ರೂರು ಮೂಲಕ ಹೊರಡುವ ಎಲ್ಲ ಹಡಗುಗಳು ಗೋವಾ ಮಾರ್ಗದ ಮೂಲಕವೇ ಸಾಗಬೇಕು. ಆ ಮಾರ್ಗವಾಗಿ ವ್ಯಾಪಾರ ನಡೆದರೆ ಮಾತ್ರ

ತೆರಿಗೆಯಲ್ಲಿ ವಿನಾಯಿತಿ ನೀಡಲಾಗುವುದು(ಸುಬ್ರಮಣ್ಯಂ,೧೯೯೦:೩೩). ಈ ಮೂಲಕ ಬಸ್ರೂರಿಗೆ ಕೊಚ್ಚಿನ್, ಚೀನಾ, ಮಲಾಕ್ಕಾ ಉತ್ತರ ಭಾಗಗಳಿಂದ ಬರುವ ಎಲ್ಲ ಹಡಗುಗಳು ಗೋವಾದಲ್ಲಿ ಮಾತ್ರ ಸರಕುಗಳನ್ನು ಇಳಿಸುವುದಕ್ಕೆ ಅವಕಾಶ ನಿಯಮ ವಿಧಿಸಿದ್ದರು. ಇದರಿಂದ ತಿಳಿಯುವುದೆಂದರೆ ಮಧ್ಯೆ ಹಡಗು ನಿಲ್ಲಿಸಿದರೆ ಸರಕುಗಳು ಬದಲಾಗುತ್ತವೆ ಎಂಬ ಕಾರಣವಿದ್ದಂತೆ ತಿಳಿಯುತ್ತದೆ. ಆದ್ದರಿಂದ ಪೋರ್ಚುಗೀಸರು ಕರ್ನಾಟಕದ ಕರಾವಳಿಯಲ್ಲಿ ಅಕ್ಕಿ ಮತ್ತು ಕರಿಮೆಣಸಿನ ವ್ಯಾಪಾರವನ್ನು ವಿಜಯನಗರೋತ್ತರ ಕಾಲದಲ್ಲಿ ಹೆಚ್ಚಾಗಿ ಗುರುತಿಸಿಕೊಂಡರು. ಪೋರ್ಚುಗೀಸರು ಕರ್ನಾಟಕದ ಕರಾವಳಿ ಭಾಗದಲ್ಲಿ ಭಟ್ಕಳ, ಹೊನ್ನಾವರ, ಗಂಗೊಳ್ಳಿ, ಬಂದರುಗಳ ಮೂಲಕ ಅವರ ವ್ಯಾಪಾರ ನಡೆಸುತ್ತಿದ್ದರು. ಕರ್ನಾಟಕದ ಈ ಭಾಗದಲ್ಲಿ ವ್ಯಾಪಾರ-ವಾಣಿಜ್ಯ ನಡೆಸುವಂತಹ ಸಂದರ್ಭದಲ್ಲಿ ಹಲವಾರು ಸಂಘರ್ಷಗಳು ನಡೆಯುತ್ತಿದ್ದವು. ಯಾವುದೇ ಒಂದು ಹೊಸ ವ್ಯವಸ್ಥೆಯು ಬಂದಾಗ ಆ ವ್ಯವಸ್ಥೆಗೆ ಹೊಂದಿಕೊಳ್ಳುವಂತಹ ಸಂದರ್ಭದಲ್ಲಿ ಹಲವಾರು ಸಂಘರ್ಷಗಳಾಗಿದ್ದು ಚರಿತ್ರೆಯ ಪುಟಗಳಲ್ಲಿ ಸದಾ ಪುನರಾವರ್ತನೆ ಆಗುತ್ತಿರುತ್ತವೆ. ವಿಜಯನಗರೋತ್ತರ ಕಾಲಘಟ್ಟವು ಇದಕ್ಕೆ ಹೊರತಾಗಿಲ್ಲ. ಕರ್ನಾಟಕದ ಕರಾವಳಿ ಭಾಗಕ್ಕೆ ಪೋರ್ಚುಗೀಸರು ಬಂದಾಗ ಇದುವರೆಗೂ ವ್ಯಾಪಾರದಲ್ಲಿ ಗುರುತಿಸಿಕೊಂಡ ಸಮುದಾಯಗಳು ತಮ್ಮ ಸ್ಥಿರತೆ ಕಳೆದುಕೊಂಡವು. ಕ್ರೈಸ್ತಧರ್ಮವು ಕರ್ನಾಟಕದ ಕರಾವಳಿಯನ್ನು ಪ್ರವೇಶಿಸಿತು. ಇದರಿಂದ ಕರಾವಳಿ ಅನ್ಯಧರ್ಮ ಮತ್ತು ಸಂಸ್ಕೃತಿಗಳನ್ನೊಳಗೊಂಡ ಸಂಪ್ರದಾಯಗಳು ಅಸ್ತಿತ್ವಕ್ಕೆ ಬಂದವು.

ಕ್ರಿ.ಶ.೧೫೬೩ಕ್ಕಿಂತ ಪೂರ್ವದಿಂದಲೇ ಪೋರ್ಚುಗೀಸರು ಕರಾವಳಿ ಕರ್ನಾಟಕದ ಭಟ್ಕಳ ಹೊನ್ನಾವರ ಬಸ್ರೂರಿನಲ್ಲಿ ಗುರುತಿಸಿಕೊಂಡಿದ್ದರು. ಇಲ್ಲಿ ದೊರೆಯುವ ಅಕ್ಕಿಯನ್ನು ಗೋವಾಕ್ಕೆ ಸರಬರಾಜು ಮಾಡುತ್ತಿದ್ದರು. ಅದು ಅಲ್ಲಿಂದ ಪೋರ್ಚುಗಲ್‌ಗೆ ತಲುಪುತ್ತಿತ್ತು. ೧೫೬೭ರಲ್ಲಿ ಪೋರ್ಚುಗಲ್‌ನ ಗವರ್ನರ್ ಅಂಟಿಯೊಡಿ ನೊರೋನಾ ಮಂಗಳೂರು ಬಂದರು ಮತ್ತು ಉಲ್ಲಾಳದ ರಾಣಿಯ ವಿರುದ್ಧ ದಂಡಯಾತ್ರೆ ನಡೆಸಿದರು. ಈ ದಂಡಯಾತ್ರೆಯಲ್ಲಿ ಅಪಾರ ಸಾವು ನೋವು ಸಂಭವಿಸಿದವು ಈ ಹೋರಾಟದಿಂದ ಮಂಗಳೂರು ಬಂದರು ಪ್ರದೇಶವನ್ನು ವಶಪಡಿಸಿಕೊಂಡರು. ಇದೇ ವೇಳೆಯಲ್ಲಿ ೧೫೬೮ರ ಕೊನೆಯಲ್ಲಿ ಹೊಸ ವೈಸ್‌ರಾಯ್ ನೇಮಕವಾಗಿ ಡಿ.ಲೂಯಿಸ, ಡಿ ಅಟಾಟೆ ಹೊನ್ನಾವರ ಮತ್ತು ಬಸ್ರೂರು ಬಂದರುಗಳಲ್ಲಿ ಇದೇ ರೀತಿಯ ದಂಡ ಯಾತ್ರೆಯನ್ನು ನಡೆಸಿದ ಇಲ್ಲಿ ಇದುವರೆಗೂ ವ್ಯಾಪಾರದಲ್ಲಿ ಗುರುತಿಸಿಕೊಂಡಿದ್ದ ಅರಬ್ಬರು ವ್ಯಾಪಾರದಿಂದ ಹಿಂದೆ ಉಳಿದರು ಹಾಗೂ ಈ ಬಂದರು ಪ್ರದೇಶದ ಮೇಲೆ ಲೂಟಿ ಮಾಡಿದ್ದರಿಂದ ಈ ಬಂದರುಗಳು ಸಹ ಸೂರೆಗೊಂಡವು. ಈ ಮೂಲಕ ಅಲ್ಲಿ ಬಂದು ಕಾರ್ಖಾನೆಯನ್ನು ಮರುಸ್ಥಾಪಿಸಿ ವಾರ್ಷಿಕ ಕಪ್ಪ ಕೊಡುವಂತೆ ತಿಳಿಸಿತ್ತು(ಸುಬ್ರಮಣ್ಯ೧೯೯೮:೮೦).

ಇದೇ ವೇಳೆಯಲ್ಲಿ ಕುಂದಾಪುರದಲ್ಲಿ ಸಣ್ಣಕೋಟೆಯನ್ನು ವಶಪಡಿಸಿಕೊಂಡರು. ಈ ಕೋಟೆಯನ್ನು ಅಲ್ಲಿನ ಸ್ಥಳೀಯ ವ್ಯಾಪಾರಿಗಳು ನಿರ್ವಹಿಸುತ್ತಿದ್ದರು. ಸ್ಥಳೀಯ ವ್ಯಾಪಾರಿಗಳ ಅಧೀನದಲ್ಲಿದ್ದ ಈ ಕೋಟೆಯನ್ನು ವಶಪಡಿಸಿಕೊಂಡು ಸಾಂತಾ ಉಜಿಯಾ ಎಂದು ಆ ಕೋಟೆಗೆ ನಾಮಕರಣ ಮಾಡಿದರು. ಈ ಮೂಲಕ ಸ್ಥಳೀಯ ವ್ಯಾಪಾರಿಗಳೊಂದಿಗೆ ಹೋರಾಟದಲ್ಲಿ ತೊಡಗಿ ತಮ್ಮ

ಅಸ್ತಿತ್ವವನ್ನು ಕಳೆದುಕೊಂಡರು. ಈ ಕೋಟೆಯನ್ನು ವಶಪಡಿಸಿಕೊಂಡ ನಂತರ ಅಕ್ಕಿ ಮಾತ್ರವಲ್ಲದೆ ಕರಿಮೆಣಸನ್ನು ರವಾನಿಸಬೇಕೆಂದು ಒಪ್ಪಂದ ಮಾಡಿಕೊಂಡರು. ಈ ಹಿನ್ನೆಲೆಯಲ್ಲಿ ಅಲ್ಲಿ ದೊರೆಯುವ ವಸ್ತುಗಳನ್ನು ಸಂಗ್ರಹಿಸಲು ಮಂಗಳೂರು ಮತ್ತು ಬಸ್ರೂರುಗಳಲ್ಲಿ ಖಾತೆಯನ್ನು ತೆರೆದರು ಮಂಗಳೂರಿನಲ್ಲಿ ೧೬೫೦ರವರೆಗೆ ಇದು ಅಸ್ತಿತ್ವದಲ್ಲಿತ್ತು(ಸುಬ್ರಮಣ್ಯ೧೯೯೮:೮೦). ಈ ಮೂಲಕ ಕರಾವಳಿ ಕರ್ನಾಟಕದಲ್ಲಿ ಅಕ್ಕಿ ವ್ಯಾಪಾರದ ಜೊತೆ ಕರಿಮೆಣಸಿನ ವ್ಯಾಪಾರವನ್ನು ಆರಂಭಿಸಿದ ಮಾಹಿತಿಯು ದೊರೆಯುತ್ತದೆ. ಆರಂಭದಿಂದ ವ್ಯಾಪಾರದಲ್ಲಿ ಗುರುತಿಸಿಕೊಂಡಿದ್ದ ಸ್ಥಳೀಯ ವ್ಯಾಪಾರಿಗಳು ತಮ್ಮ ಅಸ್ತಿತ್ವವನ್ನು ಮರಳಿ ಪಡೆಯಲು ಹೋರಾಟ ನಡೆಸುತ್ತಿದ್ದರು. ಹೀಗೆ ಪೋರ್ಚುಗೀಸರ ಕಾಲದಲ್ಲಿ ಕರಾವಳಿ ಕರ್ನಾಟಕದ ವಾಣಿಜ್ಯೋದ್ಯಮದಲ್ಲಿ ಸಂಘರ್ಷಗಳು ಸಂಭವಿಸಿದವು. ಈ ಮೂಲಕ ಕರ್ನಾಟಕದ ಕರಾವಳಿ ಭಾಗದಲ್ಲಿ ವಾರ್ಷಿಕ ಕಪ್ಪವನ್ನು ಬಂದರು ಪ್ರದೇಶಗಳಿಂದ ಸ್ವೀಕರಿಸಲಾರಂಭಿಸಿದರು. ಕರ್ನಾಟಕದ ಕರಾವಳಿಯ ಸ್ಥಳೀಯ ಪಾಳೇಪಟ್ಟುಗಳಿಂದಲೂ ತೊಳೆದಾರರು, ಹೊನ್ನಕಂಬಳಿಯರು ಮೊದಲಾದ ಸಾಮಂತರಿಂದ ಮನ್ನೆಯವರು ವಾರ್ಷಿಕ ಕಪ್ಪ ವಸೂಲು ಮಾಡತೊಡಗಿದ್ದರು.

ಪೋರ್ಚುಗೀಸರಿಗೆ ವಾರ್ಷಿಕ ಕಪ್ಪ ಕೊಡದಿದ್ದಾಗ ಅಲ್ಲಿನ ಬಂದರುಗಳನ್ನು ಸುಡುತ್ತಿದ್ದರು. ೧೫೧೫ ಮತ್ತು ೧೫೩೦ ಮಂಗಳೂರು, ೧೫೪೨ರಲ್ಲಿ ಭಟ್ಕಳವನ್ನು ಅವರು ಸುಟ್ಟು ಸೂರೆ ಮಾಡಿದ ಪ್ರಕರಣಗಳು ನಡೆದಿವೆ(ಹಂಪನಾ,೨೦೧೬:೮೬). ಹೀಗೆ ಕರಾವಳಿ ಕರ್ನಾಟಕದಲ್ಲಿ ಹಿಂಸಾತ್ಮಕ ರೂಪಗಳು ಆ ಕಾಲಘಟ್ಟದಲ್ಲಿ ಸಂಭವಿಸಿದವು.

ಕರಾವಳಿ ಕರ್ನಾಟಕದಲ್ಲಿ ಅಕ್ಕಿ ಪ್ರಮುಖ ರಫ್ತು ಸರಕಾಗಿದ್ದು ಒಂದೊಂದು ಬಂದರುಗಳಲ್ಲಿ ಒಂದೊಂದು ರೀತಿ ಅಕ್ಕಿಗೆ ಪ್ರಸಿದ್ಧವಾಗಿದ್ದವು. ಬೇರೆ ಬೇರೆ ಬಂದರುಗಳಿಂದ ಬೇರೆ ಬೇರೆ ಅಕ್ಕಿ ಸರಬರಾಜಾಗುತ್ತಿದ್ದವು. ಕೆನರಾ ಬಂದರುಗಳಾದ ಭಟ್ಕಳ, ಬಸ್ರೂರು, ಬಾರಕೂರು ಉತ್ತಮ ಬಿಳಿ ಅಕ್ಕಿಯನ್ನು ರಫ್ತು ಮಾಡುತ್ತಿದ್ದರು. ಆಗ್ನೇಯ ಬಂದರುಗಳಾದ ಮಂಗಳೂರು ಕುಂಬ್ಳಾ ಹೆಚ್ಚಾಗಿ ಒರಟಾದ ಕೆಂಪು ಮತ್ತು ಕಪ್ಪು ಅಕ್ಕಿಯನ್ನು ಮಲಬಾರಿನ ಕಣ್ಣನೂರಿಗೆ ರಫ್ತು ಮಾಡಲಾಗಿತ್ತು. ಹಾಗೆಯೇ ಉತ್ತರ ಕೊಂಕಣಕ್ಕೆ ಪರ್ಶಿಯನ್ ಕೊಲ್ಲಿ ಮತ್ತು ಕೆಂಪು ಸಮುದ್ರದ ಮೂಲಕ ರಫ್ತು ಮಾಡಿದ ಅಕ್ಕಿಯನ್ನು ವಿದೇಶಿ ಬಂದರುಗಳಿಗೆ ಸಾಗಿಸಲಾಯಿತು(ಸಾಕಿ(೧)೧೯೯೮:೩೪೦) ಬಸ್ರೂರು ಪ್ರದೇಶದಲ್ಲಿ ಬೆಳೆದ ಅಕ್ಕಿಯನ್ನು ಕೇರಳ, ಗುಜರಾತ್, ಪರ್ಶಿಯನ್ ಕೊಲ್ಲಿ ಮತ್ತು ಈಜಿಪ್ಟ್ ಆಫ್ರಿಕಾಗಳಿಗೆ ರಫ್ತು ಮಾಡಲಾಗುತ್ತಿತ್ತು. ಈ ವಿದೇಶಿಯ ವ್ಯಾಪಾರದಲ್ಲಿ ನಖರರು ಎಂಬ ವ್ಯಾಪಾರಿಗಳು ಸಾಗರೋತ್ತರದೊಂದಿಗೆ ವ್ಯಾಪಾರ ನಡೆಸುವ ಸಂಘವಾಗಿತ್ತು. ಇವರು ಸ್ಥಳೀಯರಾಗಿದ್ದು ವಿದೇಶಿಯ ವ್ಯಾಪಾರದಲ್ಲಿ ಪ್ರಮುಖವಾಗಿ ಗುರುತಿಸಿಕೊಂಡವರಾಗಿದ್ದಾರೆ.

ಅಕ್ಕಿಯ ಆಂತರಿಕ ವ್ಯಾಪಾರವನ್ನು ಸ್ಥಳೀಯ ವ್ಯಾಪಾರಿ ವರ್ಗಗಳು ನಿರ್ವಹಿಸಿದವು. ಅದು ಬಂಟ ರೈತ ಶ್ರೇಣಿಯಿಂದ ಹುಟ್ಟಿಕೊಂಡ ಅವರು ಬ್ರಾಹ್ಮಣರ ಏಕಸ್ವಾಮ್ಯದ ಅಡಿಯಲ್ಲಿ ಉಳಿದಿದ್ದ ಕಿರಿದಾದ ಕರಾವಳಿ ಪ್ರದೇಶದ ಪೂರ್ವ ಭೂ ಮಾಲೀಕರಾಗಿದ್ದರು(ಸಾಕಿ,(೧)೧೯೯೮:೩೪೨), ಸಂಜಯ್ ಸುಬ್ರಮಣ್ಯಂ ಅವರು ಕರ್ನಾಟಕದ ಕರಾವಳಿ ಭಾಗದಲ್ಲಿ ಬಂದರು ಪ್ರದೇಶಗಳಲ್ಲಿ

ವ್ಯಾಪಾರ ಮಾಡುವವರನ್ನು ಪೋರ್ಚುಗೀಸರು "ಚಾಟಿನ್ಸ್ ದಿ ಬಾರ್ಸಿಲರ್ ಚೋರ್" ಎಂದು ಎಂದಿದ್ದಾರೆ. ವಿಜಯನಗರ ಮತ್ತು ವಿಜಯನಗರೋತ್ತರ ಕಾಲಾವಧಿಯಲ್ಲಿ ಅಕ್ಕಿ ವ್ಯಾಪಾರವು ಪ್ರಮುಖ ವಿದೇಶಿ ವ್ಯಾಪಾರದ ರಫ್ತಿನ ಸರಕಾಗಿ ಕಂಡುಬರುತ್ತದೆ.

ಕರಾವಳಿ ಕರ್ನಾಟಕದಲ್ಲಿ ಅಕ್ಕಿ ಪ್ರಮುಖವಾಗಿದೆ. ಕೃಷಿ ಉತ್ಪನ್ನವಾದ ಬಸ್ರೂರು ಸುತ್ತಮುತ್ತಲಿನ ಪ್ರದೇಶವು ಅಕ್ಕಿ ಬೆಳೆಯುವ ಕೃಷಿಯೋಗ್ಯ ಪ್ರದೇಶವಾಗಿತ್ತು ಎಂದು ಸಂಜಯ್ ಸುಬ್ರಮಣ್ಯಂ ಅವರು ಅಭಿಪ್ರಾಯ ಪಡುತ್ತಾರೆ. ಗಂಗೊಳ್ಳಿ ಮತ್ತು ಬಸ್ರೂರಿನ ಪರಿಸರ ನಿಸರ್ಗದತ್ತವಾಗಿ ನಿರ್ಮಿತವಾದ ಬಂದರು ನಗರವಾಗಿದ್ದವು. ಇಲ್ಲಿ ಕೃಷಿ ಉತ್ಪನ್ನವಾದ ಅಕ್ಕಿಯು ಅಲ್ಲಿ ಸಂಪತ್ಭರಿತವಾದ ಭೂಮಿ ಇದ್ದುದರಿಂದ ಹೆಚ್ಚು ಹೆಚ್ಚು ಬೆಳೆಯುತ್ತಿದ್ದರು. ಉತ್ಪನ್ನವಾಗುವ ಅಕ್ಕಿಯನ್ನು ವಿದೇಶಕ್ಕೆ ರವಾನಿಸಲು ಇವರು ಹಡಗುಗಳನ್ನು ಉಪಯೋಗಿಸುತ್ತಿದ್ದರು. ದಕ್ಷಿಣ ಕನ್ನಡ ಮತ್ತು ಉತ್ತರ ಕನ್ನಡ ಎರಡು ಭಾಗಗಳಲ್ಲಿಯೂ ಅಕ್ಕಿಯನ್ನು ವಿಪುಲವಾಗಿ ಉತ್ಪಾದಿಸುತ್ತಿದ್ದರು. ಹೀಗಾಗಲೇ ವಿವರಿಸಿರುವಂತೆ ಅಕ್ಕಿಯ ಬಳಕೆಯಿಂದ ಅಂದಿನ ಸಮಾಜದ ವರ್ಗವನ್ನು ಗುರುತಿಸಬಹುದು. ಪೋರ್ಚುಗೀಸರು ಕರ್ನಾಟಕದ ಕರಾವಳಿಯಲ್ಲಿ ಆರ್ಥಿಕ ಉದ್ದೇಶದಿಂದ ತಮ್ಮ ಸ್ಥಾನವನ್ನು ಭದ್ರಪಡಿಸಿಕೊಂಡು ಸ್ಥಳೀಯ ವ್ಯಾಪಾರಿಗಳನ್ನು ಧ್ವಂಸಮಾಡುವುದು, ಅವರ ಸಂಪನ್ಮೂಲಗಳನ್ನು ಕೊಳ್ಳುವುದು ಮಾಡುತ್ತಿದ್ದರು. ಇದರಿಂದ ಅವರ ಆರ್ಥಿಕ ಸಾಮರ್ಥ್ಯ ಕಡಿಮೆಯಾಗುತ್ತದೆ ಎಂಬುದು ಪೋರ್ಚುಗೀಸರ ಉದ್ದೇಶವಿತ್ತೆಂದು ಕಾಣುತ್ತದೆ.

ದೇಶೀಯ ವ್ಯಾಪಾರಿಗಳ ಹಡಗುಗಳನ್ನು ಪೋರ್ಚುಗೀಸರು ಮುಳುಗಿಸುತ್ತಿದ್ದರು. ಅವರು ವಶಪಡಿಸಿಕೊಂಡ ಕರ್ನಾಟಕದ ಬಂದರುಗಳಿಂದ ನಿಯಮಿತ ತೆರಿಗೆ ಸಂಗ್ರಹಿಸುತ್ತಿದ್ದರು. ಇದರಿಂದ ರಾಜ್ಯಕ್ಕೆ ಹೆಚ್ಚಿನ ಆದಾಯ ಬರುತ್ತಿದ್ದು ಕರ್ನಾಟಕದ ೧೬ ಬಂದರುಗಳನ್ನು ವಶಪಡಿಸಿಕೊಳ್ಳಬೇಕೆಂಬುದು ಅವರ ಬಯಕೆಯಾಗಿತ್ತು. ಕರ್ನಾಟಕದ ಸಂಪೂರ್ಣ ಕರಾವಳಿ ಭಾಗವು ಪೋರ್ಚುಗೀಸರಿಗೆ ಸೇರಿತ್ತು.

ಪೋರ್ಚುಗೀಸರು ಕರ್ನಾಟಕದ ಕರಾವಳಿಯ ವಿವಿಧ ಭಾಗಗಳಲ್ಲಿ ಕಾರ್ಖಾನೆಗಳನ್ನು ಸ್ಥಾಪಿಸಿದರು. ೧೫೬೮ರಲ್ಲಿ ಮಂಗಳೂರಿನಲ್ಲಿ, ೧೫೮೯ರಲ್ಲಿ ಬಸ್ರೂರಿನಲ್ಲಿ, ೧೬೩೦ರಲ್ಲಿ ಗಂಗೊಳ್ಳಿಯಲ್ಲಿ ಕಾರ್ಖಾನೆಗಳನ್ನು ಸ್ಥಾಪಿಸಿದರು. ಈ ಕಾರ್ಖಾನೆಗಳಿಂದ ಒಳಬರುವ ಮತ್ತು ಹೊರಹೋಗುವ ವ್ಯಾಪಾರದ ಸರಕುಗಳಿಗೆ ಸುಂಕ ಕಟ್ಟಬೇಕಿತ್ತು. ಈ ಸುಂಕ ಸಂಗ್ರಹಣೆಯ ಅಧಿಕಾರಿಗಳು ಸ್ಥಳೀಯ ವ್ಯಾಪಾರಿಗಳಿಗೆ ಕಿರುಕುಳ ನೀಡುತ್ತಿದ್ದರು. ಈ ಸುಂಕದ ಮನೆಗಳು ಶೋಷಣೆಯ ಕೇಂದ್ರಗಳಾಗಿ ರೂಪಿತವಾದವು. ಇದರಿಂದ ಸ್ಥಳೀಯ ವ್ಯಾಪಾರಿಗಳಿಗೆ ಅಪಾರ ನಷ್ಟವಾಯಿತು. ೧೬ನೇ ಶತಮಾನದ ವೇಳೆಗೆ ವ್ಯಾಪಾರದಲ್ಲಿ ಪೋರ್ಚುಗೀಸರು ಸಂಪೂರ್ಣ ಹಿಡಿತ ಸಾಧಿಸಿದರು. ಈ ಮೂಲಕ ಪೋರ್ಚುಗೀಸರ ವ್ಯಾಪಾರ ವಿಸ್ತರಣೆಯಾದ ನಂತರ ಬೃಹತ್ ಹಡಗುಗಳಿಗೆ ಬೆಂಗಾವಲು ಹಡಗುಗಳನ್ನು ಸಂಘಟಿಸಲು ಪ್ರಾರಂಭಿಸಿದರು. ಬಸ್ರೂರಿನಲ್ಲಿ ಮಾತ್ರ ಸ್ಥಳೀಯ ವ್ಯಾಪಾರಿಗಳ ಒಡೆತನದ ೨೦೦ ವ್ಯಾಪಾರಿ ಹಡಗುಗಳು ಇದ್ದವು. ಕಾರ್ಟೇಜ್‌ಗಳು ಮತ್ತು ಬೆಂಗಾವಲುಗಳ ವ್ಯವಸ್ಥೆಯು ೧೮ನೇ ಶತಮಾನದ ಆರಂಭದವರೆಗೂ ಮುನ್ನಡೆದಿದೆ(ಸಾಕಿ,(೧)೧೯೯೮:೩೫೨).

ದಪ್ಪ ಅಕ್ಕಿಯನ್ನು ಬಡಜನರು ಉಪಯೋಗಿಸುತ್ತಿದ್ದರು. ಈ ಅಕ್ಕಿಗೆ ೧೬ನೇ ಶತಮಾನದಲ್ಲಿ ಮಲಬಾರಿಗಳಿಂದ ಅಪಾರ ಬೇಡಿಕೆ ಇತ್ತು. ಮಲಬಾರಿಗಳು ಮಿರ್ಜಾನ್‌ನಿಂದ ಅಕ್ಕಿಯನ್ನು ಒಯ್ಯುತ್ತಿದ್ದರು. ಈ ಕಪ್ಪು ಅಕ್ಕಿಗೆ ಬದಲಾಗಿ ಅವರು ತೆಂಗಿನ ಕಾಯಿ, ತೆಂಗಿನ ಎಣ್ಣೆಯ ಬೆಲ್ಲವನ್ನು ತರಿಸುತ್ತಿದ್ದರು. ಮೆಣಸು, ತಾಳೆ, ಸಕ್ಕರೆ, ಮದ್ಯ ಮೊದಲಾದ ವಸ್ತುಗಳನ್ನು ಹೊನ್ನಾವರದಿಂದ ಕಳುಹಿಸಿಕೊಡಲಾಗುತ್ತಿತ್ತು(ಷೇಕ್‌ಅಲಿ(೩)೧೦೨೮:೩೧೧).

ಬಸ್ರೂರಿನಿಂದ ರಫ್ತು ಮಾಡಿದ ಅಕ್ಕಿಯ ಒಟ್ಟು ಮೌಲ್ಯ ೧೯.೭೫ ಲಕ್ಷಕೆ.ಜಿ. ೧೬೧೧-೧೬೧೬ರ ಅವಧಿಯಲ್ಲಿ, ೧೬೨೩-೧೬೨೮ರ ನಡುವೆ ಸರಾಸರಿ ೨೭.೫೦ ಲಕ್ಷ ಗ್ರಾಂ ೧೬೨೮-೨೯ರಲ್ಲಿ ಕನಿಷ್ಠ ೩೫ ಲಕ್ಷ ಕಿ.ಗ್ರಾಂ. ಅಕ್ಕಿಯನ್ನು ಆ ಬಂದರಿನಿಂದ ಮಾತ್ರ ರಫ್ತು ಮಾಡಲಾಗುತ್ತಿತ್ತು. ೧೬೩೦ರ ವೇಳೆಗೆ ಕೆನರಾದಿಂದ ವ್ಯಾಪಾರವಾಗುವ ಅಕ್ಕಿಯ ಮೌಲ್ಯವು ೧೦೦೦ ಕ್ವಿಂಟಾಲ್ ಕೋಟಿ ಕೆ.ಜಿ. ಈ ಮೂಲಕ ರಫ್ತಾಗುತ್ತಿದ್ದ ಅಕ್ಕಿಗೆ ಗೋವಾಕ್ಕೆ ಹೋಗುತ್ತಿತ್ತು. ಕರಾವಳಿ ಕರ್ನಾಟಕದ ಉತ್ಪಾದನೆಯಾಗುವ ಅಕ್ಕಿಯ ಗೋವಾ ಮಾರುಕಟ್ಟೆಯ ಕೇಂದ್ರವಾಗಿ ಪರಿವರ್ತನೆ ಆಯಿತು (ಸಾಕಿ,(೧)೧೯೯೮:೩೫೩). ಈ ಮೂಲಕ ಕರ್ನಾಟಕದ ಕರಾವಳಿ ಭಾಗವು ರಾಜ್ಯದ ಇತರೆ ಭಾಗಗಳಿಗಿಂತ ಹಿಂದುಳಿದಿದ್ದು ಅಕ್ಕಿ ವ್ಯಾಪಾರದ ಮೂಲಕ ಕರಾವಳಿ ಭಾಗ ಗುರುತಿಸಿಕೊಂಡು ವಸಾಹತುಶಾಹಿಗೆ ಮುಖಾಮುಖಿಯಾದ ಸನ್ನಿವೇಶವನ್ನು ಇಲ್ಲಿ ಗುರುತಿಸಬಹುದಾಗಿದೆ. ೧೬೩೭ರಲ್ಲಿ ಬಸ್ರೂರಿನ ಬಂದರಿನಲ್ಲಿ ಕ್ಯಾಪ್ಟನ್ ಮಾರ್ಟಿನ್ ಟೀಕ್ಸೀರಾಡಿ ಅಜೆವೆಡೊ ಅವರು ಹುದ್ದೆಗೆ ನೇಮಕಗೊಂಡಾಗ ಬಸ್ರೂರಿನಿಂದ ಮಸ್ಕತ್‌ಗೆ ಅಕ್ಕಿ ತುಂಬಿದ ಪಿನ್ನೇಸಗಳನ್ನು ಪ್ರತಿವರ್ಷ ಎರಡು ಕಳುಹಿಸಲು ಅನುಮತಿ ನೀಡಲಾಯಿತು(ಸುಬ್ರಮಣ್ಯಂ೧೯೯೦:೩೮).

ಬಸ್ರೂರಿನಿಂದ ಸರಬರಾಜು ಆಗುತ್ತಿದ್ದ ಅಕ್ಕಿಯು ಗೋವಾಕ್ಕೆ ಮತ್ತು ಮಸ್ಕತ್‌ಗೆ ಮಾತ್ರವಲ್ಲದೆ. ಸಾಂದರ್ಭಿಕವಾಗಿ ಬಸ್ರೂರಿನಿಂದ ಬೇರೆ ಕಡೆ ರವಾನೆಯಾಗುತ್ತಿತ್ತು. ೧೬೩೪ರಲ್ಲಿ ಗೋವಾ ಮತ್ತು ಮಸ್ಕತ್‌ಗೆ ಕಳುಹಿಸಲ್ಪಟ್ಟಿದ್ದನ್ನು ಹೊರತುಪಡಿಸಿ, ಹಿಟ್ಟಿನ ಉತ್ಪಾದನೆ ಅಕ್ಕಿಯನ್ನು ಬಸ್ರೂರ್‌ನಿಂದ ಮೊಜಾಂಬಿಕನಲ್ಲಿರುವ ಪೋರ್ಚುಗೀಸ್ ಕೋಟೆಯಲ್ಲಿ ಸಂಗ್ರಹಿಸಲಾಯಿತು. ಹಾಗೆಯೇ ರಾಜ್ಯದ ನೌಕಾಪಡೆಯನ್ನು ಬೇರೆ ಕಡೆ ನಿರ್ಮಿಸಲು ಕೆನರಾದ ವ್ಯಾಪಾರಿ ರಾಮಕಿವಿಯೊಂದಿಗೆ ಅಕ್ಕಿಗಾಗಿ ಒಂದು ಅದೇಶ ಪಡೆದಿದ್ದರು. ರಾಮ್‌ಕಿವಿ ಮತ್ತು ಅವನ ಸಹೋದರನನ್ನು ಪೋರ್ಚುಗೀಸರು ಗಲ್ಲಿಗೇರಿಸಿದರು. ಇವರನ್ನು ಗಲ್ಲಿಗೇರಿಸಲು ಇರುವ ಮುಖ್ಯ ಕಾರಣವೆಂದರೆ ಅಕ್ಕಿಯನ್ನು ಡಚ್ಚರೊಂದಿಗೆ ವ್ಯಾಪಾರ ಮಾಡಲು ಒಪ್ಪಂದ ಮಾಡಿಕೊಂಡಿದ್ದರೆಂಬುವುದೇ ಮುಖ್ಯ ಕಾರಣವಾಗಿತ್ತು(ಸುಬ್ರಮಣ್ಯಂ: ೧೯೯೦:೩೯). ಇಲ್ಲಿ ಗಮನಿಸಬೇಕಾದ ಒಂದು ಮುಖ್ಯ ಅಂಶವೆಂದರೆ ಪೋರ್ಚುಗೀಸರಿಗೂ ಡಚ್ಚರಿಗೂ ಮಂಗಳೂರು ಮತ್ತು ಬಸ್ರೂರಿನಲ್ಲಿ ಪರಸ್ಪರ ವ್ಯಾಪಾರದ ಪೈಪೋಟಿ ಇತ್ತೆಂದು ಗಮನಿಸಬಹುದಾಗಿದೆ. ಮಧ್ಯವರ್ತಿ ವ್ಯಾಪಾರಿಯು ಬಲಿಯಾದ ಸನ್ನಿವೇಶವನ್ನು ಇಲ್ಲಿ ನೋಡಬಹುದು.

ಬಸ್ರೂರಿನ ಬಂದರಿನಲ್ಲಿ ಸುಮಾರು ಮೂವತ್ತೈದು ಮಂದಿ ಪೋರ್ಚುಗೀಸ್ ವರ್ತಕರು ತಮ್ಮದೇ ಹಡಗುಗಳನ್ನು ಹೊಂದಿದ್ದು ಅನೇಕ ಸಾಗರೋತ್ತರ ವ್ಯಾಪಾರ ವಹಿವಾಟಿನಲ್ಲಿ ಗುರುತಿಸಿಕೊಂಡಿದ್ದರು ರೈತರು ಮತ್ತು ವರ್ತಕರು ಭತ್ತವನ್ನು ಈ ಕೇಂದ್ರದಲ್ಲಿ ವ್ಯಾಪಾರ ಮಾಡುತ್ತಿದ್ದರು.

ವಾಣಿಜ್ಯ ಚಟುವಟಿಕೆಗಳಲ್ಲಿ ಸಾರಸ್ವತ ವರ್ತಕರು ಮುಂಚೂಣಿಯಲ್ಲಿದ್ದರು. ಇವರು ಸಮೀಪದ ಬಸ್ರೂರು ಬಂದರಿಗೆ ತಂದು ಮಸ್ಕತ್‌ನಿಂದ ಕೆಂಪುಸಮುದ್ರ, ಪರ್ಶಿಯನ್, ಕೊಲ್ಲಿ ರಾಷ್ಟ್ರಗಳಿಗೆ ರಫ್ತು ಮಾಡುತ್ತಿದ್ದರು. ೧೫೭೦ ಮತ್ತು ೧೫೮೦ರ ದಶಕದಲ್ಲಿ ಈ ಸಾರಸ್ವತ ಸಗಟು ವ್ಯಾಪಾರಿ ಮತ್ತು ರಫ್ತುದಾರರು ಪೋರ್ಚುಗೀಸರಿಂದ ಪೈಪೋಟಿ ಎದುರಿಸಬೇಕಾಯಿತು. ಇವರು ಮೂಲತಃ ಗೋವಾ ಭಾಗದಿಂದ ಬಂದವರಾಗಿದ್ದರು. ಈ ಸ್ಥಳೀಯ ಸಾರಸ್ವತ ವರ್ತಕರ ಒತ್ತಡಕ್ಕೆ ಮಣಿದು ಪೋರ್ಚುಗೀಸರು ಇಲ್ಲಿ ತೆರೆದಿದ್ದ ಸುಂಕದ ಕಟ್ಟೆಯನ್ನು ಮುಚ್ಚಬೇಕಾಯಿತು. ಅಂದರೆ ಭತ್ತ ವ್ಯಾಪಾರದಲ್ಲಿ ತಾವು ಹೊಂದಿದ್ದ ವ್ಯಾಪಾರಿ ಏಕಸ್ವಾಮ್ಯ ಅಲ್ಪಾವಧಿಯಲ್ಲಿಯೇ ಅಂತ್ಯ ಕಾಣಬೇಕಾಯಿತು. ಆದರೂ ಪೋರ್ಚುಗೀಸರು ಮತ್ತು ಸಾರಸ್ವತ ವರ್ತಕ ಸಮುದಾಯ ಸಮನಾಗಿಯೇ ಭತ್ತದ ವ್ಯಾಪಾರದಲ್ಲಿ ಪಾಲ್ಗೊಂಡಿತ್ತು(ಚಂದ್ರಶೇಖರ್,ರಾವ್.(ಜಿ)೨೦೧೬:೮೦-೮೧). ಈ ಮೂಲಕ ತಿಳಿಯುವ ಅಂಶವೆಂದರೆ ಕರ್ನಾಟಕದ ಕರಾವಳಿ ಭಾಗದಲ್ಲಿ ಆಳ್ವಿಕೆ ಮಾಡಿದ ಸ್ಥಳೀಯ ವರ್ತಕರು ಯುರೋಪಿಯನ್ನರಿಗೆ ಸಮನಾದ ವಿದೇಶಿಯ ವ್ಯಾಪಾರದಲ್ಲಿ ತೊಡಗಿ ಅವರಿಗೆ ಪೈಪೋಟಿ ಒಡ್ಡಿಅವರ ವ್ಯಾಪಾರಿ ಕಾರ್ಖಾನೆಯನ್ನು ಮುಚ್ಚಿಸಿರುವುದು ಚರಿತ್ರೆಯ ಪುಟದಲ್ಲಿದೆ.

ಅಕ್ಕಿ ವ್ಯಾಪಾರದಲ್ಲಿ ಪೋರ್ಚುಗೀಸರು ಅಪಾರವಾದ ಲಾಭವನ್ನು ಪಡೆದಿರುವುದು ಕಂಡುಬರುತ್ತದೆ. ಅಲ್ಲದೆ ಅಕ್ಕಿ ವ್ಯಾಪಾರವನ್ನು ಹೆಚ್ಚಾಗಿ ಬಸ್ರೂರಿನ ಮೂಲಕವೇ ಸಾಗಿಸಲು ಅದು ಆಯಕಟ್ಟಿನ ಪ್ರದೇಶವಾಗಿದೆ ಹಾಗೂ ಅಕ್ಕಿ ಬೆಳೆಗೆ ಕೃಷಿಯೋಗ್ಯ ಭೂಮಿಯಾಗಿದೆ. ಪೋರ್ಚುಗೀಸರಿಗೂ ಡಚ್ಚರಿಗೂ ಕರಾವಳಿ ಕರ್ನಾಟಕದಲ್ಲಿ ಯುದ್ಧಗಳು ತೀವ್ರವಾದಾಗ ಸರಕುಗಳನ್ನು ಬೇರೆ ಬೇರೆ ಪ್ರದೇಶಗಳಲ್ಲಿ ರಕ್ಷಿಸಿ ಸಂಗ್ರಹಿಸಿಡಲಾಗುತ್ತಿತ್ತು. ಗ್ಯಾರಿಸನ್ ಎಂದರೆ ಅಕ್ಕಿಯನ್ನು ಸಂಗ್ರಹಿಸುವಂತಹವುಗಳು. ಇವುಗಳನ್ನು ಕೋರಮಂಡಲ್ ಕರಾವಳಿ ಭಾಗಕ್ಕೆ ಆ ಸರಕುಗಳನ್ನು ಸಂಗ್ರಹಿಸಿಡುತ್ತಿರುವುದು ಕಂಡುಬರುತ್ತದೆ. ಕರಾವಳಿ ಕರ್ನಾಟಕದಲ್ಲಿ ಪೋರ್ಚುಗೀಸರು ಬಸ್ರೂರಿನ ಬಂದರಿನಲ್ಲಿ ವ್ಯಾಪಾರವನ್ನು ಕಳೆದುಕೊಂಡ ನಂತರ ಅಲ್ಲಿನ ವ್ಯಾಪಾರವು ಸ್ಥಳೀಯ ಸಾರಸ್ವತ ಬ್ರಾಹ್ಮಣ ವರ್ಗಗಳಲ್ಲಿ ವ್ಯಾಪಾರ ಅಧಿಕಾರ ಕೇಂದ್ರೀಕೃತಗೊಂಡಿತ್ತು. ಪೋರ್ಚುಗೀಸರ ವಿದೇಶೀಯರ ವ್ಯಾಪಾರ ಸಾರಸ್ವತರಿಗೆ ವ್ಯಾಪಾರ ಸ್ಥಿತ್ಯಂತರಗೊಂಡ ಅಂಶವು ಇಲ್ಲಿ ಕಂಡುಬರುತ್ತದೆ.

ಪೋರ್ಚುಗೀಸರು ಬಸ್ರೂರು ಬಂದರನ್ನು ಕೇಂದ್ರವಾಗಿಸಿಕೊಂಡು ಅಕ್ಕಿ ವ್ಯಾಪಾರವನ್ನು ನಿರ್ವಹಿಸಿದ್ದರು. ಪೋರ್ಚುಗೀಸರ ಅವನತಿಯ ನಂತರ ಬ್ರಿಟಿಶರು ಈಸ್ಟ್ ಇಂಡಿಯಾ ಕಂಪನಿಯ ದಾಖಲೆಗಳಲ್ಲಿ ತಿಳಿಸಿರುವಂತೆ ಮಂಗಳೂರು ಪ್ರದೇಶವನ್ನು ಕೇಂದ್ರವನ್ನಾಗಿ ಮಾಡಿಕೊಂಡು ಅಕ್ಕಿ ವ್ಯಾಪಾರ ಮಾಡಿದ್ದರು. ಬ್ರಿಟಿಶರು(ಷೇಕ್ ಅಲಿ,೨೦೧೮:೩೧೨). ಈ ಮೂಲಕ ಬಸ್ರೂರು ಪೋರ್ಚುಗೀಸರ ಪ್ರಮುಖ ಅಕ್ಕಿ ವ್ಯಾಪಾರದ ಕೇಂದ್ರವಾಗಿದ್ದು ನಿರಂತರ ತನ್ನ ಬದಲಾಣೆಯ ಸ್ಥಿತ್ಯಂತರಕ್ಕೆ ಒಳಗಾಗಿ ಅಕ್ಕಿ ವ್ಯಾಪಾರದಲ್ಲಿ ತನ್ನ ಹಳೆಯ ಸ್ಥಾನವನ್ನು ಕಳೆದುಕೊಂಡಿತ್ತು. ಬ್ರಿಟಿಶರು ಮಂಗಳೂರನ್ನು ಕೇಂದ್ರಸ್ಥಾನವಾಗಿ ಮಾಡಿಕೊಂಡು ವಿದೇಶೀಯ ವ್ಯಾಪಾರದಲ್ಲಿ ತೊಡಗಿಕೊಂಡರು. ಹೀಗೆ ಬಂದರು ಪ್ರದೇಶಗಳು ಆಯಾ ಸಂದರ್ಭದ ಸ್ಥಿತ್ಯಂತರಕ್ಕೆ ಒಳಪಟ್ಟವು.

ಮೈಸೂರು ಸಂಸ್ಥಾನದಲ್ಲಿ ಟಿಪ್ಪು ಸುಲ್ತಾನನ ಆಳ್ವಿಕೆಯ ವೇಳೆಯಲ್ಲಿ ಭತ್ತದ ವ್ಯಾಪಾರವು ತೀವ್ರವಾಗಿ ನಡೆಯುತ್ತಿತ್ತು. ಟಿಪ್ಪು ಸುಲ್ತಾನನ ದಲ್ಲಾಳಿಗಳ ಮೂಲಕ ಮಾಡುವ ವ್ಯಾಪಾರಕ್ಕೆ ಸಂಪೂರ್ಣವಾಗಿ ಕಡಿವಾಣವನ್ನು ಹಾಕಿದನು. ಟಿಪ್ಪುವೇ ನೇರವಾಗಿ ಮಸ್ಕತ್ ರಾಜ್ಯಕ್ಕೆ ಭತ್ತವನ್ನು ರಫ್ತು ಮಾಡುವ ಕಾರ್ಯವನ್ನು ನಿರ್ವಹಿಸುವಲ್ಲಿ ನಿರತನಾದನು. ಮಸ್ಕತ್‌ನ ಅರಸ ಮೈಸೂರು ವ್ಯಾಪಾರಿ ಕೋಠಿಗಳ ವ್ಯಾಪಾರಸ್ಥರಿಂದ ಅನುಮತಿ ಪಡೆದು ಯುರೋಪಿನ ವ್ಯಾಪಾರಸ್ಥರು ಭತ್ತ ವ್ಯಾಪಾರದಲ್ಲಿ ಏಕಸ್ವಾಮ್ಯವನ್ನು ಪಡೆದುಕೊಂಡಿದ್ದಾರೆ ಎಂಬುದಾಗಿ ಟಿಪ್ಪುವಿಗೆ ಪತ್ರವನ್ನು ಬರೆದನು. ಓಮನ್, ಮಂಗಳೂರಿನಿಂದ ಭತ್ತದ ಜೊತೆಗೆ ಮಲಬಾರ್‌ನಿಂದ(ವಿಶೇಷವಾಗಿ ಕಲ್ಲಿಕೋಟೆಯಿಂದ) ತೇಗದ ಮರ ಆಮದನ್ನು ಮಾಡಿಕೊಳ್ಳುತ್ತಿತ್ತು. ಈ ಸಂಸ್ಥಾನ ಪರ್ಶಿಯನ್ ಕೊಲ್ಲಿಯಲ್ಲಿ ಹಡಗು ನಿರ್ಮಾಣ ಕಾರ್ಖಾನೆಯನ್ನು ಸ್ಥಾಪಿಸಿತ್ತು(ಚಂದ್ರಶೇಖರ್,ರಾವ್೨೦೧೬,ಅ.:೬೩). ಟಿಪ್ಪು ವಿದೇಶೀಯ ವ್ಯಾಪಾರದಲ್ಲಿ ಸ್ಥಿರತೆಯನ್ನು ಕಂಡುಕೊಂಡು ವ್ಯಾಪಾರದ ಮೂಲಕ ರಾಷ್ಟ್ರೀಯತೆಯ ಪರಿಕಲ್ಪನೆ ಬೆಳೆಯಬೇಕೆಂಬ ಉದ್ದೇಶವನ್ನು ಟಿಪ್ಪು ಹೊಂದಿರುವುದು ಅರ್ಥಪೂರ್ಣವೆನಿಸುತ್ತದೆ. ಟಿಪ್ಪು ಹೊರರಾಜ್ಯಗಳಲ್ಲಿ ವಾಣಿಜ್ಯ ಸಂಪರ್ಕ ಸಾಧಿಸಲು ಬಯಸಿದನು, ಕಾರಣ ಶತ್ರುಗಳೊಂದಿಗೆ ಯಾವುದೇ ವ್ಯಾಪಾರ ಮಾಡಬಾರದೆಂಬುದು ಟಿಪ್ಪುವಿನ ನೀತಿಯಾಗಿತ್ತು. ಟಿಪ್ಪು ಅವನ ವಿರೋಧಿಯಾಗಿದ್ದ ಬ್ರಿಟಿಶರನ್ನು ವಿರೋಧಿಸಿದನೇ ವಿನಾ ಫ್ರೆಂಚರು ಮತ್ತು ಡಚ್ಚರನಲ್ಲ. ಯುರೋಪಿಯನ್ನರಾದ ಫ್ರೆಂಚರನ್ನು ಮಿತ್ರರನ್ನಾಗಿಸಿಕೊಂಡು ಇಂಗ್ಲಿಶರನ್ನು ವಿರೋಧಿಸಿದನು.

ಟಿಪ್ಪು ಕಡಲ ಸಂಪರ್ಕ ಕೇಂದ್ರಗಳಾದ ಹೊರ ರಾಜ್ಯಗಳಲ್ಲಿ ಆಂತರಿಕ ವ್ಯಾಪಾರದ ಮಳಿಗೆಗಳನ್ನು ನಿರ್ಮಿಸಿದನು. ಮದ್ರಾಸ್, ಪಾಂಡಿಚೆರಿ, ಮಾಹೆ, ಪುಣೆ, ನಾಗೂರು, ಕೊಚ್ಚಿ, ಕರಾಚಿ ಮತ್ತು ಮಸ್ಕತ್ ಸೇರಿದಂತೆ ಹದಿನೇಳು ಕೈಗಾರಿಕಾ ನೆಲೆಗಳನ್ನು ಸ್ಥಾಪಿಸಿದನು(ವಸು,೨೦೦೯:೨೨೩). ಹೈದರ್ ಆಲಿ ಮತ್ತು ಟಿಪ್ಪು ಸುಲ್ತಾನ್ ಆಳ್ವಿಕೆಯನ್ನು ಸ್ಥಿರೀಕರಣದ ಹೊಸ ಅಧ್ಯಾಯನವನ್ನು ಕಂಡುಕೊಂಡ ಕಾಲವೆಂದು ಪರಿಗಣಿಸಬೇಕಾಗುತ್ತದೆ. ಟಿಪ್ಪು ಸುಲ್ತಾನನ ರಾಜ್ಯವನ್ನು ಒಂದು ರೀತಿಯಲ್ಲಿ ಬಂಡವಾಳಶಾಹಿಯನ್ನು ಹುಟ್ಟುಹಾಕಿದ ಕಾಲವೆಂದರೆ ತಪ್ಪಾಗಲಾರದು. ಈ ಕಾಲಘಟ್ಟ ಅಪಾರ ಯುದ್ಧ ಒಪ್ಪಂದಗಳಿಗೆ ಒಳಪಟ್ಟ ಕಾಲವಾಗಿದ್ದು ಇದರಿಂದ ಮೈಸೂರು ಸಂಸ್ಥಾನಕ್ಕೆ ಅಪಾರವಾದ ಆದಾಯ ಒದಗುತ್ತಿತ್ತು ಹಾಗೂ ಇದೇ ವೇಳೆಯಲ್ಲಿ ಶರಣಾಗತರಾದ ಪಾಳೆಯಪಟ್ಟುಗಳು ಕಪ್ಪವನ್ನು ನೀಡುತ್ತಿದ್ದರು. ಇದರಿಂದ ರಾಜ್ಯದಲ್ಲಿ ಆದಾಯ ಹೆಚ್ಚಾಗಿ ಬಂಡವಾಳಶಾಹಿ ಪರಿಕಲ್ಪನೆಯು ಬೆಳೆದಿರಬಹುದು. ೧೮ನೇ ಶತಮಾನದ ಅಂತ್ಯದ ವೇಳೆಗೆ ಹೈದರಾಬಾದ್, ಗುಜರಾತಿನ ವ್ಯಾಪಾರಿಗಳು ಚಿನ್ನ ಬೆಳ್ಳಿಯೊಂದಿಗೆ, ಬಟ್ಟೆಯನ್ನು ಮತ್ತು ಪೂನಾದ ವ್ಯಾಪಾರಿಗಳು ಶಾಲು, ಕೇಸರಿ ಮತ್ತು ಪರ್ಶಿಯನ್ ಮುತ್ತುಗಳನ್ನು ಕ್ಯಾಲಿಕಟ್ ಮಹಾರಾಷ್ಟ್ರ ಮತ್ತು ನಿಜಾಮನ ಪ್ರದೇಶಗಳಿಂದ ಹತ್ತಿ, ಸರಕು, ರೇಷ್ಮೆ, ಮಸ್ಲಿನ್ ಮತ್ತು ಇತರ ಸರಕುಗಳು, ಮೆಣಸು, ತಂಬಾಕು ಹೀಗೆ ಹಲವು ವಸ್ತುಗಳನ್ನು ವ್ಯಾಪಾರ ಮಾಡುವ ದೇಶದ ವಿವಿಧ ಭಾಗಗಳಿಂದ ವ್ಯಾಪಾರಿಗಳು ಕರ್ನಾಟಕಕ್ಕೆ ವಲಸೆ ಬಂದಿರುವುದನ್ನು ಗಮನಿಸಬಹುದಾಗದೆ(ಜನರಲ್ಸ್ ಆಫ್ ಹಿಸ್ಟಾರಿಕಲ್ ಸ್ಟಡೀಸ್, ಸ್ಟೇಟ್

ಕ್ಯಾಪಿಟಲಿಸಂ ಇನ್ ಟಿಪ್ಪುಸುಲ್ತಾನ್,೭). ಈ ಮೂಲಕ ವ್ಯಾಪಾರವು ಅಧಿಕವಾಗಿದ್ದರಿಂದ ಕ್ಯಾಪಿಟಲಿಸಂ ಪರಿಕಲ್ಪನೆಯು ಬೆಳೆಯಲಾರಂಭಿಸಿತ್ತು. ಈ ಕ್ಯಾಪಿಟಲಿಸಂ ಎನ್ನುವ ಪರಿಕಲ್ಪನೆಯು ಒಂದರ್ಥದಲ್ಲಿ ರಾಜ್ಯ ಅಥವಾ ಸಂಸ್ಥೆಗಳಲ್ಲಿ ಕೇಂದ್ರೀಕೃತ ಬಂಡವಾಳದ ಅಳವಡಿಕೆಯನ್ನು ಗಮನಿಸಬಹುದು.

ವಿಜಯನಗರೋತ್ತರ ಕಾಲದಲ್ಲಿ ಅಕ್ಕಿ ಪ್ರಮುಖ ಕೃಷಿ ಉತ್ಪನ್ನವಾಗಿ ಹೇಗೆ ಗುರುತಿಸಿಕೊಂಡು ವಿದೇಶೀಯ ವ್ಯಾಪಾರದಲ್ಲಿ ಪ್ರಮುಖ ಪಾತ್ರವಹಿಸಿತ್ತು. ಅದೇ ರೀತಿಯಾಗಿ ಕರಿಮೆಣಸು ಸಾಗರೋತ್ತರ ವ್ಯಾಪಾರದಲ್ಲಿ ಮುಖ್ಯವಾಗಿ ಗುರುತಿಸಿಕೊಳ್ಳುತ್ತದೆ. ಕರಿಮೆಣಸಿನ ಜೊತೆ ಇನ್ನಿತರ ಸಂಬಾರ ಪದಾರ್ಥಗಳಾದ ಏಲಕ್ಕಿ, ಲವಂಗಕ್ಕೆ ಯುರೋಪಿನಲ್ಲಿ ಅಪಾರ ಬೇಡಿಕೆ ಇದ್ದ ಪರಿಣಾಮವಾಗಿ ಭಾರತದಲ್ಲಿ ಯುರೋಪಿಯನ್ನರು ಈ ವಾಣಿಜ್ಯ ಬೆಳೆಗಳನ್ನು ಬೆಳೆಯಲು ಪ್ರೋತ್ಸಾಹಿಸಿದರು. ಈ ಕರಿಮೆಣಸಿನ ವ್ಯಾಪಾರವನ್ನು ಪೋರ್ಚುಗೀಸರು ವಿಜಯನಗರ ಸಾಮ್ರಾಜ್ಯದ ಆಳ್ವಿಕೆಯಿಂದ ಆರಂಭಿಸಿದರು. ವಿಜಯನಗರದ ಅರಸರಿಗೆ ಬೇಕಾದ ಕುದುರೆ ಆನೆಗಳನ್ನು ರವಾನಿಸಿ ಇಲ್ಲಿ ಬೆಳೆಯುವ ಕರಿಮೆಣಸನ್ನು ಯುರೋಪ್‌ಗೆ ರಫ್ತು ಮಾಡುತ್ತಿದ್ದರು. ಕರ್ನಾಟಕದ ಕರಾವಳಿ ಭಾಗವು ದೊಡ್ಡ ಪ್ರಮಾಣದಲ್ಲಿ ಕರಿಮೆಣಸಿನ ಕೃಷಿಯಲ್ಲಿ ಪ್ರಾಮುಖ್ಯತೆಯನ್ನು ಪಡೆದುಕೊಂಡಿತ್ತು. ಕರಾವಳಿ ಪ್ರದೇಶದಲ್ಲಿ ಬೆಳೆಯುವ ಕರಿಮೆಣಸಿಗೆ ಯುರೋಪಿನಲ್ಲಿ ಅಪಾರವಾದ ಬೇಡಿಕೆ ಇತ್ತು. ಕರಾವಳಿ ತೀರದ ಗೇರುಸೊಪ್ಪೆ ಪ್ರಾಂತ್ಯದಲ್ಲಿ ಅಗಾಧವಾಧ ಉತ್ತಮ ಗುಣಮಟ್ಟದ ಕರಿಮೆಣಸು ದೊರೆಯುತ್ತಿದ್ದ ಕಾರಣ ಹಾಗೂ ಆ ಪ್ರದೇಶ ಕರಿಮೆಣಸಿನ ವ್ಯಾಪಾರದಲ್ಲಿ ಚನ್ನಾಬೈರದೇವಿ ನಿಯಂತ್ರಣ ಹೊಂದಿದ್ದರಿಂದ ಅವಳನ್ನು ಕರಿಮೆಣಸಿನ ರಾಣಿ ಎಂದು ಕರೆಯಲಾಗುತ್ತಿತ್ತು. ವಿಜಯನಗರೋತ್ತರ ಕಾಲದಲ್ಲಿ ಕರಾವಳಿ ಕರ್ನಾಟಕದ ಕರಿಮೆಣಸಿನ ವ್ಯಾಪಾರದಲ್ಲಿ ಕೆಳದಿ ಮತ್ತು ಸ್ವಾದಿಯ ಪ್ರಾಂತ್ಯಗಳು ಪೋರ್ಚುಗೀಸರೊಂದಿಗೆ ವ್ಯಾಪಾರದಲ್ಲಿ ಸಂಘರ್ಷ ಮಾಡಲು ಕಾರಣವಾಗಿತ್ತು. ಕರಿಮೆಣಸಿನ ವ್ಯಾಪಾರದ ಜೊತೆಗೆ ತೆಂಗು, ಅಡಿಕೆ, ಗೋಡಂಬಿ ಮತ್ತು ಏಲಕ್ಕಿಗಳು ಈ ಭಾಗದ ವಾಣಿಜ್ಯ ಬೆಳೆಗಳಾಗಿದ್ದು, ಇವುಗಳ ಉತ್ಪಾದನೆಗೂ ಹೆಚ್ಚಿನ ಪ್ರೋತ್ಸಾಹವನ್ನು ಯುರೋಪಿಯನ್ನರು ನೀಡಿದ್ದರು.

೧೬೩೭ರಲ್ಲಿ ಇಂಗ್ಲಿಶ್ ಪ್ರವಾಸಿಗ ಹಾಗೂ ವ್ಯಾಪಾರಿ ಪೀಟರ್ ಮುಂಡಿಯವರು ಭಟ್ಕಳದಲ್ಲಿ ಪೋರ್ಚುಗೀಸರಿಗೆ ಸಂಬಂಧಿಸಿದ ಸಂಪೂರ್ಣ ದಾಲ್ಚಿನ್ನಿಯನ್ನು ಒಳಗೊಂಡ ಹಡಗು ಕೆನರಾ ಪ್ರಾಂತ್ಯದ ಗಸ್ತುಪಡೆಯೊಂದಿಗೆ ಲಂಗರು ಹಾಕಿರುವುದನ್ನು ಗಮನಿದ್ದನು(ಕೊಂಚಾಡಿ೨೦೧೮:೭೩) ಈ ಮೂಲಕ ಕರಾವಳಿ ಕರ್ನಾಟಕದ ಕರಿಮೆಣಸಿನ ವ್ಯಾಪಾರದ ಜೊತೆ ಇನ್ನಿತರ ಸಂಬಾರ ಪದಾರ್ಥಗಳು ವ್ಯಾಪಾರದಲ್ಲಿ ಪ್ರಮುಖವಾಗಿ ಗುರುತಿಸಿಕೊಂಡಿವೆ. ಪ್ರತಿಯೊಂದು ಹಂತದಲ್ಲಿಯೂ ಕರ್ನಾಟಕದ ಕರಾವಳಿಯ ವ್ಯಾಪಾರ ವಾಣಿಜ್ಯದಲ್ಲಿ ಸ್ಥಳೀಯರು ಮತ್ತು ಯುರೋಪಿಯನ್ನರ ಮಧ್ಯೆ ಸಂಘರ್ಷಗಳಾಗಿರುವುದನ್ನು ಗಮನಿಸಬಹುದು. ಯಾವುದೇ ಒಂದು ಹೊಸ ವ್ಯವಸ್ಥೆ ಬಂದಾಗ ಅದಕ್ಕೆ ಹೊಂದಿಕೊಳ್ಳುವಾಗ ನಿರಂತರ ಹೋರಾಟ ಮತ್ತು ಸಂಘರ್ಷಗಳನ್ನು ಪ್ರತಿಹಂತದಲ್ಲಿಯೂ ಪ್ರತಿಫಲಿಸುತ್ತವೆ.

ಕೆನರಾ ಪ್ರದೇಶದಿಂದ ಗೋವಾಕ್ಕೆ ಕರಿಮೆಣಸನ್ನು ರಫ್ತು ಮಾಡುವ ವಿಚಾರ ಕುರಿತಂತೆ ಕೆನರಾದ ವ್ಯಾಪಾರಿಗಳೊಂದಿಗೆ ಒಪ್ಪಂದವು ೧೬೨೭ರಲ್ಲಿ ನಡೆದಿತ್ತು. ಈ ಒಪ್ಪಂದದಲ್ಲಿ ಸಂಬಾಜಿ, ಗೋವಿಂದ ಮತ್ತು ಪೋಂಡಿಯಾ ಎಂಬ ಮೂರು ಜನ ಅಧಿಕಾರಿಗಳ ಹೆಸರು ತಿಳಿಸಿದ್ದಾರೆ. ೧೬೧೭ರಲ್ಲಿ ೧.೮೦.೦೦೦ ಕೆ.ಜಿ. ಕರಿಮೆಣಸು ಗೋವಾದ ಮೂಲಕ ಯುರೋಪಿಗೆ ಹೋಗುತ್ತಿತ್ತು. ಅದೇ ೧೬೧೮ರಲ್ಲಿ ೧.೭೨.೫೦೦ ಕೆ.ಜಿ ಅಷ್ಟು ರಫ್ತಾಗಿತ್ತು. ಇಲ್ಲಿ ಮೆಣಸಿನ ವಿಚಾರದಲ್ಲಿ ಕ್ಷೀಣಿಸಿರುವುದನ್ನು ಗಮನಿಸಬಹುದು ಹಾಗೂ ಒಬ್ಬ ಹಿಂದೂ ವ್ಯಾಪಾರಿ ೩೦ ವರ್ಷಗಳ ಕಾಲ ನಿರಂತರವಾಗಿ ವ್ಯಾಪಾರ ನಡೆಸಿರುವುದು ಇಲ್ಲಿ ಗಮನಿಸಬಹುದು. ಯುರೋಪಿಯನ್ನರ ಮಧ್ಯವರ್ತಿಯಾಗಿ ವ್ಯಾಪಾರ ನಡೆಸಿದಂತೆ ಕಂಡುಬರುತ್ತದೆ(ಸಾಕಿ,(೧)೧೯೮೮:೩೫೬).

ಕರಾವಳಿ ಕರ್ನಾಟಕದ ವ್ಯಾಪಾರದೊಂದಿಗೆ ಮೈಸೂರಿನ ಆರಂಭದ ಒಡೆಯರು ವ್ಯಾಪಾರ ವಾಣಿಜ್ಯದಲ್ಲಿ ಗುರುತಿಸಿಕೊಂಡಂತೆ ಕಂಡುಬರುವುದಿಲ್ಲ. ಸ್ಥಳೀಯ ವ್ಯಾಪಾರಕ್ಕೆ ಮಾರುಕಟ್ಟೆಕೇಂದ್ರಿತ ಅರ್ಥವ್ಯವಸ್ಥೆಗೆ ಗಮನ ನೀಡಿದ್ದಂತೆ ಕಾಣುತ್ತದೆ. ತಂಬಾಕು, ತುಪ್ಪ, ಎಣ್ಣೆ, ಸೆಣಬು ಮತ್ತು ಹತ್ತಿದಾರಗಳ ಒಂದು ಗೋಡೆಗೆ ನಿರ್ದಿಷ್ಟ ಬೆಲೆ ೧ ತರು ನಿಗದಿ ಮಾಡಲಾಗಿತ್ತು. ಭತ್ತ, ಅಕ್ಕಿ ಮತ್ತು ಇತರ ವಸ್ತುಗಳಿಗೆ ೧/೨ ತರು ಬೆಲೆ ನಿಗದಿ ಮಾಡಿದ್ದರು.

ಸಮುದ್ರ ವ್ಯಾಪಾರವು ಸಾಕಷ್ಟು ಅಭಿವೃದ್ಧಿಯನ್ನು ಕಂಡಿತ್ತು. ಕರ್ನಾಟಕದ ಪಶ್ಚಿಮ ಕರಾವಳಿಯಲ್ಲಿ ಫ್ರೆಂಚರು ಅಕ್ಕಿ ಮತ್ತು ಇತರ ವಸ್ತುಗಳನ್ನು ಸಾಗಿಸುವುದರಲ್ಲಿ ಚುರುಕಾಗಿ ಕೆಲಸ ಮಾಡುತ್ತಿದ್ದರು. ಫ್ರೆಂಚರ ಹಡಗುಗಳು ಮಂಗಳೂರು ಗೋವೆ, ಅಂಕೋಲಾ ಹೊನ್ನಾವರ, ಭಟ್ಕಳ, ಬಸ್ರೂರು, ಕಾಸರಗೋಡು ಮೊದಲಾದ ಬಂದರುಗಳಲ್ಲಿ ವ್ಯಾಪಾರದಲ್ಲಿ ತೊಡಗಿದ್ದವು. ಈ ಬಂದರುಗಳ ಮೂಲಕ ಪರ್ಶಿಯಾ, ಅರೇಬಿಯಾ, ಮೆಮೆನ್, ಚೈನಾ, ಮಾಲ್ಡೀವ್ಸ್, ಮೆಕ್ಕಾ, ಓರ್ಮಜ್, ಏಡನ್, ಮಲಕ್ಕಾ ಸುಮಾತ್ರ, ಪೋರ್ಚುಗಲ್, ಬ್ರಿಟನ್ ಮೊದಲಾದ ದೇಶಗಳೊಂದಿಗೆ ವ್ಯಾಪಾರ ಸಂಪರ್ಕ ಹೊಂದಿದ್ದವು(ಚಂದ್ರಶೇಖರ್,ರಾವ್೨೦೧೬:೪೧).

ಕೆಳದಿ ನಾಯಕರ ಕಾಲದ ೧೭೧೮ರ ಹಲಸ ನಾಡಿನ ವಿಶ್ವೇಶ್ವರಯ್ಯ ಮನೆಯಲ್ಲಿರುವ ಕಡತದಲ್ಲಿ ಹೊನ್ನಾವರ ಮತ್ತು ಗಂಗೊಳ್ಳಿಗಳಲ್ಲಿ ವ್ಯಾಪಾರಸ್ಥರು ಭಂಡಶಾಲೆ ಸ್ಥಾಪಿಸಿ ಜಲ ವಾಣಿಜ್ಯ ವ್ಯವಹಾರಗಳನ್ನು ನಡೆಸಿದ್ದನ್ನು ಹೇಳಿದೆ. ಗಂಗೊಳ್ಳಿಯ ಬೈಲೂರು ರಾಮರಾಯರ ಮನೆಯಲ್ಲಿರುವ ಕಡತ ವರ್ತಕರ ಭಂಡಶಾಲೆಗಳು, ಭಟ್ಕಳ, ಹೊನ್ನಾವರ ಮತ್ತು ಮಂಗಳೂರು ಭಂಡಶಾಲೆಗಳೊಂದಿಗೆ ಮಂಜಿ ಮತ್ತು ಹಡಗುಗಳ ಮುಖಾಂತರ ಸರಕುಗಳ ವಿನಿಮಯ ಮಾಡಿಕೊಂಡಿರುವುದನ್ನು ತಿಳಿಸಿವೆ. ಕೆಳದಿಯ ಬ್ಲೋಡ್ಲಿನ ಗ್ರಂಥಾಲಯದಲ್ಲಿದ್ದ ಕ್ರಿ.ಶ.೧೬೩೬ರ ಕನ್ನಡ ಕಾಗದ ಪತ್ರದಲ್ಲಿ ಉಲ್ಲೇಖಿಸಿರುವಂತೆ ಇಂಗ್ಲಿಶರು ಭಟ್ಕಳ ಬಂದರಿನಲ್ಲಿ ಅಗತ್ಯವಿರುವಷ್ಟು ಕರಿಮೆಣಸನ್ನು ಸರಬರಾಜು ಮಾಡುವುದಾಗಿ ಒಪ್ಪಂದ ಮಾಡಿಕೊಂಡಿದ್ದರು. ವೀರಭದ್ರನಾಯಕನು ಕೆಳದಿ ರಾಜ್ಯದಿಂದ ೩೦೦ ಖಂಡಿ ಕರಿಮೆಣಸು ಭಟ್ಕಳದಿಂದ ನೀಡುತ್ತಿದ್ದರು. ಇದಕ್ಕೆ ಪ್ರತಿಯಾಗಿ ಇಂಗ್ಲಿಶ್ ವರ್ತಕರು ೨೫೦ ಖಂಡಿ ಸೀಸವನ್ನು ಕೊಡಬೇಕು. ಈ ಕರಿಮೆಣಸಿನ ಕ್ರಯ ಖಂಡಿ ಒಂದಕ್ಕೆ ೨೨೧/೨ ಪಗೋಡಾ ಎಂದು ನಿರ್ಧರಿಸುತ್ತಾರೆ.(ಸೂರ್ಯಕೀತಿ೨೦೦ :೨೯೦-೨೯೧).

ಈ ಮೂಲಕ ಕರ್ನಾಟಕದ ಕರಾವಳಿಯ ಭಾಗದ ಸಂಸ್ಥಾನವಾದ ಹಾಗೂ ಬಂದರು ಪ್ರದೇಶಗಳು ಅಲ್ಲಿರುವುದರಿಂದ ವ್ಯಾಪಾರ ವಾಣಿಜ್ಯವು ಬಿರುಸಿನಿಂದ ನಡೆದು ಈ ಮೂಲಕ ಕರಾವಳಿ ಕರ್ನಾಟಕ ಅಭಿವೃದ್ಧಿ ಹೊಂದಿರುವುದನ್ನು ನೋಡಬಹುದು. ಕರಾವಳಿ ಕರ್ನಾಟಕವು ಯುರೋಪಿಯನ್ನರ ಆಗಮನದಿಂದಲೇ ಅಂತಾರಾಷ್ಟ್ರೀಯ ಮಾರುಕಟ್ಟೆಯ ಕೇಂದ್ರವಾಗಿ ಮಾರ್ಪಟ್ಟಿದೆ.

ಕರಿಮೆಣಸು ಭಾರತದಲ್ಲಿ ೧೭ನೇ ಶತಮಾನದಲ್ಲಿ ಅತಿ ದೊಡ್ಡ ಮಾರುಕಟ್ಟೆಯನ್ನು ಹೊಂದಿತ್ತು. ಆದರೆ ಔಷಧೀಯ ಗುಣ ಹೊಂದಿದ್ದ ಬಿಳಿಮೆಣಸು ಮಾರುಕಟ್ಟೆಯನ್ನು ಪ್ರವೇಶಿಸಿದ್ದರಿಂದ ಅದು ಕಣ್ಮರೆಯಾಯಿತು. ಈ ಮೆಣಸಿನ ವ್ಯಾಪಾರದಲ್ಲಿ ಕಲ್ಲಿಕೋಟೆಯಿಂದ ಮಲಬಾರ್‌ವರೆಗಿನ ಪ್ರದೇಶವು ಅತಿದೊಡ್ಡ ಮಾರುಕಟ್ಟೆಯ ಪ್ರದೇಶವನ್ನು ಹೊಂದಿದೆ. ಕರಾವಳಿ ಕರ್ನಾಟಕದಲ್ಲಿ ಬೆಳೆಯುವ ಕರಿಮೆಣಸು ಉತ್ತಮ ಮಟ್ಟದಾಗಿತ್ತು. ವ್ಯಾಪಾರದಲ್ಲಿ ಪೈಪೋಟಿ ಉಂಟಾಗಲು ಕಾರಣವಾಯಿತು. ಕೊಚ್ಚಿನ ಪ್ರದೇಶದಲ್ಲಿ ಕರಿಮೆಣಸು ಬೆಳೆಯುತ್ತಿದ್ದರು. ಅದು ಕೆಳಮಟ್ಟದಾಗಿದ್ದರಿಂದ ಅದರಲ್ಲಿ ಹೆಚ್ಚಿನ ಗಮನವನ್ನು ಹರಿಸಲಿಲ್ಲ ಹಾಗೂ ಕರ್ನಾಟಕದಲ್ಲಿ ಬೆಳೆಯುವ ಕರಿಮೆಣಸನ್ನು ಪೋರ್ಚುಗೀಸರು ಕಡಿಮೆ ಬೆಲೆಗೆ ಕೊಂಡುಕೊಳ್ಳುತ್ತಿದ್ದರು ಎಂದು ಕಾಣುತ್ತದೆ. ಅದಕ್ಕಾಗಿ ಡಚ್ಚರಿಗೆ ಮತ್ತು ಇಂಗ್ಲಿಶರಿಗೆ ಅಲ್ಲಿನ ವರ್ತಕರು ಮಾರುತ್ತಿದ್ದಿರಬಹುದು(ಅಹ್ಮದ್.೧೯೯೭:೭೦).

ಕೆನರಾ ಭಾಗದಿಂದ ಗೋವಾಕ್ಕೆ ರಫ್ತಾಗುವ ಕರಿಮೆಣಸಿನ ಪಟ್ಟಿಯನ್ನು ಗಮನಿಸಿದರೆ ಎಷ್ಟು ಪ್ರಮಾಣದಲ್ಲಿ ಮೆಣಸು ರಫ್ತಾಗುತ್ತಿತ್ತೆಂದು ತಿಳಿಯುತ್ತದೆ. ಭಾರತದ ವಿವಿಧ ಭಾಗಗಳಲ್ಲಿ ಮೆಣಸು ರಫ್ತು ಆಗುತ್ತಿತ್ತು. ಆದರೆ ಈ ಪಟ್ಟಿಯಲ್ಲಿ ಮೆಣಸಿನ ವ್ಯಾಪಾರದಲ್ಲಿ ಕೆನರಾದ ಪಟ್ಟಿಯನ್ನು ಮಾತ್ರ ನೀಡಲಾಗಿದೆ.

**೧೬೧೧-೧೬೨೦ರ ಅವಧಿಯಲ್ಲಿ**

| ವರ್ಷ | ಕೆನರಾ | ವರ್ಷ ಕೆನರಾ |
|---|---|---|
| ೧೬೧೧ | ೭.೦೨೫ಕೆ.ಜಿ | ೧೬೨೧ ೫.೪೭೮ಕೆ.ಜಿ |
| ೧೬೧೨ | ೪.೨೩೭ಕೆ.ಜಿ | ೧೬೨೨ ೨.೯೮೦ಕೆ.ಜಿ |
| ೧೬೧೩ | ೬೦.೪೦೨ಕೆ.ಜಿ | ೧೬೨೨ ೧೭.೫೭೭ಕೆ.ಜಿ |
| ೧೬೧೪ | ೨.೯೫೦ಕೆ.ಜಿ | ೧೬೨೪ ೨.೯೨೦ ಕೆ.ಜಿ |
| ೧೬೧೫ | ೧೧.೭೪೧ಕೆ.ಜಿ | ೧೬೨೫ ೫.೧೫೦ಕೆ.ಜಿ |
| ೧೬೧೬ | ೪.೩೭೪ಕೆ.ಜಿ | ೧೬೨೬ ೨.೯೫೭ಕೆ.ಜಿ |
| ೧೬೧೮ | ೯.೬೦೨ಕೆ.ಜಿ | ೧೬೨೭ ೧.೭೯೦ಕೆ.ಜಿ |
| ೧೬೧೮ | ೧೦.೦೭೮ಕೆ.ಜಿ | ೧೬೨೮ ೧.೮೭೭ಕೆ.ಜಿ |
| ೧೬೧೯ | ೫.೯೧೮ಕೆ.ಜಿ | ೧೬೨೯ ೧೭೬೦ಕೆ.ಜಿ |
| ೧೬೨೦ | ೩.೨೬೬ಕೆ.ಜಿ | ೧೬೩೦ ೧೪೧೦ಕೆ.ಜಿ |

(ಅಹ್ಮದ್.೧೯೯೧:೧೮). ಇಲ್ಲಿ ವರ್ಷದಿಂದ ವರ್ಷಕ್ಕೆ ಹೆಚ್ಚು ಕಡಿಮೆ ಆಗುತ್ತಿತ್ತು.

ಕೆನರಾದಿಂದ ಗೋವಾಕ್ಕೆ ಮಾತ್ರವಲ್ಲದೆ ಮಸ್ಕತ್‌ಗೂ ಮೆಣಸು ರಫ್ತಾಗುತ್ತಿತ್ತು.

೧೬೨೮ರಲ್ಲಿ ೨೦,೯೮೦ ಕೆಜಿ

೧೬೨೯ರಲ್ಲಿ ೪೧,೯೬೦ ಕೆಜಿ

೧೬೪೧ರಲ್ಲಿ ೬೬,೦೯೬ ಕೆಜಿ

ಈ ಮೂಲಕ ಕರ್ನಾಟಕದ ಕರಾವಳಿ ಭಾಗದಲ್ಲಿ ಪೋರ್ಚುಗೀಸರು ಅಕ್ಕಿ ಮತ್ತು ಕರಿಮೆಣಸಿನ ವ್ಯಾಪಾರದಲ್ಲಿ ಪ್ರಮುಖವಾಗಿ ಗುರುತಿಸಿಕೊಂಡರು. ಕರ್ನಾಟಕವಲ್ಲದೆ ಭಾರತದ ಬೇರೆ ಬೇರೆ ಭಾಗಗಳಲ್ಲಿ ಜವಳಿ ಮತ್ತಿತರ ವಸ್ತುಗಳನ್ನು ರಫ್ತು ಮಾಡಿಕೊಳ್ಳುತ್ತಿದ್ದರು. ಪೋರ್ಚುಗೀಸರ ವ್ಯಾಪಾರ-ವಾಣಿಜ್ಯದ ಸ್ವರೂಪ ಒಂದು ರೀತಿಯಾದರೆ ಇವರಿಗೆ ಪ್ರತಿಸ್ಪರ್ಧಿಗಳಾಗಿ ಡಚ್ಚರು ಇಂಗ್ಲಿಶರು. ಫ್ರೆಂಚರು ವಾಣಿಜ್ಯದ ಸ್ವರೂಪದಲ್ಲಿ ಮತ್ತೊಂದು ಸಂಘರ್ಷಗಳನ್ನು ನಡೆಸಿದರು. ಯುರೋಪಿಯನ್ನರ ಮಧ್ಯೆ ಆ್ಯಂಟಿ ಕಲೋನಿಯಂ ಪ್ರಕ್ರಿಯೆಗಳು ವಿಜಯನಗರೋತ್ತರ ಕಾಲದಲ್ಲಿ ಬಿರುಸಿನ ವಾತಾವರಣದಲ್ಲಿ ಮುನ್ನಡೆದವು. ಕರ್ನಾಟಕದ ಕರಾವಳಿ ಭಾಗದಲ್ಲಿ ವ್ಯಾಪಾರದಲ್ಲಿ ಗುರುತಿಸಿಕೊಂಡು ಡಚ್ಚರು ಪೋರ್ಚುಗೀಸರಿಗೆ ಪ್ರತಿಸ್ಪರ್ಧಿಗಳಾಗಿ ಹೋರಾಟವನ್ನು ಮುನ್ನಡೆಸಿದರು. ಕರ್ನಾಟಕದ ಭಟ್ಕಳ, ಹೊನ್ನಾವರ, ಮಂಗಳೂರು, ಬಸ್ರೂರು ಮೊದಲಾದ ಭಾಗಗಳಲ್ಲಿ ವಿದೇಶಿಯ ವ್ಯಾಪಾರದಲ್ಲಿ ಪ್ರಮುಖವಾಗಿ ಗುರುತಿಸಿಕೊಂಡು ಒಬ್ಬೊಬ್ಬ ಯುರೋಪಿಯನ್ನರು ಒಂದೊಂದು ಬಂದರು ಕೇಂದ್ರಗಳನ್ನು ಅಭಿವೃದ್ಧಿಪಡಿಸಿಕೊಂಡು ತಮ್ಮ ಆಳ್ವಿಕೆಯ ಸ್ಥಿರತೆಯನ್ನು ಕಂಡುಕೊಂಡರು. ಕೆಳದಿ ಸಂಸ್ಥಾನದ ಜೊತೆ ನಂತರ ಡಚ್ಚರು ವ್ಯಾಪಾರ ಸಂಬಂಧವನ್ನು ಹೊಂದಿದ್ದರು. ಡಚ್ಚರು ಕರಾವಳಿ ಕರ್ನಾಟಕದ ಅರಸರಾದ ಕೆಳದಿಯ ನಾಯಕರೊಂದಿಗೆ ಸಂಬಂಧವನ್ನು ಹೊಂದಿದ್ದರು. ಕೆಳದಿ ರಾಜ್ಯದಿಂದ ಕರಾವಳಿ ಕರ್ನಾಟಕದಲ್ಲಿ ಅಕ್ಕಿ ಮತ್ತು ಕರಿಮೆಣಸನ್ನು ರಫ್ತು ಮಾಡಿಕೊಳ್ಳುತ್ತಿದ್ದರು. ಪೋರ್ಚುಗೀಸರು ಕರ್ನಾಟಕದ ಕರಾವಳಿ ಭಾಗಕ್ಕಿಂತ ತಮಿಳು ಕರಾವಳಿ ಕಡೆ ಹೆಚ್ಚಿನ ವ್ಯಾಪಾರ ಸಂಬಂಧವನ್ನು ಬೆಳೆಸಿದ್ದರು. ಕರ್ನಾಟಕದ ಕರಾವಳಿಯಲ್ಲಿ ಡಚ್ಚರ ನಂತರ ಗುರುತಿಸಿಕೊಂಡವರೆ ಇಂಗ್ಲಿಶರು ಇವರು ಪೋರ್ಚುಗೀಸರಿಗೆ ಪ್ರಬಲ ಪ್ರತಿಸ್ಪರ್ಧಿಗಳಾಗಿ ಕಂಡುಬಂದರು. ಕರ್ನಾಟಕದ ಕರಾವಳಿ ಭಾಗದಲ್ಲಿ ಪೋರ್ಚುಗೀಸರು, ಫ್ರೆಂಚರು, ಡಚ್ಚರು ಮತ್ತು ಇಂಗ್ಲಿಶರು ವ್ಯಾಪಾರ ವಾಣಿಜ್ಯದಲ್ಲಿ ನಿರಂತರ ಸಂಘರ್ಷಗಳನ್ನು ಹುಟ್ಟುಹಾಕಿದ ಕಾಲವೆಂದೇ ಹೇಳಬಹುದು. ಕರ್ನಾಟಕದ ಕರಾವಳಿ ಭಾಗದಲ್ಲಿ ಬೆಳೆಯುವ ಬ್ರಿಟಿಶರು ಭಾರತವನ್ನು ವಸಾಹತುವನ್ನಾಗಿ ಮಾಡಿಕೊಂಡಾಗ ಭಾರತದಲ್ಲಿ ಕಾಫಿ ಮತ್ತು ಹತ್ತಿ ಬೆಳೆಗೆ ಪ್ರೋತ್ಸಾಹಿಸಿದರು. ಆ ಮೂಲಕ ವ್ಯಾಪಾರ ರಾಜಕಾರಣವನ್ನು ಮಾಡಿದರು. ಭಾರತಕ್ಕೆ ಬಂದ ಪೋರ್ಚುಗೀಸರು ಮತ್ತು ಡಚ್ಚರು ಕರ್ನಾಟಕದ ಸಾರ್ವಭೌಮ ಸಾಮಂತ ಸಂಸ್ಥಾನಗಳನ್ನು ವಶಪಡಿಸಿಕೊಳ್ಳಬೇಕು. ಸಾಮ್ರಾಜ್ಯಶಾಹಿ ಪ್ರಭುತ್ವ ನಿರ್ಮಿಸಬೇಕೆಂಬ ಉದ್ದೇಶವನ್ನು ಹೊಂದಿರಲಿಲ್ಲ. ಆದರೆ ಬ್ರಿಟಿಶರು ವ್ಯಾಪಾರದ ಹಿನ್ನೆಲೆಯಿಂದ ಭಾರತಕ್ಕೆ ಬಂದು ಭಾರತದ ಸಾಮ್ರಾಜ್ಯಶಾಹಿ ಪ್ರಭುತ್ವದಲ್ಲಿ ಇಲ್ಲಿನ ಸ್ಥಳೀಯ ಸಂಸ್ಥಾನಗಳನ್ನು ವಶಪಡಿಸಿಕೊಂಡು ಸಾರ್ವಭೌಮತೆಯನ್ನು ಮೆರೆದರೆಂದು ಹೇಳಬೇಕಾಗುತ್ತದೆ. ಇಡೀ ಭಾರತವನ್ನು ಒಳಗೊಂಡಂತೆ

ಕರ್ನಾಟಕ ಪ್ರದೇಶವನ್ನು ವಿಭಜಿಸುವ ಪ್ರಯತ್ನವನ್ನು ಅವರು ಬಿಡಲಿಲ್ಲ. ಮೈಸೂರು ಸಂಸ್ಥಾನ, ಮುಂಬೈ ಕರ್ನಾಟಕ, ಬಾಂಬೆ ಕರ್ನಾಟಕ, ಹೈದ್ರಾಬಾದ್ ಕರ್ನಾಟಕ ಎಂಬ ವಿಭಾಗಗಳ ಮೂಲಕ ವಿದೇಶೀಯ ವ್ಯಾಪಾರದಲ್ಲಿ ಈ ಭಾಗದಲ್ಲಿರುವ ಪಟ್ಟಣಗಳನ್ನು ವ್ಯಾಪಾರ ವಾಣಿಜ್ಯಕ್ಕೆ ಬಳಸಿಕೊಂಡರು. ಕರ್ನಾಟಕ ಕರಾವಳಿ ಭಾಗವನ್ನು ಬ್ರಿಟಿಶರು ತಮ್ಮ ವ್ಯಾಪಾರ-ವಾಣಿಜ್ಯದ ಹಿನ್ನೆಲೆಯಲ್ಲಿ ಅಭಿವೃದ್ಧಿಪಡಿಸಿದರು. ೧೭೬೧ರ ನಂತರ ಕರ್ನಾಟಕದ ಸಂಸ್ಥಾನಗಳ ವ್ಯಾಪಾರ ವಾಣಿಜ್ಯದ ಸ್ವರೂಪವೇ ಬದಲಾಗುತ್ತೆಂದು ಹೇಳಬಹುದು. ತಮ್ಮದೇ ಆದ ವಿದೇಶ ವ್ಯಾಪಾರದ ಮೂಲಕ ಇಡೀ ದಕ್ಷಿಣ ಭಾರತದಲ್ಲಿಯೇ ಪ್ರಮುಖ ಸ್ಥಾನವನ್ನು ಪಡೆದವರೆಂದರೆ ಹೈದರ್ ಮತ್ತು ಟಿಪ್ಪು ಸುಲ್ತಾನ್ ಯುರೋಪಿಯನ್ನರ ವಿದೇಶೀಯ ವ್ಯಾಪಾರ ನೀತಿಯನ್ನು ವಿರೋಧಿಸಿ ತಮ್ಮದೇ ಆದ ವಾಣಿಜ್ಯ ನೀತಿಯನ್ನು ವಿಸ್ತರಿಸುವ ಕೆಲಸವನ್ನು ನಿರ್ವಹಿಸಿದರು. ಭಾರತದ ಕರಾವಳಿಯ ಎಲ್ಲ ಭಾಗಗಳಲ್ಲಿ ವಾಣಿಜ್ಯ ಕೇಂದ್ರಗಳನ್ನು ಸ್ಥಾಪಿಸುವ ಕೆಲಸವನ್ನು ಟಿಪ್ಪು ಸುಲ್ತಾನ್ ಬ್ರಿಟಿಶರನ್ನು ಹೊರದೂಡಬೇಕೆಂಬ ಹಂಬಲದಿಂದ ಹಲವಾರು ಹೊಸ ನೀತಿಗಳನ್ನು ರೂಪಿಸಿದನು.

ಮಲಬಾರ್ ತೀರದಲ್ಲಿ ಡಚ್-ಇಂಗ್ಲಿಶ್-ಪೋರ್ಚುಗೀಸರು ವ್ಯಾಪಾರಿ ಕೋಠಿಗಳನ್ನು ಹೊಂದಿದ್ದರೂ, ಕೇರಳ ವ್ಯಾಪಾರಿ ವಹಿವಾಟು ಸ್ಥಳೀಯ ಸಂಸ್ಥಾನಗಳ ನಿಯಂತ್ರಣದಲ್ಲಿತ್ತು. ಇದಕ್ಕೆ ಪೂರಕವಾಗಿ ಯುರೋಪಿಯನ್ನರಾದ ಇಂಗ್ಲಿಶರ ಹಡಗುಗಳು ಕರಾವಳಿ ತೀರದಲ್ಲಿ ಸಂಚರಿಸಲು ಸ್ಥಳೀಯ ಸಂಸ್ಥಾನಗಳಿಗೆ ತೆರಿಗೆಯನ್ನು ಪಾವತಿಸಬೇಕು. ತೆರಿಗೆಯನ್ನು ಕೊಡದೆ ಹಡಗುಗಳು ಸಂಚರಿಸಲು ಸಂಸ್ಥಾನಗಳು ಅವಕಾಶ ಕೊಟ್ಟಿರಲಿಲ್ಲ. ಅದ್ಲಾಮಿ ಎಂಬ ಸುಂಕವನ್ನು ಕೊಡಬೇಕಾಗಿತ್ತು. ೧೬೭೦ರಿಂದ ಪ್ರತಿವರ್ಷ ಇಂಗ್ಲೆಂಡಿಗೆ ಈ ಮಲಬಾರ್ ತೀರದಿಂದ ಸುಮಾರು ೪೦೦ರಿಂದ ೫೦೦ ಟನ್‌ಗಳಷ್ಟು ಕರಿಮೆಣಸನ್ನು ರಫ್ತುಮಾಡಲಾಗುತ್ತಿತ್ತು. ಇದರ ಪ್ರಮಾಣವು ಕೆಲವೊಮ್ಮೆ ೧೦೦೦ ಟನ್‌ಗಳನ್ನು ಮೀರುತ್ತಿತ್ತು ಡಚ್ಚ್ ಕಂಪನಿಯ ನಿರ್ದೇಶಕರು ೧೭೩೬ರ ವರದಿಯೊಂದರಲ್ಲಿ ತಿಳಿಸುವಂತೆ ಡಚ್ಚರು ವಾರ್ಷಿಕವಾಗಿ ಇಂಡೋನೇಷಿಯಾದ ದ್ವೀಪ ಸಮೂಹಗಳಿಂದ ಎಷ್ಟು ಕರಿಮೆಣಸನ್ನು ಆಮದು ಮಾಡಿಕೊಳ್ಳುತ್ತಿದ್ದರೂ ಅಷ್ಟೇ ಪ್ರಮಾಣದಲ್ಲಿ ಇಂಗ್ಲೀಷ್ ವ್ಯಾಪಾರಸ್ಥರು ವಾರ್ಷಿಕವಾಗಿ ಈ ಮಲಬಾರ್ ತೀರದಿಂದ ಕರಿಮೆಣಸನ್ನು ಇಂಗ್ಲೆಂಡಿಗೆ ರಫ್ತು ಮಾಡುತ್ತಿದ್ದರು. ಇತರ ಯುರೋಪಿನ ವ್ಯಾಪಾರೀ ಕಂಪನಿಗಳಂತೆ, ಇಂಗ್ಲಿಶ್ ಕಂಪನಿಯೂ ಸಹ ತಮ್ಮ ವ್ಯಾಪಾರ ವಹಿವಾಟನ್ನು ಸ್ಥಳೀಯ ಸಂಸ್ಥಾನಗಳೊಂದಿಗೆ ರಾಜತಾಂತ್ರಿಕ ಇಲ್ಲವೇ ಶಕ್ತಿ ಪ್ರದರ್ಶನದ ಮುಖಾಂತರ ವೃದ್ಧಿಸಿಕೊಳ್ಳುತ್ತಿದ್ದರು(ನಿಕಲೇಶ್‌ಗುಹಾ,೧೯೮೫:೪೧-೪೩). ಇದಕ್ಕೆ ಸಾಕ್ಷಿಯಾಗಿ ಹೈದರ್ ಮತ್ತು ಟಿಪ್ಪು ಸುಲ್ತಾನನನ್ನು ರಾಜಕಾರಣದ ಮೂಲಕ ಅವರ ಆರ್ಥಿಕತೆಯನ್ನು ವೃದ್ಧಿಸಿಕೊಂಡರು.

ಇಂಗ್ಲಿಶರು ಕೆಳದಿಯ ರಾಜ್ಯದೊಂದಿಗೆ ವಿದೇಶೀಯ ವ್ಯಾಪಾರದಲ್ಲಿ ಸಂಬಂಧ ಹೊಂದಲು ಮುಖ್ಯ ಕಾರಣವೆಂದರೆ ಅಲ್ಲಿ ದೊರೆಯುವ ಕರಿಮೆಣಸು ಮುಖ್ಯಕಾರಣವಾಗಿತ್ತು. ಆದ್ದರಿಂದ ಭಟ್ಕಳದಲ್ಲಿ ಚಿಕ್ಕ ವ್ಯಾಪಾರ ಕೇಂದ್ರವನ್ನು ಆರಂಭಿಸಿದ ಇವರ ದಂಡನಾಯಕನು ಡ್ರೇಗನ್ ಎಂಬ

ಹಡಗನ್ನು ಭಟ್ಕಳಕ್ಕೆ ತಂದು ನಿಲ್ಲಿಸಲು ತೀರ್ಮಾನಿಸಿದರು. ಆರಂಭದಲ್ಲಿ ವಿರೋಧವಾಗಿ ಪೋರ್ಚುಗೀಸರು ಕೊಡುವ ಹಣಕ್ಕಿಂತ ಹೆಚ್ಚು ಕೊಟ್ಟು ಖರೀದಿಸಿ ಇಂಗ್ಲೇಂಡಿಗೆ ರಫ್ತು ಮಾಡಿದರೆಂದು ತಿಳಿಸುತ್ತದೆ(ಅರುಣ್೨೦೦೬:೧೬). ಇದಕ್ಕೆ ಪೂರಕವಾಗಿ ಹೊನ್ನಾವರದಲ್ಲಿದ್ದ ಬ್ರಿಟಿಧಗ ರೆಸಿಡೆಂಟಾಗಿದ್ದ ಜಾನ್‌ಸ್ಟ್ರಾಸಿ ಬಿದನೂರು ಸಂಸ್ಥಾನದ ಮೇರೆಗೆ ಕರಿಮೆಣಸಿನ ವ್ಯಾಪಾರಿ ಏಕಸ್ವಾಮ್ಯ ಹೊಂದುವ ಸಲುವಾಗಿ ೧೭೬೧ ಜೂನ್‌ನಲ್ಲಿ ಆ ಸಂಸ್ಥಾನದ ರಾಣಿಯಾದ ಚನ್ನಮಾಜಿಯೊಂದಿಗೆ ಒಪ್ಪಂದಗಳನ್ನು ಮಾಡಿಕೊಂಡಿದ್ದು ಕಂಡುಬರುತ್ತದೆ(ಚಂದ್ರಶೇಖರ್,ರಾವ್ ೨೦೦೬:೬೨). ಕೆಳದಿಯ ರಾಣಿಚನ್ನಮ್ಮನನ್ನು ಸೋಲಿಸಬೇಕೆಂದು ನಿರ್ಧರಿಸಿದ ಇವರು ಈ ವೇಳೆಗೆ ಕರಾವಳಿ ಕರ್ನಾಟಕದ ಕೆಳದಿಯನ್ನು ೧೭೬೩ರಲ್ಲಿ ಹೈದರ್ ವಶಪಡಿಸಿಕೊಂಡು ಕೆಳದಿಯ ಕರಾವಳಿ ವ್ಯಾಪಾರದ ಮೇಲೆ ನಿಯಂತ್ರಣ ಸಾಧಿಸಿದ.

ಕರ್ನಾಟಕದ ಕರಾವಳಿಯಲ್ಲಿ ಇಂಗ್ಲಿಶರ ಫ್ಯಾಕ್ಟರಿಯು ವಸಾಹತುಶಾಹಿ ಚರಿತ್ರೆಯಲ್ಲಿ ಸೂರತ್ ನಂತರ ಅಸ್ತಿತ್ವಕ್ಕೆ ಬಂದ ಪ್ರಮುಖ ಫ್ಯಾಕ್ಟರಿಯಾಗಿದೆ. ಸರ್‌ವಿಲಿಯಂ ಕೋಟೈನ ಕಂಪನಿಯ ಏಜೆಂಟ್ ಕ್ಯಾಪ್ಟನ್ ವೆಡ್ಡಲ್‌ನು ೧೬೩೮ರಲ್ಲಿ ಕಾರವಾರದಲ್ಲಿ ಬಿಜಾಪುರದ ಆದಿಲ್‌ಶಾಹಿಗಳು ಗ್ರಾಂಟ್ ನೀಡಿದ ಜಾಗದಲ್ಲಿ ಫ್ಯಾಕ್ಟರಿ ಆರಂಭಿಸಿದನು. ೧೬೩೯ರಲ್ಲಿ ಇದು ಲಂಡನ್ ಈಸ್ಟ್ ಇಂಡಿಯಾ ಕಂಪನಿಯ ಆಸ್ತಿಯಾಯಿತು. ತರುವಾಯ ಮುಂದಿನ ೩೦ ವರ್ಷಗಳ ಕಾಲ ಬಿರುಸಿನ ವ್ಯಾಪಾರಿ ಕೇಂದ್ರವಾಗಿ ಗುರುತಿಸಿಕೊಂಡಿದೆ. ಅನಂತರ ಪೋರ್ಚುಗೀಸ್ ಮತ್ತು ಸೋದೆ ಪ್ರಾಂತ್ಯದ ಸಾಮಂತರು ಇದನ್ನು ವಶಪಡಿಸಿಕೊಂಡರು. ಸೋದೆ ಪ್ರಾಂತ್ಯದ ಉತ್ಕೃಷ್ಟ ಗುಣಮಟ್ಟದ ಕರಿಮೆಣಸು, ದಖ್ಖನ್ನಿನ ಕೆಲವು ಹತ್ತಿ ಸಾಮಗ್ರಿಗಳು, ಶ್ರೀಗಂಧದ ಮರ, ಏಲಕ್ಕಿ, ಲವಂಗ, ದಾಲ್ಚಿನ್ನಿ ಮೊದಲಾದವುಗಳನ್ನು ಯುರೋಪ್‌ಗೆ ರಫ್ತು ಮಾಡುತ್ತಿದ್ದರು.

ಪೋರ್ಚುಗೀಸರಿಂದ ಮುಚ್ಚಲ್ಪಟ್ಟ ಈ ಫ್ಯಾಕ್ಟರಿ ಮತ್ತೆ ೧೬೮೨ರಲ್ಲಿ ಪುನರ್ ತೆರೆಯಲ್ಪಟ್ಟಿತ್ತು. ಕೇವಲ ೩ ವರ್ಷಗಳ ಅವಧಿಯಲ್ಲಿ ಇಲ್ಲಿ ವ್ಯಾಪಾರವು ಈ ಮೊದಲಿನಂತೆ ಬೃಹತ್ ಪ್ರಮಾಣದಲ್ಲಿ ನಡೆಯಿತು. ನಂತರ ೪೦ ವರ್ಷ ವಿರೋಧದ ನಡುವೆ ಡಚ್ಚರಿಂದ ಉಂಟಾದ ಕರಿಮೆಣಸಿನ ವ್ಯಾಪಾರಕ್ಕೆ ತಡೆ ಪ್ರಕ್ರಿಯೆಯಿಂದ ಕರಿಮೆಣಸಿನ ವ್ಯಾಪಾರ ಕುಸಿಯಿತು. ೧೬೮೭ರಲ್ಲಿ ಮರಾಠರು ಕಾರವಾರ ಫ್ಯಾಕ್ಟರಿಯ ಮೇಲೆ ದಾಳಿ ಮಾಡಿದರು. ಮರಾಠರು ಬೇರೆ ಬೇರೆ ಅವಧಿಯಲ್ಲಿ ೧೬೭೫, ೧೬೭೪ ಮತ್ತು ೧೭೧೫ರಲ್ಲಿ ಕಾರವಾರ ಫ್ಯಾಕ್ಟರಿಯ ಮೇಲೆ ದಾಳಿ ನಡೆಸಿದ್ದರು. ಸೋದೆ ಪ್ರಾಂತ್ಯದ ಸಾಮಂತ ರಾಜ ಬಸವಲಿಂಗ(೧೬೯೫-೧೭೪೫) ಹಳೆಯ ಕೋಟೆಯನ್ನು ನೆಲಸಮ ಮಾಡಿ, ಕಾಳಿ ನದಿಯ ಉತ್ತರದ ದಡದಲ್ಲಿ ಚಿತ್ರಕೂಟ ಸದಾಶಿವಘಡ ಕೋಟೆ ಬಂದರು ಮುಖ್ಯವಾಗಿ ಗುರುತಿಸಿಕೊಂಡಿದೆ. ಕೆನರಾವನ್ನು ವಿಭಜಿಸುವ ಸಂದರ್ಭದಲ್ಲಿ ಈ ಬಂದರು ಪ್ರದೇಶವನ್ನು ಯಾವ ಪ್ರೆಸಿಡೆನ್ಸಿಗೆ ಸೇರಿಸಬೇಕೆಂಬುದೇ ದೊಡ್ಡ ಅಂತಾರಾಷ್ಟ್ರೀಯ ಮಟ್ಟದ ಚರ್ಚೆಯಾಗಿತ್ತು. ಈ ಬಂದರು ಉತ್ತರ ಕನ್ನಡ ಜಿಲ್ಲೆಯ ಕೇಂದ್ರವಾದ ಕಾರವಾರ ಪಶ್ಚಿಮ ಕರಾವಳಿಯ ಪ್ರಮುಖ ವ್ಯಾಪಾರ-ವಾಣಿಜ್ಯದ ಕೇಂದ್ರವಾಗಿತ್ತು. ಇಲ್ಲಿ ಸಂಪದ್ಭರಿತವಾದ

ಒಳನಾಡನ್ನು ಹೊಂದಿದ್ದರಿಂದ ಸ್ಥಳೀಯ ಹಾಗೂ ಯುರೋಪಿನ ವರ್ತಕರು ಇದರ ಕಡೆ ಆಕರ್ಷಿತರಾಗುವಂತೆ ಮಾಡಿತ್ತು(ರೈ,೨೦೧೦:೮೮). ಸದಾಶಿವಘಡದಲ್ಲಿ ಹೊಸಕೋಟೆ ನಿರ್ಮಿಸಿದರು.

ಕಾರವಾರದಲ್ಲಿ ಇಂಗ್ಲಿಶ್ ಏಜೆಂಟ್ ಆಗಿದ್ದ ರುಸ್ತಾನ್ ಸೂರತ್ತಿನ ಇಂಗ್ಲಿಶ್ ಫ್ಯಾಕ್ಟರಿ ಕೌನ್ಸಿಲಿಗೆ ಪದೇ ಪದೇ ಮನವಿ ಮಾಡಿ ಕಾರವಾರದ ಫ್ಯಾಕ್ಟರಿಯನ್ನು ಅಲ್ಲಿಂದ ಹುಬ್ಬಳ್ಳಿಗೆ ವರ್ಗಾಯಿಸಲು ವಿನಂತಿಸಿದರು. ಆ ಪ್ರಕಾರ ಜುಲೈ ೧೬೬೩ರಲ್ಲಿ ಹುಬ್ಬಳ್ಳಿಗೆ ವರ್ಗಾಯಿಸಲ್ಪಟ್ಟಿತ್ತು. ಈ ಘಟನೆಗೆ ಮುಖ್ಯ ಕಾರಣವೆಂದರೆ ಕಾರವಾರದಲ್ಲಿ ವ್ಯಾಪಾರಿಗಳಿಗೆ ವಿವಿಧ ರೀತಿಯ ಕಿರುಕುಳ ನೀಡಲಾಗುತ್ತಿತ್ತು. ಆದಾಯವು ಇಲ್ಲಿ ಇಳಿಮುಖಗೊಂಡಿತ್ತು. ಆದಾಯದ ಕೊರತೆಯಿಂದ ಇತರೆ ಹಲವಾರು ಸಮಸ್ಯೆಗಳು ಎದುರಾದ ಕಾರಣ ಫ್ಯಾಕ್ಟರಿಯನ್ನು ವರ್ಗಾಯಿಸಿದ್ದರು(ಜಾದುನಾಥ, ೧೯೨೯:೨೩೮).

ವಿದೇಶಿ ವ್ಯಾಪಾರದಿಂದ ಹೀಗೆ ಕರಾವಳಿ ಕರ್ನಾಟಕದಲ್ಲಿ ಬ್ರಿಟಿಶರು ವಸಾಹತು ಕೇಂದ್ರಗಳನ್ನು ಸ್ಥಾಪಿಸಿದರು. ಕರಾವಳಿ ಭಾಗದ ಕರ್ನಾಟಕದ ಪ್ರಮುಖ ಪೇಟೆ-ಪಟ್ಟಣಗಳೆಂದು ಗುರುತಿಸಿಕೊಂಡ ನಗರಗಳ ಕಡೆ ಮುಖಾಮುಖಿಯಾಗಿರುವುದು ಕಂಡುಬರುತ್ತದೆ. ಮಧ್ಯಕಾಲೀನ ಕರ್ನಾಟಕದಲ್ಲಿ ಪ್ರಮುಖವಾಗಿ ಹತ್ತಿಬಟ್ಟೆಯ ಕೈಗಾರಿಕೆ ಮತ್ತು ವ್ಯಾಪಾರಿ ಕೇಂದ್ರವಾಗಿದ್ದ ನಗರಗಳ ಕಡೆ ಗಮನ ಹರಿಸಿದ್ದು ಹಾಗೂ ಹತ್ತಿ ಬೆಳೆಗೆ ಈ ಪಟ್ಟಣದ ಸುತ್ತಮುತ್ತಲಿನ ನಗರಗಳು ಗುರುತಿಸಿಕೊಂಡಿದ್ದು ಕಾರಣವಾಗಿತ್ತು. ಕರ್ನಾಟಕವನ್ನು ವಸಾಹತು ಕೇಂದ್ರವಾಗಿ ಮಾರ್ಪಡಿಸಿಕೊಂಡಾಗ ಈ ನಗರವು ಬಾಂಬೆಯೊಂದಿಗೆ ವ್ಯಾಪಾರ ಸಂಬಂಧವನ್ನು ಹೊಂದಲಾರಂಭಿಸಿತ್ತು. ಹುಬ್ಬಳ್ಳಿಯು ಮರಾಠರ ಕಾಲದಲ್ಲಿ ಪ್ರಮುಖ ಮಾರುಕಟ್ಟೆಯ ಕೇಂದ್ರವಾಗಿ ಗುರುತಿಸಿಕೊಂಡಿದೆ.

ಬ್ರಿಟಿಶರು ಕರಾವಳಿ ಕರ್ನಾಟಕದಲ್ಲಿ ವ್ಯಾಪಾರಿ ಕೋಟೆಗಳನ್ನು ಸ್ಥಾಪಿಸುತ್ತಾ ಇಲ್ಲಿನ ಸಾಮಂತ ಸಂಸ್ಥಾನಗಳನ್ನು ಹತ್ತಿಕ್ಕುವ ಕೆಲಸವನ್ನು ನಿರ್ವಹಿಸಿದರು. ಹೈದರ್ ಆಲಿ ಮತ್ತು ಟಿಪ್ಪುಸುಲ್ತಾನನು ಬ್ರಿಟಿಶರ ಪ್ರಬಲ ಸ್ಪರ್ಧಿಗಳಾಗಿದ್ದರು. ಇವರನ್ನು ಹತ್ತಿಕ್ಕುವ ಕೆಲಸ ಒಂದು ಕಡೆ ನಡೆಯುತ್ತಿದ್ದರೆ. ಇನ್ನೊಂದು ಕಡೆ ಕರಾವಳಿಯ ಪ್ರದೇಶದಿಂದ ಕರ್ನಾಟಕದ ಒಳನಾಡಿನ ಕಡೆಗಿನ ವ್ಯಾಪಾರ ಚಟುವಟಿಕೆಗಳು ಬಿರುಸಿನಿಂದ ನಡೆದವು. ಈ ಮೂಲಕ ಸ್ಥಳೀಯ ವ್ಯಾಪಾರ ಸಂತೆಕೇಂದ್ರಿತವಾದ ವ್ಯಾಪಾರ ಮಾರುಕಟ್ಟೆಕೇಂದ್ರಿತ ಹೊಸ ಅರ್ಥವ್ಯವಸ್ಥೆಯೊಂದು ಹೊರಹೊಮ್ಮುತ್ತಿತ್ತು.

ಕರಾವಳಿ ಕರ್ನಾಟಕವನ್ನು ಹೈದರ್ ಮತ್ತು ಟಿಪ್ಪು ೧೭೬೩ರಿಂದ ೧೭೯೯ರವರೆಗೂ ನಿಯಂತ್ರಣದಲ್ಲಿ ಇಟ್ಟುಕೊಂಡರು. ಇವರು ಯುರೋಪಿಯನ್ನರಿಗೆ ಪ್ರಬಲ ಪ್ರತಿಸ್ಪರ್ಧಿಗಳಾಗಿದ್ದರಿಂದ ಇವರ ಜೊತೆ ವಿದೇಶಿ ವ್ಯಾಪಾರವನ್ನು ನಿರ್ಬಂಧಿಸಿದರು. ತಮ್ಮದೇ ಆದ ವಾಣಿಜ್ಯ ಸ್ವರೂಪವನ್ನು ರೂಪಿಸಿದನು. ವಿವಿಧ ರಾಜ್ಯಗಳಲ್ಲಿ ವಾಣಿಜ್ಯ ಮಳಿಗೆಗಳನ್ನು ಸ್ಥಾಪಿಸಿ ಸರ್ಕಾರದ ಅಧಿಕಾರಿಗಳನ್ನು ನೇಮಿಸಿದನು. ಟಿಪ್ಪುವಿನ ವಾಣಿಜ್ಯ ನೀತಿಯ ಪ್ರಮುಖ ಉದ್ದೇಶವೇ ಇಂಗ್ಲಿಶ್ ಈಸ್ಟ್ ಇಂಡಿಯಾ ಕಂಪನಿ ನಿರ್ಬಂಧಿತ ಬೆಲೆಗೆ ಹೇರಳ ಪ್ರಮಾಣದ ಕರಿಮೆಣಸು, ಶ್ರೀಗಂಧ ಮತ್ತು ಅಕ್ಕಿಯನ್ನು ಖರೀದಿಸಿ, ಇಲ್ಲಿಂದ ಸಾಗರೋತ್ತರ ಭಾಗಗಳಿಗೆ ರವಾನಿಸಿ, ಅಧಿಕ ಪ್ರಮಾಣದ ಲಾಭಗಳಿಸುವುದಾಗಿತ್ತು.

ಕೃಷಿ ಉತ್ಪನ್ನಗಳನ್ನು ಕೊಂಡು ಅದಕ್ಕೆ ಪ್ರತಿಯಾಗಿ ನಗದು ನೀಡದೆ ಬಂದೂಕು, ಕವಚ ಮದ್ದುಗುಂಡು ಪೂರೈಸುತ್ತಿತ್ತು. ಹೈದರ್ ಟಿಪ್ಪುವಿಗೆ ಈ ನೀತಿ ಹಿಡಿಸದ ಕಾರಣ ಹಾಗೂ ಅವರನ್ನು ದೇಶದಿಂದ ಹೊರಹಾಕಬೇಕೆಂಬ ಹಿನ್ನೆಲೆಯಿಂದ ವಾಣಿಜ್ಯ ನೀತಿಯನ್ನು ರೂಪಿಸಿದ್ದನ್ನು.

ಅಲ್ಲಿನ ಸುಲ್ತಾನ ಜಮಾನ್‌ಷಾ ಆಸ್ಥಾನಕ್ಕೆ ರಾಯಭಾರಿಯನ್ನು ಕಳುಹಿಸಿ ವ್ಯಾಪಾರಿ ಕೋಠಿಗಳನ್ನು ಅಲ್ಲಿನ ಪರ್ಯಾಯ ದ್ವೀಪದ ಮಿಂಡಿ ಎಂಬಲ್ಲಿ ಸ್ಥಾಪಿಸಿದನು. ಟಿಪ್ಪು ೯ ಮಂದಿ ಅಧಿಕಾರಿಗಳ ವ್ಯಾಪಾರಿ ಮಂಡಳಿಯ ಅಡಿ 'ಮಲಿಕ್-ಉತ್-ತುಜಾರ್' ಎಂಬ ವಾಣಿಜ್ಯ ಇಲಾಖೆಯನ್ನು ಸ್ಥಾಪಿಸಿದ್ದನು. ಹಲವಾರು ರೀತಿಯ ರಿಯಾಯಿತಿ ಪ್ರೋತ್ಸಾಹ ನೀಡಿದ್ದನು(ಗೋಪಾಲ್,೧೯೭೧ :೨೨). ಟಿಪ್ಪು ಸುಲ್ತಾನನ್ನು ಜನವರಿ ೨೨, ೧೭೮೬ರಂದು ಅಮೇರಿಕದ ಪೆಗುವಿನೊಂದಿಗೆ ವಾಣಿಜ್ಯ ವ್ಯವಹಾರ ನಡೆಸುವ ಕುರಿತು ಒಪ್ಪಂದ ಮಾಡಿಕೊಂಡಿದ್ದನು. ಮೈಸೂರು ರಾಜ್ಯದೊಂದಿಗೆ ಪರಸ್ಪರ ವಾಣಿಜ್ಯ ವ್ಯವಹಾರ ನಡೆಸುತ್ತಿದ್ದನು(ಗೋಪಾಲ್,೧೯೭೧:೧೬).

ಟಿಪ್ಪು ಸಾಗರೋತ್ತರ ವ್ಯಾಪಾರದಲ್ಲಿ ಸಂಪರ್ಕ ಹೊಂದಲು ಹಾಗೂ ವ್ಯಾಪಾರವನ್ನು ವೃದ್ಧಿಸಲು ೧೭೯೩ರಲ್ಲಿ ಮೀರಯಾಮ್ ಎನ್ನುವ ನೌಕಾ ಇಲಾಖೆಯನ್ನು ಜಾರಿಗೆ ತಂದನು. ಸಾಗರೋತ್ತರ ಮತ್ತು ತೀರ ವ್ಯಾಪಾರದ ರಕ್ಷಣೆಯನ್ನು ನಿಯಂತ್ರಣ ಮಂಡಳಿಯ ರಕ್ಷಣಾಪಡೆ ನಿರ್ವಹಿಸುತ್ತಿತ್ತು. ಈ ರಕ್ಷಣಾಪಡೆಗಳು ವ್ಯಾಪಾರ ವಾಣಿಜ್ಯಕ್ಕೆ ಸ್ವಂತ ನೌಕೆಗಳನ್ನು ನಿರ್ಮಿಸಿಕೊಂಡು ವ್ಯಾಪಾರ ವಾಣಿಜ್ಯದಲ್ಲಿ ತೊಡಗಲು ಅವಕಾಶ ನೀಡಿತ್ತು. ರಾಜ್ಯದ ವರ್ತಕರು ೩೧ ಪ್ರತ್ಯೇಕ ವಾಣಿಜ್ಯ ನೌಕೆಗಳನ್ನು ಹೊಂದುವ ಅವಕಾಶವಿತ್ತು. ಮಂಗಳೂರು, ವಜಿದಾಬಾದ ಮತ್ತು ಮಜಿದಾಬಾದ್ ವರ್ತಕರು ಈ ನೌಕೆಗಳನ್ನೂ ಹೊಂದುವ ಅವಕಾಶವಿತ್ತು(ಗೋಪಾಲ್ ೧೯೭೧:೨೨). ಈ ಮೂಲಕ ದೇಶಿಯ, ವಿದೇಶಿಯ ವ್ಯಾಪಾರ ನಿರ್ವಹಿಸುತ್ತಿದ್ದರು.

ಟಿಪ್ಪು ತನ್ನದೇ ಆದ ನೌಕಾ ವ್ಯವಸ್ಥೆಯನ್ನು ಹೊಂದಿದ್ದು ಸಂಸ್ಥಾನದಲ್ಲಿ ವಾಣಿಜ್ಯ ವೃದ್ಧಿಗೆ ವಿಶೇಷ ಗಮನಹರಿಸಿರುವುದು ಕಂಡುಬರುತ್ತದೆ. ಟಿಪ್ಪು ಸುಲ್ತಾನನು ಯುರೋಪಿಯನ್ನರೊಂದಿಗೆ ಹೊಂದಿದ್ದ ವ್ಯಾಪಾರ ಸಂಬಂಧ ತೊರೆದು ಸ್ವಂತ ವ್ಯಾಪಾರವನ್ನು ಮಧ್ಯ ಪ್ರಾಚ್ಯದೊಂದಿಗೆ ಸಂಬಂಧ ಬೆಳೆಸಬೇಕೆಂದು ನಿರ್ಧರಿಸಿದ್ದೇ ಬ್ರಿಟಿಶರ ಕೋಪಕ್ಕೆ ಕಾರಣವಾಯಿತು. ವಿದೇಶಿಯ ವ್ಯಾಪಾರ ನಡೆಯುವ ಸ್ಥಳಗಳಲ್ಲಿ ವಾಣಿಜ್ಯ ಕಾರ್ಖಾನೆಗಳನ್ನು ಸ್ಥಾಪಿಸಿ ಸರ್ಕಾರದಿಂದ ನೇಮಿಸಲ್ಪಟ್ಟ ಏಜೆಂಟ್‌ಗಳನ್ನು ನೇಮಿಸಿದನು. ಇದರಿಂದ ವಿದೇಶೀಯ ವ್ಯಾಪಾರ ಸುಗಮವಾಗುವಂತೆ ಮಾಡಿದನು. ಟಿಪ್ಪು ವಿದೇಶಿಯ ವ್ಯಾಪಾರದಲ್ಲಿ ಅಂತರರಾಜ್ಯದ ಬಾಂಬೆಯ ಶ್ರೀಮಂತ ವರ್ತಕನಾದ ಜೇಮ್ಸ್‌ಥಾಮಸ್ ಅವರೊಂದಿಗೆ ಪತ್ರವ್ಯವಹಾರ ನಡೆಸಿ ಯುದ್ಧನೀತಿಯಿಂದಾಗಿ ಮಲಬಾರ್ ತೀರದ ಬ್ರಿಟಿಶರ ವ್ಯಾಪಾರದ ಚಟುವಟಿಕೆಯ ಮೇಲೆ ಆರ್ಥಿಕ ದಿಗ್ಬಂಧನವನ್ನು ಹೇರುವ ಪ್ರಯತ್ನ ಮಾಡಿದನು (ವಸು೨೦೦೯:೨೨೨). ಮೂರನೇ ಆಂಗ್ಲೋ ಮೈಸೂರು ಯುದ್ಧವು ಟಿಪ್ಪು ಮತ್ತು ಬ್ರಿಟಿಶರ ನಡುವಿನ ವಾಣಿಜ್ಯ ಹಿತಾಸಕ್ತಿಗಳ ಸಂಘರ್ಷವಾಗಿತ್ತು. ಈ ಮೂಲಕ ಕರಾವಳಿ ಕರ್ನಾಟಕದಲ್ಲಿ ಪ್ರಮುಖವಾಗಿ ವ್ಯಾಪಾರದಲ್ಲಿ ಗುರುತಿಸಿಕೊಂಡ ಟಿಪ್ಪು ಸುಲ್ತಾನನನ್ನು ವಿದೇಶೀಯ ವ್ಯಾಪಾರವನ್ನು

ಅನೇಕ ರೀತಿಯಾದ ಯೋಜನೆ ರೂಪಿಸಿ ಹೊರ ರಾಜ್ಯದಿಂದ ಬರುವ ವ್ಯಾಪಾರಿಗಳಿಗೆ ವ್ಯಾಪಾರದ ರಿಯಾಯಿತಿಗಳನ್ನು ನೀಡಿದ್ದನು. ಹೀಗೆ ಟಿಪ್ಪುಸುಲ್ತಾನನ ಕಾಲದಲ್ಲಿ ವರ್ತಕರಾದ ಬಣಜಿಗರು, ಮಾರವಾಡಿಗಳು, ಗುಜರಾತಿಗಳು, ಕೋಮಟಿಗರು ಮೊದಲಾದವರು ಕರ್ನಾಟಕದ ವ್ಯಾಪಾರ-ವಾಣಿಜ್ಯಕ್ಕೆ ವಲಸೆ ಬಂದರು. ಹೈದರ್‌ನು ರಾಜ್ಯಗಳನ್ನು ವಶಪಡಿಸಿಕೊಳ್ಳಬೇಕೆಂಬ ಆಕ್ರಮಣ ನೀತಿಯನ್ನು ಹೊಂದಿರುವುದು ವಿದೇಶಗಳೊಂದಿಗೆ ಮೈಸೂರು ಸಂಸ್ಥಾನ ವ್ಯಾಪಾರ ವಾಣಿಜ್ಯದಲ್ಲಿ ಗುರುತಿಸಿಕೊಳ್ಳುವಂತೆ ಮಾಡಿತ್ತು.

ಈ ಮೂಲಕವಾಗಿ ಕರ್ನಾಟಕದ ಕರಾವಳಿಯಲ್ಲಿ ಟಿಪ್ಪು ಸುಲ್ತಾನನ್ನು ತನ್ನದೇ ವಾಣಿಜ್ಯ ನೀತಿಯನ್ನು ರೂಪಿಸುವುದರ ಮೂಲಕ ಕರ್ನಾಟಕದ ಕರಾವಳಿಯನ್ನು ಕೆಳದಿಯ ಅವನತಿಯ ನಂತರ ಸಂಪೂರ್ಣ ಜವಾಬ್ದಾರಿ ನಿರ್ವಹಿಸಿಕೊಂಡು ಯುರೋಪಿಯನ್ನರೊಂದಿಗೆ ನಿರಂತರ ಹೋರಾಟ ಮತ್ತು ಸಂಘರ್ಷಗಳಲ್ಲಿ ತೊಡಗಿದನು. ಹಳೆ ಮೈಸೂರು ರಾಜ್ಯವನ್ನು ನಂತರದ ವಶಪಡಿಸಿಕೊಂಡು ಕರ್ನಾಟಕವನ್ನು ವಿಭಜಿಸಿ ಒಡೆದು ಹಾಳುವ ನೀತಿಯನ್ನು ರೂಪಿಸಿದರು. ಹೈದರ್ ಮತ್ತು ಟಿಪ್ಪುವಿಗೆ ಯಾವುದೇ ಹೊಸ ನೀತಿಯು ಬ್ರಿಟಿಶರ ವಿರುದ್ಧ ಕೆಲಸ ಮಾಡಲಿಲ್ಲ. ಕರ್ನಾಟಕದ ಕರಾವಳಿಯಲ್ಲಿ ಅಕ್ಕಿ, ಕರಿಮೆಣಸು, ಸಾಂಬಾರ ಪದಾರ್ಥಗಳು, ಶ್ರೀಗಂಧ, ಮತ್ತಿತರ ವಸ್ತುಗಳನ್ನು ವಿದೇಶಕ್ಕೆ ರಫ್ತು ಮಾಡಲಾರಂಭಿಸಿದರು. ಹತ್ತಿ ವ್ಯಾಪಾರವು ನಂತರದ ಕಾಲದಲ್ಲಿ ಪ್ರಮುಖವಾಗಿ ಗುರುತಿಸಿಕೊಳ್ಳುತ್ತದೆ.

ಇಂಗ್ಲಿಶ್ ಈಸ್ಟ್ ಇಂಡಿಯಾ ಕಂಪನಿ ಮಂಗಳೂರು ರೇವು ಬಂದರಿನಿಂದಲೇ ವಾರ್ಷಿಕವಾಗಿ ಸುಮಾರು ಮುನ್ನೂರು ಕಾರ್ಜೆ ಪ್ರಮಾಣದ ಅಕ್ಕಿಯನ್ನು ರಾಜ್ಯಕ್ಕೆ ಯಾವುದೇ ಸುಂಕ ನೀಡದೆ ಉಚಿತವಾಗಿ ವಿದೇಶಗಳಿಗೆ ಅಥವಾ ಇದೇ ಪ್ರಮಾಣದ ಅಕ್ಕಿಯನ್ನು ೨ ಬಾಂಬೆ ಒಳಗೊಂಡಂತೆ ಇತರೆ ತೀರಪಟ್ಟಣಗಳಿಗೆ ರವಾನಿಸುತ್ತಿತ್ತು. ವಿದೇಶಿ ವ್ಯಾಪಾರದಲ್ಲಿ ತೊಡಗಿಸಿಕೊಳ್ಳುತ್ತಿದ್ದ ಎಲ್ಲ ದೇಶಿ ಸಗಟು ವ್ಯಾಪಾರಿಗಳು ಈಸ್ಟ್ ಇಂಡಿಯಾ ಕಂಪನಿಯು ನಿಯಂತ್ರಣದಲ್ಲಿರಬೇಕಿತ್ತು. ಅವರಿಂದ ವರ್ತಕರು ಆಮದು ಮಾಡಿಕೊಂಡು ದೇಶೀಯ ಮಾರುಕಟ್ಟೆಯಲ್ಲಿ ಮಾರಾಟ ಮಾಡಲು ಅವಕಾಶವಿತ್ತು. ರಾಜ್ಯ ಶೇ. ೧೦/೦ರಷ್ಟು ಸುಂಕವನ್ನು ಕೊಡಬೇಕಿತ್ತು. ಅಶ್ವಗಳ ಮಾರಾಟವನ್ನು ಹೊರತುಪಡಿಸಿ ಸಕ್ಕರೆ, ತೆಂಗಿನಕಾಯಿ, ತಂಬಾಕು, ಓಪಿಯಮ್, ಹತ್ತಿ, ಉಪ್ಪು, ಅರಿಶಿಣ ಮತ್ತಿತರ ೧೪ ತರಹದ ಸರಕುಗಳಿಗೆ ಸುಂಕ ನೀಡುತ್ತಿದ್ದರು(ಚಂದ್ರಶೇಖರ್,ರಾವ್,೨೦೧೬:೬೬). ಮೈಸೂರು ಸಂಸ್ಥಾನದ ಆಂತರಿಕ ಹಾಗೂ ಹೊರ ವ್ಯಾಪಾರೀ ಕೇಂದ್ರಗಳಲ್ಲಿ ಚಿನ್ನ, ಬೆಳ್ಳಿ, ಇತರೇ ಬೆಲೆ ಬಾಳುವ ಲೋಹಗಳು, ವಸ್ತ್ರ, ಆನೆ ಇತ್ಯಾದಿ ಬೆಲೆ ಬಾಳುವ ಅಗತ್ಯ ಪದಾರ್ಥಗಳನ್ನು ಕೊಳ್ಳುತ್ತಿದ್ದರು. ಅವುಗಳನ್ನು ಅಧಿಕ ಬೆಲೆಗೆ ಮಾರಾಟ ಮಾಡುವ ಉದ್ದೇಶದಿಂದಲೇ ಸುಮಾರು ೪ ಲಕ್ಷ ರಹಟಿಗಳನ್ನು(೩,೨೦.೦೦೦ ಪಂಗೋಡಗಳನ್ನು) ಮೂಲ ಬಂಡವಾಳದ ರೂಪದಲ್ಲಿ ತನ್ನ ವಾಣಿಜ್ಯ ಅಧಿಕಾರಿಗಳಾದ ಮಲ್ಲಿಕ್-ಉತ್-ತುಜಾರರ ಉಸ್ತುವಾರಿಕೆಗೆ ನೀಡಲಾಗಿತ್ತು (ಚಂದ್ರಶೇಖರ್,ರಾವ್,(ಲ),೨೦೧೬:೭೫). ಈ ಮೂಲಕ ಹೈದರ್ ಮತ್ತು ಟಿಪ್ಪು ಬೆಳವಣಿಗೆಯ

ಜೊತೆ ಇಂಗ್ಲಿಶರ ಕಾಲವು ಸ್ಥಿತ್ಯಂತರದ ಮೂಲಕ ಕಂಡುಬರುತ್ತದೆ. ಬ್ರಟಿಶರು ಅಭಿವೃದ್ಧಿಯಾಗುತ್ತಾ ಸ್ಥಳೀಯ ಸಂಸ್ಥಾನಗಳನ್ನು ಮಟ್ಟಹಾಕಿದರು. ಹೀಗೆ ವಿಜಯನಗರೋತ್ತರ' ಕರ್ನಾಟಕದ ಕರಾವಳಿಯನ್ನು ಒಳಗೊಂಡಂತೆ ಭಾರತವನ್ನು ವಸಾಹತುವನ್ನಾಗಿ ಮಾಡಿಕೊಂಡು ಕರ್ನಾಟಕವನ್ನು ಮೈಸೂರು ಸಂಸ್ಥಾನ, ಹೈದರಾಬಾದ್ ಸಂಸ್ಥಾನ, ಬಾಂಬೆ ಪ್ರೆಸಿಡೆನ್ಸಿ, ಮುಂಬೈ ಪ್ರೆಸಿಡೆನ್ಸಿ ಎಂಬುದಾಗಿ ವಿಭಾಗಿಸಿ ವ್ಯಾಪಾರದಲ್ಲಿ ಅವರ ಅನುಕೂಲಕ್ಕೆ ತಕ್ಕಂತೆ ಬಳಸಿ ಅಭಿವೃದ್ಧಿಪಡಿಸಿ ರಾಜಕೀಯವಾಗಿ ಕರ್ನಾಟಕವನ್ನೊಳಗೊಂಡಂತೆ ಭಾರತವನ್ನು ಆಳ್ವಿಕೆ ಮಾಡಿದ್ದು ಕಂಡುಬರುತ್ತದೆ.

ವಸಾಹತು ರಾಜ್ಯ ಬೆಂಗಳೂರಿನ ಸಾಂಪ್ರದಾಯಿಕ ವರ್ತಕರನ್ನು ಕಂಟೋನ್ಮೆಂಟ್ ಪ್ರವೇಶಕ್ಕೆ ಬರದಂತೆ ತಡೆದದ್ದನ್ನು ಮುಖ್ಯವಾಗಿ ಗಮನಿಸಬಹುದು. ವಸಾಹತು ಕರ್ನಾಟಕವು ವಿದೇಶೀಯ ವ್ಯಾಪಾರದಲ್ಲಿ ಆದ ಒಂದು ಮುಖ್ಯ ಸ್ಥಿತ್ಯಂತರವೆಂದರೆ ಹತ್ತಿ ಮತ್ತು ರೇಷ್ಮೆ, ಕಾಫಿ ಬೆಳೆಗಳ ಬಗ್ಗೆ ಉತ್ತೇಜನ ನೀಡಿದ್ದು ಪ್ಲಾಂಟೇಷನ್ ಆರ್ಥಿಕತೆಯು ವಸಾಹತು ಕಾಲಘಟ್ಟದಲ್ಲಿ ಪ್ರಮುಖವಾಗಿ ಗುರುತಿಸಿಕೊಂಡಿದೆ.

ವಸಾಹತು ಕಾಲಘಟ್ಟದಲ್ಲಿ ಇನ್ನೊಂದು ಮುಖ್ಯ ಕಸುಬೆಂದರೆ. ಬದಲಾವಣೆಯೆಂದರೆ ಟಿಪ್ಪು ಜಾರಿಗೆ ವಿದೇಶೀಯ ವ್ಯಾಪಾರದ ಮಳಿಗೆಗಳ ಮೂಲಕ ನಡೆಯುವ ವ್ಯಾಪಾರವನ್ನು ನಿಲ್ಲಿಸಲಾಯಿತು. ಯಾವುದೇ ವ್ಯಾಪಾರ ಮಾಡಿದರೂ ಬ್ರಿಟಿಶರ ಒಪ್ಪಿಗೆ ಇಲ್ಲದೇ ಮಾಡುವಂತಿರಲಿಲ್ಲ. ಈ ಮೂಲಕ ವಿಜಯನಗರೋತ್ತರ ಕಾಲದಲ್ಲಿ ಇದುವರೆಗೂ ಗುರುತಿಸಿಕೊಂಡಿದ್ದ ವ್ಯಾಪಾರ ವಾಣಿಜ್ಯದ ಸ್ವರೂಪವನ್ನು ಬದಲಾಯಿಸಿತ್ತು. ಮೈಸೂರು ಒಡೆಯರು ರೂಪಿಸಿದ್ದ ಮಾರುಕಟ್ಟೆಕೇಂದ್ರಿತ ಅರ್ಥವ್ಯವಸ್ಥೆಯು ನಾಶವಾಗಿ ಬಂಡವಾಳಶಾಹಿ ನೇತೃತ್ವದ ಬೃಹತ್ ಮಾರುಕಟ್ಟೆಗಳು ಈ ಸಂದರ್ಭದಲ್ಲಿ ಬೆಳವಣಿಗೆಯಾದವು.

ವಸಾಹತು ಕಾಲಘಟ್ಟದಲ್ಲಿ ಸ್ಥಿತ್ಯಂತರಗೊಂಡ ಒಂದು ಮುಖ್ಯ ಕಸುಬೆಂದರೆ ಬದಲಾವಣೆಯೆಂದರೆ ನೇಕಾರಿಕೆಯ ಬದಲಾವಣೆಗೆ ಸಂಬಂಧಿಸಿದಂತೆ ಸೂರತ್ ಕೌನ್ಸಿಲ್ ೧೬೬೪ರಲ್ಲಿ ಹಣದ ಮುಂಗಡವಿಲ್ಲದೇ ಯಾವುದೇ ವಸ್ತುವನ್ನು ಉತ್ಪಾದಿಸಲು ಅವಕಾಶವಿರಲಿಲ್ಲ ಎಂಬುದನ್ನು ತಿಳಿಸುತ್ತದೆ. ಬಂಡವಾಳಕೇಂದ್ರಿತ ಕೈಗಾರಿಕೆಗಳು ಅಸ್ತಿತ್ವಕ್ಕೆ ಬಂದಾಗಿನಿಂದ ನೇಕಾರಿಕೆಯ ಕಸುಬಿನ ಮೇಲಾದ ದೊಡ್ಡ ಒಡೆತನದ ನೆಯ್ಗೆ ಕೈಗಾರಿಕೆಗಳು ರಚನೆಗೊಂಡವು.

**೫.೨.ವರ್ತಕರು**

ಮಾನವ ಎಂದು ಸ್ಥಿರ ಜೀವನವನ್ನು ಕಂಡುಕೊಂಡನೋ ಅಂದೇ ಅವನ ಆರ್ಥಿಕತೆಯ ಪರಿಕಲ್ಪನೆ ಉದಯಿಸಿತು. ಹೀಗೆ ಮಾನವ ಜನಾಂಗದ ಆರ್ಥಿಕ ಬದುಕನ್ನು ರೂಪಿಸಿದ ಹಲವಾರು ಅಂಶಗಳಲ್ಲಿ ವರ್ತಕರು ಸಹ ಒಬ್ಬರು. ಅವರು ರೂಪಿಸಿಕೊಂಡ ಸಂಘಗಳು ಬಹುಮುಖ್ಯ ಪಾತ್ರವನ್ನು ಮಧ್ಯಕಾಲೀನ ಚರಿತ್ರೆಯಲ್ಲಿ ವಹಿಸುತ್ತವೆ. ವ್ಯಾಪಾರ ವೃತ್ತಿಯಿಂದ ಸಮಾಜದ ಜೀವನ ಸ್ಥಿತಿ, ನಾಡಿನ ಆರ್ಥಿಕ ಪರಿಸ್ಥಿತಿಗಳು ಒಂದು ರೂಪ ಪಡೆಯುತ್ತವೆ. ಯಾವುದೇ ಪ್ರದೇಶವು ಹಳ್ಳಿಯ ಸ್ವರೂಪದಿಂದ ಪಟ್ಟಣ-ನಗರಗಳಾಗಿ ಗುರುತಿಸಿಕೊಳ್ಳುವಲ್ಲಿ ವರ್ತಕ ಸಮುದಾಯದ ಪಾತ್ರ ಮುಖ್ಯವಾಗಿರುತ್ತದೆ.

ಭಾರತದಲ್ಲಿ ವ್ಯಾಪಾರ-ವಾಣಿಜ್ಯದಲ್ಲಿ ಆರಂಭದಿಂದಲೂ ಈ ವರ್ತಕ ಸಮುದಾಯವು ಕಂಡುಬರುತ್ತದೆ. ಕೃಷಿ ಉತ್ಪನ್ನಗಳ ವ್ಯಾಪಕ ಹೆಚ್ಚುರಿಯಿಂದ ವ್ಯಾಪಾರ ಪ್ರವರ್ಧಮಾನಕ್ಕೆ ಬಂದು ಪಟ್ಟಣಗಳು ನಿರ್ಮಾಣವಾದವು. ಆಗ ತನ್ನಷ್ಟಕ್ಕೆ ತಾನೇ ನಗರ ಆರ್ಥಿಕತೆಯು ಅಸ್ತಿತ್ವಕ್ಕೆ ಬಂದು ಸ್ಥಳೀಯ ಮತ್ತು ದೂರದ ಮಾರುಕಟ್ಟೆಗಳಿಗೆ ಸರಕುಗಳನ್ನು ಮಾರಾಟ ಮಾಡುವಲ್ಲಿ ವ್ಯಾಪಾರಿ ಸಮುದಾಯಗಳು ಗುರುತಿಸಿಕೊಂಡವು. ಭಾರತದ ಕೃಷಿ ಉತ್ಪನ್ನಗಳಾದ ಹತ್ತಿ, ಇಂಡಿಗೋ, ಮೆಣಸು, ಅಕ್ಕಿ ರೇಷ್ಮೆ ಮೊದಲಾದ ವಸ್ತುಗಳ ಉತ್ಪಾದನೆ ಹೆಚ್ಚಾದ್ದರಿಂದ ವಿಜಯನಗರೋತ್ತರ ಕಾಲದಲ್ಲಿ ವರ್ತಕ ಸಮುದಾಯಗಳು ಸ್ಥಿತ್ಯಂತರಗಳನ್ನು ಕಂಡುಕೊಳ್ಳಲು ಸಾಧ್ಯವಾಯಿತು. ಹೊಸ ವರ್ತಕ ಸಮುದಾಯಗಳು ಮಧ್ಯಕಾಲದಲ್ಲಿ ಕರ್ನಾಟಕಕ್ಕೆ ವಲಸೆ ಬಂದವು. ವರ್ತಕರ ವ್ಯಾಪಾರದ ವೃದ್ಧಿಯಿಂದ ವಿಶ್ವಕ್ಕೆ ಭಾರತದ ಮಾರುಕಟ್ಟೆಯು ತೆರೆಯುವ ಮೂಲಕ ವರ್ತಕರು ಗುರುತಿಸಿಕೊಂಡರು. ಹಾಗಾಗಿ ಪಾಶ್ಚಿಮಾತ್ಯ ಯುರೋಪಿನ ವ್ಯಾಪಾರಿ ಭಾರತದ ವ್ಯಾಪಾರ-ವಾಣಿಜ್ಯದಲ್ಲಿ ತೊಡಗಿ ಅಂತರ್‌ರಾಜ್ಯ ವರ್ತಕ ಸಮುದಾಯಗಳ ಹುಟ್ಟಿಗೂ ಕಾರಣವಾಯಿತು.

ಯಾವುದೇ ಪ್ರದೇಶ ನಗರ ರೂಪವನ್ನು ಪಡೆದುಕೊಳ್ಳುವುದಕ್ಕೆ ವರ್ತಕ ಸಮುದಾಯದವರು ಮುಖ್ಯರಾಗಿರುತ್ತಾರೆ. ೧೫, ೧೬ನೇ ಶತಮಾನದ ವ್ಯಾಪಾರ-ವಾಣಿಜ್ಯದ ಸ್ವರೂಪದಲ್ಲಿ ಈ ವರ್ತಕರು ಹಲವಾರು ಸ್ಥಿತ್ಯಂತರಕ್ಕೆ ಒಳಪಡುತ್ತಾರೆ. ಕೆಲವು ವರ್ತಕರು ಅವರ ಕೈ ಕಸುಬಿನಲ್ಲಿ ಪರಿಣತಿಯನ್ನು ಹೊಂದಿರುತ್ತಾರೆ. ಕೆಲವೊಂದು ಪ್ರದೇಶಗಳು ಕೃಷಿ ಉತ್ಪನ್ನಗಳ ವ್ಯಾಪಾರದಿಂದ ಅಲ್ಲಿ ಮಾರುವ ಉತ್ಪನ್ನಗಳಿಂದ ಗುರುತಿಸಿಕೊಂಡಿರುತ್ತಾರೆ. ಇದಕ್ಕೆ ಉದಾಹಣೆಯಾಗಿ ಕೆಳದಿಯ ನಾಯಕರ ಕಾಲದಲ್ಲಿ ಅಕ್ಕಿಪೇಟೆ ಎಂಬ ಪ್ರದೇಶದ ಧಾನ್ಯದ ವರ್ತಕರಾದ ಸಾಲು ಮೂಲೆ ಬಣಜಿಗರಿಂದ ಗುರುತಿಸಿಕೊಳ್ಳುತ್ತದೆ. ಬಳ್ಳಾರಿ ನೇಕಾರಿಕೆಯ ಉದ್ದಿಮೆಯ ಮೂಲಕ ಗುರುತಿಸಿಕೊಂಡಿದೆ. ಕರಾವಳಿ ಕರ್ನಾಟಕ ವಾಣಿಜ್ಯ ಬೆಳೆಗಳ ವ್ಯಾಪಾರ-ವಾಣಿಜ್ಯದಿಂದ ಪ್ರಸಿದ್ಧಿ ಹೊಂದಿದೆ. ಹೀಗಾಗಿ ಅಲ್ಲಿ ಮಾರಾಟ ಮಾಡುವ ವಸ್ತುಗಳ ಮೂಲಕ ವ್ಯಾಪಾರಿ ಸಮುದಾಯವನ್ನು ಕಾಣಬಹುದು.

ವ್ಯಾಪಾರವನ್ನು ನಿರ್ವಹಿಸುವ ವರ್ತಕರನ್ನು ಪ್ರಾಚೀನ ಕಾಲದಿಂದಲೂ ಗುರುತಿಸಿದ್ದಂತೆ ವಿಜಯನಗರೋತ್ತರ ಕಾಲದಲ್ಲಿಯೂ ವಿಂಗಡಿಸಬಹುದು. ಇದರಲ್ಲಿ ಎರಡು ವಿಧಗಳಿವೆ.

**ವಿನಿಮಯ ವರ್ತಕರು:** ವ್ಯಾಪಾರವನ್ನೇ ಕೇಂದ್ರವನ್ನಾಗಿಸಿಕೊಂಡು ವ್ಯಾಪಾರ ನಿರ್ವಹಿಸುವ ವರ್ತಕರು, ಸೆಟ್ಟರು, ಮುಮ್ಮರಿದಂಡರು, ನಖರು, ನಾನಾದೇಶಿ ವಡ್ಡ ವ್ಯವಹಾರಿ, ಗವರೆ ಗಾತ್ರಿಗ, ಸೆಟ್ಟಿ ಅಥವಾ ಬಣಂಜಿಗರು ಇವರು ವಿನಿಮಯ ವರ್ತಕರಾಗಿ ಗುರುತಿಸಿಕೊಂಡಿದ್ದಾರೆ.

**ಉತ್ಪಾದಕ ವಿನಿಮಯ ವರ್ತಕರು:** ಇವರು ಗುಡಿ ಕೈಗಾರಿಕೆಗಳ ಮೂಲಕ ತಾವೇ ಉತ್ಪಾದಿಸಿದ ವಸ್ತುಗಳನ್ನು ಮಾರಾಟ ಮಾಡುವ ವರ್ತಕರಾಗಿದ್ದರು. ಇವರು ವರ್ತಕರೂ ಹೌದು ಉತ್ಪಾದಕರಾಗಿ ಕಾರ್ಯ ನಿರ್ವಹಿಸುವ ವರ್ತಕರಾಗಿದ್ದರು. ಕುಂಬಾರ, ಅಕ್ಕಸಾಲಿಗ, ಮಾದಿಗ, ಸಮಗಾರ, ಮೇದ ಮೊದಲಾದ ವರ್ತಕರನ್ನು ಇಲ್ಲಿ ಹೆಸರಿಸಬಹುದು(ಹಿರೇಮಠ,೧೯೮೬:೧೧-೬೩). ಉತ್ಪಾದನಾ

ವಿನಿಮಯ ವರ್ತಕರು ವಿಜಯನಗರೋತ್ತರ ಕಾಲದಲ್ಲಿ ಪಂಚಾಳರಾಗಿ ಗುರುತಿಸಿಕೊಳ್ಳುತ್ತಾರೆ. ಪಂಚಕಾರುಕ ವೃತ್ತಿಯನ್ನು ನಿರ್ವಹಿಸುವವರೇ ಈ ಮೂಲಕ ೧೬ನೇ ಶತಮಾನದ ವೇಳೆಗೆ ಈ ಕಸುಬುಗಳ ವರ್ತಕರ ಸ್ಥಳೀಯ ವ್ಯಾಪಾರವೂ ಹೆಚ್ಚು ಚುರುಕುಗೊಂಡಿತು. ಸ್ಥಳೀಯ ವರ್ತಕ ಸಮುದಾಯವಲ್ಲದೆ ಹೊರ ರಾಜ್ಯದಿಂದ ವಿಜಯನಗರೋತ್ತರ ಕಾಲದಲ್ಲಿ ಕರ್ನಾಟಕದ ಕರಾವಳಿ ಒಳನಾಡಿಗೆ ಬಂದು ನೆಲೆಸಿದ ವರ್ತಕ ಸಮುದಾಯವನ್ನು ಸಹ ಗುರುತಿಬಹುದು. ವಿಜಯನಗರೋತ್ತರ ಕಾಲದಲ್ಲಿ ಭಾರತಕ್ಕೆ ಬಂದ ಕಂಪನಿ ವ್ಯಾಪಾರಿಗಳಾಗಿದ್ದವರೆಂದರೆ ಪೋರ್ಚುಗೀಸರು, ಡಚ್ಚರು, ಇಂಗ್ಲಿಶರು ಮತ್ತು ಫ್ರೆಂಚರು, ಅರಬ್ಬರು, ನವಾಯತರು, ಇವು ವಿದೇಶಿ ವರ್ತಕ ಸಮುದಾಯಗಳಾಗಿದ್ದವು. ಹಾಗಾಗಿ ಇವರು ಈ ಕಾಲದ ವ್ಯಾಪಾರ ವಾಣಿಜ್ಯದಲ್ಲಿ ಹಲವಾರು ಸ್ಥಿತ್ಯಂತರಕ್ಕೆ ಕಾರಣವಾದರು. ಇವರು ವ್ಯಾಪಾರದ ಹಿನ್ನಲೆಯಿಂದ ಭಾರತಕ್ಕೆ ಬಂದವರಾದ್ದರಿಂದ ವರ್ತಕ ಸಮುದಾಯದ ಹಿನ್ನಲೆಯಲ್ಲಿ ವಿವರಿಸಲಾಗುವುದು. ಒಟ್ಟಾರೆಯಾಗಿ ವಿಜಯನಗರೋತ್ತರ ಕಾಲದಲ್ಲಿ ವ್ಯಾಪಾರದಲ್ಲಿ ಅಂತರ್‌ರಾಜ್ಯದ ವ್ಯಾಪಾರಿ ಸಮುದಾಯಗಳ ಪಾತ್ರ ಮುಖ್ಯವಾಗಿ ಕಂಡುಬರುತ್ತದೆ.

ಕ್ರಿ.ಶ.೧೪ನೇ ಶತಮಾನದಿಂದ ೧೮ನೇ ಶತಮಾನದವರೆಗೆ ಕರ್ನಾಟಕದ ವ್ಯಾಪಾರ ವಾಣಿಜ್ಯದಲ್ಲಿ ಗುರುತಿಸಿಕೊಳ್ಳುವ ಸಮುದಾಯವೆಂದರೆ ಸೆಟ್ಟಿಗಳು, ಬಣಜಿಗರು, ವೀರಬಣಜಿಗರು, ಸಾಲುಮೂಲೆ ಬಣಜಿಗರು, ಪರ್ಶಿಯನ್ನರು, ಅರೇಬಿಯನ್ನರು, ಮಾಪಿಳ್ಳೆಗಳು, ದಕ್ಕನಿಗಳು, ನವಾಯತರು ಪೋರ್ಚುಗೀಸರು, ಡಚ್ಚರು, ಫ್ರೆಂಚರು, ಬ್ರಿಟಿಶರು, ಕೊಂಕಣಿಗಳು ಮತ್ತು ಗುಜರಾತಿಗಳು, ವರ್ತಕ ಸಂಘಗಳಲ್ಲಿ ಬಣಜಿಗರು, ನಖರು, ಸೆಟ್ಟಿಗಳು, ಸೆಟ್ಟಿಗುತ್ತರು, ನಗರ, ಹಂಜಮಾನರು ಕರ್ನಾಟಕದ ಕರಾವಳಿ ಮತ್ತು ಸ್ಥಳೀಯ ವ್ಯಾಪಾರದಲ್ಲಿ ಆಮದು ರಫ್ತು ಕಾರ್ಯವನ್ನು ನಿರ್ವಹಿಸುತ್ತಿದ್ದರು. (ಗೋವಿಂದರಾಜು,೨೦೧೧:೧೨).

ವಿಜಯನಗರೋತ್ತರ ಕಾಲವು ಸಾಗರೋತ್ತರ ವ್ಯಾಪಾರದಲ್ಲಿ ಹೆಚ್ಚಾಗಿ ಗುರುತಿಸಿಕೊಳ್ಳುತ್ತದೆ. ಇಲ್ಲಿ ಕೃಷಿ ಉತ್ಪನ್ನ ವ್ಯಾಪಾರಕ್ಕೆ ವಿದೇಶೀಯ ಕಂಪನಿಗಳು ಬಂದು ಭಾರತದ ನೆಲದ ಮೇಲೆ ನೆಲೆಯೂರಿದ್ದರಿಂದ ಭಾರತದಲ್ಲಿ ಹೊಸ ವರ್ತಕ ಸಮುದಾಯಗಳ ಮೂಲಕ ಗುರುತಿಸಿಕೊಳ್ಳುತ್ತದೆ.

**೫.೨.೧. ಸ್ಥಳೀಯ ವರ್ತಕರು**

ಸ್ಥಳೀಯ ವರ್ತಕರೆಂದರೆ ಪ್ರಾಚೀನ ಕಾಲದಿಂದಲೂ ಗ್ರಾಮ ಮಟ್ಟದಿಂದ ನಗರ ಜೀವನದವರೆಗೂ ವ್ಯಾಪಾರ ವಾಣಿಜ್ಯವನ್ನೇ ವೃತ್ತಿಯನ್ನಾಗಿಸಿಕೊಂಡು ಕಾರ್ಯ ನಿರ್ವಹಿಸುವ ವರ್ತಕರು. ಒಂದು ಪ್ರದೇಶದಿಂದ ಬೇರೊಂದ ಪ್ರದೇಶಕ್ಕೆ ಸರಕುಗಳನ್ನು ಗಾಡಿ ಇಲ್ಲವೇ ಪ್ರಾಣಿಗಳ ಮೇಲೆ ಸರಕು ತೆಗೆದು ಕೊಂಡು ವ್ಯಾಪಾರವನ್ನು ತಮ್ಮ ವೃತ್ತಿಯನ್ನಾಗಿ ನಿರ್ವಹಿಸುವವರು ಇವರಲ್ಲಿ ಶೆಟ್ಟರು, ನಕರ, ಮುಮ್ಮರಿದಂಡರು.ಗವರೆ, ಗಾತ್ರಿಗ ಮೊದಲಾದ ವರ್ತಕ ಸಮುದಾಯಗಳು ಕಂಡುಬರುತ್ತವೆ. ಈ ವರ್ತಕ ಸಮುದಾಯವನ್ನು ಸ್ಥಳೀಯ ವರ್ತಕ ಸಮುದಾಯದವರು ಎಂದು ಕರೆಯಲಾಗಿದೆ.

ಶೆಟ್ಟರು

ಶೆಟ್ಟರು ಸ್ವಗ್ರಾಮದಲ್ಲಿ ವ್ಯಾಪಾರ ಮಾಡುತ್ತಿದ್ದರಿಂದ ಬೇರೆ ಗ್ರಾಮಗಳ ವ್ಯಾಪಾರಿಗಳಿಂದ ಸ್ಥಳ ವಿಶೇಷಣದಿಂದ ಗುರುತಿಸಲ್ಪಡುತ್ತಿದ್ದರು. ಇವರ ವ್ಯಾಪಾರವನ್ನೇ ತಮ್ಮ ಮೂಲ ವೃತ್ತಿಯನ್ನಾಗಿಸಿದ ಸಮುದಾಯದವರು ಕೆಳದಿ ನಾಯಕರ ಕಾಲದಲ್ಲಿ ವರ್ತಕರು ಮತ್ತು ವರ್ತಕ ಶ್ರೇಣಿಗಳು ಮುಖ್ಯವಾದ ಪಾತ್ರ ವಹಿಸುತ್ತಿದ್ದವು. ಒಂದು ಪ್ರಮುಖ ವೃತ್ತಿಯನ್ನು ಅವಲಂಬಿಸಿದವರು ಒಂದೇ ಶ್ರೇಣಿಗೆ ಸೇರುತ್ತಿದ್ದರು. ಒಂದು ಶ್ರೇಣಿಯನ್ನು ಒಟ್ಟಾಗಿಸುವ ಕೆಲಸವನ್ನು ಜಾತಿ ಮಾಡುತ್ತಿತ್ತು. ಶಾಸನಗಳಲ್ಲಿ ವರ್ತಕರ ಅನೇಕ ಹೆಸರುಗಳಿವೆ. ಚನ್ನ ಒಸೆಟೆ, ಜೀರಿಗೆ ಯುದ್ಧಸೆಟ್ಟಿ, ತಂಮಿಸೆಟ್ಟಿ, ಶೀಲವಂತ ಉಗ್ರಪ್ಪ, ಕಲ್ಯಾಣಸೆಟ್ಟಿ, ಸೂಗೂರುನಾಗಣ್ಣ, ಮಹಾಬಲಸೆಟ್ಟಿ, ಒಳಾಪುರ ಕೆಂಪಣ್ಣ, ಭದ್ರಾಸೆಟ್ಟಿ, ಅನವೇರಿ ನಾಗಣ್ಣ ಕೊಡವಳ್ಳಿ, ಸರ್ವಣ ಚನ್ನಪ್ಪ, ಮದೇವಪುರ ಕಾಳಿಂಗಸೆಟ್ಟಿ, ಹೊಂಬುಜದ ಚನ್ನಪ್ಪ ಸೆಟ್ಟಿ ಮೊದಗೋಡೋರು, ಬಸವಣ್ಣ, ಮುಂಡುವಳ್ಳಿ, ಚನ್ನಮಲ್ಲಸೆಟ್ಟಿ, ವಾಲೆವೀರಣ್ಣ, ಕಡಲೆಬಸೆಟ್ಟಿ ಗುತ್ತಿಸಂಗರಣ, ಉಮ್ಮಳಲಿ ಭದ್ರಣ, ತವನಿದಿಸಂಗಣ, ಜಡೆಯಪೆರಂಬೂರ ತಿಂಮಣ, ಧರ್ಮಾವರದರಾಚಣ ಬೇಲೂರು ಬಸವಲಿಂಗ ಸೆಟ್ಟಿ ಕೋಟಿ ಸೋಮಣ್ಣ. ಕೆಟಿಗೆರೆ ಲಿಂಗಣವೊಡೆಯರ, ಉಪ್ಪಿನ ರಾಚಣ್ಣ, ಬೋಗಾರ ತಿಪ್ಪಿಸೆಟ್ಟಿ, ಮುಂತಾದವರು ವ್ಯಾಪಾರ ನಡೆಸುತ್ತಿದ್ದರು (ಅರುಣ್,೨೦೦೬:೧೩೯). ಕೆಳದಿ ನಾಯಕರ ಕಾಲದಲ್ಲಿ ಮೂಚರಾಣದ ಸೆಟ್ಟಿಯರೆಲ್ಲ ಸೇರಿ ಶಿವದೇವಾಲಯವೊಂದಕ್ಕೆ ಬಂದು ವೀಸಾ ಬಿಟ್ಟಿರುವುದನ್ನು ತಿಳಿಸುತ್ತದೆ(ಗುಂಡಾಜೋಯಿಸ್, ೧೯೯೬:೪೪). ಕೆಳದಿಯ ನಾಯಕರ ಕಾಲದಲ್ಲಿ ಸ್ಥಳೀಯ ಸಂತೆಯ ವ್ಯಾಪಾರದಲ್ಲಿ ಈ ವರ್ತಕರು ವ್ಯಾಪಾರವನ್ನು ನಿರ್ವಹಿಸುತ್ತಿದ್ದರು.

ಮೈಸೂರು ಸಂಸ್ಥಾನದಲ್ಲಿ ಆರ್ಥಿಕ ವ್ಯವಸ್ಥೆಯಲ್ಲಿ ಸೆಟ್ಟರು ವ್ಯಾಪಾರದಲ್ಲಿ ನಿರತರಾಗಿದ್ದರು. ಇವರು ಚಿನ್ನ, ಬೆಳ್ಳಿ, ಮುಂತಾದ ಬೆಲೆಯುಳ್ಳ ವಸ್ತುಗಳ ವ್ಯಾಪಾರ ಮಾಡುತ್ತಿದ್ದರು. ಶೆಟ್ಟಿಗಳಲ್ಲಿ ಮೈಸೂರು ಒಡೆಯರ ಕಾಲದಲ್ಲಿ ಬೇರೆ ಬೇರೆ ಹೆಸರುಗಳಿಂದ ಗುರುತಿಸಿಕೊಳ್ಳುತ್ತಾರೆ. ತೆಲುಗು ಶೆಟ್ಟರು, ದೇವಾಂಗ ಶೆಟ್ಟರು ಪ್ರಮುಖರಾಗಿದ್ದರು. ರಾಜ್ಯದಲ್ಲಿ ವ್ಯಾಪಾರಿಗಳನ್ನು ಉತ್ತೇಜಿಸುವುದಕ್ಕೆ ಪ್ರಭುತ್ವದೇ ಅವಕಾಶ ನೀಡುತ್ತಿತ್ತು. ರಾಜ್ಯದ ಪ್ರಮುಖ ವ್ಯಾಪಾರಿ ಚಟುವಟಿಕೆಗಳನ್ನು ವ್ಯಾಪಾರಿ ಶ್ರೇಣಿಗಳು ಸಮುದಾಯಗಳೇ ನಿಯಂತ್ರಿಸುತ್ತಿದ್ದವು. ಗುಂಡ್ಲುಪೇಟೆಯ ಒಂದು ಶಾಸನ ನಾಲ್ಕು ದಿಕ್ಕಿನ ೫೬ ದೇಶದ ಎಂಟು ಬಗೆ ಪಲರು, ಪಟ್ಟಾಕಾರರು ಸೇರಿ ನಂಜನಗೂಡಿನ ಶಂಕರೈಯನ್ನ ದೇವಾಲಯಕ್ಕೆ ಮತ್ತು ಮಠಕ್ಕೆ ಅನ್ನ ಸಂತರ್ಪಣೆಗೆ ಧಾನನೀಡಿರುವುದನ್ನು ತಿಳಿಸುತ್ತದೆ. ಅದರಲ್ಲಿ ಈ ಸೆಟ್ಟಿಗಳು ಸೇರಿದ್ದರು(ಎ.ಕ.೪,ಚಾ:೧೫೦).

ಚಿತ್ರದುರ್ಗದ ನಾಯಕರ ಆಳ್ವಿಕೆಯನ್ನು ಕುರಿತಂತೆ ಶೆಟ್ಟರು ವ್ಯಾಪಾರದಲ್ಲಿ ಗುರುತಿಸಿಕೊಂಡಿರುವುದು ಕಂಡುಬರುತ್ತದೆ. ಪ್ರಾಚೀನ ಕಾಲದಿಂದಲೂ ವ್ಯಾಪಾರ ವೃತ್ತಿಯನ್ನೇ ನಿರ್ವಹಿಸಿಕೊಂಡ ಸಮುದಾಯವೆಂದರೆ ಶೆಟ್ಟರು. ಇವರು ವ್ಯಾಪಾರ ಅಂಗಡಿಗಳನ್ನು ನಿರ್ಮಿಸಿಕೊಂಡು ನೆಲೆ ನಿಂತು ವ್ಯಾಪಾರ ಮಾಡುವವರಾಗಿದ್ದರು.

**ನಕರರು(ನಖರರು)**

ಮಧ್ಯಕಾಲೀನ ಕರ್ನಾಟಕದ ಪಟ್ಟಣಗಳ ವ್ಯಾಪಾರದಲ್ಲಿ ನಕರರು ಮುಖ್ಯ ಪಾತ್ರ ವಹಿಸಿದ್ದರೆಂದರೆ ತಪ್ಪಾಗಲಾರದು. ಇವರು ಸಂತೆ, ಪೇಟೆಗಳಿಗೆ ಬಂದ ಸರಕುಗಳನ್ನು ಖರೀದಿಸಿ, ಬಯಲು ಅಂಗಡಿ ಹಾಗು ಮಳಿಗೆಗಳಲ್ಲಿಟ್ಟು ಮಾರಾಟ ಮಾಡುವ ಸಮುದಾಯವಾಗಿತ್ತು. ಕುರುಗೋಡಿನ ಸಿಂಧರ ಆಳ್ವಿಕೆಯ ಕಾಲದ ಒಂದು ಶಾಸನ ಇವರನ್ನು ಪಟ್ಟಣದ ನಕರು ಎಂದು ಉಲ್ಲೇಖಿಸುತ್ತದೆ. ಈ ನಕರ ಸಮುದಾಯದವರು ಶೈವರೂ ಜೈನರೂ ಸಹ ಆಗಿದ್ದರು. ಈ ನಕರ ಸಮುದಾಯದವರು ವಿಜಯನಗರೋತ್ತರ ಕಾಲದ ಪಾಳೆಯಗಾರರ ಆಡಳಿತ ಕೇಂದ್ರಗಳಾದ ಹಾಗಲವಾಡಿ, ನೀರಗುಂದ, ನಿಡುಗಲ್ಲು ಮೊದಲಾದ ಕಡೆಗಳಲ್ಲಿ ವಾಸಿಸುತ್ತಿದ್ದರು. ಹಾಗೂ ಅಲ್ಲಿಯೇ ನೆಲೆಸಿರುವ ಸಮುದಾಯವೆಂದೇ ಪರಿಗಣಿಸಬಹುದಾಗಿದೆ(ಶ್ಯಾಮಲ,೨೦೧೭:೪೯೪).

ಇದೇ ಅರ್ಥವುಳ್ಳ ನಖರ, ನಗರ, ಮಹಾನಕರ, ಮಹಾನಗರ ಪದಗಳು ಶಾಸನಗಳಲ್ಲಿ ಲಭಿಸುತ್ತವೆ. ಜೈನ ನಕರರು ಶ್ರವಣಬೆಳಗೊಳ ಶಾಸನಗಳಲ್ಲಿ ಹೆಚ್ಚು ಸಂಖ್ಯೆಯಲ್ಲಿ ಕಂಡುಬರುತ್ತಾರೆ. ಇವರಿಗೆ ಭವ್ಯ ನಖರ ಮತ್ತು ಮಾಣಿಕ್ಯನಕರ ಎಂಬ ಪದಗಳನ್ನು ಬಳಸಲಾಯಿತು(ಹಿರೇಮಠ ೧೯೮೬:೩೫). ನಖರರು ಉತ್ತರ ಕರ್ನಾಟಕದ ಧಾರವಾಡ, ವಿಜಾಪುರ, ಕಲಬುರ್ಗಿ, ಬಳ್ಳಾರಿ ಜಿಲ್ಲೆಗಳಲ್ಲಿ ಹೆಚ್ಚಾಗಿ ಗುರುತಿಸಿಕೊಳ್ಳುತ್ತಾರೆ ಹಾಗೂ ದಕ್ಷಿಣ ಕರ್ನಾಟಕದಲ್ಲಿ ವಿರಳವಾಗಿ ಕಂಡುಬರುತ್ತಾರೆ.

**ಪಂಚಮ ಬಣಜಿಗರು**

ಇವರು ವಿಜಯನಗರ ಆಳ್ವಿಕೆಯ ಕಾಲಾವಧಿಯಲ್ಲಿ ಧಾನ್ಯವ್ಯಾಪಾರಿಗಳಾಗಿ ಪ್ರಸಿದ್ಧಿಯನ್ನು ಪಡೆದರು ಆದರೆ ವಿಜಯನಗರೋತ್ತರ ಕಾಲದಲ್ಲಿ ಇವರ ಸ್ಥಾನ ಕಣ್ಮರೆಯಾಗಿ ಪಂಚಮ ಬಣಜಿಗರು ಅಧಿಕಾರಕ್ಕೆ ಬಂದರು. ಈ ಬಣಜಿಗರ ಸಮುದಾಯವು ಬೆಂಗಳೂರು ಹತ್ತಿ ಬಟ್ಟೆಯ ಕೈಗಾರಿಕೆಯ ಸ್ಥಾನವಾಗಿ ಬೆಳೆಯಲು ಇವರ ಪಾತ್ರವನ್ನು ಮರೆಯುವಂತಿಲ್ಲ. ಪಂಚಮ ಬಣಜಿಗರು ಬಟ್ಟೆ ಕೈಗಾರಿಕೆಯಲ್ಲಿ ಪ್ರಾಮುಖ್ಯತೆಯನ್ನು ಪಡೆದರು. ಈ ಸಮುದಾಯದವರು ಕರ್ನಾಟಕದ ಎಲ್ಲ ಭಾಗಗಳಲ್ಲಿ ಪ್ರಮುಖವಾಗಿ ಗುರುತಿಸಿಕೊಳ್ಳುತ್ತಾರೆ. ಬೆಂಗಳೂರಿನ ಪ್ರಮುಖ ವ್ಯಾಪಾರ ಪೇಟೆಗಳಾದ ನಗರ್ತಪೇಟೆ ಮತ್ತು ಮನವಾರ್ತ ಪೇಟೆಗಳಲ್ಲಿ ಇವರು ನೆಲೆ ಕಂಡುಕೊಂಡರು. ಈ ಸಮುದಾಯದಲ್ಲಿ ಬಲಗೈಯವರೆಂದು ೧೮ ಜಾತಿಗಳಿವೆ. ಬಣಜಿಗರಲ್ಲಿ ಪಂಚಮ ಬಣಜಿಗರು ವ್ಯಾಪಾರಿಗಳಾಗಿದ್ದು ಲಿಂಗಧಾರಿಗಳಾಗಿದ್ದರು. ಇವರಲ್ಲಿಯೂ ಹಲವಾರು ಪಂಗಡಗಳಿವೆ. ತೇಲಿಗಬಣಜಿಗ, ಇವರು ವಿಷ್ಣುವಿನ ಆರಾಧಕರು, ಒಕ್ಕಲಿಗ ಶೂದ್ರಜಾತಿಯ ಕೃಷಿಕರು ಕರ್ನಾಟಕ ಮೂಲದವರು ಜೋತಿಫಣ, ಇವರು ಎಣ್ಣೆ ತೆಗೆಯುವ ಗಾಣಿಗರು ಹೀಗೆ ಮೊದಲಾದ ೧೮ ಬಣಗಳನ್ನು ಇದರಲ್ಲಿ ಗುರುತಿಸಬಹುದು (ಕಾಮತ್,೨೦೦೬:೧೩೧).

ಹೀಗೆ ವಿಜಯನಗರೋತ್ತರ ಕಾಲದಲ್ಲಿ ಧಾನ್ಯ ವ್ಯಾಪಾರಿಗಳನ್ನು ಬದಿಗೊತ್ತಿ ಅವರ ಸ್ಥಾನದಲ್ಲಿ ಸಾಲುಮೂಲೆ ಬಣಜಿಗರು ಕಂಡುಬರುತ್ತಾರೆ. ವಿಜಯನಗರೋತ್ತರ ಕಾಲದಲ್ಲಿ ಬಟ್ಟೆ ಕೈಗಾರಿಕೆಯು ದೊಡ್ಡ ಉದ್ಯಮವಾಗಿ ಅಭಿವೃದ್ಧಿಯನ್ನು ಹೊಂದಿದೆ. ಈ ಬಟ್ಟೆ ನೇಕಾರಿಕೆಯ ವ್ಯಾಪಾರವೇ ಆ

ಸಂದರ್ಭದಲ್ಲಿ ವಿವಿಧ ರಾಜ್ಯಗಳಿಂದ ಕರ್ನಾಟಕಕ್ಕೆ ವರ್ತಕರು ವಲಸೆ ಬರಲು ಮುಖ್ಯ ಕಾರಣವಾಯಿತು. ಬಟ್ಟೆ ವ್ಯಾಪಾರದಲ್ಲಿ ಪಂಚಮ ಬಣಜಿಗರಿಗೆ ಸ್ಪರ್ಧಿಗಳಾಗಿ ದೇವಾಂಗ ಜನಾಂದವರು ಕಂಡುಬರುತ್ತಾರೆ. ಈ ಜನಾಂಗದವರು ಬೆಂಗಳೂರು, ಹೊಸಕೋಟೆ, ಕೋಲಾರಗಳ ಸ್ಥಳೀಯ ಮಾರುಕಟ್ಟೆಗಳಿಂದ ಕಚ್ಚಾಹತ್ತಿಯನ್ನು ಕೊಂಡೊಯ್ಯುತ್ತಿದ್ದರು. ಪುನಃ ಸಿದ್ಧವಸ್ತುಗಳಾಗಿ ಮಾರ್ಪಡಿಸಿ ಬೆಂಗಳೂರಿನ ಮಾರುಕಟ್ಟೆಯಲ್ಲಿ ತಂದು ಮಾರಾಟ ಮಾಡುತ್ತಿದ್ದರು(ಬುಕಾನನ್(೨)೧೮೦೭:೨೭೧). ಈ ಮೂಲಕ ಪಂಚಮ ಬಣಜಿಗರಿಗೂ ದೇವಾಂಗ ಜನಾಂಗದವರಿಗೂ ವ್ಯಾಪಾರದಲ್ಲಿ ಸಂಘರ್ಷಗಳಿದ್ದವೆಂದು ಊಹಿಸಬಹುದಾಗಿದೆ. ಪಂಚಮ ಬಣಜಿಗರು ೧೮ನೇ ಶತಮಾನದಲ್ಲಿ ಪ್ರಾಮುಖ್ಯತೆಯನ್ನು ಪಡೆದ ಪಂಚಮ ಬಣಜಿಗ ಸಮುದಾಯ ೧೯ನೇ ಶತಮಾನದಲ್ಲಿ ದೇವಾಂಗ ಸಮುದಾಯದವರ ಸ್ಥಾನವನ್ನು ತುಂಬಿಕೊಳ್ಳಲಾರಂಭಿಸಿದರು. ಪಂಚಮ ಬಣಜಿಗರು ವಸಾಹತು ಕಾಲಘಟ್ಟದವರೆಗೂ ಪ್ರಮುಖ ಸ್ಥಾನದಲ್ಲಿ ಗುರುತಿಸಿಕೊಂಡವರು. ಬೆಂಗಳೂರು ಪ್ರದೇಶವನ್ನು ಬ್ರಿಟೀಷರು ವಶಪಡಿಸಿಕೊಂಡಾಗ ನೇಕಾರಿಕೆಯು ಕ್ಷೀಣಿಸಿದ್ದರಿಂದ ಇವರು ವೃತ್ತಿಪಲ್ಲಟಗೊಂಡಿರುವ ಸ್ಥಿತಿಯನ್ನು ಗುರುತಿಸಬಹುದು.

ಸಾಕಿಯವರು ಸ್ಥಳೀಯ ಮಾರುಕಟ್ಟೆಗಳ ಸ್ವರೂಪವನ್ನು ವಿವರಿಸುತ್ತಾ ಬ್ರಿಟಿಶ್ ವಸಾಹತುಶಾಹಿಯ ಆರ್ಥಿಕ ಹಿಡಿತಕ್ಕೆ ಗುರಿಯಾಗಿದ್ದು ದೇಶೀಯ ವರ್ತಕರು ಅದರಲ್ಲಿ ಬಣಜಿಗರು ಮತ್ತು ಶೆಟ್ಟರು ಪ್ರಮುಖರಾಗಿದ್ದರು. ವಸಾಹತುಶಾಹಿ ಆಳ್ವಿಕೆಯ ಕೆಲವೇ ವರ್ಷಗಳಲ್ಲಿ ತಮ್ಮ ಅಸ್ತಿತ್ವ ಕಳೆದುಕೊಂಡರು(ಸಾಕಿ,(೨),೧೯೮೮:೮೮). ಹೀಗೆ ಬಣಜಿಗರು ವಸಾಹತು ಕಾಲಘಟ್ಟದಲ್ಲಿ ತಮ್ಮ ಅಸ್ತಿತ್ವ ಕಳೆದುಕೊಂಡು ಹೊಸ ವರ್ತಕ ಸಮುದಾಯಗಳು ಮಧ್ಯವರ್ತಿ ಏಜೆಂಟರಾಗಿ ನೆಲೆಯನ್ನು ಕಂಡುಕೊಂಡರು.

ಕರ್ನಾಟಕದ ವರ್ತಕ ಪ್ರಕಾರಗಳಲ್ಲಿ ಸೆಟ್ಟಿಗುತ್ತರೂ ಒಬ್ಬರು. ಇವರು ವರ್ತಕರಲ್ಲಿಯೇ ಹಿರಿದಾದ ಸಮುದಾಯವೆಂದು ಹೇಳಬಹುದು. ಇವರು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಹೋಗಿ ವ್ಯಾಪಾರ ನಡೆಸುವ ಸಮುದಾಯದವರಾಗಿದ್ದರು ಲಕ್ಷ್ಮೇಶ್ವರ, ಬಳ್ಳಿಗಾವೆ, ತೇರದಾಳ ಬೆಡಕಿದಾಳ, ಬಿಜಾಪುರು, ಹರಿಹರ, ಕುರುವತ್ತಿ, ರಾಮಿಸೆಟ್ಟಿ ಪ್ರದೇಶಗಳಲ್ಲಿ ಗುರುತಿಸಿಕೊಂಡಿದ್ದಾರೆ ಎಂಬ ಹೆಸರು ಚಿತ್ರದುರ್ಗದ ಪ್ರದೇಶದಲ್ಲಿ ದೊರೆತಿದೆ(ಎ.ಕ.೧೧,ಚಿ–೧೨), ಮಂಡಲಸೆಟ್ಟಿ ಗುತ್ತರು, ಇವರು ನಾಡಿನ ಮಂಡಲ ಎಂದು ಕರೆಯಲಾಗಿದೆ(ಹಿರೇಮಠ,೧೯೮೬: ೩೩). ಸೆಟ್ಟಿಗುತ್ತರು ಕೃಷಿ ಉತ್ಪನ್ನಗಳನ್ನು ಮಾಡುತ್ತಿರಬಹುದು. ಆದರೆ ನಿಖರವಾಗಿ ಯಾವ ರೀತಿಯ ವ್ಯಾಪಾರ ಮಾಡುತ್ತಿದ್ದರೆಂದು ತಿಳಿದುಬಂದಿಲ್ಲ. ಸ್ಥಳೀಯ ವ್ಯಾಪಾರದಲ್ಲಿ ವಿಜಯನಗರೋತ್ತರ ಕಾಲದಲ್ಲಿ ಕೆಲವು ಭಾಗಗಳಲ್ಲಿ ಸೆಟ್ಟಿಗುತ್ತರ ಉಲ್ಲೇಖವನ್ನು ಗುರುತಿಸಬಹುದು. ಅಂದರೆ ಆ ವೇಳೆಯಲ್ಲಿ ವ್ಯಾಪಾರದ ಸ್ವರೂಪವು ಬದಲಾಗಿದ್ದರಿಂದ ಇವರ ಪ್ರಾಬಲ್ಯ ಕಡಿಮೆಯಾಗಿರಬಹುದು.

**ನಾನಾದೇಶಿ, ಉಭಯ ನಾನಾ ದೇಶಿ**

ಈ ವರ್ತಕ ಸಮುದಾಯದವರು ವಿವಿಧ ದೇಶ ಅಥವಾ ಪ್ರದೇಶದ ಸೆಟ್ಟಿಗುತ್ತ ನಕರ ಮೊದಲಾದವರಂತೆ ವ್ಯಾಪಾರ ಮಾಡುತ್ತಿದ್ದರು. ಇವರು ಉಭಯ ಮಾರ್ಗಗಳಾದ ಪಾದ ಮಾರ್ಗ

ಮತ್ತು ಜಲಮಾರ್ಗ ಎರಡು ಕಡೆಯೂ ವ್ಯಾಪಾರ ಮಾಡುವ ಸಮುದಾಯದವರು. ಇವರು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಉತ್ಪನ್ನಗಳನ್ನು ಕೊಂಡೊಯ್ದು ವ್ಯಾಪಾರ ಮಾಡುವ ಸಮುದಾಯ ಹಾಗೂ ಅಲ್ಲಿ ಬೆಳೆಯುವ ಸರಕುಗಳನ್ನು ತೆಗೆದುಕೊಂಡು ವ್ಯಾಪಾರ ಮಾಡುವ ಸಮುದಾಯ ಇದಾಗಿತ್ತು. ಇವರು ಅಲ್ಲಿ ದೊಗೆಯುವ ಉತ್ಪನ್ನಗಳನ್ನು ಖರೀದಿಸುತ್ತಿದ್ದರು. ಹೀಗೆ ವ್ಯಾಪಾರಿಗಳು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ವಲಸೆ ಹೋಗುವುದರಿಂದ ಅವರ ಅನೇಕ ರೀತಿಯ ಸಂಸ್ಕೃತಿ ಆಚರಣೆಗಳನ್ನು ಕಲಿಯುತ್ತಿದ್ದರು. ಈ ಮೂಲಕ ಅನೇಕ ವರ್ತಕ ಸಮುದಾಯವು ವ್ಯಾಪಾರ ವೃತ್ತಿಯನ್ನು ಮೈಗೂಡಿಸಿಕೊಂಡಿದ್ದರಿಂದ ಅವರು ಅನ್ಯ ಸಂಸ್ಕೃತಿಯ ಆಚಾರ ವಿಚಾರಗಳನ್ನು ಬೇಗನೇ ಕಲಿತರೆಂದು ಹೇಳಬಹುದು.

**ಅಯ್ಯಾವೊಳೆ ಐನೂರ್ವರ ವರ್ತಕ ಸಂಘ**

೧೬೨೮ರಲ್ಲಿ ವಿಜಯನಗರದ ವೀರರಾಮದೇವ ಮಹಾರಾಜರು ರಾಜ್ಯಬಾರ ಮಾಡುತ್ತಿದ್ದಾಗ ಇಮ್ಮಡಿ ಕೆಂಪೇಗೌಡನ ಆಳ್ವಿಕೆಯಲ್ಲಿ ಅಯ್ಯಾವೊಳೆ ಐನೂರ್ವರ ವರ್ತಕ ಸಂಘದ ಪ್ರಮುಖರು ಪೆನುಗೊಂಡೆ, ಬೆಂಗಳೂರು, ಗೂಳೂರು, ಚಿಕ್ಕನಾಯಕನಹಳ್ಳಿ, ಚಿಕ್ಕಬಳ್ಳಾಪುರ, ತಾಡಪ್ರತಿ, ಆದೋನಿ ಚಂದ್ರಗಿರಿ, ಕೋಲಾರ, ಕೊತ್ತಕೋಟೆ, ಕಾಮಠಿ ಪಟ್ಟಣ, ರಾಯಕೋಟೆ, ಶ್ರೀರಂಗಪಟ್ಟಣ, ನರಸೀಪುರ, ಬೇಲೂರು, ಹೆಬ್ಬೂರು, ನಾಗಮಂಗಲ, ಇಕ್ಕೇರಿ, ಬಸ್ತಿಹಳ್ಳಿ ಮುಂತಾದ ಸ್ಥಳಗಳ ವರ್ತಕರು ಬೆಂಗಳೂರಿನ ಮುತ್ಯಾಲಪೇಟೆಯ ರಂಗನಾಥಸ್ವಾಮಿ ಕೆಲಸಕ್ಕೆ ದಿನಂಪ್ರತಿ ಪಡಿಗಾಗಿ ವರಹ ಮತ್ತು ಅರವೀಸದ ದಾನವನ್ನು ವಂತಿಗೆಯಾಗಿ ಕೊಟ್ಟ ವಿಚಾರವಿದೆ(ಜಮುನ,೨೦೦೬:೫೭). ಇಲ್ಲಿ ತಿಳಿಯುವ ಅಂಶವೆಂದರೆ ೧೬೨೮ರ ವೇಳೆಗೆ ವಿಜಯನಗರ ಸಾಮ್ರಾಜ್ಯ ಕ್ಷೀಣಿಸಿದ್ದರೂ ಸಾರ್ವಭೌಮತ್ವದ ಹೆಸರು ಉಲ್ಲೇಖಿಸಿರುವುದು ಸ್ಪಷ್ಟ ಹಾಗೂ ಈ ವೇಳೆಗೆ ರಾಜ್ಯದ ವಿವಿಧ ಭಾಗಗಳಿಂದ ವರ್ತಕರು ಬರುವುದರಿಂದ ಬೆಂಗಳೂರು ನಗರ ಅಭಿವೃದ್ಧಿಯಾಗಿತ್ತೆಂಬುದು ಸ್ಪಷ್ಟವಾಗಿದೆ.

**ವೀರಬಣಜಿಗರು**

ತೆರಕಣಾಂಬಿಯ ವೀರಪಾಂಚಾಲರು ಕಾಯಿದೆಯೊಂದನ್ನು ಮಾಡಿಕೊಂಡು ಅದನ್ನು ಉಲ್ಲಂಘಿಸಿದವರನ್ನು ತಮ್ಮ ಜಾತಿ ಹಾಗೂ ವೃತ್ತಿಯಿಂದ ಉಚ್ಚಾಟನೆ ಮಾಡಿ, ಊರಿನಿಂದ ಹೊರ ಹಾಕಬೇಕೆಂಬ ನಿಯಮವೊಂದನ್ನು ಮಾಡಿಕೊಂಡಿದ್ದುದಾಗಿ ತಿಳಿದುಬಂದಿದೆ(ಸುಧಾಮಣಿ ೨೦೦೯:೧೧೨). ವರ್ತಕರು ತಮ್ಮ ಎಲ್ಲೆ ಮೀರಿ ವರ್ತಿಸಬಾರದು ಎಂಬ ಕಾರಣಕ್ಕಾಗಿಯೇ ಈ ವರ್ತಕ ಸಂಘಗಳನ್ನು ಮಾಡಿಕೊಂಡಿದ್ದರೆಂದು ತಿಳಿದುಬರುತ್ತದೆ. ವಿಜಯನಗರ ಮೊದಲು ಮತ್ತು ವಿಜಯನಗರ ಕಾಲದಲ್ಲಿ ಪೂರ್ವ ಇದ್ದಂತಹ ವರ್ತಕ ಸಮುದಾಯಗಳೇ ಬೇರೆಯಾಗಿದ್ದು ವಿಜಯನಗರೋತ್ತರ ಕಾಲದಲ್ಲಿ ವರ್ತಕ ಸಂಘಗಳ ಸ್ವರೂಪ ಬದಲಾಗಲಾರಂಭಿಸಿತು. ಹೊಸ ವರ್ತಕ ಸಮುದಾಯಗಳು ಉಗಮವಾಗಲಾರಂಭಿಸಿದ್ದರಿಂದ ಅವರದೇ ಆದ್ದಂತಹ ವರ್ತಕ ಸಂಘಗಳನ್ನು ನೋಡಬಹುದಾಗಿದೆ. ವಿಜಯನಗರೋತ್ತರ ಕಾಲದಲ್ಲಿ ಕಟ್ಟಿಕೊಂಡ ವರ್ತಕ ಸಂಘಗಳು ಇಂದು ನಾವು ಗುರುತಿಸುವ ವ್ಯಾಪಾರಿ ಸಮುದಾಯಗಳು ಕಟ್ಟಿಕೊಂಡ ವರ್ತಕ ಸಂಘಗಳಾಗಿವೆ.

ಕೆಳದಿನಾಯಕರ ಕಾಲದಲ್ಲಿ ಹರಕೋಮಟಿ ಎಂಬ ವ್ಯಾಪಾರಿ ಸಂಘ ವ್ಯಾಪಾರ ವಹಿವಾಟನ್ನು ವಹಿಸಿಕೊಂಡಿತ್ತು. ಹರಕೋಮಟಿ ಎಂಬ ವ್ಯಾಪಾರಿಯು ಅರಸನ ಅನುಮತಿಯಂತೆ ಸ್ವತಂತ್ರವಾಗಿ ವ್ಯಾಪಾರ ನಡೆಸುತ್ತಿದ್ದು, ಈ ಸಂಘದ ಮೂಲಕವೇ ವಿದೇಶೀಯ ವ್ಯಾಪಾರ ನಡೆಯುತ್ತಿತ್ತು. ಕೆಳದಿ ರಾಜ್ಯದ ಪ್ರಮುಖಪಟ್ಟಣಗಳಲ್ಲಿ ವ್ಯಾಪಾರಿ ಸಂಘಗಳಿದ್ದವು. ಇವುಗಳಿಗೆ ತಕ್ಕಮಟ್ಟಿಗೆ ಸ್ವಾಯತ್ತತೆ ಇದ್ದುದಾಗಿ ತಿಳಿಯುತ್ತದೆ. ಈ ಅರಸರ ದರಬಾರಿನಲ್ಲಿ ಒಬ್ಬ ಪ್ರಧಾನ ಶ್ರೇಷ್ಠಿಯ ಹುದ್ದೆಯಿತ್ತು. ಈ ವ್ಯಾಪಾರಿ ಸಂಘಗಳು ಉತ್ತಮವಾದ ಸರಕುಗಳನ್ನು ಒದಗಿಸುತ್ತಿದ್ದವು. ಬೆಲೆಯ ಮೇಲೆ ನಿಯಂತ್ರಣ ತೆರಿಗೆಯ ವಿಷಯವಾಗಿ ಸರಕಾರಕ್ಕೆ ಸಲಹೆಯನ್ನು ನೀಡುತ್ತಿದ್ದವು. ಕ್ರಿ.ಶ.೧೬೧೦ರಲ್ಲಿ ಬಿದನೂರಿನ ದರ್ಬಾರಿನಲ್ಲಿ ಮಾಳಿಗೆಯ ವರ್ಧಮಾನ ಎಂಬುವನು ಪ್ರಧಾನ ಶ್ರೇಷ್ಠಿಯಾಗಿದ್ದನು. ಶಾಸನಗಳಲ್ಲಿ ಚೆನ್ನಮಲ್ಲಸಟ್ಟಿ, ವೀರಶೆಟ್ಟಿ, ತೋಳಹಾರ, ಮಲಚಸೆಟ್ಟಿ ಜಿಷ್ಣುಸೆಟ್ಟಿ ತಮ್ಮಯ್ಯಸೆಟ್ಟಿ ಮುಂತಾದ ಹೆಸರುಗಳಿವೆ(ಕಲಬುರ್ಗಿ,ರಾಮಭಟ್ಟ, ೧೯೯೪:೩೦೮).

ಒಟ್ಟಾರೆಯಾಗಿ ಪ್ರಾಚೀನ ಕಾಲದಿಂದಲೂ ಗುರುತಿಸಿಕೊಂಡ ವರ್ತಕ ಸಮುದಾಯಗಳು ವಿಜಯನಗರೋತ್ತರ ಕಾಲದಲ್ಲಿಯೂ ಮುಂದುವರಿದವು. ಕರ್ನಾಟಕವು ಆರಂಭದಿಂದಲೂ ವ್ಯಾಪಾರ-ವಾಣಿಜ್ಯದಲ್ಲಿ ಗುರುತಿಸಿಕೊಂಡಿದ್ದು, ವಿಜಯನಗರೋತ್ತರ ಕಾಲವು ಹಲವು ವರ್ತಕ ಸಮುದಾಯಗಳ ಮೂಲಕ ಕರ್ನಾಟಕದ ವ್ಯಾಪಾರ ವಾಣಿಜ್ಯದಲ್ಲಿ ಗುರುತಿಸಿಕೊಂಡಿದ್ದು. ಹಲವಾರು ಸಾಂಸ್ಕೃತಿಕ ಸ್ಥಿತ್ಯಂತರಗಳು ಕಂಡ ಕಾಲವೆಂದು ಹೇಳಬಹುದು. ಈ ಕಾಲಘಟ್ಟವು ವಾಣಿಜ್ಯೋದ್ಯಮ ಮತ್ತು ಸಂಘರ್ಷದ ಕಾಲವಾಗಿತ್ತು. ಹಾಗಾಗಿ ಅನೇಕ ಹೊಸ ವರ್ತಕ ಸಮುದಾಯಗಳು ಕರ್ನಾಟಕದಲ್ಲಿ ನೆಲೆ ಕಂಡುಕೊಂಡು ಶ್ರೀಮಂತ ವಾಣಿಜ್ಯ ಬ್ಯಾಂಕುಗಳಾಗಿ ಕಾರ್ಯನಿರ್ವಹಿಸುವ ರೀತಿಯಲ್ಲಿ ಈ ವರ್ತಕ ಸಮುದಾಯಗಳು ಕಾರ್ಯ ನಿರ್ವಹಿಸಿದ್ದವು. ಬೆಂಗಳೂರು ಪ್ರದೇಶವು ವಿಜಯನಗರೋತ್ತರ ಕಾಲದಲ್ಲಿ ಪ್ರಮುಖ ವಾಣಿಜ್ಯ ಕೇಂದ್ರವಾಗಿ ಬೆಳೆಯುವಲ್ಲಿ ಸಾಲುಮೂಲೆ ಬಣಜಿಗರ ಸ್ಥಾನವನ್ನು ಪಂಚಮ ಬಣಜಿಗರ ಮೂಲಕ ಗುರುತಿಸಿಕೊಂಡರು. ವಸಾಹತು ಕರ್ನಾಟಕದ ಆಳ್ವಿಕೆಯವರೆಗೂ ಪ್ರಮುಖ ವ್ಯಾಪಾರಿಗಳಾಗಿ ಗುರುತಿಸಿಕೊಂಡವರು ವಸಾಹತು ಕರ್ನಾಟಕದಲ್ಲಿ ಇವರು ತಮ್ಮ ಸ್ಥಾನವನ್ನು ಕಳೆದುಕೊಂಡರು ಹಾಗೂ ದೇವಾಂಗ ಸಮುದಾಯದವರು ಇವರ ನಂತರದ ಸ್ಥಾನವನ್ನು ತುಂಬಿಕೊಂಡರು. ಈ ಮೂಲಕ ೧೮ನೇ ಶತಮಾನದ ವೇಳೆಗೆ ಈ ವರ್ತಕ ಸಮುದಾಯಗಳು ಅನೇಕ ಬದಲಾವಣೆಗೆ ಒಳಗಾದ ಅಂಶಗಳನ್ನು ಕಂಡುಕೊಳ್ಳಬಹುದಾಗಿದೆ. ಕರಾವಳಿ ಕರ್ನಾಟಕದ ವ್ಯಾಪಾರ ವಾಣಿಜ್ಯದಲ್ಲಿ ಪೋರ್ಚುಗೀಸರ ವ್ಯಾಪಾರ ವಾಣಿಜ್ಯದಲ್ಲಿ ಗೌಡ ಸಾರಸ್ವತರು, ಬನಿಯಾಗಳು ಮತ್ತು ಬಂಜಾರ ಸಮುದಾಯಗಳು ಗುರುತಿಸಿಕೊಂಡಿದ್ದು ಈ ಸಮುದಾಯವು ಕರ್ನಾಟಕಕ್ಕೆ ಹಲವಾರು ಸ್ಥಿತ್ಯಂತರಗಳ ಕಾಲದಲ್ಲಿ ವಲಸೆ ಬಂದವರಾಗಿದ್ದರು. ಇವರು ಪೋರ್ಚುಗೀಸ್ ವಿದೇಶಿಯ ವ್ಯಾಪಾರದಲ್ಲಿ ಮಧ್ಯವರ್ತಿಗಳಾಗಿ ಗುರುತಿಸಿಕೊಂಡರು. ಮುಂದುವರಿದು ಬ್ರಿಟಿಶರು ಕರ್ನಾಟಕವನ್ನು ವಶಪಡಿಸಿಕೊಂಡಾಗ ಮಧ್ಯವರ್ತಿಗಳಾಗಿ ತಮ್ಮ ಸ್ಥಾನವನ್ನು ಸ್ಥಿರಪಡಿಸಿಕೊಂಡರು. ಒಟ್ಟಾರೆಯಾಗಿ ವಿಜಯನಗರೋತ್ತರ ಕಾಲದಲ್ಲಿ ವರ್ತಕ ಸಮುದಾಯಗಳಲ್ಲಿ ಹಲವಾರು ಸ್ಥಿತ್ಯಂತರ ಕಂಡ ಕಾಲವಾಗಿದೆ.

### ೫.೨.೨. ಅಂತರ್‌ರಾಜ್ಯ ವರ್ತಕರು

ಈ ವರ್ತಕರು ಕರ್ನಾಟಕದ ವ್ಯಾಪಾರ ವಾಣಿಜ್ಯಕ್ಕೆ ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶ ಅಥವಾ ಒಂದು ರಾಜ್ಯದಿಂದ ಇನ್ನೊಂದು ರಾಜ್ಯಕ್ಕೆ ವಲಸೆ ಬಂದಂತಹ ವರ್ತಕ ಸಮುದಾಯಗಳಿಗೆ ಹೊರ ರಾಜ್ಯದ ವರ್ತಕರು ಎಂದು ಕರೆಯಲಾಗಿದೆ. ಈ ಸಮುದಾಯಗಳು ವ್ಯಾಪಾರವನ್ನೇ ಮೂಲ ವೃತ್ತಿಯನ್ನಾಗಿಸಿಕೊಂಡಂತಹ ಸಮುದಾಯಗಳಾಗಿರುತ್ತದೆ. ಈ ಇಡೀ ಕುಟುಂಬವೇ ವಲಸೆ ಬಂದ ಕಾರಣ ಸಮುದಾಯವಾಗಿ ಉಲ್ಲೇಖಿಸಬಹುದು. ಪ್ರಾಚೀನ ಕಾಲದಿಂದಲೂ ಕರ್ನಾಟಕ ವ್ಯಾಪಾರ ವಾಣಿಜ್ಯದಲ್ಲಿ ಹಲವಾರು ಸಮುದಾಯಗಳು ಗುರುತಿಸಿಕೊಳ್ಳುತ್ತವೆ. ಆದರೆ ಪ್ರಸ್ತುತ ಅಧ್ಯಯನ ಕಾಲಘಟ್ಟದಲ್ಲಿ ಕಂಡುಕೊಂಡ ವರ್ತಕ ಸಮುದಾಯಗಳನ್ನು ಇಲ್ಲಿ ಉಲ್ಲೇಖಿಸಲಾಗಿದೆ.

**ಗೌಡ ಸಾರಸ್ವತರು**

ಕರ್ನಾಟಕದ ಕರಾವಳಿಯಲ್ಲಿ ವಿಜಯನಗರೋತ್ತರ ಕಾಲಾವಧಿಯಲ್ಲಿ ಸಾಗರೋತ್ತರ ವ್ಯಾಪಾರ ವಾಣಿಜ್ಯದಲ್ಲಿ ಗುರುತಿಸಿಕೊಂಡ ಒಂದು ಸಮುದಾಯವೆಂದರೆ ಗೌಡ ಸಾರಸ್ವತರು. ಈ ಗೌಡ ಸಾರಸ್ವತ ಸಮುದಾಯದವರು ಕ್ರಿ.ಶ.೧೪೯೮ರ ನಂತರ ವ್ಯಾಪಾರ ವಾಣಿಜ್ಯದಲ್ಲಿ ಗುರುತಿಸಿಕೊಳ್ಳುತ್ತಾರೆ. ಮೂಲತಃ ಗೋವಾ ಮೂಲದವರಾಗಿದ್ದು, ಕರ್ನಾಟಕದ ಕರಾವಳಿಯ ಭಾಗಕ್ಕೆ ವಲಸೆ ಬಂದವರಾಗಿದ್ದಾರೆ. ಪೋರ್ಚುಗೀಸರು ಕ್ರಿ.ಶ.೧೫೧೦ರಲ್ಲಿ ಬಿಜಾಪುರದ ಯೂಸೆಫ್ ಆದಿಲ್‌ಷಾನ ವಶದಲ್ಲಿ ಗೋವಾವನ್ನು ವಶಪಡಿಸಿಕೊಂಡು ಧರ್ಮ ಪ್ರಚಾರ ಮಾಡುವಂತಹ ಸಂದರ್ಭದಲ್ಲಿ ಗೋವಾದಿಂದ ಹಲವು ಕಡೆ ವಲಸೆ ಹೋಗಲಾರಂಭಿಸಿದರು. ಆಗ ಕರ್ನಾಟಕದ ಕರಾವಳಿ ಭಾಗಗಳಿಗೆ ವಿಜಯನಗರ ಕಾಲದಲ್ಲಿ ವಲಸೆ ಬಂದು ಮಂಗಳೂರು, ಭಟ್ಕಳ, ಬಸ್ರೂರು ಮೊದಲಾದ ಕಡೆ ನೆಲೆಸಿದ ಸಮುದಾಯವೆಂದರೆ ಗೌಡ ಸಾರಸ್ವತರು. ಆದರೆ ವಿಜಯನಗರ ವ್ಯಾಪಾರ ವಾಣಿಜ್ಯದಲ್ಲಿ ಇವರ ಹೆಚ್ಚಿನ ಉಲ್ಲೇಖಗಳಿಲ್ಲ.

ಗೌಡಸಾರಸ್ವತ ಬ್ರಾಹ್ಮಣರು ಗೋವಾದಿಂದ ಕರ್ನಾಟಕದ ಕರಾವಳಿ ಭಾಗಕ್ಕೆ ಬಂದವರು. ಇವರನ್ನು ಕೊಂಕಣಿ ಬ್ರಾಹ್ಮಣರೆಂದು ಕರೆಯುತ್ತಾರೆ. ಕರ್ನಾಟಕದ ಕರಾವಳಿ ಭಾಗಕ್ಕೆ ಗೌಡ ಸಾರಸ್ವತರು ವಲಸೆ ಬರಲು ಬಹುಮುಖ್ಯ ಕಾರಣ ಪೋರ್ಚುಗೀಸರ ದಬ್ಬಾಳಿಕೆ, ಮತಾಂತರ ನೀತಿಯ ಕಿರುಕುಳಗಳು ಗೋವಾದಲ್ಲಿ ಹೆಚ್ಚಾದ ಕಾರಣ ಕರ್ನಾಟಕದ ಕಡೆ ವಲಸೆ ಬರಲು ಬಹುಮುಖ್ಯ ಕಾರಣವಾಯಿತು. ಕ್ರಿ.ಶ.೧೫೪೧ರಿಂದ ೧೫೬೧ರ ಅವಧಿಯಲ್ಲಿ ಗೋವಾದಿಂದ ಸಾರಸ್ವತರ ವಲಸೆಯ ಪ್ರಮಾಣ ಹೆಚ್ಚಾಯಿತು. ಈ ಗೌಡ ಸಾರಸ್ವತರು ವಿಜಯನಗರ, ಕೆಳದಿ, ಮತ್ತು ಸೋಂದೆ ಅರಸನ ಆಸ್ಥಾನಗಳಲ್ಲಿ ಆಡಳಿತಾಧಿಕಾರಿಗಳಾಗಿ, ಸೇನಾನಾಯಕರಾಗಿ, ರಾಯಭಾರಿಗಳಾಗಿ ಅಂತೆಯೇ ವ್ಯಾಪಾರ-ವಾಣಿಜ್ಯದಲ್ಲಿ ಸ್ಥಳೀಯ ಪ್ರತಿಸ್ಪರ್ಧಿಗಳಾದ ಮುಸ್ಲಿಂ (ನವಾಯತ್, ಮಾಪಿಳ್ಳೆ) ಜೈನ ವ್ಯಾಪಾರಿಗಳೊಂದಿಗೆ ಪೈಪೋಟಿ ನಡೆಸಿ ಯಶಸ್ವಿಯಾದರು. ವಿಜಯನಗರ ಕಾಲದಲ್ಲಿ ಕುಂಬಳೆ, ಉಳ್ಳಾಳ, ಮಂಗಳೂರು, ಬಸ್ರೂರು, ಭಟ್ಕಳ, ಗಂಗೊಳ್ಳಿ,

ಹೊನ್ನಾವರ ಮೊದಲಾದ ಭಾಗಗಳಲ್ಲಿ ಬಂದು ನೆಲೆಸಿದರು. ಗೇರುಸೊಪ್ಪೆಯ ರಾಣಿ ಚನ್ನಾಬೈರಾದೇವಿಯು ಈ ಸಾರಸ್ವತ ಬ್ರಾಹ್ಮಣರಿಗೆ ಆಶ್ರಯ ನೀಡಿದ್ದಳು(ಕೃಷ್ಣಮೂರ್ತಿ,ಲಕ್ಷ್ಮಿ, ೨೦೦೦:೩೦೪).

ಗೌಡ ಸಾರಸ್ವತರು ಕರ್ನಾಟಕದ ಕರಾವಳಿ ಭಾಗದಲ್ಲಿ ನಡೆಯುವ ವಿದೇಶೀಯ ವ್ಯಾಪಾರದಲ್ಲಿ ಪ್ರಮುಖವಾಗಿ ಗುರುತಿಸಿಕೊಳ್ಳುತ್ತಾರೆ. ೧೫೮೩-೧೬೩೦ರಲ್ಲಿ ಕೆಳದಿಯನ್ನಾಳಿದ ಹಿರಿಯ ವೆಂಕಟಪ್ಪ ನಾಯಕನ ಕಾಲದಲ್ಲಿ ವಿಠ್ಠಲಶೆಣೈ ವಿದೇಶೀಯ ವ್ಯವಹಾರದ ಅಧಿಕಾರಿಯಾಗಿ ನೇಮಿಸಲ್ಪಟ್ಟಿದ್ದನು. (ಗುಂಡಾಜೋಯಿಸ್ ೧೯೯೮:೨೫೦)

ಗೌಡ ಸಾರಸ್ವತ ಬ್ರಾಹ್ಮಣರು ತಮ್ಮ ಸಂಪೂರ್ಣ ಸಾಂಸ್ಕೃತಿಕತೆಯನ್ನು ಕರ್ನಾಟಕದ ಕರಾವಳಿ ಭಾಗದಲ್ಲಿ ನಿರ್ಮಿಸಿದರೆಂದರೆ ತಪ್ಪಾಗಲಾರದು. ಅವರ ಆರಾಧ್ಯ ದೈವಗಳು ಪೋರ್ಚುಗೀಸರಿಂದ ತೊಂದರೆಗೆ ಒಳಗಾದ ಕಾರಣ ಅವರ ದೈವಗಳನ್ನು ಕರಾವಳಿ ಭಾಗದಲ್ಲಿ ಪುನರ್ ನಿರ್ಮಿಸಿದರು. ಈ ಮೂಲಕ ಗೌಡ ಸಾರಸ್ವತರ ಧಾರ್ಮಿಕ ಸಂಪ್ರದಾಯಗಳು ಸಹ ಕರಾವಳಿ ಭಾಗದಲ್ಲಿ ಹೊಸ ಸ್ಥಿತ್ಯಂತರದಿಂದ ತಮ್ಮ ಹುಟ್ಟನ್ನು ಕಂಡುಕೊಂಡವು. ಪೋರ್ಚುಗೀಸ್ ವ್ಯಾಪಾರದಲ್ಲಿ ಗೌಡ ಸಾರಸ್ವತರೇ ಮುಖ್ಯರಾಗಿರುತ್ತಾರೆ.

ಕೆಳದಿಯ ನಾಯಕರ ಕಾಲದಲ್ಲಿ ೧೨ ಜನ ಗೌಡ ಸಾರಸ್ವತರ ಉಲ್ಲೇಖವನ್ನು ನೀಡುವಂತಹ ಒಂದು ದಾಖಲೆಯನ್ನು ಕೆಳದಿಯ ವೆಂಕಟೇಶ ಜೋಯಿಸರು ಶೋಧಿಸಿದ್ದಾರೆ. ಇವರು ಸಂಸ್ಥಾನದ ನಿಯೋಗಿಗಳಾಗಿ, ಅಧಿಕಾರಿಗಳಾಗಿ ಮಂತ್ರಿಗಳಾಗಿ ಕಾರ್ಯ ನಿರ್ವಹಿಸಿದ್ದಾರೆ. ಆ ೧೨ ಜನರಲ್ಲಿ ನಾರಾಯಣಮಲ್ಯ, ೧೬೬೪-೬೮ರ ಅವಧಿಯಲ್ಲಿ ಸಂಸ್ಥಾನದ ನಿಯೋಗಿ ಹಾಗೂ ವರ್ತಕನಾಗಿ ಕಾರ್ಯ ನಿರ್ವಹಿಸಿದ್ದಾನೆ. ನಾರಾಯಣಮಲ್ಯನು ಹಿರಿಯ ಸೋಮಶೇಖರ ನಾಯಕನ ಆಪ್ತನಾಗಿದ್ದಕ್ಕೆ ಈ ಅಧಿಕಾರ ದೊರೆತ್ತಿದು ಕಾರಣವಾಗಿರಬಹುದು(ಗುಂಡಾಜೋಯಿಸ್೧೯೯೮:೨೫೪). ಸಾರಸ್ವತರಲ್ಲಿ ೧೫೭೦-೮೦ರ ದಶಕದಲ್ಲಿ ಈ ಸಾರಸ್ವತ ಸಗಟು ವ್ಯಾಪಾರಿ ರಫ್ತುದಾರರು ಪೋರ್ಚುಗೀಸರಿಂದ ತೀವ್ರ ಪೈಪೋಟಿಯನ್ನು ಎದುರಿಸಬೇಕಾಯಿತು. ಈ ಸ್ಥಳೀಯ ಸಾರಸ್ವತ ವರ್ತಕರ ಒತ್ತಡಕ್ಕೆ ಮಣಿದ ಪೋರ್ಚುಗೀಸರು ಬಸ್ರೂರಿನಲ್ಲಿ ತೆರೆದಿದ್ದ ಸುಂಕದ ಕಾಣಿಯನ್ನು ಮುಚ್ಚಬೇಕಾಯಿತು. ಈ ಮೂಲಕ ಪೋರ್ಚುಗೀಸರು ಭತ್ತ ವ್ಯಾಪಾರದಲ್ಲಿ ತಾವು ಹೊಂದಿದ್ದ ವ್ಯಾಪಾರಿ ಏಕಸ್ವಾಮ್ಯ ಅಂತ್ಯವಾಯಿತು. ಸ್ಥಳೀಯ ವರ್ತಕರಾದ ಸಾರಸ್ವತರು ಪೋರ್ಚುಗೀಸರಿಗೆ ಸರಿಸಮನಾಗಿ ಭತ್ತ ವ್ಯಾಪಾರದ ವಹಿವಾಟಿನಲ್ಲಿ ಪಾಲ್ಗೊಂಡಿದ್ದರು(ಚಂದ್ರಶೇಖರ್,ರಾವ್೨೦೧೬:೮೧)

ಕರಾವಳಿ ಕರ್ನಾಟಕದಲ್ಲಿ ಭಟ್ಕಳವು ಪ್ರಮುಖ ಬಂದರು ಪ್ರದೇಶವಾಗಿದೆ. ಈ ಬಂದರಿನಿಂದ ಪರ್ಶಿಯನ್ ಗಲ್ಫ್ ಮತ್ತು ಕೆಂಪುಸಮುದ್ರದ ಮೂಲಕ ವ್ಯಾಪಾರ ಸಂಬಂಧವನ್ನು ಕಲ್ಪಿಸುತ್ತದೆ. ಈ ಬಂದರು ಪ್ರದೇಶದಲ್ಲಿ ಜೈನರು ಮತ್ತು ಸಾರಸ್ವತರು ನೆಲೆಸಿದ್ದರು. ಇವರು ವಿದೇಶೀಯ ವ್ಯಾಪಾರವನ್ನು ನಿರ್ವಹಿಸುವವರಾಗಿದ್ದು ಇದಕ್ಕೂ ಪೂರ್ವದಲ್ಲಿ ನವಾಯಿತ ಮುಸ್ಲಿಂ, ವಿದೇಶಿ ಮುಸ್ಲಿಂಮರು ವಿದೇಶೀಯ ವ್ಯಾಪಾರ ನಡೆಸುತ್ತಿದ್ದರು. ಈ ಸಮುದಾಯಗಳ ವಿರುದ್ಧ ಪರಸ್ಪರ

ವಿದೇಶೀಯ ವ್ಯಾಪಾರಕ್ಕೆ ಸಂಬಂಧಿಸಿದಂತೆ ಘರ್ಷಣೆಗಳು ನಡೆಸುತ್ತಿರುವ ಸಂದರ್ಭವನ್ನು ಗಮನಿಸಬಹುದು. ವಿಜಯನಗರ ಕಾಲದಲ್ಲಿ ಹೆಚ್ಚಾಗಿ ವಿದೇಶೀಯ ವ್ಯಾಪಾರದಲ್ಲಿ ಗುರುತಿಸಿಕೊಂಡಿದ್ದ ನವಾಯತರೆಂಬ ಮುಸ್ಲಿಂರು ವಿಜಯನಗರೋತ್ತರ ಕಾಲದಲ್ಲಿ ಸ್ಥಿತ್ಯಂತರಕ್ಕೆ ಒಳಪಟ್ಟು ಕಂಪನಿಯ ಆಳ್ವಿಕೆಯ ಅಧೀನದಲ್ಲಿ ವ್ಯಾಪಾರ ವಾಣಿಜ್ಯದಲ್ಲಿ ಗುರುತಿಸಿಕೊಂಡರು. ಮುಸ್ಲಿಂರ ಅಧೀನದಲ್ಲಿದ್ದ ವಿದೇಶೀಯ ವ್ಯಾಪಾರವು ಜೈನರು ಮತ್ತು ಸಾರಸ್ವತ ಬ್ರಾಹ್ಮಣರಲ್ಲಿ ಈ ವ್ಯಾಪಾರವು ವರ್ಗಾಯಿಸಲ್ಪಟ್ಟಿರುತ್ತದೆ.

ಕ್ರಿ.ಶ.೧೭೪೮ರ ಏಪ್ರಿಲ್ ೫ನೇ ತಾರೀಕಿನ ಪೋರ್ಚುಗೀಸ್ ದಾಖಲೆಯೊಂದು ನಾರಾಯಣ ಪ್ರಭು ಎಂಬುವವನು ಅಂಕೋಲದ ವ್ಯಾಪಾರಿಯಾಗಿದ್ದುದನ್ನು ಹಾಗೂ ಅವನು ಗೋವಾದಲ್ಲಿದ್ದ ಪೋರ್ಚುಗೀಸರಿಗೆ ಅಕ್ಕಿ ಪೂರೈಸುತ್ತಿದ್ದನು ಹಾಗೆಯೇ ೧೭೪೨ರ ಅಪ್ರಕಟಿತ ದಾಖಲೆ ತಿಳಿಸುವಂತೆ ಹೊನ್ನಾವರ ಮತ್ತು ಮಂಗಳೂರಿನ ನಡುವೆ ದರ್ ಸಮಿತಿ(ಹರಿಕಾಮತ್) ಒಬ್ಬ ಪ್ರಮುಖ ವ್ಯಾಪಾರಿಯಾಗಿದ್ದ. ಕೆ.ಜಿ.ವಸಂತಮಾಧವ ಅವರು ಇವರನ್ನು ಸಾರಸ್ವತ ವ್ಯಾಪಾರಿಯೆಂದು ಪರಿಗಣಿಸಿದ್ದಾರೆ.(ಪ್ರಭಾತ ೨೦೧೯:೯). ಇನ್ನೂ ಕೆಲವರು ಇವರನ್ನು ಕೋಮಟಿಗರೆಂದು ಗುರುತಿಸಿದ್ದಾರೆ. ಆದರೆ ಈ ಕಾಲದಲ್ಲಿ ಕರಾವಳಿಯ ವ್ಯಾಪಾರ ವಾಣಿಜ್ಯದಲ್ಲಿ ಹೆಚ್ಚಾಗಿ ದಾಖಲೆಗಳಲ್ಲಿ ಗೌಡ ಸಾರಸ್ವತರ ಉಲ್ಲೇಖಗಳೇ ಇರುವುದರಿಂದ ಇವರು ಕೋಮಟಿಗರಲ್ಲ. ಗೌಡ ಸಾರಸ್ವತರೆಂದು ವಸಂತ ಮಾಧವ ಅದರ ಹೇಳಿಕೆಯನ್ನು ಒಪ್ಪಬಹುದಾಗಿದೆ. ಕೆಳದಿ ನಾಯಕರ ವ್ಯಾಪಾರ ವಾಣಿಜ್ಯದಲ್ಲಿ ಪ್ರಮುಖವಾಗಿ ಗುರುತಿಸಿಕೊಂಡಿದ್ದ ಗೌಡ ಸಾರಸ್ವತರು ಹೈದರ್ ಟಿಪ್ಪು ಆಳ್ವಿಕೆಯ ಕಾಲದಲ್ಲಿಯೂ ಕಂಡುಬರುತ್ತಾರೆ. ಟಿಪ್ಪು ಸುಲ್ತಾನನು ವ್ಯಾಪಾರದಲ್ಲಿ ಬದಲಾವಣೆ ತಂದಿದ್ದರಿಂದ ಸ್ಥಿತ್ಯಂತರಕ್ಕೆ ಒಳಗಾಗಿರಬಹುದು. ಅವನ ವ್ಯಾಪಾರ ನೀತಿಯು ಬ್ರಿಟಿಶ್ ಮತ್ತು ಫ್ರೆಂಚರಿಗೆ ವಿರುದ್ಧವಾಗಿತ್ತೇ ವಿನಾ ಸ್ಥಳೀಯ ವ್ಯಾಪಾರಿಗಳಿಗಲ್ಲ.

ಪಿಯೆತ್ರೊ ದೆಲ್ಲಾವೆಲ್ಲೆ ಗೋವಾದಿಂದ ಕೆನರಾ ಕರಾವಳಿಗೆ ಬಂದಾಗ ವೆಂಕಟಪ್ಪನಾಯಕನು ಸಿನಾಯ್ವಿಠಲ್ ಶೆನಾಯ್ ಎಂಬುವನು(ಕೊಂಕಣಿ ಬ್ರಾಹ್ಮಣ ಅಥವಾ ಗೌಡ ಸಾರಸ್ವತ) ಬಹಳ ದಿನಗಳಿಂದ ಗೋವೆಯಲ್ಲಿದ್ದು ವೈಸ್‌ರಾಯ್‌ನೊಡನೆ ವ್ಯವಹಾರ ನಡೆಸುತ್ತಿದ್ದರು(ನಾಗೇಗೌಡ,೨೦೦೭: ೧೯೭). ೧೭ನೇ ಶತಮಾನದಲ್ಲಿ ಪೋರ್ಚುಗೀಸ್ ವ್ಯಾಪಾರ ವಾಣಿಜ್ಯದಲ್ಲಿ ಗುಜರಾತಿನಲ್ಲಿ ಬನಿಯಾ ಎಂಬ ವ್ಯಾಪಾರಿ ಸಮುದಾಯ ಗುರುತಿಸಿಕೊಂಡಂತೆ ಕರ್ನಾಟಕದ ಮತ್ತು ಗೋವಾದ ವ್ಯಾಪಾರ ವಾಣಿಜ್ಯದಲ್ಲಿ ಗೌಡ ಸಾರಸ್ವತರು ಗುರುತಿಸಿಕೊಳ್ಳುತ್ತಾರೆ. ಪೋರ್ಚುಗೀಸರ ಕಂದಾಯ ದಾಖಲೆಗಳಲ್ಲಿ Rendas ಎಂದೇ ಕರೆದಿರುವ ಬಲವಂತದ ಮತಾಂತರಿಸುವ ಪ್ರಕ್ರಿಯೆ ಮತ್ತು ಆ ಸಂದರ್ಭದಲ್ಲಿ ಗೌಡ ಸಾರಸ್ವತರ ೫೦%, ಹಿಂದೂ ೩೦% (ಗುಜರಾತಿನ ಬನಿಯಾಸ್, ಒಂದು ಭಾಗ)ಮತ್ತು ಕ್ರೈಸ್ತ ಪೋರ್ಚುಗೀಸರು ಸ್ಥಳೀಯರನ್ನು ಮತಾಂತರಗೊಳಿಸಿದರು(ಸಾಕಿ, (೧)೧೯೯೮:೩೫೪). ಈ ಪ್ರಕ್ರಿಯೆ ಕರಾವಳಿ ಭಾಗದಲ್ಲಿ ನಿರಂತರವಾಗಿ ನೆಡೆಯುತ್ತಿತ್ತು. ಪೋರ್ಚುಗೀಸರು ಗೋವಾದಲ್ಲಿ ವರ್ತಕ ಸಮುದಾಯಗಳ ಅಸ್ತಿಯನ್ನು ಗಮನಿಸಿ ಪೋರ್ಚುಗೀಸ್

ವ್ಯಕ್ತಿಗಳನ್ನೇ ವಿವಾಹವಾಗಬೇಕು ಎಂಬ ಆದೇಶ ಹೊರಡಿಸಿದ್ದರು.ಸಾಮಾಜಿಕ ವ್ಯವಸ್ಥೆಯಲ್ಲಿ ಹುಟ್ಟುವ ಮಗು ಕ್ರಿಶ್ಚಿಯನ್ ಧರ್ಮಕ್ಕೆ ಸೇರುತ್ತಾನೆ ಎನ್ನುವುದು ಒಂದು ಬಗೆಯ ಚಿಂತನೆಯಾದರೆ, ಅವರ ಅಸ್ತಿಯು ಪೋರ್ಚುಗೀಸರಿಗೆ ಸೇರುತ್ತಿತ್ತು ಎಂಬ ಹಿನ್ನೆಲೆಯಿಂದ ಈ ರೀತಿಯ ಆದೇಶ ಹೊರಡಿಸಿದ್ದರು.

ಪೋರ್ಚುಗೀಸರ ವ್ಯಾಪಾರ ವಾಣಿಜ್ಯದಲ್ಲಿ ಗೌಡ ಸಾರಸ್ವತರು ಪ್ರಮುಖವಾಗಿ ಗುರುತಿಸಿಕೊಂಡಿದ್ದು ಅವರ ಸಾಗರೋತ್ತರ ವ್ಯಾಪಾರಕ್ಕೆ ಪೋರ್ಚುಗೀಸರ ಆರ್ಥಿಕ ಅಭಿವೃದ್ಧಿಯಲ್ಲಿ ಗೌಡ ಸಾರಸ್ವತರು ಪಾತ್ರವನ್ನು ಮರೆಯುವಂತಿಲ್ಲ(ಸಾಕಿ,(೧),೧೯೯೮:೩೫೫). ಕರ್ನಾಟಕ ಕರಾವಳಿಯಲ್ಲಿ ಪೋರ್ಚುಗೀಸ್ ವ್ಯಾಪಾರದಲ್ಲಿ ಗುರುತಿಸಿಕೊಂಡಿದ್ದ ಗೌಡ ಸಾರಸ್ವತರು ವಸಾಹತು ಕರ್ನಾಟಕದ ಆಳ್ವಿಕೆಯ ವೇಳೆಗೆ ಕಂದಾಯ ಆಡಳಿತದಲ್ಲಿ ಗುರುತಿಸಿಕೊಳ್ಳುತ್ತಾರೆ. ಕಂದಾಯ ಆಡಳಿತವನ್ನು ಬ್ರಿಟಿಶರು ಪರಿಚಯಿಸಿದಾಗ ಅದರ ಕಾರ್ಯಚಟುವಟಿಕೆಗಳನ್ನು ನಿರ್ವಹಿಸಲು ಸ್ಥಳೀಯ ಆಡಳಿತವನ್ನು ಚೆನ್ನಾಗಿ ಬಲ್ಲ ಜನರ ಅವಶ್ಯಕತೆಯಿತ್ತು. ಹಾಗಾಗಿ ಕಂಪನಿಗೆ ಸಾರಸ್ವತ ಬ್ರಾಹ್ಮಣರು ಮತ್ತು ಬಂಟ ಸಮುದಾಯದವರು ಸಿಕ್ಕಿದ್ದ ಕಾರಣ ಇವರು ಕರ್ನಾಟಕದಲ್ಲಿ ಕೃಷಿ ಚಟುವಟಿಕೆಯನ್ನು ತಿಳಿದವರಾಗಿದ್ದರಿಂದ ಇವರನ್ನು ನೇಮಕ ಮಾಡಿದರು. ಈ ಮೂಲಕ ವರ್ತಕರಾಗಿದ್ದವರು ಅಧಿಕಾರಶಾಹಿ ನೆಲೆಯ ಮೂಲಕ ಬ್ರಿಟಿಶ ಈಸ್ಟ್ ಇಂಡಿಯಾ ಕಂಪನಿಯ ಮಧ್ಯಸ್ಥಗಾರರಾಗಿ ತಮ್ಮ ಸ್ಥಾನವನ್ನು ವಸಾಹತು ಕಾಲಘಟ್ಟದಲ್ಲಿ ಗುರುತಿಸಿಕೊಂಡರು(ಸಾಕಿ(೨)೧೯೯೮:೬೨). ಈ ಮೇಲಿನ ಹೇಳಿಕೆಗೆ ಸೂರ್ಯನಾಥ ಕಾಮತ್ ಬೆಂಬಲಿಸಿ ಈ ಸಮುದಾಯದ ಜನರು ಕೆನರಾ ಕರಾವಳಿಯಲ್ಲಿ ಉಳಿದೆಲ್ಲಾ ಸಮುದಾಯಗಳಿಗಿಂತ ಮುಂಚೆ ಶಿಕ್ಷಣವನ್ನು ಪಡೆದಿದ್ದರಿಂದ ಬ್ರಿಟಿಶರ ಸೇವೆಯಲ್ಲಿ ಪ್ರಾಬಲ್ಯ ಮೆರೆದರು. ಆ ಸಂದರ್ಭದಲ್ಲಿ ಉನ್ನತ ವರ್ಗದವರು ಮಾತ್ರ ಶಿಕ್ಷಣ ಪಡೆದಿದ್ದರು.

ಗೌಡ ಸಾರಸ್ವತ ಬ್ರಾಹ್ಮಣರ ಬಗ್ಗೆ ಸ್ವರಾಕ್‌ನನ್ನು ಉಲ್ಲೇಖಿಸುತ್ತಾ ಸೂರ್ಯನಾಥ ಕಾಮತ್ ಅವರು ಕೊಡುವ ಈ ವಿವರಣೆ ಅರೆ ಊಳಿಗಮಾನ್ಯತೆಯ ಭೂಮಾಲೀಕರು ಬಡ್ಡಿ ವ್ಯಾಪಾರಿಗಳು ಮತ್ತು ಅಧಿಕಾರಿಗಳ ನಡುವಿನ ಬಂಧವನ್ನು ತಿಳಿಸಿಕೊಡುತ್ತದೆ. ಕೊಂಕಣಿಗಳಲ್ಲಿ ನೇಕಾರರು ಅಂಗಡಿ ಇಟ್ಟಿದ್ದಾರೆ ಮತ್ತು ಪ್ರತಿ ಪೇಟೆಯಲ್ಲೂ ಅವರನ್ನು ಕಾಣಬಹುದು. (ಸಾಕಿ(೨)೧೯೯೮:೬೩). ಕರ್ನಾಟಕದ ಕರಾವಳಿಯಲ್ಲಿ ಗೌಡ ಸಾರಸ್ವತರು ಪೋರ್ಚುಗೀಸರ ಆಗಮನದಿಂದ ವಸಾಹತು ಕರ್ನಾಟಕದ ಆಳ್ವಿಕೆಯವರೆಗೆ ಇವರು ವ್ಯಾಪಾರದಲ್ಲಿ ಗುರುತಿಸಿಕೊಂಡಿದ್ದಡಿರು. ನಂತರ ಕರ್ನಾಟಕದ ಕರಾವಳಿಂಯಲ್ಲಿ ಅವರ ವೃತ್ತಿಪಲ್ಲಟಗೊಂಡ ಪರಿವರ್ತನೆಯುನ್ನು ಈ ಕಾಲಘಟ್ಟದಲ್ಲಿ ಗುರುತಿಸಿಕೊಳ್ಳಬಹುದಾಗಿದೆ.

ಕರಾವಳಿ ಕರ್ನಾಟಕದಲ್ಲಿ ಗೌಡ ಸಾರಸ್ವತರು ಇನ್ನೊಂದು ಬಗೆಯಲ್ಲಿ ಗುರುತಿಸಿಕೊಂಡರು. ಕರಾವಳಿ ಭಾಗದಲ್ಲಿ ರೈತವಾರಿ ಪದ್ಧತಿಯನ್ನು ೧೮೨೦ರ ನಂತರ ಜಾರಿ ಮಾಡಿದ್ದರ ಪರಿಣಾಮವಾಗಿ ರೈತರು ಅನೇಕ ಸ್ಥಿತ್ಯಂತರಕ್ಕೆ ಒಳಪಟ್ಟರು. ಈ ಪದ್ಧತಿಯ ಪ್ರಕಾರ ಕಟಾವಿಗೆ ಮೊದಲೇ ಸರ್ಕಾರಕ್ಕೆ ಹಣ ಪಾವತಿಸಬೇಕಾಗಿತ್ತು. ಆದ್ದರಿಂದ ಭೂಮಾಲೀಕರಾಗಿ ಭೂಮಿಯನ್ನು ಹೊಂದಿದ್ದ ಮತ್ತು

ವರ್ತಕರಾಗಿ ಗುರುತಿಸಿಕೊಂಡಿದ್ದ ಗೌಡ ಸಾರಸ್ವತರು ಬಡ್ಡಿ ವ್ಯಾಪಾರಿಗಳಾಗಿ ಪರಿವರ್ತಿತರಾದರು. ಇದು ಅವರ ಸ್ಥಿತ್ಯಂತರದ ಕಾಲವೆಂದು ಗುರುತಿಸಬಹುದು. ಪ್ರಭುತ್ವಕ್ಕೆ ಬಡ್ಡಿಯನ್ನು ಕೊಡುವ ಹಂತದಲ್ಲಿ ಗೌಡ ಸಾರಸ್ವತರು ಬೆಳೆದಿದ್ದರೆಂದು ಹೇಳಬಹುದು. ೧೮೨೬ರಲ್ಲಿ ಮೈಸೂರಿನ ರಾಜ ಈ ಬಡ್ಡಿ ವ್ಯಾಪಾರಿಗಳಿಂದ ೪ ಲಕ್ಷ ಕೆಪಿ(ಕಂತಾರೇಯ ಪಗೋಡ) ಸಾಲ ಪಡೆದುಕೊಂಡಿದ್ದನೆಂಬ ದಾಖಲೆ ಇದೆ(ಸಾಕಿ(೨)೧೯೯೮:೭೧-೭೨).

ಕರ್ನಾಟಕದ ಕರಾವಳಿಯ ಭಾಗವಾದ ಭಟ್ಕಳ ಬಂದರಿನಲ್ಲಿ ನಾಲ್ಕು ಪ್ರಮುಖ ವ್ಯಾಪಾರಿ ಸಮುದಾಯಗಳಿದ್ದವು. ಅದರಲ್ಲಿ ನವಾಯತ್, ಪರದೇಶಿಗಳು, ಸಾರಸ್ವತ ಕೊಂಕಣಿಗಳು ಮತ್ತು ಜೈನರು ಇವರು ಕರಾವಳಿ ಕರ್ನಾಟಕದ ವಿದೇಶಿಯ ವ್ಯಾಪಾರ ವಾಣಿಜ್ಯದಲ್ಲಿ ತೊಡಗಿಕೊಂಡಿದ್ದ ಪಂಗಡಗಳಾಗಿದ್ದವು(ಕೊಂಚಾಡಿ,೨೦೧೮:೬೯).

ಕರ್ನಾಟಕದ ಕರಾವಳಿ ಭಾಗದ ಪೋರ್ಚುಗೀಸರ ಪ್ರಮುಖ ವ್ಯಾಪಾರಿ ಸಮುದಾಯವಾಗಿದ್ದ ಗೌಡ ಸಾರಸ್ವತರ ಉಲ್ಲೇಖವನ್ನು ಸಂಜಯ್ ಸುಬ್ರಮಣ್ಯಂ ಅವರು ನೀಡುತ್ತಾರೆ. ೧೬೩೦ರ ವೇಳೆಯಲ್ಲಿ ಬಸ್ರೂರಿನಿಂದ ಅಕ್ಕಿಯು ಗೋವಾಕ್ಕೆ ರಫ್ತಾಗುತ್ತಿತ್ತು. ಆ ವೇಳೆಯಲ್ಲಿ ಬೆಂಗಾವಲು ಪಡೆಗಳಾಗಿ ಈ ಸಮುದಾಯದವರು ಕಾರ್ಯ ನಿರ್ವಹಿಸುತ್ತಿದ್ದರು. ಇವರು ಆಹಾರ ಸರಬರಾಜಿನ ಕೊರತೆ ಕುರಿತಂತೆ ತನಿಖೆ ನಡೆಸಿದಾಗ ೧೬೪೬ರಲ್ಲಿ ಇದರಲ್ಲಿ ಬಸ್ರೂರಿನಿಂದ ದೂಡಿದ ತಪ್ಪಿಗೆ ಹೊರಹೋಗುವಂತೆ ಶಿಕ್ಷಿಸಲಾದ ವಿಚಾರವನ್ನು ತಿಳಿಸಿದ್ದಾರೆ. ಅವರ ಹೆಸರುಗಳೆಂದರೆ ನಾರಾಯಣ ಬಾಲೋ, ಶಿವಬಾಲೋ ಸಿನಾಮ್, ದಾಮುಬಾಲೋ, ಸಂತೆ ಕೊಂಮಟಿ ಮತ್ತು ಚೆನ್ನಮ್ಮ ಕೊಮಟ್ಟಿಯ ವಿಧವೆ ರಾಣಿಯು ಇದ್ದರು. ಇವರು ಅಲ್ಲಿ ವಿಪರೀತ ಸುಲಿಗೆ ಮಾಡುತ್ತಿದ್ದು ಅವರನ್ನು ಆ ಪ್ರದೇಶದ ವ್ಯಾಪಾರದಿಂದ ಹೊರಹೋಗುವಂತೆ ಆದೇಶಿಸಲಾದ ವಿಚಾರವಿದೆ. ಗೌಡ ಸಾರಸ್ವತರು ಬಸ್ರೂರಿನ ಅಕ್ಕಿ ವ್ಯಾಪಾರದಲ್ಲಿ ಗುರುತಿಸಿಕೊಂಡಿದ್ದು ಹಾಗೂ ಮಾಡಿದ ತಪ್ಪಿಗೆ ಆರಂಭದಿಂದಲೂ ನಿರ್ವಹಿಸಿಕೊಂಡು ಬಂದ ವ್ಯಾಪಾರವನ್ನು ತೊರೆಯುವುದು ಹಾಗೂ ಒಬ್ಬ ಮಹಿಳೆಯು ಗಂಡ ನಿರ್ವಹಿಸುವ ವಿದೇಶೀಯ ವ್ಯಾಪಾರದಲ್ಲಿ ಭಾಗವಹಿಸಿದ್ದಳೆಂಬ ವಿಚಾರವನ್ನು ತಿಳಿಯಬಹುದಾಗಿದೆ(ಸುಬ್ರಮಣ್ಯಂ,೧೯೯೦:೪೪).

ಭಟ್ಕಳ ಬಂದರು ವಿಜಯನಗರ ಕಾಲದಿಂದಲೂ ಒಂದು ಮುಖ್ಯ ವ್ಯಾಪಾರಿ ಕೇಂದ್ರವಾಗಿತ್ತು. ಗೇರುಸೊಪ್ಪೆಯ ರಾಣಿ ಚೆನ್ನಾದೇವಿ ಸಾರಸ್ವತ ಕುಟುಂಬಕ್ಕೆ ಆಶ್ರಯ ನೀಡಿದ್ದಳು. ಚೆನ್ನವರದ ಖೇತಪ್ಪೈ ಎಂದು ಹೆಸರಾದ ಈ ಸಾರಸ್ವತ ಬೇತಪ್ಪಯ್ಯನು ನಾರಾಯಣ ದೇವಾಲಯ ನಿರ್ಮಿಸಿದ್ದ. ಕೆಳದಿಯ ವೀರಭದ್ರಪ್ಪನಾಯಕನ ಕಾಲದಲ್ಲಿ ರಾಮಕೃಷ್ಣಪ್ರಭು ಮಂತ್ರಿಯಾಗಿದ್ದ(ಕೃಷ್ಣಮೂರ್ತಿ, ವಸಂತಲಕ್ಷ್ಮಿ:೩೦೪): ಈ ಮಂತ್ರಿಯು ರಾಜ್ಯದ ಸಂಪೂರ್ಣ ವಾಣಿಜ್ಯ ವ್ಯವಹಾರವನ್ನು ನಿರ್ವಹಿಸುತ್ತಿದ್ದರು.

ಒಟ್ಟಾರೆಯಾಗಿ ವಿಜಯನಗರೋತ್ತರ ಕಾಲದಲ್ಲಿ ಪ್ರಮುಖ ವರ್ತಕ ಸಮುದಾಯವಾಗಿ ಗುರುತಿಸಿಕೊಂಡಿದ್ದ ಗೌಡಸಾರಸ್ವತರು ಕರಾವಳಿಯ ಪೋರ್ಚುಗೀಸ್ ವ್ಯಾಪಾರದಲ್ಲಿ ಮುಖ್ಯವಾಗಿ

ಕಂಡುಬರುತ್ತಾರೆ. ನಂತರ ಬ್ರಿಟಿಶ್ ಆಳ್ವಿಕೆಯಲ್ಲಿ ಯಾವ ಬಗೆಯ ಸ್ಥಿತ್ಯಂತರವನ್ನು ಕಂಡುಕೊಂಡರೆಂದು ಈ ಮೂಲಕ ತಿಳಿಯಬಹುದಾಗಿದೆ. ಒಟ್ಟಾರೆಯಾಗಿ ಕರಾವಳಿ ಕರ್ನಾಟಕದ ವ್ಯಾಪಾರ ವಾಣಿಜ್ಯದಲ್ಲಿ ಇವರ ಪಾತ್ರ ಗಮನಾರ್ಹ.

**ಕೋಮಟಿಗರು**

ವಿಜಯನಗರೋತ್ತರ ಕಾಲದ ವ್ಯಾಪಾರ ವಾಣಿಜ್ಯದಲ್ಲಿ ಪೋರ್ಚುಗೀಸ್ ದಾಖಲೆಗಳಲ್ಲಿ ಕರಾವಳಿ ಕರ್ನಾಟಕದಲ್ಲಿ ಗುರುತಿಸಿಕೊಂಡ ಈ ಸಮುದಾಯದ ಉಲ್ಲೇಖಗಳು ಕಂಡುಬರುತ್ತದೆ. ಇವರು ಕರ್ನಾಟಕದ ನೆರೆಯ ರಾಜ್ಯವಾದ ಆಂಧ್ರಪ್ರದೇಶದಿಂದ ವಲಸೆ ಬಂದ ಸಮುದಾಯವಾಗಿತ್ತು. ತೆಲುಗು ಪ್ರದೇಶದಿಂದ ಮೈಸೂರು ರಾಜ್ಯಕ್ಕೆ ಹಲವಾರು ಜಾತಿಸಮುದಾಯಗಳು ವಲಸೆ ಬಂದವು. ಅವುಗಳಲ್ಲಿ ಕೋಮಟಿಗರು ಒಬ್ಬರೆಂದು ಅಂದಾಜಿಸಬಹುದು(ಮಹಾದೇವಿ,೨೦೦೮:೨೦). ಕರ್ನಾಟಕದಲ್ಲಿ ಕೋಮಟಿಗರೆಂಬ ಇವರು ವೈಶ್ಯಸಮುದಾಯಕ್ಕೆ ಸೇರಿದವರು. ಬೆಂಗಳೂರು ಪ್ರದೇಶವು ಪ್ರಾಚೀನ ಕಾಲದಿಂದಲೂ ವ್ಯಾಪಾರ-ವಾಣಿಜ್ಯದಲ್ಲಿ ಗುರುತಿಸಿಕೊಂಡಿದ್ದು ಮೈಸೂರಿನ ಕೆಂಪೇಗೌಡನ ಆಳ್ವಿಕೆಯಿಂದಲೇ ವ್ಯಾಪಾರದಲ್ಲಿ ಬೆಂಗಳೂರು ಪ್ರಸಿದ್ಧಿಯನ್ನು ಪಡೆದಿತ್ತು. ಬೆಂಗಳೂರು ಪ್ರದೇಶದ ಮುತ್ತಾಲಪೇಟೆ ರಂಗನಾಥ ದೇವಾಲಯದಲ್ಲಿರುವ ಶಾಸನದ ಪ್ರಕಾರ ಬೆಂಗಳೂರಿನ ಪೇಟೆಯ ನಾಲ್ಕು ಜನ ಶೆಟ್ಟರುಗಳಾದ ಪೆದ್ದ ಚಿಕ್ಕಣ್ಣಸೆಟ್ಟಿ, ತಿರುಮಲ ಸೆಟ್ಟಿ, ದಾನಣ್ಣ ಸೆಟ್ಟಿ ಮೊದಲಾದವರ ಹೆಸರುಗಳಿದ್ದು ಇವರ ದೇವರ ನಿತ್ಯಕರ್ಮಕ್ಕೆ ದಾನ ಕೊಟ್ಟ ವಿವರವಿದೆ(ಜಮುನ:೨೦೦೬:೧೦೫). ಚಿಕ್ಕದೇವರಾಜ ಒಡೆಯರು ವಿಜಯನಗರ ಸಾಮ್ರಾಜ್ಯ ಅವನತಿಯ ನಂತರ ಉಂಟಾದ ಸ್ಥಿತ್ಯಂತರವನ್ನು ಪೇಟೆ ಪಟ್ಟಣಗಳ ನಿರ್ಮಾಣ ಪುನಶ್ಚೇತನ ಕಾರ್ಯವನ್ನು ನಿರ್ವಹಿಸಿ ಮಾರುಕಟ್ಟೆಗಳ ಹೆಚ್ಚಿನ ನಿರ್ಮಾಣಕ್ಕೆ ವರ್ತಕ ಸಮುದಾಯವನ್ನು ಬಳಸಿದರು. ಆಗ ಕೋಮಟಿಗರೆಂಬ ಸಮುದಾಯದವರು ಬೆಂಗಳೂರು ಮೈಸೂರು ಭಾಗಕ್ಕೆ ಆಗಮಿಸಿ ವ್ಯಾಪಾರದಲ್ಲಿ ನಿರತರಾಗಿರಬಹುದು (ಸಾಕಿ(೧)೧೯೮೮:೩೬೮). ಕೋರಮಂಡಲ ಕರಾವಳಿ ಪ್ರದೇಶದಲ್ಲಿ ಚಿಲ್ಲರೆ ವ್ಯಾಪಾರಿಗಳಾಗಿ, ಸಾಗರೋತ್ತರ ಸ್ಥಳೀಯ ವ್ಯಾಪಾರಿಗಳಾಗಿ, ಯುರೋಪಿಯನ್ನರ ಕಂಪನಿಗಳಲ್ಲಿ ದಲ್ಲಾಳಿಗಳಾಗಿ ಬ್ಯಾಂಕಿಂಗ್ ಉದ್ಯಮದಾರರಾಗಿ, ದಕ್ಷಿಣ ಭಾರತದ ವ್ಯಾಪಾರ ವಾಣಿಜ್ಯದಲ್ಲಿ ಈ ಸಮುದಾಯವನ್ನು ಗುರುತಿಸಬಹುದು. ಇವರು ರಫ್ತುದಾರರು ಮತ್ತು ಸಾಗಣಿಕೆದಾರರಾಗಿ ಕೋಮಟಿಗ ಜಾತಿಯನ್ನು ಗುರುತಿಸಿದ್ದಾರೆ. ಕೋಮಟಿಗರು ಬಟ್ಟೆ ವ್ಯಾಪಾರಿಗಳು ಮತ್ತು ಉಪ್ಪು ಉತ್ಪಾದಕರಾಗಿದ್ದರು(ವೆಂಕಟರಂಗೋಕಟ್ಟಿ,೧೮೯೨:೧೧೩).

ಕರ್ನಾಟಕದ ಕರಾವಳಿಯಲ್ಲಿ ಗೌಡ ಸಾರಸ್ವತರು ಮತ್ತು ಬನಿಯಾಗಳನ್ನು ಅವರು ಚಿಟ್ನೀಸ್ ಎಂದು ಗುರುತಿಸಿಕೊಂಡಂತೆ ಕೋರಮಂಡಲ ಕರಾವಳಿಯಲ್ಲಿ ಕೋಮಟಿಗರು ವಿದೇಶೀಯ ವ್ಯಾಪಾರದಲ್ಲಿ ಮತ್ತು ಸ್ಥಳೀಯ ವ್ಯಾಪಾರದಲ್ಲಿ ಕಂಡುಬರುತ್ತಾರೆ. ಆದರೆ ಕರ್ನಾಟಕದ ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ವಲಸೆ ಬರಲು ಮುಖ್ಯಕಾರಣವೆಂದರೆ ಕೋರಮಂಡಲ ಕರಾವಳಿಯಲ್ಲಿ

ಯುರೋಪಿಯನ್ ಕಂಪನಿಗಳ ಉಪಟಳದಿಂದ ಕರ್ನಾಟಕ ಭಾಗಕ್ಕೆ ವಲಸೆ ಬಂದಿರಬಹುದು. ಕೊಮ್ಮಟಿಗರು ಮೂಲತಃ ವ್ಯಾಪಾರ ವೃತ್ತಿಯನ್ನು ನಿರ್ವಹಿಸುವವರು ಕಾಳು, ತುಪ್ಪ, ಬೆಣ್ಣೆಗಳ ಮಾರಾಟ, ಚಿಕ್ಕ ತಕ್ಕಡಿ ಅಂಗಡಿ, ಅರಿವೆಯ ಅಂಗಡಿ, ಇವೇ ಮುಖ್ಯ ಮಳಿಗೆಗಳನ್ನು ಹೊಂದಿದ್ದರು. ಕೊಮ್ಮಟಿಗರು ವಿಶೇಷವಾಗಿ ಧಾರವಾಡ ಜಿಲ್ಲೆಯವರು ತಂತ್ರಗಾರರೆಂತಲೂ, ಧೂರ್ತರೆಂತಲೂ ಹೆಸರಾಗಿದ್ದಾರೆ(ವೆಂಕಟರಂಗೋಕಟ್ಟಿ,೧೯೮೨:೧೦೮).

ಕೋಮಟಿಗರು ಕರ್ನಾಟಕದ ಎಲ್ಲ ಭಾಗದಲ್ಲಿದ್ದು ಮೂಲತಃ ತೆಲುಗು ಮಾತನಾಡುವ ಜನಾಂಗದವರಾಗಿದ್ದಾರೆ. ಪ್ರಸ್ತುತ ವ್ಯಾಪಾರ ವೃತ್ತಿಯನ್ನು ನಿರ್ವಹಿಸುವವರು. ಈ ಕೋಮಟಿಗ ಸಮುದಾಯವನ್ನು ಕರ್ನಾಟಕದ ಎಲ್ಲ ಭಾಗಗಳಲ್ಲಿಯೂ ಗುರುತಿಸಬಹುದಾಗಿದೆ. ಕೋಮಟಿಗ ಸಮುದಾಯವು ಧಾರವಾಡ, ಬೆಳಗಾವಿ, ವಿಜಾಪುರ, ಕಾನಡಾ ಮೊದಲಾದ ಭಾಗದಲ್ಲಿ ಹೆಚ್ಚು ಸಂಖ್ಯೆಯಲ್ಲಿ ವಸಾಹತು ಕರ್ನಾಟಕದಲ್ಲಿ ನೆಲೆಸಿದ್ದರು ಎಂಬುದನ್ನು ಅಂಕಿ ಅಂಶಗಳ ಮೂಲಕ ಗ್ಯಾಝೆಟಿಯರ್‌ನಲ್ಲಿ ದಾಖಲಿಸಲಾಗಿದೆ. ಕೋಮಟಿಗ ಜನಾಂಗದವರು ಆಂಧ್ರದ ವಲಸಿಗರಾಗಿದ್ದರಿಂದ ಈ ರಾಜ್ಯವು ಕರ್ನಾಟಕದ ಗಡಿಭಾಗದಲ್ಲಿರುವ ರಾಜ್ಯವಾದ್ದರಿಂದ ಮೈಸೂರು ಸಂಸ್ಥಾನದ ಕೋಲಾರ, ತುಮಕೂರು, ಚಿತ್ರದುರ್ಗ, ಚಿಕ್ಕಬಳ್ಳಾಪುರ ಮತ್ತು ದೊಡ್ಡಬಳ್ಳಾಪುರ ಭಾಗಗಳಲ್ಲಿ ಈ ಸಮುದಾಯದವರು ಹೆಚ್ಚಾಗಿ ಕಂಡುಬರುತ್ತಾರೆ. ವೈಶ್ಯರು ಪ್ರಾಚೀನ ಕಾಲದಿಂದಲೂ ವ್ಯಾಪಾರವನ್ನೇ ವೃತ್ತಿಯನ್ನಾಗಿಸಿದ ಸಮುದಾಯವಾಗಿದೆ. ಬಟ್ಟೆ ನೇಕಾರಿಕೆಯೇ ಇವರ ಮುಖ್ಯ ಕಸುಬಾಗಿದೆ. ಪ್ರಸ್ತುತ ಆಂಧ್ರದ ರಾಯದುರ್ಗವು ಬಟ್ಟೆ ವ್ಯಾಪಾರದಲ್ಲಿ ಪ್ರಾಮುಖ್ಯತೆ ಪಡೆದಿರುವುದನ್ನು ನೋಡಬಹುದು. ಈ ಸಮುದಾಯದ ಹೆಚ್ಚು ಜನ ಬಟ್ಟೆ ಅಂಗಡಿಯಲ್ಲಿ ಬಟ್ಟೆ ವ್ಯಾಪಾರ ಮಾಡುತ್ತಿರುವುದನ್ನು ಗಮನಿಸಬಹುದು.

ಮೈಸೂರು ಸಂಸ್ಥಾನಕ್ಕೆ ಜೈನ, ಬ್ರಾಹ್ಮಣರಂತೆ, ತೆಲುಗು, ತಮಿಳು, ಪ್ರಾಂತಗಳಿಂದಲೂ ಸೌರಾಷ್ಟ್ರಗಳಿಂದಲೂ ಹಲವಾರು ಸಮುದಾಯಗಳು ವಲಸೆ ಬಂದಿದ್ದವು ಕೋಲಾರ ಮತ್ತು ಬೆಂಗಳೂರುಗಳಲ್ಲಿ ಪಲ್ಲಿಪಾಸಲು ಎಂಬ ಜನ ತೋಟಗಳನ್ನು ನಿರ್ವಹಿಸುವ ಕೆಲಸ ಮಾಡುತ್ತಿದ್ದರು. ಮೋಚಿ ಎಂಬ ಜನರು ಪಾದರಕ್ಷೆಗಳನ್ನು ತಯಾರಿಸುವುದು ಇವರ ವೃತ್ತಿಯಾಗಿತ್ತು.

**ಗುಜರಾತಿಗಳು**

ಗುಜರಾತಿ ವ್ಯಾಪಾರಿಗಳು ವಿಜಯನಗರೋತ್ತರ ಕಾಲದಲ್ಲಿ ವ್ಯಾಪಾರ-ವಾಣಿಜ್ಯದಲ್ಲಿ ಪ್ರಮುಖವಾಗಿ ಗುರುತಿಸಿಕೊಳ್ಳುತ್ತಾರೆ. ಪೋರ್ಚುಗೀಸರು ೧೫೧೦ರಲ್ಲಿ ಗೋವಾವನ್ನು ವಶಪಡಿಸಿಕೊಂಡಾಗ ಗೋವಾ ಭಾಗದಿಂದ ಕರಾವಳಿ ಭಾಗಕ್ಕೆ ಈ ಗುಜರಾತಿ ವ್ಯಾಪಾರಿಗಳು ವಲಸೆ ಬಂದಿದ್ದರು. ಗುಜರಾತಿನಿಂದ ಬಂದ ಬ್ರಾಹ್ಮಣ ವರ್ತಕನೊಬ್ಬನು ರತ್ನ ವ್ಯಾಪಾರಿಯಾಗಿ, ಚಾಮರಾಜ ಒಡೆಯರು, ಒಂದನೆಯ ಕಂಠೀರವ ನರಸರಾಜ ಒಡೆಯರು, ದೇವರಾಜ ಒಡೆಯರು ಈ ಮೂವರ ಅನುಗ್ರಹವನ್ನು ಗಳಿಸಿಕೊಂಡಿದ್ದನು. ಈ ವರ್ತಕನು ಧರ್ಮಶೀಲನಾಗಿ, ಭಾರತದ ಎಲ್ಲೆಡೆಗಳಲ್ಲಿಯೂ ಧರ್ಮಕಾರ್ಯಗಳಿಗೆ ಧನ ದಾನ ಮಾಡಿದ್ದನು. ಕ್ರಿ.ಶ.೧೬೬೭ರಲ್ಲಿ ಬರೆದ ಧನ್ನೋಜಿ ತಾಮ್ರಶಾಸನವು ದೇವರಾಜ ಒಡೆಯರ(೧೬೫೯-೭೨) ಕಾಲದ್ದಾಗಿದ್ದು, ಧನ್ನೋಜಿಯು

ರನ್ನಪಡಿ ವ್ಯಾಪಾರಿಯಾಗಿ ಬೇಕಾದಷ್ಟು ಸಂಪಾದನೆ ಮಾಡಿ, ಅಷ್ಟೇ ದಾನ ಧರ್ಮ ನೀಡಿದನೆಂದು ತಿಳಿಸುತ್ತದೆ. ಈತನೇ ಗುಜರಾತಿನಿಂದ ಬಂದಿದ್ದ ವ್ಯಾಪಾರಿ, ವಿಶಾಲ ಭಾರತದ ನಾನಾ ತೀರ್ಥ ಕ್ಷೇತ್ರಗಳಿಗೆ ಧಾನಧರ್ಮವನ್ನು ನೀಡಿದುದ್ದಲ್ಲದೆ, ಸಪ್ತಕೋಟೇಶ್ವರ ಅಂದರೆ ಗೋವಾದಲ್ಲಿ ತುಲಾಬಾರ ಮಾಡಿಸಿ, ರಾಮೇಶ್ವರ ಕಾಶಿಗಳಲ್ಲಿ ಅನ್ನ ಛತ್ರಗಳನ್ನು ಸ್ಥಾಪಿಸಿದನೆಂದು ತಿಳಿದುಬರುತ್ತದೆ. ಮೈಸೂರಿನ ಕನ್ನಂಬಾಡಿ ಎಂಬ ಸ್ಥಳದಲ್ಲಿ ತನ್ನ ಪತ್ನಿ ಇಷ್ಟದಂತೆ ಹೊಸಕೋಟೆ ಗ್ರಾಮಗಳನ್ನು ಅಗ್ರಹಾರವಾಗಿ ಪರಿವರ್ತಿಸಿ ತ್ರಿಮತಸ್ಥ ಬ್ರಾಹ್ಮಣರಿಗೆ ೪೧ ವೃತ್ತಿಗಳನ್ನು ಹಂಚಿದನೆಂದು ತಿಳಿಸುತ್ತದೆ(ಮಹಾದೇವಿ, ೨೦೦೮:೨೦).

ಗುಜರಾತಿನಿಂದ ಬನಿಯಾಗಳೆಂಬ ವರ್ತಕರು ಕರ್ನಾಟಕದ ಕರಾವಳಿಯ ವ್ಯಾಪಾರದಲ್ಲಿ ಪ್ರಮುಖವಾಗಿ ಗುರುತಿಸಿಕೊಳ್ಳುತ್ತಾರೆ. ಈ ವರ್ತಕರು ಕೆಂಪು ಹತ್ತಿ ವಸ್ತ್ರ, ಚಿನ್ನ, ಬೆಳ್ಳಿ, ಅತ್ಯುತ್ತಮ ದರ್ಜೆಯ ಹತ್ತಿ ಉಡುಪುಗಳನ್ನು ಬೆಂಗಳೂರಿಗೆ ತಂದು ವ್ಯಾಪಾರ ಮಾಡುತ್ತಿದ್ದರು(ಬುಕಾನನ್, (೨):೧೯೯)

ಈ ಸಮುದಾಯದವರು ಮೂಲತಃ ವಲಸಿಗ ಸಮುದಾಯವಾಗಿದ್ದು ಗುಜರಾತ್ ಭಾಗದಿಂದ ೧೭ನೇ ಶತಮಾನದಲ್ಲಿ ಕರ್ನಾಟಕದ ವ್ಯಾಪಾರ ವಾಣಿಜ್ಯದಲ್ಲಿ ಗುರುತಿಸಿಕೊಂಡ ಸಮುದಾಯವಾಗಿದೆ. ಈ ಗುಜರಾತಿ ಸಮುದಾಯಗಳು ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಬೆಂಗಳೂರು ಪ್ರದೇಶಕ್ಕೆ ಬಂದು ನೆಲೆಸಿದರು. ಇದಕ್ಕೆ ಪೂರಕವಾಗಿ ಬೆಂಗಳೂರು ಪೇಟೆಯಲ್ಲಿರುವ ಕಾಶಿ ವಿಶ್ವೇಶ್ವರ ದೇವಾಲಯವನ್ನು ಗುರ್ಜರ ಬ್ರಾಹ್ಮಣರು ಕಟ್ಟಿಸಿದರೆಂದು ಹೇಳಲಾಗಿದೆ(ಯಶೋಧ,೨೦೧೬ :೧೫೦). ಮೈಸೂರಿನ ಚಿಕ್ಕದೇವರಾಜ ಒಡೆಯರು ಮಾರುಕಟ್ಟೆಕೇಂದ್ರಿತ ಹೊಸ ಅರ್ಥವ್ಯವಸ್ಥೆಯನ್ನು ಪುನಃಶ್ಚೇತನ ಮಾಡುವ ಸಂದರ್ಭದಲ್ಲಿ ವರ್ತಕ ಸಮುದಾಯಗಳಿಗೆ ಸ್ವತಂತ್ರವನ್ನು ನೀಡಿದ್ದರು. ಅವರ ಮೂಲಕ ಸಾಮ್ರಾಜ್ಯದ ಅಭಿವೃದ್ಧಿ ಸಾಧ್ಯ ಎಂಬ ಪರಿಕಲ್ಪನೆಯು ಚಿಕ್ಕದೇವರಾಜ ಒಡೆಯರದಾಗಿತ್ತು ಹಾಗೂ ಪೋರ್ಚುಗೀಸರ ಕಿರುಕುಳದಿಂದ ಬೇರೊಂದು ಪ್ರದೇಶಕ್ಕೆ ಈ ಸಮುದಾಯ ವಲಸೆ ಬಂದಿರಬಹುದಾಗಿದೆ.

ಮೈಸೂರು ಮತ್ತು ಬೆಂಗಳೂರು ನಗರಗಳಲ್ಲಿ ಹೈದರ್ ಆಲಿ ಮತ್ತು ಟಿಪ್ಪು ಕಾಲದಲ್ಲಿಯೇ ಈ ಗುಜರಾತಿ ವರ್ತಕರು ವ್ಯಾಪಾರ ವಾಣಿಜ್ಯದಲ್ಲಿ ಗುರುತಿಸಿಕೊಂಡಿದ್ದು ಇವರು ಟಿಪ್ಪು ಸುಲ್ತಾನ್ ಹೊಸ ವ್ಯಾಪಾರ ವಾಣಿಜ್ಯನೀತಿಯಿಂದ ಬೇರೆ ಬೇರೆ ರಾಜ್ಯಗಳಿಂದ ಕರ್ನಾಟಕದ ವ್ಯಾಪಾರ ವಾಣಿಜ್ಯ ವಿಸ್ತರಿಸಲ್ಪಟ್ಟಿತ್ತು. ಆಗ ಮೈಸೂರು ಸಂಸ್ಥಾನದ ಜೊತೆ ವ್ಯಾಪಾರ ಮಾಡಲು ವ್ಯಾಪಾರಿಗಳಿಗೆ ಅನೇಕ ರಿಯಾಯಿತಿಗಳನ್ನು ನೀಡಿದ್ದರಿಂದ ಬಿರುಸಿನ ವ್ಯಾಪಾರವನ್ನು ಈ ಸಮುದಾಯದವರು ನಿರ್ವಹಿಸಿದರು. ಈ ಸಮುದಾಯದವರು ಹೈದಾಬಾದಿನ ನಿಜಾಮನ ಮತ್ತು ಆರ್ಕಾಟಿನ ನವಾಬರೊಂದಿಗೆ ಬಟ್ಟೆ ವ್ಯಾಪಾರದಲ್ಲಿ ಮಧ್ಯವರ್ತಿಗಳಾಗಿ ವ್ಯಾಪಾರವನ್ನು ನಿರ್ವಹಿಸುತ್ತಿದ್ದರು. (ಸಾಕಿ,(೧)೧೯೯೮:೩೬೦). ಕರಾವಳಿ ಕರ್ನಾಟಕದ ವ್ಯಾಪಾರದಲ್ಲಿ ಗೌಡ ಸಾರಸ್ವತರು ಗುರುತಿಸಿಕೊಂಡಂತೆ ಬನಿಯಾ ಎಂಬ ಗುಜರಾತಿ ವ್ಯಾಪಾರಿಗಳು ಗುರುತಿಸಿಕೊಂಡಿದ್ದರು. ಇವರು ಪೋರ್ಚುಗೀಸರ ವ್ಯಾಪಾರ ವಾಣಿಜ್ಯದಲ್ಲಿ ಪ್ರಮುಖವಾಗಿ ಗುರುತಿಸಿಕೊಂಡರು. ಈ ಸಮುದಾಯದವರು

ತಮ್ಮದೇ ವ್ಯಾಪಾರಿ ನೌಕಾಪಡೆಯನ್ನು ಹೊಂದುವಷ್ಟು ಶ್ರೀಮಂತಿಕೆಯನ್ನು ಹೊಂದಿದ್ದರು. ವಿದೇಶೀಯ ನೌಕಾಪಡೆಗಳಿಗೆ ಮಧ್ಯಸ್ಥರಾಗಿ ಪ್ರಮುಖರಾಗಿ ಗುರುತಿಸಿಕೊಂಡರು.

ಗುಜರಾತಿನ ಈ ಬನಿಯಾ ಸಮುದಾಯದ ವ್ಯಾಪಾರವನ್ನು ಕುರಿತಂತೆ "ನನ್ನ ದೇವರು ಒಬ್ಬ ಒಡೆಯ ಅವನನ್ನು ವಾಣಿಜ್ಯವನ್ನು ನ್ಯಾಯಯುತವಾಗಿ ಮಾಡುತ್ತಾನೆ. ಇಡೀ ವಿಶ್ವವನ್ನು ಒಂದೇ ತಕ್ಕಡಿಯಲ್ಲಿ ತೂಗುತ್ತಾನೆ" ಎಂದು ಸಂತ ಕಬೀರರು ಈ ಸಮುದಾಯವನ್ನು ಕುರಿತಂತೆ ಹೇಳುತ್ತಾನೆ. ಇರ್ಫಾನ್ ಹಬೀಬ್ ಅವರು ಬನಿಯಾ ಮತ್ತು ಬಂಜಾರ ಸಮುದಾಯಗಳ ಬಗ್ಗೆ ತಿಳಿಸುತ್ತಾ ವಸಾಹತುಪೂರ್ವ ಭಾರತದಲ್ಲಿ ೧೩೫೦ರಿಂದ ಪ್ರಮುಖವಾಗಿ ಈ ಸಮುದಾಯದವರು ಗುರುತಿಸಿಕೊಳ್ಳುತ್ತಾರೆ. ಬನಿಯಾ ಸಮುದಾಯವು ಕೃಷಿ ಉತ್ಪನ್ನದ ಧಾನ್ಯ ವ್ಯಾಪಾರವನ್ನು ಭಾರತದಲ್ಲಿ ಯಾವ ರೀತಿ ನಿರ್ವಹಿಸುತ್ತಿತ್ತೆಂದು ವಿವರಿಸಿದ್ದಾರೆ. ಈ ಸಮುದಾಯವು ಒಂದೊಂದು ರಾಜ್ಯದಲ್ಲಿ ಒಂದೊಂದು ಹೆಸರಿನಿಂದ ಗುರುತಿಸಿಕೊಂಡಿದೆ. ಬನಿಯಾ ವ್ಯಾಪಾರಿಗಳು ಸೂರತ್‌ನಲ್ಲಿ ಈಸ್ಟ್ ಇಂಡಿಯಾ ಕಂಪನಿಯ ಆಳ್ವಿಕೆಗೆ ಒಳಪಟ್ಟಾಗ ಕಂಪನಿಯ ಅಧಿಕಾರಿಗಳಾಗಿ ನಾಲ್ಕು ಜನ ನೇಮಕವಾಗಿದ್ದ ವಿಚಾರ ತಿಳಿಯುತ್ತದೆ. ಇಲ್ಲಿ ಧಾನ್ಯ ವ್ಯಾಪಾರಿಯಾಗಿದ್ದವನನ್ನು ದಲ್ಲಾಳಿ ಬ್ಯಾಂಕರ್ ಆಗಿ ಗುರುತಿಸಿಕೊಳ್ಳುತ್ತಾರೆ. (ಜಮೇಶ್,೨೦೧೧ :೩೮೮) ಬನಿಯಾ ಎಂಬ ಸಮುದಾಯವು ವಸಾಹತು ಪೂರ್ವಭಾರತದಲ್ಲಿ ಪ್ರಮುಖ ವ್ಯಾಪಾರಿ ಸಮುದಾಯವಾಗಿ ಗುರುತಿಸಿಕೊಂಡಿದೆ. ಹಾಗೂ ಈ ಸಮುದಾಯ ಕಂಪನಿಯ ಅಧೀನದಲ್ಲಿ ವ್ಯಾಪಾರದ ಜೊತೆ ಮಧ್ಯವರ್ತಿ ಏಜೆಂಟ್ ಆಗಿ ಗುರುತಿಸಿಕೊಂಡಿದೆ.

ಗೋವಾ ಪೋರ್ಚುಗೀಸ್ ರಾಜಧಾನಿಯಾದಾಗ ಅವರ ಆರ್ಥಿಕತೆಯಲ್ಲಿ ಬನಿಯಾಗಳು ಪ್ರಧಾನವಾಗಿ ಕಾಣಿಸಿಕೊಳ್ಳುತ್ತಾರೆ. ಒಂದು ರೀತಿಯಲ್ಲಿ ಪೋರ್ಚುಗೀಸ್ ಆರ್ಥಿಕತೆಯಲ್ಲಿ ಬನಿಯಾ ಮತ್ತು ಸಾರಸ್ವತರ ವ್ಯಾಪಾರ ಮುಖ್ಯವಾಗಿ ಕಂಡುಬರುತ್ತದೆ. ದಕ್ಷಿಣದ ಪ್ರದೇಶಗಳಾದ ಸೇಲಂ ಕೊಯಿಮಂಬತ್ತೂರು, ಮಧುರೈ ಇತ್ಯಾದಿಗಳು, ರಾಜ್ಯದಲ್ಲಿ ಗುಜರಾತಿ ವರ್ತಕರು ನೆಲೆಸಿದ್ದರು. ಇವರು ಉತ್ತರ ಭಾರತದೊಂದಿಗೆ ವ್ಯಾಪಾರ ಸಂಪರ್ಕವನ್ನು ಹೊಂದಿದ್ದರು(ಚಂದ್ರಶೇಖರ್, ರಾವ್೨೦೧೬:೪೨).

**ರಾಜಸ್ಥಾನಿಗಳು**

ಯಲಹಂಕ ನಾಡಪ್ರಭು ಕೆಂಪೇಗೌಡನ ೧೬೩೩ರ ಒಂದು ಶಾಸನದಲ್ಲಿ ೧೬೨೮ರಲ್ಲಿ ಬಿಜಾಪುರದ ಸುಲ್ತಾನ ರಣದುಲ್ಲಾಖಾನ್ ಬೆಂಗಳೂರನ್ನು ವಶಪಡಿಸಿಕೊಂಡ ಸಂದರ್ಭದಲ್ಲಿ ನಾಡಪ್ರಭು ಇಮ್ಮಡಿ ಕೆಂಪೇಗೌಡನಿಗೆ ಜಯವಾಗಬೇಕೆಂದು ಗುಜ್ಜರಿ ವಿಶ್ವನಾಥ ಎಂಬ ಪರದೇಶದಿಂದ ಬಂದ ವ್ಯಾಪಾರಿಯು ಧರ್ಮಶಾಲಾ ಮಠವೊಂದನ್ನು ಸ್ಥಾಪಿಸಿದ ವಿಚಾರ ತಿಳಿಯುತ್ತದೆ. ಅಂದರೆ ಗುಜ್ಜರು ಎಂಬುದು ರಾಜಸ್ಥಾನಿ ಮೂಲವನ್ನು ತೋರಿಸುತ್ತದೆ. ಅಂದರೆ ಕೆಂಪೇಗೌಡನ ಆಳ್ವಿಕೆಯ ವೇಳೆಗೆ ಬೆಂಗಳೂರು ನಗರವು ಪ್ರಮುಖ ವಾಣಿಜ್ಯ ಕೇಂದ್ರವಾಗಿ ಗುರುತಿಸಿಕೊಂಡಿದೆ(ಜಮುನ

೨೦೦೬: ೬೦). ಒಬ್ಬ ಅಂತರ್‌ರಾಜ್ಯ ವ್ಯಾಪಾರಿಯು ದೇಶೀಯ ಅರಸುಮನೆತನದ ಪ್ರಭುತ್ವಕ್ಕೆ ಜಯವಾಗಬೇಕೆಂದು ಧರ್ಮಪಾಠಶಾಲಾ ಮಠ ನಿರ್ಮಿಸಿರುವುದು ನಿಜಕ್ಕೂ ಗಮನಾರ್ಹವಾದ ವಿಚಾರವಾಗಿದೆ.

ರಾಜಸ್ಥಾನಿಗಳು ಜೈನ ಮತಾವಲಂಬಿಗಳಾಗಿದ್ದು ವ್ಯಾಪಾರ ವಾಣಿಜ್ಯದಲ್ಲಿ ಗುರುತಿಸಿಕೊಂಡು ಕರ್ನಾಟಕಕ್ಕೆ ವಲಸೆ ಬಂದಿರಬಹುದು. ಕೆಂಪೇಗೌಡನು ವಿಜಯನಗರದ ಅಚ್ಯುತರಾಯನ ಕಾಲದಲ್ಲಿ ಬಂಧನಕ್ಕೊಳಗಾದಾಗ ರಾಜಸ್ಥಾನಿ ಸ್ನೇಹಿತರ ಸಹಾಯದಿಂದ ಬಿಡುಗಡೆ ಹೊಂದಿದನು(ಯಶೋಧ ೨೦೧೬:೧೪೮). ಎಂದು ತಿಳಿಸುತ್ತಾರೆ.

ರಾಜಸ್ಥಾನಿ ಸಮುದಾಯವಾದ ಇವರ ಪಂಗಡಗಳೆಂದರೆ ಮಹೇಶ್ವರಿ, ಅಗರ್‌ವಾಲ್, ದಿಗಂಬರ, ಶ್ವೇತಾಂಬರ, ಸ್ಥಾನಕ, ಓಸ್‌ವಾಲಾಜೈನರು, ಮಾರ್‍ವಾಡಿ ಶೆಟ್ಟಿ ಶೆಕಾವತಿ ಎಂಬ ಒಳಪಂಗಡಗಳಿವೆ. ಕರ್ನಾಟಕದ ಎಲ್ಲ ಭಾಗದಲ್ಲಿಯೂ ರಾಜಸ್ಥಾನಿ ಸಮುದಾಯಗಳು ವ್ಯಾಪಾರ ವಾಣಿಜ್ಯದಲ್ಲಿ ಗುರುತಿಸಿಕೊಂಡಿದ್ದಾರೆ. ಚಿತ್ರದುರ್ಗ, ಬೆಂಗಳೂರು, ಹುಬ್ಬಳ್ಳಿ, ದಾವಣಗೆರೆ, ಮೈಸೂರು, ಬೆಳಗಾವಿ ಭಾಗಗಳಲ್ಲಿ ಆಧುನಿಕ ಸಂದರ್ಭದಲ್ಲಿ ಹೆಚ್ಚಿನದಾಗಿ ಗುರುತಿಸಬಹುದಾಗಿದೆ. ಟಿಪ್ಪುವಿನ ಮರಣಾನಂತರ ವ್ಯಾಪಾರ ವಾಣಿಜ್ಯವು ಸರ್ಕಾರದ ನಿಯಂತ್ರಣಕ್ಕೆ ತರಲು ಬಯಸಿದ್ದ ಕಾರಣ ವ್ಯಾಪಾರ ಕುಸಿದಿತ್ತು. ೧೮೪೯ರಲ್ಲಿ ಬೆಂಗಳೂರು ದಂಡು ಪ್ರದೇಶವಾದಾಗ, ಈ ಪ್ರದೇಶ ನಿರ್ಮಿಸಲು ಬ್ಯಾಂಕರ್‌ಗಳನ್ನು ಕಟ್ಟಲು ಹಣದ ಕೊರತೆ ಉಂಟಾದಾಗ ಜೋಧ್‌ಪುರದಿಂದ ಎತ್ತಿನಗಾಡಿಗಳಲ್ಲಿ ವಲಸೆ ಬಂದಿದ್ದ ಮಾರ್‍ವಾಡಿಗಳು ಕಂಪನಿಯ ಸೈನಿಕರಿಗೆ ಬ್ಯಾಂಕರ್‌ಗಳಾಗಿ ಕಾರ್ಯ ನಿರ್ವಹಿಸಿದರು. ೧೮೬೨ರಲ್ಲಿ ಅಠಾರಾ ಕಛೇರಿ ನಿರ್ಮಿಸಲು ಬನ್ಸೀಲಾಲ್ ಅಭಿರಚಂದ(ರತನ್‌ಲಾಲ್) ಎಂಬ ಮಾರ್ವಾಡಿಗೆ ಕಟ್ಟಡದ ಗುತ್ತಿಗೆ ಕೊಡಲಾಯಿತು(ಯಶೋಧ ೨೦೧೬:೧೪೯). ಎಈ ಮೂಲಕ ಕರ್ನಾಟಕದ ವ್ಯಾಪಾರ ವಾಣಿಜ್ಯದಲ್ಲಿ ಅಂತರ್‌ರಾಜ್ಯದಿಂದ ಬಂದ ವರ್ತಕ ಸಮುದಾಯವು ದಾನ ನೀಡಿ ಸಂಸ್ಥಾನದ ೧೮ ಇಲಾಖೆಗಳ ಕಛೇರಿ ಸ್ಥಾಪನೆಗೆ ಒಬ್ಬ ಅಂತರ್‌ರಾಜ್ಯ ವ್ಯಾಪಾರಿಯ ಪಾತ್ರವನ್ನು ನಾವು ಮರೆಯುವಂತಿಲ್ಲ. ಇದರಿಂದ ತಿಳಿಯುವ ಅಂಶವೆಂದರೆ ೧೮ನೇ ಶತಮಾನದ ವೇಳೆಗೆ ಆರ್ಥಿಕವಾಗಿ ಅಷ್ಟು ಪ್ರಬಲ ವರ್ತಕ ಸಮುದಾಯಗಳು ಕಂಪನಿಗೆ ಸಾಲ ನೀಡುವ ಹಂತದಲ್ಲಿ ಬೆಳೆದಿರುವುದು ಗಮನಾರ್ಹವಾಗಿದೆ. ವಸಾಹತು ಕರ್ನಾಟಕದ ನಂತರ ಈ ಸಮುದಾಯ ಇಲ್ಲಿಯದವರೆಗೆ ಚಿನ್ನ, ಬಟ್ಟೆ, ಕಿರಾಣಿ ಅಂಗಡಿ ಎಲ್ಲ ರೀತಿಯ ವ್ಯಾಪಾರದಿಂದಲೂ ಗುರುತಿಸಿಕೊಂಡಿರುವುದು ಕಂಡುಬರುತ್ತದೆ.

ಈ ಸಮುದಾಯವು ಟಿಪ್ಪು ಕಾಲಾವಧಿಯಲ್ಲಿ ಕರ್ನಾಟಕಕ್ಕೆ ಬಂದ ಸಮುದಾಯವೆಂದು ಗುರುತಿಸಬಹುದು. ಇವರು ಸೂರತ್, ಬಾಂಬೆ, ಮೊದಲಾದ ಕಡೆಯಿಂದ ಕರ್ನಾಟಕಕ್ಕೆ ಬಂದ ಸಮುದಾಯ ಎಂದು ಹೇಳಬಹುದು. ಈ ಸಮುದಾಯವು ವಸಾಹತು ಕರ್ನಾಟಕದಲ್ಲಿ ಮಧ್ಯವರ್ತಿ ವರ್ತಕ ಸಮುದಾಯವಾಗಿ ಗುರುತಿಸಿಕೊಳ್ಳುತ್ತದೆ. ಈ ಮಾರವಾಡಿ ಸಮುದಾಯವು ಮೈಸೂರು ಸಂಸ್ಥಾನದಲ್ಲಿ ಎಷ್ಟು ಪ್ರಬಲವಾಗಿತ್ತೆಂದರೆ ಪ್ರಭುತ್ವಕ್ಕೆ ಸಾಲ ಕೊಡುವಷ್ಟು ಬೃಹತ್ ಸಮುದಾಯವಾಗಿತ್ತು.

ಜಗತಸೇಠರು ೧೭೮೭ರಲ್ಲಿ ಕಂಪನಿಯ ಬ್ಯಾಂಕರ್‌ಗಳಾಗಿದ್ದರು. ಅವರ ಜಾಗಕ್ಕೆ ಅಗರವಾಲ್ ಸಮುದಾಯದ ದೊಡ್ಡಮಾರ್ವಾಡಿ ಬ್ಯಾಂಕರ್‌ನಾದ ಗೋಪಾಲ್‌ದಾಸ್ ಮಾರ್ವಾಡಿ ಬ್ಯಾಂಕ್ ಬಂತು. ಇವನ ಸಹೋದರ ಭವಾನಿದಾಸ ಟಿಪ್ಪುವನ್ನು ಹತ್ತಿಕ್ಕಲು ಮತ್ತು ಶ್ರೀರಂಗಪಟ್ಟಣ ವಶಪಡಿಸಿಕೊಳ್ಳಲು ಬ್ರಿಟಿಶರಿಗೆ ಸಹಕರಿಸಿದ್ದ(ಸಾಕಿ(೨)೧೯೯:೮೫೮). ಈ ಸಮುದಾಯದವರು. ವಸಾಹತು ಕರ್ನಾಟಕದಲ್ಲಿ ಬ್ರಿಟಿಶರ ಮಧ್ಯವರ್ತಿ ವ್ಯಾಪಾರಿ ವರ್ತಕರಾಗಿ ಗುರುತಿಸಿಕೊಂಡರು. ಇದರಿಂದ ಸ್ಥಳೀಯವಾಗಿ ಗುರುತಿಸಿಕೊಂಡಿದ್ದ ವ್ಯಾಪಾರಿ ಸಮುದಾಯಗಳು ಕ್ಷೀಣಿಸಲಾಗಿ ವಸಾಹತ್ತೋತ್ತರ ಕರ್ನಾಟಕ ವ್ಯಾಪಾರ ವಾಣಿಜ್ಯದಲ್ಲಿ ಮತ್ತು ಆಡಳಿತದಲ್ಲಿ ಗುರುತಿಸಿಕೊಂಡಿರುವುದನ್ನು ನೋಡಬಹುದು. ಈ ವರ್ತಕರು ವಸಾಹತು ಕಾಲಘಟ್ಟದಲ್ಲಿ ಬ್ರಿಟಿಶರಿಗೆ ಮಧ್ಯವರ್ತಿ ಏಜೆಂಟರ್‌ಗಳಾಗಿ ಕಂಡುಬರುತ್ತಾರೆ. ಬ್ರಿಟಿಶರೊಂದಿಗೆ ಆತ್ಮೀಯತೆಯ ಭಾವನೆಯೊಂದಿಗೆ ಅವರ ವ್ಯಾಪಾರ ಮತ್ತು ವ್ಯವಹಾರದಲ್ಲಿ ಕೈಜೋಡಿಸಿ ಕೆಲಸ ಮಾಡಿದೇ ಇವರ ಮಧ್ಯವರ್ತಿ ಭೂ ಮಾಲೀಕರಾಗಿ ಮುಂದುವರಿಯಲು ಸಾಧ್ಯವಾಯಿತು. ಟಿಪ್ಪು ನಾಶ ಮಾಡಿದ ಭೂಮಾಲೀಕತ್ವವನ್ನು ವಸಾಹತು ಕರ್ನಾಟಕದಲ್ಲಿ ಪುನಃ ಮುಂದುರಿಸಿಯಿತ್ತೆಂದು ಹೇಳಬಹುದು.

**ತಿಗಳರು**

ತಿಗಳರ ಸಮುದಾಯ ಮೈಸೂರು ಸಂಸ್ಥಾನಕ್ಕೆ ತಮಿಳುನಾಡಿನಿಂದ ವಲಸೆ ಬಂದ ಸಮುದಾಯವಾಗಿದೆ. ಇವರು ಕೃಷಿ ಮೂಲ ಸಮುದಾಯದ ಜನಾಂಗದವರಾಗಿದ್ದರು. ತಮಿಳರಾದ ಪಲ್ಲವಾಸಲು ಎಂಬ ಜನರು ಕೋಲಾರ ಮತ್ತು ಬೆಂಗಳೂರುಗಳಲ್ಲಿ ನೆಲೆಸಿ ತೋಟಗಾರಿಕೆಯನ್ನು ಅಭಿವೃದ್ಧಿ ಪಡಿಸುತ್ತಿದ್ದರು(ಮಹಾದೇವಿ,೧೯೯೮:೨೦). ಪಲ್ಲವಾಸಲು ಸಮುದಾಯವ ತಿಗುಳರೆಂದು ಊಹಿಸಬಹುದಾಗಿದೆ. ತೋಟಗಾರಿಕೆ ಬೆಳೆಯು ಎಲ್ಲಿ ಹೆಚ್ಚು ಇರುತ್ತದೆಯೂ ಆ ಭಾಗಗಳಲ್ಲಿ ಈ ಸಮುದಾಯ ನೆಲೆಸಿರುವುದನ್ನು ನೋಡಬಹುದು. ಟಿಪ್ಪು ಸುಲ್ತಾನ್ ಹಣ್ಣು, ತರಕಾರಿ ತೋಟಗಾರಿಕಾ ಬೆಳೆಗಳನ್ನು ಅಭಿವೃದ್ಧಿಪಡಿಸಿದ್ದರಿಂದ ಈ ಜನಾಂಗ ಟಿಪ್ಪು ಕಾಲದಲ್ಲಿ ಹೆಚ್ಚಾಗಿ ವಲಸೆ ಬಂದಿರುವ ಸಾಧ್ಯತೆ ಇದೆ.

ಈ ಸಮುದಾಯದ ಒಳಪಂಗಡಗಳು ಸಹ ಕೃಷಿಯಾಧಾರಿತ ಉತ್ಪನ್ನಗಳಿಂದ ಗುರುತಿಸಿಕೊಂಡಿರುವುದನ್ನು ಕಾಣಬಹುದು. ಇವರಲ್ಲಿ ಹುರುಳ ತಿಗಳರು, ಎಲೆ, ತಿಗಳರು ಅರವು ತಿಗಳರು ಮುಳ್ಳು ತಿಗಳರು ಎಂಬ ಪಂಗಡಗಳಿವೆ(ಯಶೋಧ ೨೦೧೬:೧೧೭). ಕೆಳದಿ ನಾಯಕರ ಕಾಲದಲ್ಲಿ ಈ ಸಮುದಾಯದ ಉಲ್ಲೇಖವಿದ್ದು, ಇವರು ಅಲ್ಲಿನ ತೋಟಗಾರಿಕೆಯಲ್ಲಿ ಗುರುತಿಸಿಕೊಂಡಿದ್ದರು. ಕೆಳದಿಯ ನಾಯಕರು ಈ ಸಮುದಾಯಕ್ಕೆ ತೆರಿಗೆಯಿಂದ ವಿನಾಯಿತಿಯನ್ನು ನೀಡಿದ್ದರು(ಅರುಣ್ ೨೦೦೬:೧೦). ಈ ಜನಾಂಗದವರು ತೋಟಗಾರಿಕೆಯಲ್ಲಿ ಹೆಚ್ಚಿನ ಆಸಕ್ತಿ ಹೊಂದಿದ್ದರಿಂದ ಕೆಳದಿಯಲ್ಲಿ ಶಿವಪ್ಪನಾಯಕನು ತೋಟಗಾರಿಕೆ ಬೆಳೆಯನ್ನು ಅಭಿವೃದ್ಧಿಪಡಿಸಿದ್ದರಿಂದ ಈ ಸಮುದಾಯವು ಅಲ್ಲಿ ಕರಾವಳಿ ತೋಟಗಾರಿಕೆಯಲ್ಲಿ ಗುರುತಿಸಿಕೊಂಡಿರಬಹುದು. ತೋಟಗಾರಿಕೆಯ ದುಡಿಮೆ ವೃತ್ತಿಯಾಗಿಸಿಕೊಂಡ ವಿವಿಧ ಪಂಗಡಗಳಿದ್ದವು. ಅವರನ್ನು ವಣಿಜ, ಒಣಜಿಗ, ಸೆಟ್ಟಿ-

೧೯, ನಕರರು, ಮುಮ್ಮರಿದಂಡರು, ದೋಣಿ ಮುಮ್ಮರಿದಂಡರು ಎಂದು ಕರೆಯುತ್ತಾರೆ. ಗವರಿ ಗಾತ್ರಿಗ, ನಾನಾದೇಶಿ, ಉಭಯದೇಶಿಗರು ಇವರು ವ್ಯಾಪಾರವನ್ನೇ ವೃತ್ತಿಯನ್ನಾಗಿಸಿ ವ್ಯಾಪಾರ ಮಾಡುವ ಸಮುದಾಯದವರಾಗಿದ್ದರು.

**ನಗರ್ತರು**

ವಿನಿಮಯ ವರ್ತಕ ಸಮುದಾಯಗಳಲ್ಲಿ ನಗರ್ತರು ಪ್ರಮುಖರು. ಈ ಸಮುದಾಯದವರು ನಗರ ಪಟ್ಟಣಗಳಲ್ಲಿ ನೆಲೆಸಿರುವುದರಿಂದಾಗಿ ನಗರ್ತ ಎಂದು ಕರೆಯುತ್ತಾರೆ. ೧೮೦೦ರಲ್ಲಿ ಬುಕಾನನ್ ವರದಿಯಲ್ಲಿ ಈ ಸಮುದಾಯದವರು ಬೆಂಗಳೂರು, ಚಿಕ್ಕಬಳ್ಳಾಪುರ ಮತ್ತು ದೊಡ್ಡಬಳ್ಳಾಪುರ ಪ್ರದೇಶಗಳಲ್ಲಿ(ಭೇರಿ) ನಗರ್ತರನ್ನು ನೋಡಿದುದಾಗಿ ದಾಖಲಿಸಿದ್ದಾನೆ. ಭೇರಿ ಜನಾಂಗದವರು ವ್ಯಾಪಾರಿಗಳಾಗಿದ್ದು, ಅವರು ತಮ್ಮನ್ನು ನಗರ್ತರು ಎಂದು ಕರೆದುಕೊಳ್ಳುತ್ತಾರೆ. ಈ ನಗರ್ತರಲ್ಲಿ ಎರಡು ಪಂಗಡಗಳಲ್ಲಿವೆ. ಶಿವನ ಆರಾಧಕರು ಮತ್ತು ವಿಷ್ಣು ಆರಾಧಕರು ಔಷಧಗಳು, ಹತ್ತಿ, ದವಸ-ಧಾನ್ಯಗಳು, ಬಟ್ಟೆಗಳು ಮೊದಲಾದ ವ್ಯಾಪಾರ ವ್ಯವಹಾರಗಳಲ್ಲಿ ತೊಡಗಿಸಿಕೊಂಡಿರುತ್ತಾರೆ. (ಬುಕಾನನ್,(೩),೧೮೦೭:೧೫೯).

ಚಂಪಕಲಕ್ಷ್ಮಿ ಮತ್ತು ಚಿದಾನಂದಮೂರ್ತಿಯ ಅವರು ಈ ಸಮುದಾಯವನ್ನು ಕುರಿತಂತೆ ಚರ್ಚೆಗಳನ್ನು ನಡೆಸಿದ್ದಾರೆ. ಹಿರೇಮಠ ಅವರು ಸಹ ಈ ಸಮುದಾಯದ ಬಗ್ಗೆ ತಿಳಿಸುತ್ತಾ, ನಗರ್ತಕರು ಸಂತೆ-ಪೇಟೆಗಳಿಗೆ ಬಂದ ವಿವಿಧ ಸರಕುಗಳನ್ನು ಖರೀದಿಸಿ ಬಯಲು ಅಂಗಡಿ ಹಾಗೂ ಮಳಿಗೆಗಳಲ್ಲಿ ಮಾರಾಟ ಮಾಡುತ್ತಿದ್ದರು ಎನ್ನುವರು(ಯಶೋಧ೨೦೧೬:೧೩೭). ಈ ಮೂಲಕ ಕರ್ನಾಟಕದ ವಿವಿಧ ಭಾಗಗಳಲ್ಲಿ ಈ ಸಮುದಾಯದವರು ಕಂಡುಬರುತ್ತಾರೆ.

ವಿಜಯನಗರೋತ್ತರ ಕಾಲದ ಕರ್ನಾಟಕದ ಕರಾವಳಿ ಮತ್ತು ದೇಶೀಯ ಮತ್ತು ವಿದೇಶೀಯ ವ್ಯಾಪಾರದಲ್ಲಿ ಅಂತರ್‌ರಾಜ್ಯ ವ್ಯಾಪಾರಿಗಳು ಪ್ರಮುಖವಾದ ಪಾತ್ರವನ್ನು ವಹಿಸುತ್ತಾರೆ. ಭಾರತಕ್ಕೆ ಯುರೋಪಿಯನ್ನರು ಬಂದಾಗ ಅಕ್ಷರ ಕಲಿತ ಈ ಸಮುದಾಯಗಳು ವ್ಯಾಪಾರ-ವಾಣಿಜ್ಯದಲ್ಲಿ ಪ್ರಮುಖವಾಗಿ ಗುರುತಿಸಿಕೊಳ್ಳುತ್ತಾರೆ. ಬಂಡವಾಳದ ಬ್ಯಾಂಕರ್‌ಗಳಾಗಿ ಈ ಸಮುದಾಯಗಳು ಕಂಡುಬರುತ್ತಾರೆ. ಒಟ್ಟಾರೆಯಾಗಿ ಹಲವಾರು ಸ್ಥಿತ್ಯಂತರ ಕಾಲಘಟ್ಟದಲ್ಲಿ ಈ ಸಮುದಾಯಗಳು ಕರ್ನಾಟಕದಲ್ಲಿ ಕಂಡುಬರುತ್ತಾರೆ.

**ಪಟ್ಟೆಗಾರರು ಮತ್ತು ಖತ್ರಿ ವರ್ತಕರು**

ಈ ಸಮುದಾಯವು ಗುಜರಾತಿನ ಸೌರಾಷ್ಟ್ರದಿಂದ ರಾಜ್ಯದಿಂದ ವಲಸೆ ಬಂದರೆಂದು ಸ್ಪಷ್ಟವಾಗಿ ಗುರುತಿಸಬಹುದು. ಇವರು ಹೆಚ್ಚು ನಯವಾದ ಬಟ್ಟೆಯನ್ನು ಉತ್ಪಾದಿಸುವ ಸಮುದಾಯ ಇವರು ಕುರಿತ ಮಾಹಿತಿಯು ಮೈಸೂರು ಅರಸರ ಕಾಲದಲ್ಲಿ ದೊರೆಯುತ್ತದೆ. ಈ ಪಟ್ಟೆಗಾರರು ಸಮುದಾಯದ ನೇಕಾರಿಕೆಯಲ್ಲಿ ಗುರುತಿಸಿಕೊಂಡವರಾಗಿದ್ದು ಗುಜರಾತಿನ ಸೌರಾಷ್ಟ್ರದಿಂದ ವಲಸೆ ಬಂದರೆಂದು ಹೇಳಬಹುದು. ಈ ಸಮುದಾಯವು ಮಸ್ಲಿನ್ ಬಟ್ಟೆ ನೇಕಾರಿಕೆಯಲ್ಲಿ ಪ್ರಾಮುಖ್ಯತೆಯನ್ನು ಪಡೆದಿದ್ದರು. ರೇಷ್ಮೆ ಅಂಚುಗಳಿಂದ ಕೂಡಿದ್ದ ಮಸ್ಲಿನ್ ಬಟ್ಟೆ ತಯಾರಿಸುತ್ತಿದ್ದರು(ಚಂದ್ರಶೇಖರ್, ರಾವ್(೮),೨೦೧೬:೬೧).

ಪಟ್ಟೆಗಾರರು ಶ್ರೇಷ್ಠ ರೇಷ್ಮೆ ನೇಯುತ್ತಿದ್ದು ಇದು ಗಟ್ಟಿಯಾದ ಉಡುಗೆ ಪಟ್ಟೆಗಾರರು ರೇಷ್ಮೆ ಬಟ್ಟೆಯ ನೇಯ್ಗೆಯಲ್ಲಿ ವಿವಿಧ ವಿನ್ಯಾಸಗಳನ್ನು ಮಾಡಬಲ್ಲರು. ಬಿಳಿಯ ಸದಾ ಮಸ್ಲಿನ್ ಅನ್ನೂ ಕೂಡ ಅವರು ನೇಯಬಲ್ಲರು. ತಮ್ಮ ರೇಷ್ಮೆ ನೂಲಿಗೆ ಪಟ್ಟೆಗಾರರು ಅರಿಸಿನಬಣ್ಣ ಹಾಕಿದ ರೇಷ್ಮೆಯನ್ನು ನೀಲಗಾರರಿಗೆ ಕೊಟ್ಟು ಅದನ್ನು ಹಸುರು ಬಣ್ಣದ್ದಾಗಿ ಮಾಡಿಕೊಳ್ಳುತ್ತಾರೆ(ಸೂರ್ಯನಾಥ ಕಾಮತ್,೨೦೦೬:೧೩೬).

೧೭೫೧ರ ನಂಜರಾಜಯ್ಯನ ಅವಧಿಯಲ್ಲಿನ ಗುಂಡ್ಲುಪೇಟೆ ಶಾಸನ ನಾಲ್ಕು ದಿಕ್ಕಿನ ಐವತ್ತಾರು ದೇಶದ ಎಂಟು ಬಗೆಪಲರು ಪಟ್ಟಾಕಾರರು ಕೂಡಿ ನಂಜನಗೂಡಿನ ಶಂಕರೈಯ್ಯ ಮಠದ ಅನ್ನದ ಸಂತರ್ಪಣೆಗಾಗಿ ಧರ್ಮ ಮಾಡಿರುವುದರ ಬಗ್ಗೆ ವಿವರಣೆ ನೀಡಿದೆ(ಸುಧಾಮಣಿ,೨೦೦೯:೧೧೨). ಪಟ್ಟೆ ನೇಕಾರರು ದಾನ ಧರ್ಮ ನೀಡಿರುವುದನ್ನು ಈ ಮೂಲಕ ತಿಳಿಯಬಹುದು. ಪಟ್ಟೇಕಾರರಂತೆ ರೇಷ್ಮೆ ವಸ್ತ್ರವನ್ನು ತಯಾರಿಸುವವರೆ ಖತ್ರಿ ಸಮುದಾಯ. ಒಟ್ಟಾರೆಯಾಗಿ ಇವೆರಡು ಸಮುದಾಯಗಳು ವಿಜಯನಗರೋತ್ತರ ಕಾಲಾವಧಿಯಲ್ಲಿ ಎರಡು ಸಮುದಾಯಗಳು ದೇವಾಂಗರೆಂಬ ಸಮುದಾಯವು ಬಳ್ಳಾರಿ, ಬೆಂಗಳೂರು ಮೊದಲಾದ ಭಾಗಗಳಲ್ಲಿ ಕಂಡುಬರುತ್ತಾರೆ. ವಸಾಹತು ಕರ್ನಾಟಕದಲ್ಲಿಯೂ ಗುಜರಾತಿನ ಸೂರತ್‌ನಿಂದ ಬರುವ ಬಟ್ಟೆಗೆ ಬೇಡಿಕೆ ಇದ್ದು ಪ್ರಸ್ತುತವಾಗಿ ಕರ್ನಾಟಕದಲ್ಲಿ ವ್ಯಾಪಾರ ಮಡುವವರು ಗುಜರಾತಿನಿಂದ ಬಟ್ಟೆಯನ್ನು ತಂದು ವ್ಯಾಪಾರ ಮಾಡುತ್ತಿದ್ದಾರೆ.

**೫.೨.೩. ವಿದೇಶಿ ವರ್ತಕರು**

ವಿದೇಶಿಯ ವರ್ತಕರೆಂದರೆ ಒಂದು ದೇಶದಿಂದ ಬೇರೊಂದು ದೇಶಕ್ಕೆ ಬಂದು ವ್ಯಾಪಾರ ವಾಣಿಜ್ಯದಲ್ಲಿ ಗುರುತಿಸಿಕೊಂಡವರನ್ನು ವಿದೇಶಿ ವರ್ತಕರೆಂದು ಕರೆಯುತ್ತೇವೆ. ಆ ಕಾಘಟ್ಟದಲ್ಲಿ ದೇಶ.ರಾಜ್ಯದ ಪರಿಕಲ್ಪನೆ ಇಲ್ಲದಿಂದರೂ ಇಂದಿನ ಗಡಿಗಳ ಹಿನ್ನೆಲೆಯಲ್ಲಿ ವಿದೇಶಿಯ ವರ್ತಕರು ಎಂದು ಕರೆಯಲಾಗಿದೆ. ವಿದೇಶಿ ವರ್ತಕರ ವ್ಯಾಪಾರ ಕುರಿತಂತೆ ಪ್ರಾಚೀನ ಕಾಲದಿಂದಲೂ ಮಾಹಿತಿ ದೊರೆಯುತ್ತದೆ. ಅನೇಕ ವಿದೇಶಿ ಪ್ರವಾಸಿಗರ ವರದಿಗಳು ಅಂದಿನ ವರ್ತಕರ ವ್ಯಾಪಾರ ಕುರಿತ ಮಾಹಿತಿ ದೊರೆಯುತ್ತದೆ. ಪ್ರಸುತ್ತ ವಿಜಯನಗರೋತ್ತರ ಕಾಲವು ಯುರೋಪಿಯನ್ನರ ಆಗಮನದ ಕಾಲವಾದ್ದರಿಂದ ಈ ಕಾಲದಲ್ಲಿ ಅರಬ್ಬರು, ಪೋರ್ಚುಗೀಸರು, ಡಚ್ಚರು, ಫ್ರೆಂಚರು ಮತ್ತು ಇಂಗ್ಲಿಶರು ಭಾರತದ ವ್ಯಾಪಾರ ವಾಣಿಜ್ಯದಲ್ಲಿ ಗುರುತಿಸಿಕೊಂಡವರು. ವ್ಯಾಪಾರ ವಾಣಿಜ್ಯದಲ್ಲಿ ಮುಖ್ಯ ಬದಲಾವಣೆ ತಂದವರು ಯುರೋಪಿಯನ್ನರು.

**ಅರಬ್ಬರು**

ಪ್ರಾಚೀನ ಕಾಲದಿಂದಲೂ ಅರಬ್ಬರು ದಕ್ಷಿಣ ಭಾರತದ ಕರಾವಳಿ ಪ್ರದೇಶದಲ್ಲಿ ವ್ಯಾಪಾರ ನಡೆಸುತ್ತಿದ್ದರು. ಈ ವ್ಯಾಪಾರದಿಂದ ಹೇರಳವಾದ ಲಾಭ ಗಳಿಸುತ್ತಿದ್ದರು. ಪೋರ್ಚುಗೀಸರ ಆಗಮನದಿಂದ ಇವರ ವ್ಯಾಪಾರ ಕುಸಿಯಿತು. ಕೆಳದಿಯ ಚೆನ್ನಮ್ಮಾಜಿಯೊಂದಿಗೆ ವ್ಯಾಪಾರ ಸಂಬಂಧವನ್ನು ಬೆಳೆಸಿ ಕುಂದಾಪುರ, ಹೊನ್ನಾವರ ಮತ್ತು ಮಂಗಳೂರಿನಲ್ಲಿ ವ್ಯಾಪಾರ ಕೇಂದ್ರವನ್ನು ಆರಂಭಿಸಿ ಅಕ್ಕಿ ವ್ಯಾಪಾರ ಮಾಡುತ್ತಿದ್ದರು. ಆದರೆ ಪೋರ್ಚುಗೀಸರು ಮತ್ತು ಕೆಳದಿ ನಾಯಕರಿಗೆ

ಆದ ಒಪ್ಪಂದದಂತೆ ಅರಬ್ಬರು ಕೆಳದಿಯೊಂದಿಗೆ ವ್ಯಾಪಾರದಿಂದ ನಿರ್ಗಮಿಸಿ ಬೇರೊಂದು ಕಡೆ ವಲಸೆ ಹೋದರು(ಕಲಬುರ್ಗಿ,ರಾಮಭಟ್ಟ, ೧೯೯೪:೧೩). ಮಧ್ಯಕಾಲೀನ ಆರಂಭದಲ್ಲಿ ಕುದುರೆ ವ್ಯಾಪಾರದಲ್ಲಿ ಪ್ರಸಿದ್ಧಿಯನ್ನು ಪಡೆದ ವರ್ತಕರು ವಿಜಯನಗರೋತ್ತರ ಕಾಲದ ವ್ಯಾಪಾರ ವಾಣಿಜ್ಯದಲ್ಲಿ ನಿರ್ಗಮಿಸಿದರೆಂದು ಹೇಳಬಹುದು.

ಆದರೆ ಟಿಪ್ಪು ಕಾಲದಲ್ಲಿ ಮೈಸೂರು ಪ್ರಾಂತ್ಯದಲ್ಲಿ ಇವರು ವ್ಯಾಪಾರ ನಡೆಸುತ್ತಿದ್ದರ ಮಾಹಿತಿ ದೊರೆಯುತ್ತದೆ. ವ್ಯಾಪಾರ ಮಾಡುವ ಮೈಸೂರು ಪ್ರಾಂತ್ಯದ ವ್ಯಾಪಾರಿಗಳಿಗೆ ಶೇ. ೮% ಅರಬ್ಬರು ಮತ್ತು ಪರ್ಶಿಯದ ವ್ಯಾಪಾರಸ್ಥರ ಮೇಲೆ ಶೇ. ೬೧/೨ರಷ್ಟು ಸುಂಕವನ್ನು ವಿಧಿಸುತ್ತಿತ್ತು(ಚಂದ್ರಶೇಖರ್, ರಾವ್(೮):೬೩). ಮೈಸೂರು ಸಂಸ್ಥಾನದಲ್ಲಿ ಸಣ್ಣಗಾತ್ರದ ಮತ್ತು ಶ್ರೀಗಂಧದ ಚೂರುಗಳಿಂದ ತಯಾರಿಸಿದ ಗಂಧದೆಣ್ಣೆಗೆ ಅರೇಬಿಯಾದಲ್ಲಿ ಬೇಡಿಕೆ ಹೊಂದಿದ್ದು ಅರೇಬಿಯಾಕ್ಕೆ ರವಾನಿಸುತ್ತಿತ್ತು(ಬುಕಾನನ್,೨,೧೮೦೭:೧೩೨). ಈ ಮೂಲಕ ಲವಂಗ ಬೆಳೆಗೆ ಡಚ್ ಮತ್ತು ಅರಬ್ ತೀರ ಮಾರುಕಟ್ಟೆಗಳಲ್ಲಿ ಬೇಡಿಕೆ ಯಾವಾಗಲೂ ಅಧಿಕವಾಗಿತ್ತು. ಇನ್ನು ಕರಿಮೆಣಸು ಇಂಗ್ಲೆಂಡಿಗೆ ರವಾನೆಯಾಗುತ್ತಿತ್ತು.

ಇಂಗ್ಲಿಶರು ಮತ್ತು ಫ್ರೆಂಚರನ್ನು ವ್ಯಾಪಾರದಿಂದ ನಿಯಂತ್ರಿಸಲು ಮಲಬಾರ್ ತೀರದ ಮಸ್ಕತ್ ಮತ್ತ ಪರ್ಶಿಯಾ ಮತ್ತು ಅರಬ್ ರಾಷ್ಟ್ರಗಳ ನಡುವೆ ವ್ಯಾಪಾರ ಉತ್ತಮವಾಗಿ ನಡೆದು ಅರಬ್ ರಾಷ್ಟ್ರಗಳಿಂದ ಉತ್ತಮ ಕುದುರೆಗಳನ್ನು ರವಾನಿಸಿ ಇದಕ್ಕೆ ಪ್ರತಿಯಾಗಿ ಮಲಬಾರ್ ತೀರದಿಂದ ಹೇರಳ ಪ್ರಮಾಣದ ಅಕ್ಕಿಯನ್ನು ಈ ಪ್ರದೇಶಗಳಿಗೆ ರಫ್ತು ಮಾಡುತ್ತಿದ್ದರು. ಬಿಜಾಪುರದ ಸುಲ್ತಾನರು ಅರೇಬಿಯಾ ಮತ್ತು ಪರ್ಶಿಯಾದ ವರ್ತಕರ ಜೊತೆ ವ್ಯಾಪಾರ ಸಂಬಂಧ ಹೊಂದಿದ್ದರು.

**ನವಯತ್ ಮುಸ್ಲಿಮರು**

ನವಯತ್ ಎಂದರೆ ಅರೆಬಿಕ್ ಭಾಷೆಯಲ್ಲಿ ನಾವಿಕ ಎಂದರ್ಥ. ಇವರನ್ನು ಮುಸ್ಲಿಂ ಕೊಂಕಣಿಗಳೆಂದು ಸಹ ಕರೆಯುತ್ತಾರೆ. ಈ ಸಮುದಾಯವು ವಿಜಯನಗರ ಕಾಲದಲ್ಲಿಯೇ ಪ್ರಮುಖ ಸಮುದಾಯವಾಗಿ ಗುರುತಿಸಿಕೊಂಡರು. ಅರಬ್‌ನಿಂದ ವಿಜಯನಗರದೊಂದಿಗೆ ಕುದುರೆಯ ವ್ಯಾಪಾರವನ್ನು ನಿರ್ವಹಿಸುತ್ತಿದ್ದರು. ವಿಜಯನಗರಕ್ಕೆ ಬೇಕಾದ ಕುದುರೆಗಳನ್ನು ಗೋವಾದ ಮೂಲಕ ವಿಜಯನಗರ ಮತ್ತು ಬಹಮನಿ ಸಾಮ್ರಾಜ್ಯಕ್ಕೆ ರವಾನಿಸುತ್ತಿದ್ದರು. ಪೋರ್ಚುಗೀಸರು ಗೋವಾ ಮತ್ತು ಕರ್ನಾಟಕದ ಕರಾವಳಿ ಪ್ರದೇಶವನ್ನು ವಶಪಡಿಸಿಕೊಂಡಾಗ ಅವರ ಮೇಲೆ ಹಿಂಸಾಚಾರದಿಂದ ಅವರು ವ್ಯಾಪಾರ ವೃತ್ತಿಯನ್ನು ತೊರೆದು ಬೇರೊಂದು ಕಡೆ ವಲಸೆ ಹೋಗುವಂತೆ ಮಾಡಿದರು ವಿಜಯನಗರ ಸಾಮ್ರಾಜ್ಯದಲ್ಲಿದ್ದ ನವಯತ ಮುಸ್ಲಿಮರು ೧೫೬೫ರ ನಂತರ ವಿಜಯನಗರದಿಂದ ಬಿಜಾಪುರದ ಕಡೆ ಈ ಸಮುದಾಯವು ವಲಸೆ ಹೋಯಿತೆಂದು ಹೇಳಬಹುದು. ಹೈದರ್ ಮತ್ತು ಟಿಪ್ಪು ಕಾಲಾವಧಿಯಲ್ಲಿ ಪುನಃ ವ್ಯಾಪಾರ ಚಟುವಟಿಕೆಗಳು ಚುರುಕುಗೊಂಡಿದ್ದರಿಂದ ಮೈಸೂರು ಸಂಸ್ಥಾನದಲ್ಲಿ ಇವರನ್ನು ಗುರುತಿಸಬಹುದಾಗಿದೆ. ಒಟ್ಟಾರೆಯಾಗಿ ವಿಜಯನಗರ ಸಾಮ್ರಾಜ್ಯದಲ್ಲಿ ಇದ್ದ ಈ ಸಮುದಾಯವು ನಂತರ ಸ್ಥಿತ್ಯಂತರಕ್ಕೆ ಒಳಪಟ್ಟಿತ್ತೆಂದು ಹೇಳಬಹುದು.

**ಕೊಂಕಣಿ ಕ್ರೈಸ್ತರು**

ಕರ್ನಾಟಕದ ಕರಾವಳಿ ಭಾಗದಲ್ಲಿ ಕೊಂಕಣಿ ಕ್ರೈಸ್ತರು ಹೆಚ್ಚಿನ ಸಂಖ್ಯೆಯಲ್ಲಿ ೧೫೦೦ರ ನಂತರ ಕಂಡುಬರುತ್ತಾರೆ. ಜೋನ ಪ್ರಾಯರ್ ಎಂಬ ಕ್ರೈಸ್ತ ಪ್ರವಾಸಿ ಕೆಳದಿ ರಾಜ್ಯದಲ್ಲಿ ಪ್ರವಾಸ ಕೈಗೊಂಡನು. ಅವನ ಪ್ರಕಾರ ಕೆಳದಿ ರಾಜ್ಯದಲ್ಲಿ ಅನೇಕ ಕ್ರೈಸ್ತರಿದ್ದರು. ಕೆಳದಿಯ ಚೆನ್ನಮ್ಮಾಜಿ ಕ್ರೈಸ್ತರಿಗೆ ಪ್ರೋತ್ಸಾಹವನ್ನು ನೀಡಿದ್ದಳು. ದೇಶೀಯ ಕ್ರೈಸ್ತ ಅಧಿಕಾರಿಗಳೇ ಧಾರ್ಮಿಕ ವ್ಯವಹಾರ ನಡೆಸಬೇಕೆಂಬ ಅಭಿಪ್ರಾಯ ರಾಣಿಯದಾಗಿತ್ತು. ಮಂಗಳೂರಿನಲ್ಲಿ ಅಂದಿನ ಮಿಲಾಗ್ರಿಸ್ ಇಗರ್ಜಿಯನ್ನು ಕಟ್ಟಲು ಕ್ರೈಸ್ತ ಅಧಿಕಾರಿಗಳಾಗಿದ್ದ ಬಿಷಪ್ ಥಾಮಸ್ ಡಿ ಕ್ರಾಸ್ಟೋ ಅವರಿಗೆ ಸೂಕ್ತವಾದ ಸ್ಥಳವನ್ನು ನೀಡಿದಳು(ಶ್ರೀನಿವಾಸ್ ಶ್ಬೇಲ್:೧೯೦೫:೩೩). ಬುಕಾನನ್ ಮುಂದುವರೆದು ಕೊಂಕಣಿ ಕ್ರೈಸ್ತರ ಬಗ್ಗೆ ಅಂಕಿ ಅಂಶಗಳನ್ನು ನೀಡಿದ್ದಾನೆ. ಅವನ ಪ್ರಕಾರ ಇಂದಿನ ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ಮತ್ತು ಸುತ್ತಮುತ್ತಲ ಭಾಗದಲ್ಲಿ ಒಟ್ಟು ೨.೫೪೫ ಕ್ರೈಸ್ತರ ಮನೆಗಳಿದ್ದವು. ಅವರ ಪೈಕಿ ೩೭೦೧ ಪುರುಷರು, ೩೬೦೩ ಸ್ತ್ರೀಯರು, ೧೯೬೮ ಬಾಲಕರಿದ್ದರು ಇವರು ಪ್ರಧಾನವಾಗಿ ಕೃಷಿಕರು ಮತ್ತು ವ್ಯಾಪಾರಿಗಳಾಗಿದ್ದರು ಎಂದು ಬುಕಾನನ್ ತಿಳಿಸಿದ್ದಾನೆ. ಕೆಳದಿಯ ಕರಾವಳಿಯ ಬಂದರುಗಳಾದ ಮಂಗಳೂರು, ಬಾರಕೂರು, ಬಸ್ರೂರು ಮತ್ತು ಹೊನ್ನಾವರಗಳ ಮೂಲಕ ನಡೆಯುತ್ತಿದ್ದ ಹೊರ ದೇಶದ ವ್ಯಾಪಾರದಲ್ಲಿ ಕ್ರೈಸ್ತರ ಪಾತ್ರ ಪ್ರಧಾನವಾಗಿತ್ತೆಂದು ಹೇಳಬಹುದು. ಇದರ ಜೊತೆಗೆ ಗೋವಾದಲ್ಲಿ ನಡೆಯುತ್ತಿದ್ದ ವ್ಯಾಪಾರದಲ್ಲಿ ಇವರದ್ದೇ ಪ್ರಾಯಶಃ ಹೆಚ್ಚು ಇದ್ದಿತು. ಕೃಷಿಕರಾಗಿ ಅವರು ಭತ್ತ, ತೆಂಗು, ಅಡಿಕೆ ಮೊದಲಾದವುಗಳನ್ನು ಬೆಳೆಯುತ್ತಿದ್ದರು. ಕೆಳದಿ ಸರಕಾರಕ್ಕೆ ಕಿಸ್ತನ್ನು ಕೊಡುತ್ತಿದ್ದರು. ಒಟ್ಟಿನಲ್ಲಿ ಆರ್ಥಿಕ ಕ್ಷೇತ್ರದಲ್ಲೂ ಇವರ ಪಾತ್ರ ಪ್ರಧಾನವಾಗಿದೆ (ಬುಕಾನನ್,(೩)೧೮೦೭:೨೩). ಈ ಮೂಲಕ ಕರ್ನಾಟಕದಲ್ಲಿ ಕೊಂಕಣಿ ಕ್ರೈಸ್ತರು ಕರಾವಳಿ ಕರ್ನಾಟಕದ ವ್ಯಾಪಾರ-ವಾಣಿಜ್ಯದಲ್ಲಿ ಮುಖ್ಯವಾದ ಪಾತ್ರವನ್ನು ನಿರ್ವಹಿಸುತ್ತಾರೆ.

**೫.೩. ಕುಶಲಕರ್ಮಿಗಳು ಮತ್ತು ಕೈಗಾರಿಕೆಗಳು**

ಭಾರತದ ಅರ್ಥವ್ಯವಸ್ಥೆಯಲ್ಲಿ ಕೃಷಿಯ ನಂತರದ ಸ್ಥಾನ ಪಡೆದಿರುವುದು ಕೈಗಾರಿಕೆಗಳದ್ದಾಗಿದೆ. ಆರಂಭದ ಕಾಲಘಟ್ಟದಲ್ಲಿ ಕೈಗಾರಿಕೆಗಳು ಎಂಬ ಪರಿಕಲ್ಪನೆ ಇರಲಿಲ್ಲ. ಅದೇ ಕೈಗಾರಿಕೆಗಳ ಮೂಲಕ ಉದ್ಯೋಗವನ್ನು ನಿರ್ವಹಿಸುವ ಎಲ್ಲ ವೃತ್ತಿಗಳನ್ನು ಗುಡಿ ಕೈಗಾರಿಕೆಗಳು ಎಂಬ ಹಿನ್ನೆಲೆಯಲ್ಲಿ ಕರೆಯಲಾಗಿದೆ. ಇಂತಹ ಕೈಗಾರಿಕೆಗಳಲ್ಲಿ ಇಡೀ ಕುಟುಂಬವೇ ಕಾರ್ಯ ನಿರ್ವಹಿಸುತ್ತಿತ್ತು. ಗೋಲ್ಡನ್ ಚೈಲ್ಡ್ ಎಂಬ ಚರಿತ್ರೆಕಾರರು ಕೃಷಿ ಅವಲಂಭಿತವಾಗಿದ್ದ ಪುರಾತನ ಮಾನವನು ಕಾಲಕ್ರಮೇಣ ಅರಣ್ಯವನ್ನು ತೆರವುಗೊಳಿಸಿ ಹೆಚ್ಚು ಉತ್ಪಾದನೆಗೆ ಪ್ರಯತ್ನಿಸಿದಂತೆ ಅದಕ್ಕೆ ಪೂರಕವಾಗಿ ಕೈಗಾರಿಕೆಗಳ ಬೆಳವಣಿಗೆಯನ್ನು ಕಾಣಬಹುದು. ಕರ್ನಾಟಕದಲ್ಲಿ ಶಿಲಾಯುಗಗಳ ಕಾಲದಿಂದಲೇ ಇಂತಹ ಕೈಗಾರಿಕೆಗಳು ಬೆಳೆದು ಅಭಿವೃದ್ಧಿಗೊಂಡಿರುವುದನ್ನು ನೋಡಬಹುದು. ಈ ಮೂಲಕ ಕರ್ನಾಟಕದಲ್ಲಿ ಕೈಗಾರಿಕೆ ಅಭಿವೃದ್ಧಿಯನ್ನು ಹೊಂದಿರುವುದು ಕಂಡುಬರುತ್ತದೆ. ಕೈಗಾರಿಕೆಗಳ ಆರಂಭಕ್ಕೂ ಮಾನವನಿಗೂ ಅವಿನಾಭಾವ ಸಂಬಂಧವಿದೆ. ಮಾನವ ತನ್ನ ಅವಶ್ಯಕತೆಗಳ ಪೂರೈಕೆಗಾಗಿ,

ಕೃಷಿಗೆ ಪೂರಕವಾದ ಕಸುಬುಗಳನ್ನು ಕಲಿತುಕೊಂಡನು. ಅವೇ ಮುಂದೆ ಕೈಗಾರಿಕೆಗಳ ರೂಪ ತಳೆದಿರುವುದನ್ನು ನೋಡಬಹುದು.

**ನೇಕಾರಿಕೆ**

ಬಟ್ಟೆ ನೇಯುವ ಮತ್ತು ಕಂಬಳಿ ಉತ್ಪನ್ನ ಮಾಡುವ ಇಬ್ಬರನ್ನು ಇಲ್ಲಿ ನೇಕಾರರೆಂದು ಪರಿಗಣಿಸಲಾಗಿದೆ. ಜರಿಮಲೆನಾಯಕರು ನೇಕಾರಿಕೆಗೆ ಪ್ರಾಮುಖ್ಯತೆ ಕೊಟ್ಟಿದ್ದರು. ಇಲ್ಲಿ ಉತ್ತಮವಾದ ಕಂಬಳಿ ನೇಯಲಾಗುತ್ತಿತ್ತು. ಒಂದು ಕಂಬಳಿಯು ೪ ಪಗೋಡ ಹಣಕ್ಕೆ ಮಾರಾಟವಾಗುತ್ತಿತ್ತೆಂದು ಮೆಕೆಂಜಿಯವರು ತಿಳಿಸುತ್ತಾರೆ(ಕೊಟ್ರೇಶ್,೨೦೧೦:೯೪). ಪ್ರಸ್ತುತ ಗುಡೇಕೋಟೆ ಪಕ್ಕದ ಹಳ್ಳಿಗಳು ಆಧುನಿಕ ಸಂದರ್ಭದಲ್ಲಿಯೂ ಈ ವೃತ್ತಿಯನ್ನು ನಿರ್ವಹಿಸುತ್ತಿರುವುದು ಕಂಡುಬರುತ್ತದೆ. ಹಾಗೂ ಕಂಬಳಿ ನೇಕಾರರ ಜೊತೆ ಈ ಪ್ರದೇಶದಲ್ಲಿ ರೇಷ್ಮೆ ನೇಯುವ ಕಸುಬುದಾರರಿದ್ದು ಇವರು ಕಾಲನಂತರದಲ್ಲಿ ಕಂಪನಿಯ ಆಳ್ವಿಕೆಯಲ್ಲಿ ಮೊಳಕಾಲ್ಮೂರು ಪ್ರದೇಶಕ್ಕೆ ಈ ಸಮುದಾಯವು ವಲಸೆ ಹೋದರೆಂದು ಸ್ಪಷ್ಟವಾಗುತ್ತದೆ. ವಸಾಹತು ಕಾಲಘಟ್ಟದಲ್ಲಿ ನೇಕಾರಿಕೆಯ ಮೇಲಾದ ಪರಿಣಾಮವನ್ನು ಇಲ್ಲಿ ಗುರುತಿಸಬಹುದಾಗಿದೆ. ಈ ಭಾಗದಿಂದ ಮೊಳಕಾಲ್ಮೂರು ಭಾಗಕ್ಕೆ ವಲಸೆ ಹೋದ ಸಮುದಾಯವು ಮೊಳಕಾಲ್ಮೂರು ರೇಷ್ಮೆಸೀರೆ ತಯಾರಿಕಾ ಕೇಂದ್ರವಾಗಿದೆ. ಆಧುನಿಕ ಸಂದರ್ಭದಲ್ಲಿಯೂ ಗುರುತಿಸಿಕೊಂಡಿದೆ. ಗುಡೇಕೋಟೆಯಲ್ಲಿ ಶೇ.೨% ನೇಕಾರ ಸಮುದಾಯಗಳಿದ್ದವು. ಕಂಬಳಿ ಉತ್ಪಾದನೆಯಲ್ಲಿ ಬಿಜಾಪುರದ ಸಿಂದಗಿ, ತಾಲೂಕು ಮತ್ತು ರಾಣೆಬೆನ್ನೂರು, ಶಿರಹಟ್ಟಿ, ಲಕ್ಷ್ಮೇಶ್ವರಗಳಲ್ಲಿ ಕಂಬಳಿ ಉತ್ಪಾದನೆಯಾಗುತ್ತಿರುವುದರ ಬಗ್ಗೆ ಮಾಹಿತಿ ಇದೆ(ವೆಂಕಟರಾಮ ಗೊಕಟ್ಟಿ,೧೮೯೩:೩೧೧).

ಹರಪನಹಳ್ಳಿಯ ಕುರುಬರು ನಯವಾದ ಕಂಬಳಿಯನ್ನು ಉತ್ಪಾದಿಸುತ್ತಿದ್ದರು. ಈ ಮೂಲಕ ಹರಪನಹಳ್ಳಿಯ ಪ್ರದೇಶದಲ್ಲಿ ಕುರುಬರ ಸಂಖ್ಯೆ ಹೆಚ್ಚಿದ್ದ ಕಾರಣ ಈ ಉತ್ಪಾದನೆಯಲ್ಲಿ ತೊಡಗಿದ್ದರು (ಬುಕಾನನ್,ಸಂ-೩, ೨೦೧೦:೩೩೦). ಕುರಿ ಕಾಯುವ ಕೆಲಸಗಾರರೇ ಕುರುಬರು ಆದರೆ ಕುರುಬ, ಗೊಲ್ಲ, ಬುಡಕಟ್ಟು ಜನಾಂಗಗಳು ಈ ಕಸುಬುಗಳಲ್ಲಿ ತೊಡಗಿದ್ದರು

ಕಂಬಳಿ ಉತ್ಪಾದನೆಯು ಕೋಲಾರ ಪ್ರದೇಶದಲ್ಲಿ ನಡೆಯುತ್ತಿದ್ದು ಹುಣಿಸೆಹಣ್ಣಿನ ಬೀಜ ಹಾಕಿ ಗಟ್ಟಿಗೊಳಿಸಿದ ಕಂಬಳಿಗಳು ಘಟ್ಟದ ಪ್ರದೇಶಗಳಲ್ಲಿ ಸಾಮಾನ್ಯವಾಗಿ ಬಳಸುತ್ತಿದ್ದರು. ಕುರಿಗಳಿಂದ ವಾರ್ಷಿಕ ೨ ಬಾರಿ ಉಣ್ಣೆ ಪಡೆಯುತ್ತಿದ್ದರು. ೧೨ ಕುರಿಗಳ ಉಣ್ಣೆಯಿಂದ ೬ ಅಡಿ ಉದ್ದ ೩ ಅಡಿ ಅಗಲದ ಕಂಬಳಿ ತಯಾರಿಸುತ್ತಿದ್ದರು. ಕಂಬಳಿ ಉತ್ಪಾದನೆಯು ಕೋಲಾರ ಪ್ರದೇಶದಲ್ಲಿ ಈಗಲೂ ಇದೆ(ಬುಕಾನನ್,೧,೨೦೧೦,:೨೬೩). ಈ ಮೂಲಕ ಪ್ರಾಚೀನ ಕಾಲದಿಂದಲೂ ಕಂಬಳಿ ಉತ್ಪಾದನೆ ಕರ್ನಾಟಕದ ಎಲ್ಲ ಭಾಗಗಳಲ್ಲಿಯೂ ಪ್ರಸಿದ್ಧಿಯನ್ನು ಪಡೆದಿದೆ.

ಕೋಲಾರದ ವಾರದ ಸಂತೆಗೆ ಬಳ್ಳಾರಿ ನರಗುಂದ, ನವಲಗುಂದ, ಅಣ್ಣಿಗೆರೆ ಭಾಗದಿಂದ ಇಲ್ಲಿಗೆ ಹೋದ ವ್ಯಾಪಾರಿಗಳು ಹತ್ತಿನೂಲು ವ್ಯಾಪಾರ ಮಾಡಿ ಬಂದ ವ್ಯಾಪಾರದ ಹಣದಲ್ಲಿ೩/

ಳಿಪಾಲು ನಗದು ತೆಗೆದುಕೊಂಡು, ಉಳಿದ ಹಣಕ್ಕೆ ಹರಳೆಣ್ಣೆ, ಬೆಲ್ಲ ಇಲ್ಲಿಂದ ಕೊಂಡು ಹೋಗುತ್ತಿದ್ದರು. ಈ ಮೂಲಕ ಬಳ್ಳಾರಿಯ ಬಟ್ಟೆ, ವ್ಯಾಪಾರವು ಆ ಕಾಲದಲ್ಲಿ ಹೆಚ್ಚಾಗಿ ಗುರುತಿಸಿಕೊಂಡಿದ್ದು ಸ್ಪಷ್ಟವಾಗುತ್ತದೆ.

ಮೈಸೂರು ಒಡೆಯರ ಕಾಲದಲ್ಲಿ ನೇಕಾರಿಕೆಯು ಅಭಿವೃದ್ಧಿ ಹೊಂದಿತ್ತು. ಬೆಂಗಳೂರು ನಗರವು ಬಟ್ಟೆ ಕೈಗಾರಿಕೆಯಲ್ಲಿ ಪ್ರಾಮುಖ್ಯತೆಯನ್ನು ಪಡೆದಿದೆ. ಮಗ್ಗದ ತೆರಿಗೆ ಎಂಬ ತೆರಿಗೆಯನ್ನು ವಿಧಿಸುತ್ತಿದ್ದದರು(ಬಂಜಗೆರೆ, ೨೦೧೫ :೧೨೧). ಚಿತ್ರದುರ್ಗ ಪ್ರದೇಶವು ಕಂಬಳಿ ಮತ್ತು ಸಾಬೂನು ಉತ್ಪಾದನೆಗೆ ಹೆಸರಾಗಿದ್ದು ಬಳ್ಳಾರಿ, ಧಾರವಾಡ, ರಾಯಚೂರು ಮತ್ತು ಬಿಜಾಪುರಗಳಲ್ಲಿ ಕಂಬಳಿ ಮತ್ತು ಹತ್ತಿಯ ನೂಲನ್ನು ತಯಾರಿಸಲಾಗುತ್ತಿತ್ತು(ಚಂದ್ರಶೇಖರ್,ರಾವ್:೩೯). ಕರ್ನಾಟಕ ಕಂಬಳಿಯು ವಿದೇಶದಲ್ಲಿಯೂ ವ್ಯಾಪಾರದಲ್ಲಿ ಪ್ರಮುಖವಾಗಿ ಗುರುತಿಸಿಕೊಂಡಿದೆ. ಆಧುನಿಕ ಸಂದರ್ಭದಲ್ಲಿ ಕೆಲವು ಭಾಗದಲ್ಲಿ ಕಂಬಳಿ ಉತ್ಪಾದನೆಯು ನಡೆಯುತ್ತಿದೆ. ಈ ಕಂಬಳಿಗಳು ಸಾಮಾಜಿಕವಾಗಿ ವಿಶೇಷ ಸಂದರ್ಭದಲ್ಲಿ ಬಳಸುತ್ತಿದ್ದರು. ಪ್ರತಿಯೊಂದು ಪೂಜಾಕಾರ್ಯಕ್ಕೂ ಈ ಕಂಬಳಿಗಳು ಮುಖ್ಯವಾಗಿವೆ. ಅಂದಿನ ಕರ್ನಾಟಕದ ಧರ್ಮಾವರಂ, ತಾಡಪತ್ರಿ, ಆದವಾನಿ, ಗುತ್ತಿ ಮತ್ತು ಬಳ್ಳಾರಿಗಳಲ್ಲಿ ಉಣ್ಣೆಯ ಹೊದಿಕೆಗಳನ್ನು ಉತ್ಪಾದಿಸುತ್ತಿದ್ದರು. ಚಿತ್ರದುರ್ಗ, ಜರಿಮಲೆಗಳಲ್ಲಿ ಕಂಬಳಿ ಹೆಚ್ಚಾಗಿ ಉತ್ಪಾದಿಸುತ್ತಿದ್ದರು(ವೆಂಕಟರಮಣಯ್ಯ, ೧೯೩೫:೨೭೫).

ನೇಕಾರರು ಪಾಟ್ನಾ ಪಟ್ಟಣದಿಂದ ಉಣ್ಣೆಯ ಕಂಬಳಿಗಳನ್ನು ಬಂಗಾಳಕ್ಕೆ ರಫ್ತು ಮಾಡುತ್ತಿದ್ದರು ಮೈಸೂರು ಸಂಸ್ಥಾನದ ದೊಡ್ಡ ಪಟ್ಟಣವಾದ ಬಳ್ಳಾರಿಯಲ್ಲಿ ಹತ್ತಿ ನೇಕಾರರು ನೆರೆಯ ಪ್ರದೇಶಗಳೊಂದಿಗೆ ವ್ಯಾಪಾರ ಸಂಬಂಧವನ್ನು ಹೊಂದಿದ್ದರು. ಬಟ್ಟೆಯ ನೇಕಾರರು ಪೂನಾದಿಂದ ಬಳ್ಳಾರಿ ಪ್ರದೇಶಕ್ಕೆ ಬಂದು ಈ ಪ್ರದೇಶದಲ್ಲಿ ನೇಕಾರಿಕೆಯಲ್ಲಿ ಕಸೂತಿ ಕೆಲಸದಲ್ಲಿ ತೊಡಗಿಕೊಂಡಿದ್ದರು. ಒಬ್ಬ ವ್ಯಕ್ತಿಯಲ್ಲದೆ ಇಡೀ ಕುಟುಂಬವೇ ಈ ನೇಕಾರಿಕೆಯಲ್ಲಿ ಗುರುತಿಸಿಕೊಂಡಿರುವುದು ಕಂಡುಬರುತ್ತದೆ. ಈ ಪೂನಾದಿಂದ ಬಳ್ಳಾರಿ ಪ್ರದೇಶಕ್ಕೆ ನೇಕಾರರು ಬರಲು ಕಾರಣವೆಂದರೆ ನೇಕಾರಿಕೆಯಲ್ಲಿ ಉತ್ಪಾದನೆಯನ್ನು ಹೆಚ್ಚಿಸುವುದಕ್ಕೆ ಕರೆಸಿರಬಹುದಾಗಿದೆ.(ರಂಜನಿ,ಭರತ :೪೩). ಈ ಮೂಲಕ ಬಳ್ಳಾರಿ ಪ್ರದೇಶವು ನೇಕಾರಿಕೆಯಲ್ಲಿ ಅಂತರ್‌ರಾಜ್ಯ ವ್ಯಾಪಾರಿಗಳನ್ನು ಆಹ್ವಾನಿಸುವ ಹಂತದಲ್ಲಿ ಅಲ್ಲಿನ ನೇಕಾರಿಕೆಯೂ ಬೆಳೆದಿತ್ತೆಂದು ಹೇಳಬಹುದು.

ಬೆಂಗಳೂರು ಪ್ರದೇಶವು ನೇಕಾರಿಕೆಯಲ್ಲಿ ಪ್ರಾಚೀನ ಕಾಲದಿಂದಲೂ ಗುರುತಿಸಿಕೊಂಡಿದೆ. ನೇಕಾರಿಕೆಗೆ ಟಿಪ್ಪು ಸುಲ್ತಾನನು ವಿಶೇಷವಾದ ಪ್ರೋತ್ಸಾಹವನ್ನು ನೀಡಿದನು. ಇದರ ಉತ್ಪನ್ನವನ್ನು ಹೆಚ್ಚಿಸುವ ಸಲುವಾಗಿ ಬಟ್ಟೆ ತಯಾರಿಕಾ ಮಗ್ಗಗಳನ್ನು ಹೊಂದಲು ಸುಂಕ ವಿನಾಯಿತಿ ನೀಡಲಾಗುತ್ತಿತ್ತು. ಉದಾ: ಕೇವಲ ಒಂದು ಮಗ್ಗ ಹೊಂದಿದ್ದಲ್ಲಿ ವಾರ್ಷಿಕವಾಗಿ ೩೯ ಫನಾಮ್‌ಗಳಷ್ಟು ಸುಂಕ ವಿಧಿಸಲಾಗುತ್ತಿತ್ತು. ಅದೇ ೨ ಮಗ್ಗಗಳನ್ನು ಒಬ್ಬ ನೇಕಾರ ಹೊಂದಿದ್ದಲ್ಲಿ ವಾರ್ಷಿಕವಾಗಿ ೫ ಫನಾಮ್‌ಗಳನ್ನು, ಎರಡಕ್ಕಿಂತ ಅಧಿಕ ಮಗ್ಗಗಳನ್ನು ಹೊಂದಿದ್ದಲ್ಲಿ ಅಂತಹ ನೇಕಾರರು ವಾರ್ಷಿಕವಾಗಿ ಪ್ರತಿ ಮಗ್ಗಕ್ಕೆ ೨ ಫನಾಮ್ ಸುಂಕವನ್ನು ತೆರಬೇಕಿತ್ತು. ಪಟ್ಟೇಕಾರರು ಮತ್ತು ಖತ್ರಿ ಅಂದಿನ

ಪ್ರಮುಖ ನೇಕಾರ ಸಮುದಾಯಗಳಾಗಿದ್ದವು. ಖತ್ರಿ ನೇಕಾರ ಸಮುದಾಯವು ಅಂದು ಹೆಚ್ಚು ಬೇಡಿಕೆ ಇದ್ದ ಮಸ್ಲಿನ್ ಬಟ್ಟೆ ತಯಾರಿಸುತ್ತಿತ್ತು(ಚಂದ್ರಶೇಖರ.ಸುರೇಂದ್ರರಾವ್೨೦೧೬:೬೧). ನೇಕಾರಿಕೆಯ ವೃತ್ತಿ ಪಲ್ಲಟಗಳು ಭಾರತವನ್ನೊಳಗೊಂಡಂತೆ ೧೭೦೦ರ ನಂತರದ ಕಾಲದಲ್ಲಿ ಪ್ರತಿಧ್ವನಿಸಿದವೆಂದು ಹೇಳಬಹುದು. ಇದಕ್ಕೆ ಸಂಬಂಧಿಸಿದಂತೆ ೧೬೬೪ರಲ್ಲಿ ಸೂರತ್ ಕೌನ್ಸಿಲ್ ಒಂದು ಆದೇಶವನ್ನು ಹೊರಡಿಸಿತ್ತು. (ರಂಜನಿ,ಭರತಗುಹಾರಾಯ್ :೪೧). ಆ ಪ್ರಕಾರವಾಗಿ ಮುಂಗಡ ಹಣವಿಲ್ಲದೇ ಯಾವುದೇ ಕಚ್ಚಾರೇಷ್ಮೆ ಮತ್ತು ಹತ್ತಿಯನ್ನು ನೀಡುವಂತಿರಲಿಲ್ಲ. ಈ ಆದೇಶದಿಂದ ದಿನಗೂಲಿ ಕೆಲಸ ನಿರ್ವಹಿಸುತ್ತಿದ್ದ ನೇಕಾರ ಸಮುದಾಯಗಳು ಮುಂಗಡ ಹಣವಿಲ್ಲದೆ ಬೇರೆ ವೃತ್ತಿಗೆ ಸ್ಥಿತ್ಯಂತರಕ್ಕೆ ಒಳಗಾಗಬೇಕಾಯಿತು. ಈ ಆದೇಶ ಕರ್ನಾಟಕಕ್ಕೆ ಅನ್ವಯವಾಗುವುದಕ್ಕೆ ಕಾರಣವೆಂದರೆ ಮೈಸೂರು ಸಂಸ್ಥಾನದ ಅನೇಕ ಭಾಗಗಳಲ್ಲಿ ಸ್ವಂತ ಬಳಕೆಗೆ ಒರಟಾದ ಹತ್ತಿ ಬಟ್ಟೆಯನ್ನು ಉತ್ಪಾದಿಸುತ್ತಿದ್ದರು. ಈ ಮೂಲಕ ತಿಂಗಳಿಗೆ ಶೇ. ೭ರಷ್ಟು ಬಡ್ಡಿದರದಲ್ಲಿ ಸಾಲವನ್ನು ಪಡೆದು ಬಂಡವಾಳ ಹೂಡುತ್ತಿದ್ದರು. ಈಸ್ಟ್ ಇಂಡಿಯಾ ಕಂಪನಿಯು ರಫ್ತು ಮಾಡಿದ ಹತ್ತಿ ಮತ್ತು ರೇಷ್ಮೆ ಬಟ್ಟೆಗಳು ಇಂಗ್ಲೆಂಡಿನಲ್ಲಿ ಜನಪ್ರಿಯವಾಗಿದ್ದವು. ಇದರಿಂದ ಬ್ರಿಟಿಶ್ ಕೈಗಾರಿಕೆಗಳು ಅಸೂಯೆ ಮತ್ತು ನಷ್ಟದಿಂದ ಸರ್ಕಾರದ ಮೇಲೆ ಒತ್ತಡ ತಂದು ಶಾಸನದ ಮೂಲಕ ತಡೆದರು. ೧೭೦೦ ಮತ್ತು ೧೭೨೦ರಲ್ಲಿ ಪಾರ್ಲಿಮೆಂಟ್ ಹೊರಡಿಸಿದ ಶಾಸನಗಳು ಭಾರತದಿಂದ ಆಮದು ಮಾಡಿಕೊಂಡ ಹತ್ತಿ ಮತ್ತು ರೇಷ್ಮೆ ಬಟ್ಟೆಗಳನ್ನು ಇಂಗ್ಲೆಂಡಿನಲ್ಲಿ ಧರಿಸಬಾರದೆಂದು ಮತ್ತು ಉಪಯೋಗಿಸಬಾರದೆಂದು ನಿಷೇಧಿಸಿತ್ತು. ಆದ್ದರಿಂದ ಇಂಗ್ಲೆಂಡಿಗೆ ಆಮದು ಮಾಡಿಕೊಳ್ಳಲಾದ ಎಲ್ಲ ಸರಕುಗಳನ್ನು ಯುರೋಪಿನ ಇತರ ದೇಶಗಳಿಗೆ ರಫ್ತು ಮಾಡಿ ಕಂಪನಿಯು ಲಾಭ ಮಾಡಿಕೊಂಡಿತು(ಸೋಸಲೆ, ೨೦೧೦:೧೫೪). ಈ ಆದೇಶವು ಕರ್ನಾಟಕದ ನೇಕಾರರ ಮೇಲೆಯೂ ದೊಡ್ಡ ಪರಿಣಾಮ ಬೀರಿದ್ದರಿಂದ ನಂತರದ ದಿನಗಳಲ್ಲಿ ಕೈಮಗ್ಗಗಳು ಕಣ್ಮರೆಯಾಗಲಾರಂಭಿಸಿದವು.

೧೮೯೭ರಲ್ಲಿ ಲಂಡನ್‌ನಲ್ಲಿ ಅಲ್ಲಿನ ನೇಕಾರರು ಭಾರತೀಯ ಬಟ್ಟೆಗಳು ಇಂಗ್ಲೆಂಡಿನ ಕೈಗಾರಿಕೆಗಳನ್ನು ನಾಶ ಮಾಡುತ್ತಿದೆ ಎಂದು ಅಲ್ಲಿನ ಈಸ್ಟ್ ಇಂಡಿಯಾ ಹೌಸ್ ಮೇಲೆ ದಾಳಿ ಮಾಡಿದ್ದರು(ಅ,ಮಾ,ಮತ್ತು,ಟೈ,ಲೈನ್). ಪ್ರಸ್ತುತ ಉತ್ತರ ಕರ್ನಾಟಕ ಭಾಗದಲ್ಲಿ ಆಧುನಿಕ ಸಂದರ್ಭದಲ್ಲಿಯೂ ನೇಕಾರಿಕೆಯಲ್ಲಿ ಗುರುತಿಸಿಕೊಂಡವರನ್ನು ನೋಡಬಹುದು. ಇಲ್ಲಿನ ಬಿಜಾಪುರ, ಬಾಗಲಕೋಟೆ, ಜಮಖಂಡಿ, ರಬಕವಿ, ಇಳಕಲ್, ಗುಳೇದಗುಡ್ಡ, ಕಮತಗಿ, ಅಮ್ಮಿನಗಡ ಇನ್ನೂ ಮೊದಲಾದ ಭಾಗಗಳಲ್ಲಿ ಇಂದಿಗೂ ನೇಕಾರ ಸಮುದಾಯಗಳಿರುವುದು ಕಂಡುಬರುತ್ತದೆ. ಇಳಕಲ್ ಪ್ರದೇಶದಿಂದ ಉತ್ಪನ್ನವಾಗುವ ಸೀರೆಗೆ ಇಳಕಲ್ ಸೀರೆಗಳೆಂದು ಹೆಚ್ಚು ಪ್ರಸಿದ್ಧಿಯನ್ನು ಪಡೆದಿವೆ. ಗುಳೇದಗುಡ್ಡ ಪರಿಸರದಲ್ಲಿ ಕುಬುಸದ ಕಣಗಳು ಪ್ರಸಿದ್ಧಿಯನ್ನು ಪಡೆದರೆ. ರಬಕವಿ ರೇಷ್ಮೆ ಸೀರೆಗಳಲ್ಲಿ ಪ್ರಸಿದ್ಧಿಯನ್ನು ಪಡೆದಿದೆ. ಮೊಳಕಾಲ್ಮೂರಿನ ಹಲವಾರು ಗ್ರಾಮಗಳಲ್ಲಿಯೂ ರೇಷ್ಮೆ ಸೀರೆ ಉತ್ಪನ್ನ ಮಾಡುವ ಸಮುದಾಯಗಳು ಇಂದಿಗೂ ಅದೇ ಕೆಲಸವನ್ನು ನಿರ್ವಹಿಸುತ್ತವೆ. ಇಳಕಲ್, ಬೈಲಹೊಂಗಲ, ಹುಬ್ಬಳ್ಳಿ, ನವಲಗುಂದ ಮೊದಲಾದ ಭಾಗಗಳಲ್ಲಿ ಜಮಖಾನೆಗಳನ್ನು

ತಯಾರಿಸುತ್ತಾರೆ. ೧೨ರಿಂದ ೧೫ ಮೊಳ ಅಗಲ ಇರುವ ಜಮಖಾನೆಗಳನ್ನು ರತ್ನಗಂಬಳಿಗಳಂತೆ ವಿಶೇಷವಾಗಿ ನೇಯುವರು. ಈ ಜಮಾಖಾನೆಗಳ ಕಸೂತಿ ನೇಯುವ ಕೆಲಸವನ್ನು ಮುಸ್ಲಿಂ ಸಮುದಾಯಗಳು ನಿರ್ವಹಿಸುತ್ತಿದ್ದರು(ವೆಂಕಟರಂಗೋಕಟ್ಟಿ,೧೯೮೩:೩೩೧).

ಬಿಜಾಪುರದ ಆದಿಲ್‌ಶಾಹಿಗಳು ಈ ಉತ್ತರ ಕರ್ನಾಟಕ ಭಾಗದ ನೇಕಾರರಿಗೆ ತೆರಿಗೆ ವಿನಾಯಿತಿ ನೀಡಿದ್ದರು. ದಖನ್ನಿನ ಮಸ್ಲಿನ್ ಬಟ್ಟೆ ಜನಪ್ರಿಯವಾಗಿತ್ತು. ಇವರು ಕಚ್ಚಾ ರೇಷ್ಮೆಯನ್ನು ಚೈನಾದಿಂದ ಆಮದು ಮಾಡಿಕೊಳ್ಳುತ್ತಿದ್ದರು. ಜಮಖಂಡಿ ತಾಲ್ಲೂಕಿನ ರಬಕವಿಯ ಬನಹಟ್ಟಿಯಲ್ಲಿ ನೇಕಾರಿಕೆ ಪ್ರಮುಖ ಉದ್ಯೋಗವಾಗಿ ಇಂದಿಗೂ ಗುರುತಿಸಿಕೊಂಡಿದೆ.(ಅಸ್ಕಿ,೨೦೧೩:೫೦೭,ಇ,ದರ್ಶ). ಪ್ರಾಚೀನ ಕಾಲದಿಂದಲೂ ಬೆಂಗಳೂರು ನಗರವು ನೇಕಾರಿಕೆಯಲ್ಲಿ ಗುರುತಿಸಿಕೊಂಡಿದ್ದು ಪಕ್ಕದ ಆಂಧ್ರಪ್ರದೇಶ ವಲಸೆ ಬಂದ ಸಮುದಾಯವು ನೇಕಾರಿಕೆಯ ವೃತ್ತಿಯಲ್ಲಿ ಕಂಡುಬರುತ್ತದೆ. ಈ ಭಾಗದಲ್ಲಿರುವ ಪ್ರಾಚೀನ ಬೀದಿಗಳಾದ ಅರಳೇಪೇಟೆ, ದೊಡ್ಡಪೇಟೆ, ಮಾಮೂಲುಪೇಟೆ, ದರ್ಜಿಪೇಟೆ ಬೀದಿ ಮತ್ತು ಸೌರಾಷ್ಟ್ರ ಪೇಟೆಯಲ್ಲಿ ಸೇರಲ್ಪಟ್ಟಿರಬಹುದು. ಪೇಟೆ ಬೀದಿಯಲ್ಲಿ ಸರಣಿಯಲ್ಲಿ ಮರಾಠಿ ಭಾಷೆ ಪದಗಳ ಮೂಲಕ ಮರಾಠರ ನೆಲೆ ನಿಂತ ಖತ್ರಿ ಮತ್ತು ಪಟ್ಟೆಗಾರ ಎಂಬ ನೇಕಾರರು ಬೆಂಗಳೂರನ್ನು ಷಾಹಜಿ ವಶಪಡಿಸಿಕೊಂಡಾಗ ಈ ಸಮುದಾಯವಿದ್ದವೆಂದು ಮಾಹಿತಿ ಇದೆ.

ಮೈಸೂರಿನ ಚಿಕ್ಕದೇವರಾಜ ಒಡೆಯರು ಸಾಮ್ರಾಜ್ಯದ ಅಭಿವೃದ್ಧಿಯು ವರ್ತಕ ಸಮುದಾಯಗಳ ಮೂಲಕ ಸಾಧ್ಯ ಎಂದು ತಿಳಿದಿದ್ದು ಹತ್ತಿ ಬಟ್ಟೆ ತಯಾರಿಕೆಯಲ್ಲಿ ಕೌಶಲ್ಯ ಹೊಂದಿದ ಪಂಚಮ ಬಣಜಿಗರು ಅಧಿಕಾರಕ್ಕೆ ಬಂದು ಬಟ್ಟೆ ವ್ಯಾಪಾರದಲ್ಲಿ ಪ್ರಮುಖವಾಗಿ ಗುರುತಿಸಿಕೊಂಡರು (ಬಂಜಗೆರೆ,೨೦೧೫:೮೭). ಈ ಮೂಲಕ ವರ್ತಕ ಸಮುದಾಯದ ಅಂತರ್‌ರಾಜ್ಯ ವ್ಯಾಪಾರದಲ್ಲಿ ಗುರುತಿಸಿಕೊಂಡ ಹಂತವೆಂದು ಹೇಳಬಹುದು. ಹಾಗೂ ರಾಷ್ಟ್ರೀಯತೆಯ ಪರಿಕಲ್ಪನೆಯಲ್ಲಿ ಈ ವರ್ತಕ ಸಮುದಾಯಗಳು ಗುರುತಿಸಿಕೊಂಡವು. ಒಂದು ಪ್ರಭುತ್ವವನ್ನು ನಿಯಂತ್ರಿಸುವ ಸಾಮರ್ಥ್ಯವನ್ನು ಈ ವರ್ತಕ ಸಮುದಾಯಗಳು ಹೊಂದಿದ್ದವು.

ಟಿಪ್ಪು ಸುಲ್ತಾನ್ ವರ್ತಕರಿಗೆ ನೀಡಿದ ವಿಶೇಷ ರಿಯಾಯಿತಿಯಿಂದ ಬೆಂಗಳೂರು, ಮೈಸೂರು ಮತ್ತು ಶ್ರೀರಂಗಪಟ್ಟಣಕ್ಕೆ ಹೆಚ್ಚಿನ ವರ್ತಕರು ವಲಸೆ ಬರುವಂತಾಯಿತು. ಈ ಸಮುದಾಯದವರು ಟಿಪ್ಪು ಕಾಲದಲ್ಲಿ ಹಲವಾರು ವರ್ತಕ ಸಮುದಾಯಗಳು ರಾಜ್ಯದಲ್ಲಿ ಬಂದು ನೆಲೆಸುವಂತಾಯಿತು. ತಂಜಾವೂರಿನಿಂದ ನೇಯ್ಗೆಯಲ್ಲಿ ಕೌಶಲ್ಯತೆಯುಳ್ಳ ಮೊದಲಿಯಾರ್ ಎಂಬ ಸಮುದಾಯವನ್ನು ಬೆಂಗಳೂರು, ಮೈಸೂರು ಭಾಗಕ್ಕೆ ಕರೆತಂದು ಬಟ್ಟೆ ನೇಕಾರಿಕೆಗೆ ಅವಕಾಶವನ್ನು ನೀಡಿದ್ದನು (ಸುಂದರರಾವ್,೨೦೧೧:೨೦೨). ಹೀಗೆ ಟಿಪ್ಪು ಕಾಲದಲ್ಲಿ ನೇಕಾರಿಕೆಯಲ್ಲಿ ಹೊರರಾಜ್ಯದ ವರ್ತಕ ವರ್ಗಗಳು ಕಂಡುಬರುತ್ತವೆ.

ಸಂತೆಯಲ್ಲಿ ಎಲ್ಲ ಜಾತಿಯ ಹೆಂಗಸರು ಹತ್ತಿ ಖರೀದಿ ಮಾಡಿ ನೂಲು ತಯಾರಿಸಿ ತಮಗೆ ಬೇಕಾದ ಸಾಮಾನು ಖರೀದಿಸುತ್ತಾರೆ. ಈ ನೂಲು ತಮ್ಮ ಬಟ್ಟೆಗಳಿಗೆ ಬೇಕಾದುದಕ್ಕಿಂತ ಹೆಚ್ಚಿನದು. ಬ್ರಾಹ್ಮಣ ಹೆಂಗಸರು ನೂಲುವುದಿಲ್ಲ. ಅವರ ಗಂಡಸರು ಗದ್ದೆ ಉಳುವುದಿಲ್ಲ. ಈ ನೂಲು ಬಳ್ಳಾರಿ, ಕೃಷ್ಣ ಪರಿಸರದಿಂದ ಬರುವ ನೂಲಿಗಿಂತ ಹೆಚ್ಚು ನವಿರು ಬಟ್ಟೆ ವ್ಯಾಪಾರಿಗಳಾದ

ನಗರತ(ನಗರ್ತ)ರು ಹೇಳುವುದೇನೆಂದರೆ ದೂರದಿಂದ ಭಾರೀ ಬೇಡಿಕೆ ಇಲ್ಲವಾದಲ್ಲಿ ನೇಯ್ಗೆಯರಿಗೆ ಮುಂಗಡ ಕೊಡುವ ಪರಿಪಾಠವಿಲ್ಲ ಬೇಡಿಕೆ ಇದ್ದಾಗ ಬಟ್ಟೆಯ ಬೆಲೆಯ ಅರ್ಧದಷ್ಟು ಮುಂಗಡ ಕೊಡುತ್ತಾರೆ. ಸಾಲದ ಅವಧಿ ಮೂರು ತಿಂಗಳು. ಇಲ್ಲಿನ ಬಟ್ಟೆಯನ್ನು ನಗರ, ಚಿತ್ರದುರ್ಗ ಶ್ರೀರಂಗಪಟ್ಟಣ, ಚನ್ನರಾಯಪಟ್ಟಣ, ಸಿರಾ, ಮಧುಗಿರಿ, ದೇವನಹಳ್ಳಿಗೆ ಹೋಗುತ್ತದೆ. ಸ್ವಲ್ಪ ಪ್ರಮಾಣದ ರೇಷ್ಮೆ ಹತ್ತಿ ಬಟ್ಟೆ ಹಾಗೂ ಕುಪ್ಪಸದ ಹರಿವೆ (ತಮಿಳುನಾಡಿಗೆ) ಹೋಗುತ್ತದೆ. ಬ್ರಾಹ್ಮಣರ ಮಹಿಳೆ ಇಲ್ಲಿನ ರೇಷ್ಮೆ ಸೀರೆಗೆ ಒಳ್ಳೆಯ ಗ್ರಾಹಕರೆಂದು ಗಮನಿಸಲಾಗಿದೆ. ಎಲ್ಲ ರೀತಿಯ ಬಟ್ಟೆಗೂ ಮಂಗಳೂರಿನ ವ್ಯಾಪಾರಿಗಳಿಂದ ತುಂಬಾ ಬೇಡಿಕೆ ಇದೆ. ಹೈದರ್ ಕಾಲದಲ್ಲಿ ಕಲ್ಲಿಕೋಟೆಯ ಜೊತೆ ಒಳ್ಳೆಯ ವ್ಯಾಪಾರವಿದ್ದು, ನಂತರ ಅದು ನಿಲುಗಡೆಯಾಯಿತು.(ಕಾಮತ್, ೨೦೦೬:೧೩೭-೧೩೮). ಈ ಮೂಲಕ ಬಟ್ಟೆ ಕೈಗಾರಿಕೆಯು ವಿದೇಶಗಳೊಂದಿಗೆ ಸಂಬಂಧ ಹೊಂದಿತ್ತೆಂದು ಹೇಳಬಹುದು. ವಸಾಹತು ಆಳ್ವಿಕೆಯ ವೇಳೆಗೆ ನೇಕಾರರ ಪರಿಸ್ಥಿತಿ ಚಿಂತಾಜನಕವಾಗಿತ್ತು. ಬ್ರಿಟಿಶರ ವ್ಯಾಪಾರಿ ನೀತಿಯಿಂದ ನೇಕಾರಿಕೆಯ ಮೇಲೆ ದೊಡ್ಡ ಪೆಟ್ಟು ಬಿದ್ದು ಕೊನೆಯಲ್ಲಿ ನೇಕಾರಿಕೆ ವೃತ್ತಿಯಿಂದ ಬೇರೊಂದು ವೃತ್ತಿಯನ್ನು ಅನುಭವಿಸುವಂತಾದರು. ದೇವಾಂಗ ಸಮುದಾಯವು ಬಳ್ಳಾರಿಯ ನೇಕಾರಿಕೆಯಲ್ಲಿ ಗುರುತಿಸಿಕೊಂಡಿತು. ಬಳ್ಳಾರಿಯಲ್ಲಿ ದೇವಾಂಗದವರು ವೃತ್ತಿಪರ ನೇಕಾರರು ಆದರೆ ಯುರೋಪಿನ ಬಟ್ಟೆಗಳನ್ನು ಧರಿಸುವುದೇ ನಮಗೆ ಕಡಿಮೆ ಖರ್ಚಿನ ಬಾಬ್ತು ಎಂದರು. ಅಂದರೆ ಅವರು ಸ್ಥಳೀಯ ನೇಕಾರಿಕೆಗೆ ಬೇಕಾದ ಎಲ್ಲ ವಸ್ತುಗಳ ಬೆಲೆ ಅಧಿಕವಾಗಿತ್ತು. ವಸಾಹತು ಕರ್ನಾಟಕದಲ್ಲಿ ನೇಕಾರಿಕೆಯಲ್ಲಿ ಗುರುತಿಸಿಕೊಂಡಿದ್ದ ಉತ್ತರ ಕರ್ನಾಟಕದ ಹಲವಾರು ಭಾಗಗಳು ತೆರಿಗೆಯ ಹೊರೆಯಿಂದ ನಲುಗಿ ಮತ್ತೆ ಚೇತರಿಸಿಕೊಳ್ಳಲಾರದ ಪರಿಸ್ಥಿತಿಯನ್ನು ನೋಡಬಹುದು. ಒಟ್ಟಾರೆಯಾಗಿ ವಿಜಯನಗರೋತ್ತರ ಕಾಲದಲ್ಲಿ ನೇಕಾರಿಕೆಯು ಸ್ಥಳೀಯ ಪ್ರಭುತ್ವಗಳಿಂದ ಪ್ರಾಮುಖ್ಯತೆ ಪಡೆದು ಪ್ರಮುಖ ಹಂತವನ್ನು ಪಡೆದು ನೇಕಾರರು ಅಂತರ್‌ರಾಜ್ಯ ವ್ಯಾಪಾರದಲ್ಲಿ ತೊಡಗಿಸಿಕೊಂಡಿದ್ದರು. ವಸಾಹತು ಆಳ್ವಿಕೆಯಿಂದ ನೇಕಾರರು ಮೂಲೆಗುಂಪಾಗಿ ಜೀವನ ನಿರ್ವಹಿಸುವ ಬೇರೊಂದು ವೃತ್ತಿಗೆ ಸ್ಥಿತ್ಯಂತರವಾಗಿ ನಗರ ಪ್ರದೇಶಗಳಲ್ಲಿ ನೆಲೆಸಲಾರಂಭಿಸಿದರು. ಪೇಟೆ ಬೀದಿಗಳಲ್ಲಿ ವ್ಯಾಪಾರ ನಡೆಸುತ್ತಿದ್ದ ಈ ಕಂಟೋನ್ಮೆಂಟ್‌ಗೆ ಹೋಗಿ ವ್ಯಾಪಾರ ಮಾಡದಾದರು. ಒಂದು ವೇಳೆ ಹೋಗಿ ಅಲ್ಲಿ ವ್ಯಾಪಾರ ಮಾಡಿದರೆ ಹೋಲ್‌ಸೇಲ್‌ದರದಲ್ಲಿ ಮಾರಾಟ ಮಾಡಬೇಕಾಗಿತ್ತು. ಹಾಗಾಗಿ ಈ ನೇಕಾರ ಸಮುದಾಯಕ್ಕೆ ವ್ಯಾಪಾರದಲ್ಲಿ ಅಪಾರ ನಷ್ಟವಾಯಿತು.

**ಕಮ್ಮಾರ**

ಭಾರತದಲ್ಲಿ ನಾಗರಿಕತೆಗಳ ಉಗಮದಿಂದಲೇ ಲೋಹಗಳ ಬಳಕೆ ಕಂಡುಬಂದಂತೆ ಅಂದಿನಿಂದಲೇ ಕಮ್ಮಾರಿಕೆಯನ್ನು ಗುರುತಿಸಬಹುದು. ಕಬ್ಬಿಣದ ಕೆಲಸ ಮಾಡುವವನನ್ನು ಕಮ್ಮಾರನೆಂದು ಕರೆಯಲಾಗುತ್ತದೆ. ಒಂದು ಕಾಲದಲ್ಲಿ ಕಮ್ಮಾರಿಕೆ ಭಾರತದಲ್ಲಿ ಅತ್ಯಂತ ಪ್ರಬುದ್ಧವಾದ ಮಟ್ಟವನ್ನು ಮುಟ್ಟಿತ್ತು. ನಾಲ್ಕನೆಯ ಶತಮಾನದ ವೇಳೆಗೆ ಕಬ್ಬಿಣದ ಬಳಕೆ ಭಾರತದಲ್ಲಿ ಉತ್ಕೃಷ್ಟವಾಗಿದ್ದಕ್ಕೆ ಉದಾಹರಣೆ ಸಮುದ್ರಗುಪ್ತನ ಅಲಹಬಾದ್ ಸ್ತಂಭಶಾಸನ ಉತ್ತಮ ಉದಾಹರಣೆ, ಕಮ್ಮಾರರು

ಕೃಷಿ ಕೆಲಸದಲ್ಲಿ ಮಾತ್ರ ಹೆಚ್ಚಾಗಿ ಗುರುತಿಸಿಕೊಳ್ಳುತ್ತಾರೆ. ಇವರು ಕೃಷಿಗೆ ಸಂಬಂಧಿಸಿದ ಕುಳ, ಜಿಗಳಿ, ಮಳೆ ಕುಂಬದಕಟ್ಟು ಕಳೆ ಕೀಳಲು ಬಳಸುವ ಕುರ್ಚಿಗಿ, ಕುಡುಗೋಲು, ಗುದ್ದಲಿ, ಆರೆಕೋಲು ಈ ಎಲ್ಲ ಸಾಮಾನುಗಳು ಕೃಷಿಗೆ ಕಮ್ಮಾರಿಕೆಯಿಂದಲೇ ಬಂದಂತಹವುಗಳು. ಕಮ್ಮಾರಿಕೆಗೂ ಮತ್ತು ಕೃಷಿಗೂ ಅವಿನಾಭಾವ ಸಂಬಂಧವನ್ನು ಗುರುತಿಸಬಹುದಾಗಿದೆ. ಕರ್ನಾಟಕದಲ್ಲಿ ಕಮ್ಮಾರಿಕೆಯು ಸ್ಥಳೀಯ ಮಟ್ಟದ ಗುಡಿಕೈಗಾರಿಕೆಗಳಲ್ಲಿ ಇವರನ್ನು ಗುರುತಿಸಬಹುದಾಗಿದೆ. ಕರ್ನಾಟಕ ರಾಜ್ಯದಲ್ಲಿ ವಿಶೇಷವಾಗಿ ತುಮಕೂರು, ಚಿಕ್ಕಮಗಳೂರು, ಶಿವಮೊಗ್ಗ ಮತ್ತು ಬಳ್ಳಾರಿ ಜಿಲ್ಲೆಯಲ್ಲಿ ಹೆಚ್ಚಾಗಿ ಕಬ್ಬಿಣದ ಅದಿರು ದೊರೆಯುತ್ತದೆ. ಸಂಡೂರಿನ ಯಶವಂತನಗರದಲ್ಲಿ ಕಿಟ್ಟದ ಗುಡ್ಡೆಗಳು ಹಾಗೂ ಕುಲುಮೆಯಲ್ಲಿ ಬಳಸುತ್ತಿದ್ದ ಜೇಡಿಮಣ್ಣಿನ ಕೊಳವೆಗಳು, ಬೂದಿಗಳ ರಾಶಿಯನ್ನು ಪ್ರಸ್ತುತ ಸಂದರ್ಭದಲ್ಲಿಯೂ ಕಾಣಬಹುದು. ಯಾವುದೇ ವೃತ್ತಿ, ಅಥವಾ ಕೈಗಾರಿಕೆಯು ರೂಪಗೊಳ್ಳಲು ಅಲ್ಲಿನ ಭೌಗೋಳಿಕ ಪರಿಸರ ಮುಖ್ಯವಾಗಿರುತ್ತದೆ. ಹಾಗಾಗಿ ಈ ಪ್ರದೇಶಗಳಲ್ಲಿ ಹೆಚ್ಚಾಗಿ ಖನಿಜ ದೊರೆಯುವ ಪ್ರದೇಶವಾದ್ದರಿಂದ ಅಲ್ಲಿ ಅದಕ್ಕೆ ಪೂರಕವಾದ ಕುಶಲಕರ್ಮಿ ವೃತ್ತಿಗಳು ಅಲ್ಲಿ ಉಗಮವಾಗಿದೆ. ಚಿತ್ರದುರ್ಗದ ಪ್ರದೇಶದಲ್ಲಿ ಈ ಕಮ್ಮಾರಿಕೆ ಕುರಿತಂತೆ ಬುಕಾನನ್ ಹೇಳಿದಂತೆ ಕ್ರಿ.ಶ.೧೮೦೧ರ ಮೇ-೩ನೇ ದಿನಾಂಕದಂದು ಚಿಕ್ಕಬ್ಯಾಳಿಕೆರೆಯಲ್ಲಿರುವ ಎರಡು ಕಬ್ಬಿಣದ ಕುಲುಮೆಗಳಿಗೆ ಭೇಟಿ ನೀಡಿ ಕಬ್ಬಿಣ ಧಾತುಗಳನ್ನು ಎರಕ ಹೊಯ್ಯುವ ಕ್ರಿಯೆಯನ್ನು ವಿವರಿಸಿದ್ದಾನೆ. ಕಬ್ಬಿಣದ ಬೀಡು ಉತ್ಪಾದನೆಗೆ ಕುದುರೆ ಕಣಿವೆ ಕಾವಲಿನ ಗಣಿಯಿಂದ ಕಬ್ಬಿಣದ ಅದಿರು ತೆಗೆದು ಕೋಣ ಮತ್ತು ಕತ್ತೆಗಳ ಮೇಲೆ ಸಾಗಿಸಲಾಗುತ್ತಿತ್ತು. ಈ ಕುಲುಮೆಯಲ್ಲಿ ಪ್ರತಿದಿನ ಎರಡು ಸಲ ಕಬ್ಬಿಣವನ್ನು ಎರಕ ಹೊಯ್ದು ತೆಗೆದು ಪ್ರತಿಸಲ ನೇಗಿಲಿನಲ್ಲಿ ೨೧ ಕಬ್ಬಿಣದ ನೇಗಿಲುಗುಳಗಳನ್ನಾಗಿ ಎರಕ ಹೊಯ್ಯಲಾಗುತ್ತಿತ್ತು. ಈ ಎರಕ ಹೊಯ್ಯದ ನೇಗಿಲಿನಲ್ಲಿ ಕಮ್ಮಾರನ ಪಾಲು ೩.ಶಿರಷ್ಟು ಅಂದರೆ ಪ್ರತಿ ನೇಗಿಲಗುಳದ ಬೆಲೆ ೧/೪ ಫಣ(ಚಂದ್ರಶೇಖರ,೨೦೧೫:೮೨:೮೩). ಈ ಮೂಲಕ ಚಿತ್ರದುರ್ಗದ ಹೊಸದುರ್ಗ, ಜಗಳೂರು, ಹಿರಿಯೂರು, ಹೊಳಲ್ಕೆರೆ ಪ್ರದೇಶಗಳಲ್ಲಿ ಕಮ್ಮಾರಿಕೆಯ ಕೈಗಾರಿಕೋದ್ಯಮ ನಡೆಯುತ್ತಿರುವುದು ಕಂಡು ಬರುತ್ತದೆ. ಹಾಗೆಯೇ ಬಳ್ಳಾರಿ ಜಿಲ್ಲೆಯನ್ನು ೧೮೦೦ರಲ್ಲಿ ಗುಡೇಕೋಟೆ ತರಫ್ ಆಗಿ ವಿಭಾಗಿಸಿದಾಗ ಕಮ್ಮಾರರು ಈ ಪ್ರದೇಶದಲ್ಲಿ ನೆಲೆಸಿದ್ದರೆಂಬ ವಿಚಾರ ಅಲ್ಲಿನ ದಾಖಲೆಯಿಂದ ತಿಳಿಯುತ್ತದೆ. ಅಂದರೆ ಕೃಷಿಪ್ರಧಾನವಾದ ಸಮಾಜವು ಕಮ್ಮಾರರನ್ನು ಅವಲಂಭಿಸಿರುವುದು ಸ್ಪಷ್ಟವಾಗುತ್ತದೆ(ಕೊಟ್ರೇಶ್ ೨೦೧೧: ೯೪).

ಚಿತ್ರದುರ್ಗದ ನಾಯಕರ ಕಾಲದಲ್ಲಿ ಕಮ್ಮಾರರು ಗ್ರಾಮೀಣ ಆರ್ಥಿಕತೆಯನ್ನು ನಿರ್ವಹಿಸುವ ಒಂದು ಸಮುದಾಯದವರಾಗಿದ್ದರು. ೧೭೪೭ರ ಒಂದು ಶಾಸನವು ಕಮ್ಮಾರರ ಉಲ್ಲೇಖವನ್ನು ನೀಡುತ್ತದೆ. ಈ ಸಂಸ್ಥಾನವು ಕೃಷಿ ಮೂಲ ಪ್ರದೇಶವಾದ್ದರಿಂದ ಕೃಷಿಗೆ ಪೂರಕವಾದ ಉಪಕರಣಗಳನ್ನು ಈ ಸಮುದಾಯವು ನಿರ್ವಹಿಸುತ್ತಿತ್ತು. ಗ್ರಾಮೀಣ ಹಳ್ಳಿಗಳಲ್ಲಿ ಕಂದಾಯ ಸಂಗ್ರಹಿಸುವ ಕೆಲಸ ನಿರ್ವಹಿಸುವವರು ಇದರಿಂದ ಭೂಮಿಯನ್ನು ಪಡೆಯುವುದು ಇವರ ಕೆಲಸವಾಗಿತ್ತು(ದೇಶಪಾಂಡೆ, ೧೯೭೯:೧೨೮).

ಈ ಕಮ್ಮಾರಿಕೆಯನ್ನು ನಿರ್ವಹಿಸುವವರೇ ಪ್ರಭುತ್ವಕ್ಕೆ ತೆರಿಗೆಯನ್ನು ಕೊಡಬೇಕಾಗಿತ್ತು. ಇದರಿಂದ ರಾಜ್ಯಕ್ಕೆ ಹೆಚ್ಚಿನ ರೀತಿಯ ತೆರಿಗೆ ಲಾಭವಾಗಿ ರಾಜ್ಯವು ಲಾಭ ಗಳಿಸುತ್ತಿತ್ತು. ಪೂರ್ವಕರ್ನಾಟಕದ ಪಾಳೆಯಗಾರರು ಕಮ್ಮಾರರಿಗೆ ಕೊಡತಿವಣ ಎಂಬ ತೆರಿಗೆಯನ್ನು ವಿಧಿಸುತ್ತಿದ್ದರು(ಶ್ಯಾಮಲ, ೨೦೧೭:೨೧೩), ಮೈಸೂರಿನ ಚಿಕ್ಕದೇವರಾಜ ಒಡೆಯರು ಸ್ಥಾಪಿಸಿದ ೧೮ ಚಾವಡಿಗಳಲ್ಲಿ ಕಬ್ಬಿಣದ ಚಾವಡಿಯು ಒಂದಾಗಿದ್ದು, ಇದು ಒಂದು ಉದ್ಯೋಗದ ಕಸುಬಾಗಿದೆ. ಕಬ್ಬಿಣದ ಗಣಿಗಳ ಆಡಳಿತವು ಕಬ್ಬಿಣವನ್ನು ತಯಾರು ಇಲಾಖೆಯ ಮೇಲ್ವಿಚಾರಣೆಗೊಳಪಟ್ಟಿತ್ತು. ಇವರು ಕೃಷಿ ಉಪಕರಣಗಳ ಜೊತೆ ಸೈನ್ಯಕ್ಕೆ ಬೇಕಾದ ಉಪಕರಣಗಳನ್ನು ತಯಾರಿಸುತ್ತಿದ್ದರು (ಕೃಷ್ಣರಾವ್,ಕೇಶವಭಟ್ಟ:೧೯೭೦:೯೩೨). ಇವರ ಕಾಲದಲ್ಲಿ ವೃತ್ತಿ ತೆರಿಗೆಯನ್ನು ಕೊಡಬೇಕಾಗಿತ್ತು. ಕೆಳದಿಯ ನಾಯಕರ ಕಾಲದಲ್ಲಿ ಕೃಷಿ ಉಪಕರಣಗಳನ್ನು ನಿರ್ವಹಿಸುವುದಕ್ಕೆ ಕಮ್ಮಾರರು ಸಂಸ್ಥಾನದಲ್ಲಿ ನೆಲೆಸಿದ್ದರು ಎಂಬುದಕ್ಕೆ ಅವರ ಶಾಸನಗಳಲ್ಲಿ ವೃತ್ತಿ ತೆರಿಗೆಯಾದ ಕಮ್ಮಾರದೆರೆಯನ್ನು ವಿಧಿಸಿರುವುದು ತಿಳಿಯುತ್ತದೆ. ಕ್ರಿ.ಶ.೧೭೨೬ರಲ್ಲಿ ಸುಬ್ಬಾಚಾರಿಯೆಂಬುವನು ಐದು ಕಬ್ಬಿಣದ ಸಲಾಕೆಗಳನ್ನು ಮಾಡಿ ತಂದುಕೊಟ್ಟಿರುವುದನ್ನು ತಿಳಿಸುತ್ತದೆ. ಇದರಿಂದ ತಿಳಿಯುವುದೇನೆಂದರೆ. ಈ ಕೆಲಸ ನಿರ್ವಹಿಸಿದವರನ್ನು ಕಮ್ಮಾರನೆಂಬ ನಿರ್ಧಾರಕ್ಕೆ ಬರಬಹುದು. ಕೆಳದಿಯ ನಾಯಕರ ಕಾಲದಲ್ಲಿ ಅನೇಕ ಜಾತಿಯವರು ವಾಸಿಸುತ್ತಿದ್ದು ಇವರನ್ನು ಶಿವಪ್ಪನಾಯಕ ಕರೆಸಿ ಅವರಿಗೆ ಹೊಸ ಬೀದಿ ಕಟ್ಟಿಸಿಕೊಟ್ಟಿದ್ದಾನೆ. ಸ್ವರ್ಣಕಾರ, ಮಡಿವಾಳ, ಕಮ್ಮಾರ, ನೇಯ್ಗೆಯವ, ದೋಣಿ ನಡೆಸುವವ, ಬೆಲ್ಲ ತಯಾರಿಸುವವ, ಮರದ ಕೆಲಸ ಮಾಡುವವನು ಹೀಗೆ ಮೊದಲಾದವರನ್ನು ರಾಜ್ಯಕ್ಕೆ ಕರೆಸಿ ರಾಜ್ಯದಲ್ಲಿ ಭೂಮಿ ನೀಡಿ ನೆಲೆಸುವಂತೆ ಮಾಡಿದ(ಅರುಣ್೨೦೦೬:೧೪೯). ಅಂದರೆ ಕರ್ನಾಟಕದಲ್ಲಿ ಇತರೇ ಸಂಸ್ಥಾನಗಳಲ್ಲಿ ಇರುವಂತೆ ಕೆಳದಿ ನಾಯಕರ ಕಾಲದಲ್ಲಿ ಆಯಗಾರ ಪದ್ಧತಿ ಇದ್ದಂತೆ ಕಂಡುಬರುವುದಿಲ್ಲ ಎಂಬುದು ಸ್ಪಷ್ಟವಾಗುತ್ತದೆ. ಕ್ರಿ.ಶ.೧೬೭೧ರ ಕೊಪ್ಪಳದ ತಾಮ್ರಶಾಸನ (ಹಸ್ತಿವತಿ) ಆನೆಗೊಂದಿ ನಾಡಿನ ಕಾತರಕಿ-೮ರಲ್ಲಿ ಸೇನಬೋವಿಕೆಯನ್ನು ಕ್ರಯಕ್ಕೆ ಮಾರಿದ ವಿಷಯವನ್ನು ದಾಖಲಿಸುತ್ತದೆ.(ಬಡಿಗೇರ ೨೦೧೦:೧೬). ಈ ಸಂದರ್ಭದಲ್ಲಿ ಕೊಪ್ಪಳ ಸೀಮೆಯ ದೇಸಾಯಿಗಳು ಮುಂತಾದ ಕಸಬೆಗೌಡರು ಅಷ್ಟದಶ ಪ್ರಜೆಗಳು ಸಾಕ್ಷಿ ಇದರಲ್ಲಿ ಕಮ್ಮಾರ ಪಡಂಣನು ಒಬ್ಬ ಅಂದರೆ ಪ್ರಭುತ್ವವು ಏನಾದರೂ ನಿರ್ಧಾರ ತೆಗೆದುಕೊಳ್ಳುವಾಗ ಇವರು ಇರುತ್ತಿದ್ದರು.

ಕಮ್ಮಾರರು ಪ್ರಾಚೀನ ಕಾಲದಿಂದಲೂ ಗ್ರಾಮೀಣ ಆರ್ಥಿಕತೆಯನ್ನು ಪ್ರತಿಬಿಂಬಿಸುವವರಾಗಿದ್ದರು. ವಸಾಹತು ಆಳ್ವಿಕೆಯ ನಂತರ ಬೃಹತ್ ಬಂಡವಾಳಕೇಂದ್ರಿತ ಅರ್ಥವ್ಯವಸ್ಥೆಯಲ್ಲಿ ಯಂತ್ರೋಪಕರಣಗಳ ಅಭಿವೃದ್ಧಿಯಿಂದ ಇವರು ತಮ್ಮ ವೃತ್ತಿ ಬದಲಿಸಿದ್ದಾರೆ. ಅಧ್ಯಯನದಲ್ಲಿ ಗಮನಿಸಿದಂತೆ ಗ್ರಾಮ ಮಟ್ಟದಲ್ಲಿ ಮುಸ್ಲಿಂ ಜನಾಂಗದವರು ಕಮ್ಮಾರಿಕೆಯ ವೃತ್ತಿಯನ್ನು ನಿರ್ವಹಿಸುತ್ತಿರುವುದು ಕಂಡುಬರುತ್ತದೆ.

ಕಮ್ಮಾರಿಕೆಯ ವೃತ್ತಿಯನ್ನು ಕುರಿತಂತೆ ೧೭ನೇ ಶತಮಾನದಲ್ಲಿ ವಿವಿಧ ರೀತಿಯ ತೆರಿಗೆಗಳನ್ನು ವಿಧಿಸುತ್ತಿದ್ದರು. ಬಡಗಿ, ಕಮ್ಮಾರ, ಅಕ್ಕಸಾಲಿಗ, ಕಂಚುಗಾರ, ಶಿಲ್ಪಿ ಈ ಐದು ಜನರನ್ನು ಸೇರಿಸಿ ಪಂಚಾಲ ಸುಂಕವನ್ನು ವಿಧಿಸುತ್ತಿದ್ದರು. ಕೆಲವು ವೇಳೆ ಕಮ್ಮಾರರಿಗೆ ೧೪ ವಿವಿಧ ತೆರಿಗೆಗಳು ವಿಧಿಸುತ್ತಿದ್ದರು. ಈ ಉಲ್ಲೇಖಕ್ಕೆ ಸಂಬಂಧಿಸಿದಂತೆ ಪಂಚಾಳರಿಗೆ ಸಂಬಂಧಿಸಿದಂತೆ ಯಾವ

ವಿಧದ ತೆರಿಗೆಯನ್ನು ಮೈಸೂರು ಸಂಸ್ಥಾನದಲ್ಲಿ ವಿಧಿಸುತ್ತಿದ್ದರೆಂದು ಎರಡು ಕಡೆ ಉಲ್ಲೇಖಗೊಂಡಿದೆ (ಕುಮಾರಸ್ವಾಮಿ,೨೦೧೩:೩೦೩). ಕುಶಲಕರ್ಮಿಗಳಲ್ಲಿಯೇ ಕಮ್ಮಾರರು ಹೆಚ್ಚಿನ ಸುಂಕವನ್ನು ಕೊಡುತ್ತಿದ್ದರು. ನಂತರದ ಸ್ಥಾನವನ್ನು ಅಕ್ಕಸಾಲಿಗರು ಪಡೆಯುತ್ತಾರೆ. ಈ ಮೂಲಕ ವಿಜಯನಗರ ಕಾಲದಿಂದಲೇ ಇದ್ದ ಈ ಪಂಚಾಳರು ವೀರಶೈವ ಧರ್ಮದ ಪ್ರಭಾವದಿಂದ ವಿಜಯನಗರೋತ್ತರ ಕಾಲದಲ್ಲಿ ಹೆಚ್ಚಾಗಿ ಗುರುತಿಸಿಕೊಳ್ಳುತ್ತಾರೆ. ಈ ಸಮುದಾಯದ ಉಗಮದ ಬಗ್ಗೆ ಹಲವಾರು ಮೌಖಿಕ ಕಥೆಗಳು ಕಂಡುಬರುತ್ತವೆ. ಈ ಮೂಲಕ ಕಮ್ಮಾರರು ಕರ್ನಾಟಕದ ಚರಿತ್ರೆಯಲ್ಲಿ ಪಂಚಕಾರುಕ ವೃತ್ತಿಯ ಪಂಚಾಲಳರಾಗಿ ಕಂಡುಬರುತ್ತಾರೆ.

**ಬಡಗಿ**

ಮರದ ಕೆಲಸ ನಿರ್ವಹಿಸುವವನಿಗೆ ಬಡಗಿ, ಆಚಾರಿಯೆಂದು ಕರೆಯಲಾಗುತ್ತಿತ್ತು. ಮರವನ್ನು ಕತ್ತರಿಸಿ ಒಂದು ರೂಪವನ್ನು ಕೊಡುವವನಿಗೆ ಬಡಗಿ ಎಂದು ಕರೆಯುತ್ತಿದ್ದರು. ಭಾರತವು ಗ್ರಾಮ ಸಮಾಜವನ್ನು ಬಿಂಬಿಸುವ ದೇಶವಾಗಿದ್ದು, ಕೃಷಿಯೇ ಪ್ರಧಾನವಾಗಿದೆ. ಆದ್ದರಿಂದ ಕೃಷಿಗೆ ಬೇಕಾದ ಉಪಕರಣಗಳನ್ನು ತಯಾರಿಸುವುದು ಹಾಗೂ ಗೃಹಯೋಪಯೋಗಿ ವಸ್ತುಗಳನ್ನು ತಯಾರಿಸುವುದು ಇವರ ಕೆಲಸವಾಗಿದೆ. ಇವರು ಉತ್ಪಾದಿಸುವ ವಸ್ತುಗಳೆಂದರೆ ಒನಕೆ, ಕಡಗೋಲು, ಮಣಿ, ಲಟ್ಟಣಿಗೆ,ಮತ್ತು ತೊಟ್ಟಿಲು ಈ ವಸ್ತುಗಳು ಮನೆಯ ಗೃಹೋಪಯೋಗಿ ಕೆಲಸದಲ್ಲಿ ಉಪಯೋಗವಾಗುವಂತಹವುಗಳು. ತೊಟ್ಟಿಲು ನಿರ್ಮಾಣಕ್ಕೆ ಸಂಬಂಧಿಸಿದಂತೆ ಗುಡೇಕೋಟೆ ಪಾಳೆಯಗಾರರ ಹೆಣ್ಣುಮಕ್ಕಳಾದ ನೀಲಮ್ಮಾಜಿ ಬಸಮ್ಮಾಜಿ ಅಂದರೆ ಹರಪನಹಳ್ಳಿ ಎರಡನೇ ಸೋಮಶೇಖರನ ಅರಸನ ಮಡದಿಯರ ಬಗ್ಗೆ ಇರುವ ಕೋಲಿನ ಪದಗಳಲ್ಲಿ ಬಡಗಿಯ ಉಲ್ಲೇಖವಿದೆ.

ನೀಲಮ್ಮಾಜಿ, ಬಸಮ್ಮಾಜಿ ಕೊಡ್ಯೋರೆ। ಬಾವಿ ನೀರಿಗ್ಹೋದಾರೆ ಕೋಲು। ಕೋಲೆ
ಬಾವಿನೀರಿಗ್ಹೋದರೆ। ಹಕ್ಕಿಪಕ್ಕಿ ಸುಳವಿಲ್ಲ। ಕೋಲು। ಕೋಟೆ
ಮರಗಳಾಗಿ ನಿಂತರೇ। ಬಡಿಗೇರಣ್ಣಾ ಬಂದಾನೆ। ಕೋಲು। ಕೋಲೆ
ಬಡಿಗೇರಣ್ಣಾ ಬಂದಾನೆ ಕಡಿದು ತುಂಡು ಮಾಡ್ಯಾನೆ। ಕೋಲು। ಕೋಲೆ
ಕಡಿದು ತುಮಡು ಮಾಡ್ಯಾನೆ। ಕೆತ್ತಿ ತೊಟ್ಟಿಲು ಮಾಡ್ಯಾನೆ। ಕೋಲು। ಕೋಲೆ
ಕೆತ್ತೆ ತೊಟ್ಟಿಲು ಮಾಡ್ಯಾನೆ। ಬಾರಿ ಬೈಲಾಗಿಟ್ಯಾನೆ। ಕೋಲು। ಕೋಲೆ
ಚಾರಿ ಬೈಲಾಗಿಟ್ಯಾನೆ। ಮಕ್ಕಳಿದ್ದವರು ಬಂದಾರೆ। ಕೋಲು। ಕೋಲೆ।

....... ಈ ರೀತಿಯಾಗಿ ಕೋಲಿನ ಪದದಲ್ಲಿ ಬಡಗಿಯ ವೃತ್ತಿಯನ್ನು ಕುರಿತಂತೆ ಜನಪದದಲ್ಲಿ ಹೊಗಳಲಾಗಿದೆ.(ಶೇಖರಾಚಾರಿ,೨೦೧೧:೧೧).

ಬುಕಾನನ್ ಬಡಗಿಯನ್ನು ಕುರಿತಂತೆ ವಿವರವನ್ನು ನೀಡಿದ್ದು ಇವರು ಗ್ರಾಮದ ಆಯದಲ್ಲಿ ೨ಸೇರು ಪಡೆಯುತ್ತಿದ್ದರೆಂದು ಹೇಳಿದ್ದಾನೆ. ಮರಗೆಲಸದ ಆಚಾರಿಗಳು ಮಾವು, ಹಲಸು, ಗಂಧ, ಹೊನ್ನೆ, ಬೀಟೆ ಮುಂತಾದ ಬೆಲೆಬಾಳುವ ಮರಗಳಿಂದ ಬಾಗಿಲು, ಭೀಮ, ಕಂಬಗಳು, ಕುರ್ಚಿ, ಬೆಂಚು, ಉಯ್ಯಾಲೆ, ಮಂಚ, ಮಣಿ, ದೇವರ ಮಂಟಪ ಇತ್ಯಾದಿ ಪೀಠೋಪಕರಣಗಳನ್ನು

ಮಾಡುವವರು ಹಾಗೂ ಗೃಹಪಯೋಗಿ ವಸ್ತುಗಳನ್ನು ತಯಾರಿಸುತ್ತಿದ್ದರು. (ಗುರುರಾಜಾಚಾರಿ,೧೯೭೪: ೭೬-೭೭) ಮೈಸೂರು ಸಂಸ್ಥಾನದಲ್ಲಿ ಬೆಂಗಳೂರು, ಮೈಸೂರು ಮತ್ತು ಶ್ರೀರಂಗಪಟ್ಟಣ ಭಾಗಗಳಲ್ಲಿ ಅತೀನಾಜೂಕಾದ ಪೀಠೋಪಕರಣಗಳನ್ನು ತಯಾರಿಸುವ ಕುಶಲಕರ್ಮಿಗಳು ಇದ್ದರೆಂದು ತಿಳಿಯುತ್ತದೆ. (ಸುಧಾಮಣಿ,೨೦೦೯:೧೦೮) ವಿಜಯನಗರೋತ್ತರ ಕಾಲದಲ್ಲಿ ಎಲ್ಲ ಸಂಸ್ಥಾನಗಳಲ್ಲಿ ಕಂಡು ಬಂದಂತೆ ಇಲ್ಲಿಯೂ ವಿವಿಧ ರೀತಿ ಬಡಗಿ ಕಸೂತಿಗಳು ಅಭಿವೃದ್ಧಿ ಹೊಂದಿರುವುದು ಕಂಡು ಬರುತ್ತದೆ. ಮೈಸೂರು ಅರಮನೆ, ಟಿಪ್ಪು ಸುಲ್ತಾನ್ ಅರಮನೆ ಇವೆಲ್ಲವೂ ಮರದ ಕೆತ್ತನೆಗಳಾಗಿವೆ. 'ದೇವಸ್ಥಾನಗಳ ಬಾಗಿಲು ಮೊದಲಾದವನ್ನು ಮರದಿಂದಲೇ ಮಾಡಿಸಿರುವುದು ಕಂಡು ಬರುತ್ತದೆ. ಶಿವಪ್ಪನಾಯಕನು ಬೇರೆ ಬೇರೆ ಪ್ರದೇಶಗಳಿಂದ ಪಂಚಕಾರುಕ ವೃತ್ತಿ ನಿರ್ವಹಿಸುವವರನ್ನು ಕರೆತಂದು ಅವರಿಗೆ ಪ್ರತ್ಯೇಕವಾದ ಸ್ಥಳವನ್ನು ಮತ್ತು ಭೂಮಿಯನ್ನು ನೀಡಿದ್ದನೆಂದು ತಿಳಿಯುತ್ತದೆ.

**ಕಂಚುಗಾರ**

ಪಾಂಚಾಳರಲ್ಲಿ ಕಂಚು ಕೆಲಸವನ್ನು ನಿರ್ವಹಿಸುವವನಿಗೆ ಕಂಚುಗಾರ ಎಂದು ಕರೆಯುತ್ತಾರೆ. ೧೭ನೇ ಶತಮಾನದಲ್ಲಿ ಕಂಚುಗಾರರು ಹೆಚ್ಚಾಗಿ ಕಂಡುಬರುತ್ತಾರೆ. ಇವರ ಕೆಲಸವೆಂದರೆ ದೇವರ ವಿಗ್ರಹಗಳ ಹಿಂದಿನ ಪ್ರಭಾವಳಿ, ಪಾತ್ರೆ, ಚಿಲಕ, ಪೂಜಾಸಾಮಗ್ರಿಗಳನ್ನು ತಯಾರಿಸುವುದು. ಪ್ರಸ್ತುತ ದಾವಣಗೆರೆ, ಗುಲ್ಬರ್ಗ ಮತ್ತು ನೆಲಮಂಗಲ ಭಾಗದಲ್ಲಿ ಕಂಡುಬರುತ್ತಾರೆ. ಕಂಚುಗಾರರಿಗೆ ಪೂರಕವಾಗಿ ೧೫೬೭ರ ಸೆಪ್ಟೆಂಬರ್ ೨೭ರ ಒಂದು ಶಾಸನ ಯಲಹಂಕ ನಾಡಪ್ರಭು ಸಣ್ಣ ತಮ್ಮೇಗೌಡರು ತಮ್ಮ ಗುರು ಚೆಲುವನಹಳ್ಳಿ ಜ್ಞಾನಮೂರ್ತಿಗೆ ಧರ್ಮವಾಗಬೇಕೆಂದು ಶಿವಗಂಗೆಯ ಗಂಗಾಧರೇಶ್ವರನಿಗೆ ಒಂದು ಗಂಟೆ ಮಾಡಿಸಿಕೊಟ್ಟ ಉಲ್ಲೇಖವಿದೆ. ಈ ಗಂಟೆಯ ತೂಕ ೭೧೫ ಹಲತೂಕ ಅಂದರೆ ಸುಮಾರು. ೧೬೦ ಇದೆ(ಜಮುನ,೨೦೦೬: ೪೫).

೧೫೯೨ರ ಯಲಹಂಕ ನಾಡಪ್ರಭು ಜುಟ್ಟಿನಹಳ್ಳಿಯ ಚಿಕ್ಕಗಾರಿಯಪ್ಪಗೌಡರ ಮಗ ಹುಲಿಕಲ್ಲಿನ ಚಿಕ್ಕಹೊನ್ನೇಗೌಡ ಶಿವಗಂಗೆಯ ಗಂಗಾಧರನಿಗೆ ಕಂಚಿನ ಘಂಟೆಯನ್ನು ನೀಡಿದ ಉಲ್ಲೇಖವಿದೆ (ಜಮುನ,೨೦೦೬:೬೫).

ಕಂಚುಗಾರರು ವಿಜಯನಗರೋತ್ತರ ಕಾಲದಲ್ಲಿ ಪ್ರಮುಖವಾಗಿ ಗುರುತಿಸಿಕೊಂಡಿದ್ದು ಕಂಚುಗಾರರು ದೇವಾಲಯಕ್ಕೆ ಸಂಬಂಧಿಸಿದ ಕೆಲಸಗಳನ್ನು ಅಚ್ಚುಕಟ್ಟಾಗಿ ನಿರ್ವಹಿಸುತ್ತಿದ್ದರು. ಈ ಕಂಚುಗಾರರು ವಿಜಯನಗರ ಪೂರ್ವಕಾಲದಲ್ಲಿ ಅಷ್ಟಾಗಿ ಕಂಡುಬರುವುದಿಲ್ಲ. ವಿಜಯನಗರ ಕಾಲದಲ್ಲಿ ಕೃಷ್ಣದೇವರಾಯನ ಕಾಲದ ಮೂರು ಶಾಸನಗಳಲ್ಲಿ ಮಾತ್ರ ಈ ಕಂಚುಕಾರ ವೃತ್ತಿಯ ಉಲ್ಲೇಖ ಕಂಡುಬರುತ್ತದೆ. ಅಂದರೆ ಪಂಚಾಳರ ವೃತ್ತಿ ಕಸುಬುಗಳು ವಿಜಯನಗರೋತ್ತರ ಕಾಲದಲ್ಲಿಯೇ ಗುರುತಿಸಿಕೊಂಡರೆಂಬುದು ಸ್ಪಷ್ಟವಾಗುತ್ತದೆ.

ಕೆಳದಿಯ ಶಿವಪ್ಪನಾಯಕನು ಕಂಚುಗಾರ ವೃತ್ತಿಯವರನ್ನು ರಾಜಧಾನಿಗೆ ಕರೆಸಿ ಅವರಿಗೆ ಭೂಮಿಯನ್ನು ನೀಡಿ ಆಸ್ಥಾನದ ಕೆಲಸಗಳನ್ನು ನಿರ್ವಹಿಸುವ ಜವಾಬ್ದಾರಿಯನ್ನು ನೀಡಿದ್ದನೆಂದು ಕೆಳದಿ ನೃಪವಿಜಯದಲ್ಲಿ ಉಲ್ಲೇಖಿತವಾಗಿದೆ.

ಕ್ರಿ.ಶ.೧೫೮೮ರ ಶಿವಗಂಗೆಯ ಕಂಚಿನ ಗಂಟೆಯ ಶಾಸನ ಯಲಹಂಕನಾಡು ಪ್ರಭುವಿನ ಆಳ್ವಿಕೆಗೆ ಸಂಬಂಧಿಸಿದಂತೆ ಕೆಂಪೇಗೌಡ ಮಾತಾಪಿತೃವಿಗೆ ಒಳಿತಾಗಲಿ ಎಂದು ದಕ್ಷಿಣ ವಾರಣಾಸಿಯ ಪ್ರಸಿದ್ಧ ಶಿವಗಂಗೆಯ ಗಂಗಾಧರೇಶ್ವರ ಸ್ವಾಮಿಗೆ ದೊಡ್ಡ ಘಂಟೆ ಸಮರ್ಪಿಸಿದ. ಈ ಗಂಟೆಯನ್ನು ಕೇತಿಯಪ್ಪ ಒಡೆಯನ ಮಗ ನಮಶ್ಶಿವಯ್ಯ ಒಡೆಯ ಎರಕ ಹೊಯ್ದು ನಿರ್ಮಿಸಿದ.(ಜಮುನಾ,೨೦೦೬ ೨೫).

ಯಲಹಂಕ ನಾಡಪ್ರಭು ಆಳ್ವಿಕೆಯ ಕಾಲವನ್ನು ಕುರಿತಂತೆ ಹೆಚ್ಚು ಕಂಚುಗಾರರು ಮಾಡಿದ ಶಾಸನಗಳು ದೊರೆತಿರುವುದು ಸ್ಪಷ್ಟವಾಗಿದೆ. ಅಂದರೆ ವಿಜಯನಗರ ಕಾಲದಲ್ಲಿ ಕಡಿಮೆ ಸಂಖ್ಯೆಯಲ್ಲಿ ಕಂಡುಬಂದ ಪಂಚಾಳರು ವಿಜಯನಗರೋತ್ತರ ಕಾಲದಲ್ಲಿ ಹೆಚ್ಚಿನದಾಗಿ ಗುರುತಿಸಿಕೊಳ್ಳುತ್ತಾರೆ. ೧೬೩೦ರ ವೇಳೆಯಲ್ಲಿ ಮಾಗಡಿ ಸೀಮೆಯಲ್ಲಿ ಕಂಚುಗಾರ್ರಹಳ್ಳಿ ಎಂಬ ಹೆಸರಿದೆ. ಇದನ್ನು ಗಮನಿಸಿದರೆ ಕಂಚುಗಾರರೆ ಆ ಗ್ರಾಮದಲ್ಲಿ ನೆಲೆಸಿರಬಹುದೆಂದು ವಿವರಿಸಬಹುದು.

**ಅಕ್ಕಸಾಲಿಗರು**

ಪಾಂಚಾಳ ಸಮುದಾಯದಲ್ಲಿ ಒಂದು ವೃತ್ತಿಯಾದ ಅಕ್ಕಸಾಲಿಯು ಕರಕುಶಲ ವಸ್ತುಗಳನ್ನು ತಯಾರಿಸುವಲ್ಲಿ ಪ್ರಮುಖರಾಗಿದ್ದಾರೆ. ಚಿನ್ನ, ಬೆಳ್ಳಿ, ತಾಮ್ರದಿಂದ ಆಭರಣಗಳು, ಸಿಂಹಾಸನ, ಕೀರಿಟ ಇತ್ಯಾದಿಗಳನ್ನು ತಯಾರಿಸುವವರನ್ನು ಅಕ್ಕಸಾಲಿಗರು ಎಂದು ಕರೆಯುತ್ತಾರೆ. ಕೌಟಿಲ್ಯನ ಅರ್ಥಶಾಸ್ತ್ರ ಕೃತಿಯಲ್ಲಿಯೇ ಇವರ ವೃತ್ತಿಯ ಉಲ್ಲೇಖವಿದೆ. ಅಕ್ಕಸಾಲಿಗರಿಗೆ ಸಂಸ್ಥಾನಗಳಲ್ಲಿ ವಿಶೇಷ ಕಾಳಜಿಯಿಂದ ಅಧಿಕಾರದಲ್ಲಿ ನೇಮಿಸಿಕೊಳ್ಳುತ್ತಿದ್ದರು. ಕಾರಣ ಸಂಸ್ಥಾನಗಳ ನಾಣ್ಯ ಟಂಕಿಸುವ ಜವಾಬ್ದಾರಿಯು ಇವರದಾಗಿರುತ್ತದೆ. ವಿಜಯನಗರೋತ್ತರ ಕಾಲದ ಎಲ್ಲ ಸಂಸ್ಥಾನಗಳಲ್ಲಿಯೂ ಪಾಂಚಾಳರನ್ನು ಕಾಣುತ್ತೇವೆ. ಅದರಲ್ಲಿ ಅಕ್ಕಸಾಲಿಗರು ಒಬ್ಬರು. ಗ್ರಾಮೀಣ ಸಮಾಜದ ಆಯಗಾರರಲ್ಲಿ ಒಬ್ಬರಾಗಿ ಆರಂಭದಿಂದಲೂ ಗುರುತಿಸಿಕೊಂಡು ಬಂದಿದ್ದಾರೆ. ಇವರು ಗ್ರಾಮದ ಪ್ರಮುಖ ಅಧಿಕಾರಿಗಳಾಗಿ ಶಾನುಭೋಗನ ಅಧೀನದಲ್ಲಿ ಗ್ರಾಮೀಣ ಆರ್ಥಿಕತೆಯಲ್ಲಿ ಪಾಲ್ಗೊಳುತ್ತಿದ್ದರು. ಹರಪನಹಳ್ಳಿ ಪಾಳೆಯಗಾರರ ಕಾಲದಲ್ಲಿ ಪಾಂಚಾಳರು ಕಂಡುಬರುತ್ತಾರೆ. ಅವರ ಶಾಸನದಲ್ಲಿ ಅಕ್ಕಸಾಲಿ ಕರಿಯಪ್ಪ ಎಂಬ ಹೆಸರು ಉಲ್ಲೇಖಿತವಾಗಿದೆ. (ಕ.ವಿ.ವಿ.ಶಾ.ಸಂ–೧, ಹ:೧೭).

ಚಿತ್ರದುರ್ಗದ ನಾಯಕರ ಕಾಲದಲ್ಲಿ ಅಕ್ಕಸಾಲಿಗರನ್ನು ಜಾಲಗಾರರು ಎಂದು ಕರೆದಿದ್ದಾರೆ. ಈ ಜಾಲಗಾರ ಎಂಬ ಹೆಸರು ವಿಶ್ವಕರ್ಮರಾದ ಪಾಂಚಾಳ ಅಕ್ಕಸಾಲಿಗರು ಸುಮಾರು ೨೪–೨೫ ಪರ್ಯಾಯನಾಮಗಳಲ್ಲಿ ಜಲಗಾರ ಎಂಬ ಪದವು ಒಂದು ಎಂದು ಲಕ್ಷ್ಮಣ್ ತೆಲಗಾವಿಯವರ ಅಭಿಪ್ರಾಯವಾಗಿದೆ.

ಚಿತ್ರದುರ್ಗದ ಬೆಟ್ಟದಲ್ಲಿ ಬಿಚ್ಚುಗತ್ತಿ ಭರಮಣ್ಣನಾಯಕ ಸ್ಥಾಪಿಸಿದ ಚಿನ್ನದ ಮನೆಯೆಂಬ ಚಿನ್ನದ ಸಾಲೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಅಕ್ಕಸಾಲಿಗರು, ಇವರನ್ನು ಜಲಗಾರರು ಎಂದು ಕರೆಯುತ್ತಾರೆ. ಹಿಂಡಂಬೇಶ್ವರ ದೇವಾಲಯದ ಪೂರ್ವಪಾರ್ಶ್ವದ ತಗ್ಗು ಪ್ರದೇಶದಲ್ಲಿ ನೆಲೆಸಿದ್ದಿರಬಹುದು. ಈ ತಗ್ಗು ನಿವೇಶನವನ್ನು ಇಂದಿಗೂ ಜಾಲಗಾರರ ತಗ್ಗು ಎಂದು ಕರೆಯುತ್ತಾರೆ(ತೆಲಗಾವಿ,೨೦೧೮ ೧೦೦).

ಖಾಸಾ ನಾಗತಿಯರಿಗೂ ಕುಮಾರಿಯರಿಗೂ, ಕುದುರೆಗಳಿಗೂ ಬೇಕಾದ ಆಭರಣಗಳನ್ನು ಮಾಡಿಸುವುದಕ್ಕೆ ಮೇಲ್‌ದುರ್ಗದ ಅರಮನೆಯಲ್ಲಿ ಒಂದು ಚೌಕಿ ಕಟ್ಟಿಸಿ ಅದರಲ್ಲಿ ಅಗಸಾಲೆಗಳನ್ನು ಇರಿಸಿದರು. ಅಕ್ಕಸಾಲೆ ಒಬ್ಬನಿಗೆ ತಿಂಗಳಿಗೆ ದುರ್ಗಿವರದ ಪ್ರಕಾರ ೨೦ರ ಪ್ರಕಾರ ೮ ಜನರನ್ನು ನೇಮಕ ಮಾಡಿ ಬೊಕ್ಕಸದಿಂದ ನಾಣ್ಯಗಳನ್ನು ತಂದುಕೊಟ್ಟು ಚಿನ್ನದಾರದ ಕಟ್ಟಲೆ ಪ್ರಕಾರ ಚಿನ್ನಬೆಳ್ಳಿ ಸಹ ತೆಗೆದುಕೊಂಡು ಬೇಕಾದ ವಸ್ತುಗಳನ್ನು ಮಾರಿದರು. ಈ ವಿಷಯದಲ್ಲಿ ಲೆಕ್ಕ ಪತ್ರ ಬರೆಯುವುದಕ್ಕೆ ಬಿಳಿಜೋಡು ಹೇಮಣ್ಣನೆಂಬಾತನನ್ನು ನೇಮಿಸಿದ್ದರು. ಈ ಕೆಲಸ ಮಾಡತಕ್ಕ ಮನೆಗೆ ಚಿನ್ನದ ಮನೆ ಎಂದು ಹೆಸರಾಗಿದೆ(ಪುಟ್ಟಣ್ಣ,೧೯೯೭:೬೩). ಈ ಮೂಲಕ ತಿಳಿಯುವುದೇನೆಂದರೆ ಚಿತ್ರದುರ್ಗದ ನಾಯಕರ ಆಳ್ವಿಕೆಯಲ್ಲಿ ಅಕ್ಕಸಾಲಿಗರು ಪ್ರಭುತ್ವಕ್ಕೆ ವಿವಿಧ ಆಭರಣಗಳನ್ನು ತಯಾರಿಸುವುದಕ್ಕೆ ಒಬ್ಬ ಅಕ್ಕಸಾಲಿಯನ್ನು ನೇಮಿಸಿಕೊಂಡಿರುತ್ತಿದ್ದರೆಂಬುದು ಸ್ಪಷ್ಟವಾಯಿತು.

ಗ್ರಾಮೀಣ ಅರ್ಥವ್ಯವಸ್ಥೆಯಲ್ಲಿರುವಂತೆ ಮೈಸೂರು ಒಡೆಯರ ಕಾಲದಲ್ಲಿ ಬಾರಬಲೂತಿ ಪದ್ಧತಿಯಲ್ಲಿ ಅಕ್ಕಸಾಲೆಯು ಒಬ್ಬನಾಗಿದ್ದನು. ಕೆಳದಿಯ ನಾಯಕರ ಕಾಲದಲ್ಲಿ ಅಕ್ಕಸಾಲಿಗರು ಸಂತೆಯಲ್ಲಿ ವ್ಯಾಪಾರ ಮಾಡುತ್ತಿದ್ದರೆಂದು ತಿಳಿಯುತ್ತದೆ. ಕೆಳದಿಯ ನಾಯಕರು ತಮ್ಮದೇ ಆದ ಟಂಕಸಾಲೆಯನ್ನು ಹೊಂದಿ ನಾಣ್ಯವನ್ನು ಟಂಕಿಸುತ್ತಿದ್ದರು. ನಾಣ್ಯಗಳನ್ನು ತಯಾರಿಸುವುದಕ್ಕೆ ಅಕ್ಕಸಾಲಿಗರು ಹಾಗೂ ವಿಶ್ವಕರ್ಮರನ್ನು ನೇಮಿಸಿಕೊಳ್ಳುತ್ತಿದ್ದರು. ಎಲ್ಲ ಸಂಸ್ಥಾನಗಳಲ್ಲಿ ನಾಣ್ಯ ಟಂಕಿಸುವ ಅಧಿಕಾರಿಯಾದ ಸಂಸ್ಥಾನ ಹೊಂದಿರುತ್ತಿತ್ತೋ ಆ ಸಂಸ್ಥಾನಗಳಲ್ಲಿ ಅಕ್ಕಸಾಲಿಗರನ್ನು ನೇಮಿಸಿಕೊಂಡಿರುವುದನ್ನು ಹೈದರ್ ಮತ್ತು ಟಿಪ್ಪು ಕಾಲಾವಧಿಯಲ್ಲಿಯೂ ಈ ಅಕ್ಕಸಾಲಿಗರು ಕಾರ್ಯ ನಿರ್ವಹಿಸುತ್ತಿದ್ದರು. ಒಟ್ಟಾರೆಯಾಗಿ ಪಾಂಚಾಳ ಸಮುದಾಯದಲ್ಲಿ ಇವರು ಒಬ್ಬರಾಗಿದ್ದರು. ಇವರಿಗೆ ವಿಜಯನಗರದ ಸದಾಶಿವರಾಯನ ಕಾಲದಲ್ಲಿ ಸುವರ್ಣ ಎಂಬ ತೆರಿಗೆಯನ್ನು ವಿಧಿಸುತ್ತಿದ್ದರು ಇದೇ ತೆರಿಗೆಯು ಮುಂದುವರಿದಿರಬಹುದಾಗಿದೆ. ಬೊಮ್ಮಗೌಡನೆಂಬುವನು(೧೫೮೩) ಕೊಪ್ಪಳದ ಕಸಚಿ ಗೌಡಕಿಯನ್ನು ವಿವಿಧ ಕಾರಣಗಳಿಂದ ತನಗೆ ನಿರ್ವಹಿಸಿಕೊಂಡು ಹೋಗಲು ಅಸಾಧ್ಯವಾದಾಗ ಜಟಣಗೌಡನೆಂಬುವನಿಗೆ ನ್ಯಾಯಪಂಚಾಯಿತಿಯಲ್ಲಿ ೨೭೫ ವರಹಗಳಿಗೆ ಮಾರುತ್ತಾನೆ. ಈ ಸಂದರ್ಭದಲ್ಲಿ ಅಷ್ಟಾದಶ ಪ್ರಜೆಗಳು ಸಾಕ್ಷಿಯಾಗಿದ್ದಾರೆ. ಅದರಲ್ಲಿ ಅಕ್ಕಸಾಲಿ ಸಿರುಮಣ್ಣ ಮತ್ತು ಕಮ್ಮಾರ ಮುದಿಯಪರ ಪ್ರಸ್ತಾಪವಿದೆ(ಬಡಿಗೇರ,೨೦೧೦:೧೭). ಅಕ್ಕಸಾಲಿಯು ಸಂಸ್ಥಾನದಲ್ಲಿ ಪ್ರಮುಖವಾಗಿದ್ದು ಅವನನ್ನು ಪಂಚಾಯಿತಿಯ ಸಾಕ್ಷಿಗೆ ಸ್ವೀಕರಿಸಿರುವುದು ಗಮನಾರ್ಹ.

ಹರಪನಹಳ್ಳಿ ಪಾಳೆಯಗಾರರಿಗೆ ಸಂಬಂಧಿಸಿದಂತೆ ಮೊದಲು ಸೋಮಶೇಖರನಾಯಕನ ಕಾಲದಲ್ಲಿ ಹರಪನಹಳ್ಳಿ ಪಾಳೆಯಗಾರರು ನಾಣ್ಯಗಳನ್ನು ಉಪಯೋಗಿಸುತ್ತಿದ್ದರು. ಇದು ಉಚ್ಚಂಗಮ್ಮನ ಮುಮ್ಮುಖದ ನಾಣ್ಯವಾಗಿದೆ. ಈ ನಾಣ್ಯವನ್ನು ಹರಪನಹಳ್ಳಿಯ ಸಾಮಂತರಾಜ ಗಡಾದ ದೇಸಾಯಿ ಭರಮಗೌಡ ಉಪಯೋಗಿ ಕೋಟೆ ಕಟ್ಟಲು ಉಪಯೋಗಿಸಿದರು. ಹರಪನಹಳ್ಳಿ ನಾಯಕರು, ಅಕ್ಕಸಾಲಿಗಳ ಮೂಲಕ ನಾಣ್ಯ ತಯಾರಿಸಿ ತಮ್ಮ ರಾಜ್ಯದಲ್ಲಿ ಚಲಾವಣೆ ಮಾಡಿದ್ದರು. ಹಾಗೂ ರಾಣಿಯರ ಬಂಗಾರದ ಒಡವೆ ತಯಾರಿಸುತ್ತಿದ್ದರು. ಅದಕ್ಕಾಗಿ ಸೋಮಶೇಖರ ನಾಯಕ ಹಂಚಿನ ಮಠದ ಆಯ್ಯಗಳಿಗೆ ಕೊಟ್ಟ ಭೂಮಿಯನ್ನು ಹಿಂಪಡೆದು ಅಕ್ಕಸಾಲಿಗೆ ಕೊಟ್ಟರು(ಸದಾಶಿವಪ್ಪ,೨೦೧೬: ೭೪).

ಒಟ್ಟಾರೆಯಾಗಿ ಪಾಂಚಾಳ ಸಮುದಾಯದಲ್ಲಿ ಅಕ್ಕಸಾಲಿಯು ಪ್ರಮುಖನಾಗಿದ್ದು ಪ್ರಭುತ್ವದ ಅಧೀನದಲ್ಲಿ ತನ್ನ ಕೆಲಸ ಕಾರ್ಯಗಳನ್ನು ನಿರ್ವಹಿಸುತ್ತಿರುವುದನ್ನು ಕಾಣಬಹುದು. ಆದರೆ ಇವನಿಗೆ ಯಾವ ವಿಧದಲ್ಲಿ ಕೆಲಸಕ್ಕೆ ಪ್ರತಿಫಲ ದೊರೆಯುತ್ತಿತ್ತೆಂಬ ಮಾಹಿತಿಯು ಸ್ಪಷ್ಟವಾಗಿ ದಾಖಲಾಗಿಲ್ಲ.

**ಗಾಜು ಕೈಗಾರಿಕೆ :** ಗಾಜಿನ ಬಳೆಯನ್ನು ತಯಾರಿಸುವ ಗೃಹ ಕೈಗಾರಿಕೆಯು ವಿಜಯನಗರೋತ್ತರ ಕಾಲದಲ್ಲಿ ಅಸ್ತಿತ್ವದಲ್ಲಿತ್ತು. ಮೈಸೂರು ಸಂಸ್ಥಾನದಲ್ಲಿ ಬಳೆಗಾರಶೆಟ್ಟಿ ಎಂಬ ಒಂದು ವರ್ಗ ಗಾಜಿನ ಬಳೆ ಮತ್ತು ಮಣಿಗಳನ್ನು ತಯಾರಿಸುತ್ತಿತ್ತು. ಇವರು ತಯಾರಿಸಿದ ಬಳೆಗಳನ್ನು ಮಾರಲು ಮಾರುಕಟ್ಟೆಗೆ ವ್ಯಾಪಾರ ತೆರಿಗೆಯನ್ನು ಕೊಡಬೇಕಿತ್ತು. ಬಳೆ ಕೈಗಾರಿಕೆಯು ಉತ್ತಮ ರೀತಿಯಲ್ಲಿತ್ತು. ಬೆಂಗಳೂರಿನಲ್ಲಿ ಬಳೆಪೇಟೆ ಎನ್ನುವಂತಹ ಒಂದು ಪ್ರತ್ಯೇಕವಾದ ಪೇಟೆಯನ್ನು ನಿರ್ಮಿಸಿರುವುದನ್ನು ನೋಡಬಹುದು. ಪ್ರಾಚೀನ ಕಾಲದಿಂದಲೂ ಗಾಜು ಮತ್ತು ಗಾಜಿನ ಬಳೆ ಕೈಗಾರಿಕೆಯು ಚಿತ್ರದುರ್ಗದ ಪ್ರದೇಶದಲ್ಲಿತ್ತೆಂದು ತಿಳಿಯುತ್ತದೆ. ಖನಿಜ ಸಂಪತ್ತು ಈ ಪ್ರದೇಶದಲ್ಲಿದ್ದರಿಂದ ಗಾಜಿನ ಕೈಗಾರಿಕೆ ಇತ್ತೆಂದು ಹೇಳಬಹುದು. ಬುಕಾನನ್ ಚಿತ್ರದುರ್ಗ ಪರಿಸರದಲ್ಲಿ ಪ್ರವಾಸ ಮಾಡಿ ಗಾಜಿನ ಉತ್ಪಾದನೆ ಈ ಪ್ರದೇಶದಲ್ಲಿ ಹೆತ್ತೆಚ್ಚವಾಗಿತ್ತೆಂದು ಹೇಳಿದ್ದಾನೆ(ಚಂದ್ರಶೇಖರ,೨೦೧೫:೮೦).

ಹೊಸದುರ್ಗ ತಾಲೂಕಿನ ಗಾಜು ತಯಾರಿಕಾ ಕೇಂದ್ರವಾಗಿದ್ದು. ಈ ಪ್ರದೇಶದಲ್ಲಿ ಗಾಜು ತಯಾರಿಕೆಗೆ ಬೇಕಾದ ಖನಿಜಸಂಪತ್ತು ಸಿಗುತ್ತವೆ. ಅವುಗಳನ್ನು ಒಂದು ವಿಶಿಷ್ಟ ರೀತಿಯಲ್ಲಿ ರಚನೆಯಾದ ಕುಲುಮೆಯ ಮೂನೆಗಳಲ್ಲಿ ತುಂಬಿಸಿ, ಕಪ್ಪು, ಹಸಿರು, ಕೆಂಪು, ನೀಲಿ ಮತ್ತು ಹಳದಿ ಗಾಜನ್ನು ತಯಾರಿಸಲಾಗುತ್ತಿತ್ತು ಈ ಐದು ಬಣ್ಣದ ಗಾಜನ್ನು ತಯಾರಿಸಿ ಬಳೆ ತಯಾರಿಸಲಾಗುತ್ತಿತ್ತು(ಚಂದ್ರಶೇಖರ,೨೦೧೫:೮೪).

ಈ ಮೂಲಕ ಗಾಜು ಗೃಹ ಕೈಗಾರಿಕೆಯ ರೂಪದಲ್ಲಿ ಚಿತ್ರದುರ್ಗದ ನಾಯಕರ ಕಾಲದಲ್ಲಿ ಅಸ್ತಿತ್ವದಲ್ಲಿತ್ತೆಂದು ಹೇಳಬಹುದು. ಕೆಳದಿ ನಾಯಕರ ಕಾಲದಲ್ಲಿ ಗಾಜಿನ ಕೈಗಾರಿಕೆಯು ಅಭಿವೃದ್ಧಿಯನ್ನು ಹೊಂದಿತ್ತೆಂದು ತಿಳಿಯುತ್ತದೆ. ಗಾಜು ಕರಾವಳಿ ಭಾಗದಲ್ಲಿ ದೊರೆಯುತ್ತಿದ್ದು ಗಾಜಿನ ಉತ್ಪಾದನೆಯ ಮೇಲೆ ತೆರಿಗೆಯನ್ನು ವಿಧಿಸಿದ್ದರು.

**ಎಣ್ಣೆ ಕೈಗಾರಿಕೆ:** ಪ್ರಾಚೀನ ಕಾಲದಿಂದಲೂ ಸ್ಥಳೀಯವಾಗಿ ದೊರೆಯುವ ಸಾಸಿವೆ, ಎಳ್ಳು, ಶೇಂಗಾ, ಕುಸುಬೆ, ಕೊಬ್ಬರಿ ಮುಂತಾದವುಗಳಿಂದ ಎಣ್ಣೆಯನ್ನು ಉತ್ಪಾದಿಸಿ ಆ ಮೂಲಕ ನಂದಾದೀವಿಗೆಗೆ, ಅಡುಗೆಗೆ ಮತ್ತು ದೇವಸ್ಥಾನಗಳಲ್ಲಿ ಬಳಸುತ್ತಿರುವುದನ್ನು ಕಾಣುತ್ತೇವೆ. ಆರಂಭದಿಂದಲೂ ಗಾಣಗಳ ಮೂಲಕ ಎಣ್ಣೆಯನ್ನು ತೆಗೆಯುತ್ತಿದ್ದರು. ಗಾಣಕ್ಕೆ ಎತ್ತನ್ನು ಕಟ್ಟಿ ಗಾಣತಿರುಗಿಸಿ ಎಣ್ಣೆ ತೆಗೆಯುತ್ತಿದ್ದರು. ಗಾಣಿಗ ಸಮುದಾಯದವರು ಎಣ್ಣೆ ತೆಗೆಯುವ ಕಾರ್ಯದಲ್ಲಿ ತೊಡಗಿದ್ದರು. ಕರ್ನಾಟಕದಲ್ಲಿ ಚಿತ್ರದುರ್ಗ, ಬಿಜಾಪುರ, ಬೀದರ್ ಬಳ್ಳಾರಿ, ಕೋಲಾರ ಮೊದಲಾದ ಭಾಗಗಳಲ್ಲಿ ಎಣ್ಣೆ ಕೈಗಾರಿಕೆ ನಡೆಯುತ್ತಿತ್ತು. ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ಪರಿಸರವು ಪ್ರಾಚೀನಕಾಲದಿಂದಲೂ ಎಣ್ಣೆ ಕೈಗಾರಿಕೆಯಲ್ಲಿ ಪ್ರಸಿದ್ಧಿಯನ್ನು ಪಡೆದಿದೆ. ಚಿತ್ರದುರ್ಗದ ಪರಿಸರದಲ್ಲಿ

ಶೇಂಗಾ ಬೆಳೆಯು ಹೆಚ್ಚಾಗಿ ಬೆಳೆಯುತ್ತಿದ್ದರಿಂದ ಈ ಕೈಗಾರಿಕೆಗೆ ಹೆಚ್ಚಿನ ಬೆಂಬಲ ದೊರೆತಂತೆ ಕಾಣುತ್ತದೆ. ಗಾಣದೆರೆ ಎನ್ನುವಂತಹ ತೆರಿಗೆಯನ್ನು ಹಾಕುತ್ತಿದ್ದರು. ಇವರನ್ನು ಕುರಿತು ಶಾಸನಗಳಲ್ಲಿ ತೆಲ್ಲಿಗರು ಎಂದು ಉಲ್ಲೇಖಗಳಿವೆ. ಈ ಎಣ್ಣೆ ಕೈಗಾರಿಕೆಯಲ್ಲಿ ಮೂರು ರೀತಿಯ ಗಾಣಗಳಿರುವುದನ್ನು ನೋಡಬಹುದು. ಕೈಗಾಣ, ಎತ್ತುಗಾಣ ಮತ್ತು ಮೆಟ್ಟುಗಾಣ, ಮೂರು ರೀತಿಯಲ್ಲಿ ಎಣ್ಣೆಯನ್ನು ಉತ್ಪಾದನೆ ಮಾಡುತ್ತಿದ್ದರು. ಗಾಣಕ್ಕೆ ಎತ್ತಿನ ಮಾನ್ಯ ಬಿಟ್ಟ ಉಲ್ಲೇಖಗಳು ಶಾಸನಗಳಲ್ಲಿ ದೊರೆಯುತ್ತವೆ. ಕೆಳದಿಯ ನಾಯಕರ ಕಾಲದಲ್ಲಿ ಗಾಣದೆರೆ ಎಂಬ ಉಲ್ಲೇಖಗಳು ದೊರೆಯುತ್ತವೆ. ಕೆಳದಿ ನಾಯಕರು ಎಣ್ಣೆ ಉತ್ಪಾದನೆಗೆ ಬೆಂಬಲ ನೀಡಿದ್ದರು ಹಾಗೂ ವಿಜಯನಗರೋತ್ತರ ಕಾಲದಲ್ಲಿ ಕಂಡುಬಂದ ಸಾಮಂತ ಮನೆತನಗಳಲ್ಲಿಯೂ ಈ ರೀತಿಯಾದ ತೆರಿಗೆಗಳ ಉಲ್ಲೇಖವನ್ನು ನೋಡಬಹುದು. ಹೈದರ್ ಮತ್ತು ಟಿಪ್ಪು ಸುಲ್ತಾನ್ ಕಾಲದಲ್ಲಿ ೨,೯೯೧ ಎಣ್ಣೆಗಿರಿಣಿಗಳಿದ್ದವೆಂದು ತಿಳಿದುಬರುತ್ತದೆ. ಬುಕಾನನ್ ಚೆನ್ನಪಟ್ಟಣದಲ್ಲಿ ಎಣ್ಣೆ ಕಾಳುಗಳಿಂದ ಎಣ್ಣೆಯನ್ನು ತೆಗೆಯುವ ಕಾರ್ಮಿಕರು ಇದ್ದರು. ಇವರು ಹಣವನ್ನು ಮುಂಗಡವಾಗಿ ನೀಡುವುದರ ಮೂಲಕ ರೈತರಿಂದ ಎಣ್ಣೆ ಬೀಜಗಳನ್ನು ಕೊಳ್ಳುತ್ತಿದ್ದರು(ಮಹಾದೇವಮ್ಮ,೨೦೦೮:೨೫). ಈ ಮೂಲಕ ಎಣ್ಣೆ ಕೈಗಾರಿಕೆಗಳು ಅಭಿವೃದ್ಧಿ ಹೊಂದಿರುವುದು ಕಂಡುಬರುತ್ತದೆ.

ಮೈಸೂರು ಜಿಲ್ಲೆಯ ಚಾಮರಾಜನಗರದಲ್ಲಿ ಈ ಎಣ್ಣೆ ಉತ್ಪಾದನೆ ವೃತ್ತಿಯನ್ನು ಅವಲಂಭಿಸಿದ್ದ ಜನರು ಹೆಚ್ಚಾಗಿದ್ದುದಾಗಿ ತಿಳಿದುಬರುತ್ತದೆ(ಹಯವದನ್‌ರಾವ್(೧)೧೯೨೭: ೫೪೨). ಕೈಗಾರಿಕೆಗಳಿಗೆ ಅಗತ್ಯವಾಗಿದ್ದ ಗಾಣವನ್ನು ಕಲ್ಲಿನಿಂದ ಅಥವಾ ಮರದಿಂದ ತಯಾರಿಸುತ್ತಿದ್ದರು. ಇದರಲ್ಲಿ ಕೈಗಾಣ ಮತ್ತು ಎತ್ತುಗಾಣ ಎಂಬೆರಡು ವಿಧಾನಗಳು ರೂಢಿಯಲ್ಲಿದ್ದವು. ಕೈಗಾಣದಲ್ಲಿ ವ್ಯಕ್ತಿಯೇ ಗಾಣವನ್ನು ಸ್ವತಃ ತಿರುಗಿಸುತ್ತಿದ್ದನು, ಎತ್ತುಗಾಣದಲ್ಲಿ ಒಂದು ಜೊತೆ ಎತ್ತುಗಳ ಸಹಾಯದಿಂದ ಗಾಣ ತಿರುಗಿಸಲಾಗುತ್ತಿತ್ತು. ಕಾಲಿನಿಂದ ತುಳಿದು ಎಣ್ಣೆ ತಯಾರಿಸುವ ಮೆಟ್ಟುಗಾಣ ಎಂದು ಮತ್ತೊಂದು ವಿಧಾನವು ಇತ್ತು(ಸುಧಾಮಣಿ,೨೦೦೯:೧೦೬). ಈ ಮೂಲಕ ಎಣ್ಣೆ ಕೈಗಾರಿಕೆಯು ನಡೆಯುತ್ತಿತ್ತು

## ಬೆಲ್ಲ ಮತ್ತು ಸಕ್ಕರೆ ಕೈಗಾರಿಕೆ

ಕರ್ನಾಟಕದಲ್ಲಿ ಬೆಲ್ಲ ಮತ್ತು ಸಕ್ಕರೆ ಕೈಗಾರಿಕೆಯು ಒಂದು ಗೃಹಕೈಗಾರಿಕೆಯಾಗಿ ಪ್ರಾಚೀನ ಕಾಲದಿಂದಲೂ ಗುರುತಿಸಿಕೊಂಡು ಬಂದಿದೆ. ವಿಜಯನಗರೋತ್ತರ ಕಾಲದಲ್ಲಿಯೂ ಈ ಕೈಗಾರಿಕೆಗೆ ಪ್ರೋತ್ಸಾಹ ದೊರೆತಿರುವುದನ್ನು ನೋಡಬಹುದು. ಚಿತ್ರದುರ್ಗ, ಮೈಸೂರು, ಕೆಳದಿಯ ನಾಯಕರು ಈ ಕೈಗಾರಿಕೆಗೆ ಬೆಂಬಲವನ್ನು ನೀಡಿರುವುದನ್ನು ಗಮನಿಸಬಹುದು. ಕರ್ನಾಟಕದ ಶ್ರೀರಂಗಪಟ್ಟಣ, ಮಂಡ್ಯ, ಮೈಸೂರು, ದಾವಣಗೆರೆ, ಚನ್ನಗಿರಿ ಮೊದಲಾದ ಭಾಗಗಳಲ್ಲಿ ಗೃಹ ಕೈಗಾರಿಕೆಗಳಿಗೆ ಪೂರಕವಾದ ಕಬ್ಬನ್ನು ಬೆಳೆಯುತ್ತಿದ್ದರು. ಕಬ್ಬಿನ ಹಾಲು ತೆಗೆದು ಬೆಲ್ಲ ತಯಾರಿಸುವ ವೃತ್ತಿಗೆ ನಿಗದಿಪಡಿಸಿದ ತೆರಿಗೆ ಆಲೆದೆರೆ ಎಂದು ಕರೆಯುತ್ತಿದ್ದರು. ಸರ್ಕಾರವು ಈ ಕೈಗಾರಿಕೆಯನ್ನು ಮಾಡುವವರಿಗೆ ಆಲೆದೆರೆಂಯನ್ನು ವಿಧಿಸುತ್ತಿತ್ತು(ಎ.ಕ.ಟಿನರಸೀಪುರ,೧೬). ಬುಕಾನನ್ ಮೈಸೂರು ಸಂಸ್ಥಾನದ ವ್ಯಾಪಾರ ವಾಣಿಜ್ಯದ ಕುರಿತು ಮಾಹಿತಿ ನೀಡುತ್ತಾ ಬೆಲ್ಲ ಮತ್ತು ಸಕ್ಕರೆಯನ್ನು ಈ

ಭಾಗದ ಜನರು ಯಾವ ರೀತಿ ಆತ್ಮೀಯತೆಯ ಭಾವನೆಯಿಂದ ಉತ್ಪಾದಿಸುತ್ತಿದ್ದರು ಒಂದೊಂದು ಕೆಲಸವನ್ನು ಅಚ್ಚುಕಟ್ಟಾಗಿ ಹೇಗೆ ಸಾಗಿಸುತ್ತಿದ್ದರು ಎಂದು ವಿವರಿಸುತ್ತಾನೆ ಹಾಗೂ ಈ ಕೈಗಾರಿಕೆಯು ಹಗಲು ರಾತ್ರಿ ನಡೆಯುತ್ತಿತ್ತೆಂದು ಹೇಳುತ್ತಾನೆ. ಬೆಲ್ಲವು ಮೂರು ಬಾರಿ ತಯಾರಾಗುತ್ತಿತ್ತು. ಕಬ್ಬಿನ ಮಡಿಯಿಂದ ಕಾಕಂಬಿಯನ್ನು ತಯಾರಿಸಿ ವಿಶೇಷ ಮಡಿಕೆಗಳಲ್ಲಿ ಶೇಖರಿಸಿಡುತ್ತಿದ್ದರು ಎಂದು ವಿವರಿಸಿದ್ದಾರೆ(ಮಹಾದೇವಮ್ಮ ೨೦೦೮:೨೦). ಬೆಲ್ಲ ಮತ್ತು ಸಕ್ಕರೆ ಕೈಗಾರಿಕೆಯಲ್ಲಿ ದಿನಗೂಲಿಯನ್ನು ಅಲ್ಲಿ ಕೆಲಸ ನಿರ್ವಹಿಸುವ ಕಾರ್ಮಿಕರು ಪಡೆಯುತ್ತಿದ್ದರು. ಟಿಪ್ಪು ಈ ಕೈಗಾರಿಕೆಗೆ ಹೆಚ್ಚಿನ ಬೆಂಬಲವನ್ನು ನೀಡಿದ್ದನು. ಈ ಕಾರ್ಖಾನೆಯಲ್ಲಿ ಕೆಲಸ ನಿರ್ವಹಿಸುವ ಕಾರ್ಮಿಕರು ಮೂರು ಗಂಟೆ ವಿಶ್ರಾಂತಿಯನ್ನು ಪಡೆಯಬೇಕೆಂಬ ನಿಯಮವನ್ನು ವಿಧಿಸಿದ್ದನು. ಅಂದರೆ ಕಾರ್ಮಿಕರಿಗೆ ಟಿಪ್ಪು ಕೊಟ್ಟ ಕಾಳಜಿ ಇದರಿಂದ ಸ್ಪಷ್ಟವಾಗುತ್ತದೆ(ಸಾಕಿ,(೧)೧೯೯೮:೪೮೬). ಬೆಲ್ಲ ತಯಾರಿಕೆಯಲ್ಲಿ ತಯಾರಿಸಿದ ವಸ್ತುವನ್ನು ಸ್ಥಳೀಯ ಹಾಗೂ ನೆರೆಹೊರೆಯ ಭಾಗದಲ್ಲಿ ಮಾರಾಟ ಮಾಡುತ್ತಿದ್ದರು. ಬೆಲ್ಲ ಮತ್ತು ಸಕ್ಕರೆಗಳನ್ನು ಶ್ರೀರಂಗಪಟ್ಟಣ ಮತ್ತು ಮೈಸೂರಿನ ಉಗ್ರಾಣಗಳಲ್ಲಿ ಶೇಖರಿಸುತ್ತಿದ್ದರು. (ಎ.ಕ.ಶ್ರವಣಬೆಳಗೊಳ, ಸಂ–೨, ೬೫). ದೇವನಹಳ್ಳಿ ಭಾಗದಲ್ಲಿ ಕಬ್ಬನ್ನು ಹೆಚ್ಚಾಗಿ ಬೆಳೆಯಲಾಗುತ್ತಿತ್ತು. ಟಿಪ್ಪು ಉತ್ತಮ ದರ್ಜೆಯ ಸಕ್ಕರೆ ತಯಾರಿಸಲು ಚೀನಿಯರ ಸಹಾಯವನ್ನು ಪಡೆದುಕೊಳ್ಳುತ್ತಿದ್ದನು ಚನ್ನಪಟ್ಟಣ ಭಾಗದಲ್ಲಿರುವ ಲಿಂಗ ಬಣಜಿಗರು ಶುದ್ಧವಾದ ಬಿಳಿಸಕ್ಕರೆಯನ್ನು ತಯಾರಿಸುತ್ತಿದ್ದರು. ೧೭೯೫ರಲ್ಲಿ ಸಕ್ಕರೆ ಕಾರ್ಖಾನೆಯನ್ನು ಸ್ಥಾಪಿಸಿದ್ದನು.

ಚನ್ನಪಟ್ಟಣದ ಲಿಂಗ ಬಣಜಿಗರು ಕುಲಕಸುಬಿನ ಜೊತೆ ಸಕ್ಕರೆ ಮತ್ತು ಬೆಲ್ಲ ತಯಾರಿಕೆಯಲ್ಲಿ ಪರಿಣತಿ ಹೊಂದಿದ್ದರು. ಇದನ್ನು ಸ್ಥಿತ್ಯಂತರವನ್ನು ಕಂಡ ಕಾಲವೆಂದು ಹೇಳಬಹುದು. ೧೮ನೇ ಶತಮಾನದ ಕೊನೆಯಲ್ಲಿ ಕೈಗಾರಿಕೆಗಳು ಪರಿವರ್ತನೆ ಮತ್ತು ಸರಕುಗಳ ಬಳಕೆ ಇವು ತ್ವರಿತವಾಗಿ ನಡೆದವು. ಬೆಂಗಳೂರು ಮತ್ತು ಕೋಲಾರ ಭಾಗಗಳಲ್ಲಿ ಹೆಚ್ಚು ಸಕ್ಕರೆ ಉದ್ಯಮಗಳು ಸ್ಥಾಪನೆಯಾದವು. ಕಬ್ಬಿನ ಉತ್ಪಾದನೆಗಾಗಿ ಬಂಡವಾಳಗಾರರು ಭೂಮಿಯನ್ನು ಗುತ್ತಿಗೆ ರೂಪದಲ್ಲಿ ಪಡೆದು ಉತ್ಪಾದನೆಯಲ್ಲಿ ತೊಡಗಿದರು. ಒಂದು ಕಬ್ಬಿನ ಗಾಣ ಸ್ಥಾಪನೆಗೆ ಬಡಗಿ ಮತ್ತು ಕಮ್ಮಾರ, ತೋಟಿಯ ಪಾತ್ರವು ಬಹಳ ಮುಖ್ಯವಾಗಿರುತ್ತದೆ. ಕಾರ್ಖಾನೆಯ ಗಿರಣಿಯಲ್ಲಿ ಸಕ್ಕರೆ ತಯಾರಿಸಲು ಎತ್ತುಗಳನ್ನು ಮಾಲೀಕ ನೇಮಿಸಿಕೊಂಡಿರುತ್ತಿದ್ದ. ಕೂಲಿಕಾರ್ಮಿಕ ದಿನಗೂಲಿಗೆ ಅಲ್ಲಿ ಕೆಲಸ ಮಾಡಬೇಕಾಗಿತ್ತು (ಸಾಕಿ(೧)೧೯೯೮:೪೮೬–೪೮೭). ಟಿಪ್ಪು ಸುಲ್ತಾನನ ಆಡಳಿತಾವಧಿಯಲ್ಲಿ ಒಟ್ಟು ೨೭ ಕಾರ್ಖಾನೆಗಳು ಕೆಲಸ ನಿರ್ವಹಿಸುತ್ತಿದ್ದವು. ಕಬ್ಬಿನ ಕಾರ್ಖಾನೆಗೆ ರೈತರು ನೀರಾವರಿ ಬಳಕೆಯಲ್ಲಿ ಏತನೀರಾವರಿ ಬಳಸಿಕೊಂಡ ವಿಚಾರ ತಿಳಿಯುತ್ತದೆ. ಚಿಕ್ಕಾಬಳ್ಳಾಪುರದಲ್ಲಿ ಸಕ್ಕರೆ ಎಷ್ಟು ಪ್ರಮಾಣದಲ್ಲಿ ಉತ್ಪಾದಿಸುತ್ತಿದ್ದರೆಂದು ವಿವರಿಸಿದ್ದಾನೆ(ಬುಕಾನಾನ್,೧,೧೮೦೭:೩೪೧). ಈ ಮೂಲಕ ಸಣ್ಣ ಗಾಣಗಳ ಮೂಲಕ ಸಕ್ಕರೆ ಉತ್ಪಾದನೆಯು ಟಿಪ್ಪು ಕಾಲಾವಧಿಯ ವೇಳೆಗೆ ಒಂದು ಪ್ರಮುಖ ಕೈಗಾರಿಕೆಯ ಸ್ವರೂಪ ಪಡೆದು ಬಂಡವಾಳಕೇಂದ್ರಿತ ಉದ್ಯಮವಾಗಿ ನಂತರದ ದಿನಗಳಲ್ಲಿ ಗುರುತಿಸಿಕೊಂಡಿತ್ತು. ವಸಾಹತು ಆಳ್ವಿಕೆಯ ವೇಳೆಯಲ್ಲಿ ಈ ಕೈಗಾರಿಕೆಯು ಬೃಹತ್ ಬಂಡವಾಳದ ಉದ್ಯಮವಾಗಿ

ಹೊರಹೊಮ್ಮಿದೆ. ಪ್ರಸ್ತುತ ಕಬ್ಬು ಬೆಳೆಯುವ ರೈತರು ಬೆಂಬಲ ಬೆಲೆ ನಿಗದಿ ಕುರಿತಂತೆ ದೊಡ್ಡ ಮಟ್ಟದ ಹೋರಾಟದ ಸ್ವರೂಪವನ್ನು ಅಲ್ಲಿ ಗುರುತಿಸಬಹುದು.

**ಬೆಣ್ಣೆ ಅಥವಾ ತುಪ್ಪ ಉದ್ಯಮ**

ವಿಜಯನಗರೋತ್ತರದ ಕಾಲದಲ್ಲಿ ಬೆಣ್ಣೆ ಅಥವಾ ತುಪ್ಪದ ವ್ಯಾಪಾರವು ಹೆಚ್ಚಿನದಾಗಿ ನಡೆಯುತ್ತಿದ್ದು. ಇದಕ್ಕೆ ಪೂರಕವೆಂಬಂತೆ ಗುಡೇಕೋಟೆ ಪಾಳೆಯಗಾರರ ಕಾಲದ ತುಪ್ಪದ ಕಣಜವು ಇಲ್ಲಿ ಅಸ್ತಿತ್ವದಲ್ಲಿತ್ತು ಎಂದು ಸ್ಥಳೀಯರು ಅಭಿಪ್ರಾಯ ಪಡುತ್ತಾರೆ(ಕೊಟ್ರೇಶ್೨೦೧೦:೯೨). ಇದರಿಂದ ತಿಳಿಯುವ ಅಂಶವೆಂದರೆ ತುಪ್ಪ ಅಥವಾ ಬೆಣ್ಣೆಯು ಪ್ರಮುಖ ಪಶುಸಂಗೋಪನೆ ಉತ್ಪನ್ನವಾಗಿದ್ದು ಆ ಕಾಲದ ವ್ಯಾಪಾರದಲ್ಲಿ ತುಪ್ಪ, ಬೆಣ್ಣೆ ಬಳಸುತ್ತಿದ್ದರು.

ಮೈಸೂರಿನ ಚಿಕ್ಕದೇವರಾಜ ಒಡೆಯರು ಚಾವಡಿಗಳನ್ನು ನಿರ್ಮಿಸಿದರು ಅದರಲ್ಲಿ ಬೆಣ್ಣೆಯ ಚಾವಡಿಯು ಒಂದಾಗಿದೆ. ಈ ಚಾವಡಿಯು ಅರಮನೆ ಹಸುಕರುಗಳ ಪೋಷಣೆಯ ಜೊತೆ ಬೆಣ್ಣೆಗಳ ಪೂರೈಕೆಯನ್ನು ನಿರ್ವಹಿಸುತ್ತಿತ್ತು ಹಾಗೂ ಕಂದಾಯವನ್ನು ಬೆಣ್ಣೆಯ ರೂಪದಲ್ಲಿ ಕೊಡುತ್ತಿದ್ದರು. ಇದಕ್ಕೆ ಪೂರಕವಾಗಿ ಟಿಪ್ಪು ಸುಲ್ತಾನ ಈ ಚಾವಡಿಗೆ ಅಮೃತಮಹಲ್ ಎಂದು ಹೆಸರಿಟ್ಟು ಈ ಉತ್ಪಾದನೆಯನ್ನು ಹೆಚ್ಚಿಸಿದನು. ಈ ತಳಿಯ ಹಸುಗಳ ಪಶುಪಾಲನೆ ಟಿಪ್ಪು ಕಾಲದಲ್ಲಿ ಹೆಚ್ಚಿನ ಪ್ರಗತಿಯನ್ನು ಸಾಧಿಸಿತು(ಕೃಷ್ಣರಾವ್,ಕೇಶವಭಟ್ಟ(೪)೧೯೭೦,೯೭೦:೯೩೨). ಟಿಪ್ಪು ಸುಲ್ತಾನ್ ಅಮೃತಮಹಲ್ ತಳಿಯನ್ನು ತಂದು ಅಭಿವೃದ್ಧಿಪಡಿಸಿದರು. ಇವನ ರಾಜ್ಯದಲ್ಲಿ ಧಾನ್ಯ, ಅಡಿಗೆ ಎಣ್ಣೆ, ತುಪ್ಪ ಈ ಪದಾರ್ಥಗಳು ಸಂಸ್ಥಾನದಿಂದ ಹೊರಗೆ ರಫ್ತು ಮಾಡುವ ಹಾಗಿರಲಿಲ್ಲ(ಚಂದ್ರಶೇಖರ್, ರಾವ್,(೮)೨೦೧೬:೬೪). ಚಿತ್ರದುರ್ಗದ ನಾಯಕರ ಕೋಟೆಯಲ್ಲಿಯೂ ತುಪ್ಪದ ಕೊಳ ಇತ್ತೆಂದು ಸ್ಥಳೀಯರ ಅಭಿಪ್ರಾಯದಿಂದ ತಿಳಿಯುತ್ತದೆ. ಆ ಕಾಲದಲ್ಲಿ ಸಂಸ್ಥಾನದ ಹಸುಗಳ ಬೆಣ್ಣೆ, ತುಪ್ಪ ಸಂಗ್ರಹಿಸಲು ಈ ಕೊಳಗಳನ್ನು ನಿರ್ಮಿಸಿರುವ ಊಹೆಯನ್ನು ಮಾಡಬಹುದು. ಹೀಗೆ ಸಂಗ್ರಹ ಮಾಡಿದ ತುಪ್ಪ ಮತ್ತು ಬೆಣ್ಣೆಯನ್ನು ರಕ್ಷಣಾತ್ಮಕವಾಗಿ ಬಳಸುತ್ತಿದ್ದರು.

ಬೆಣ್ಣೆ ಅಥವಾ ತುಪ್ಪದ ಉಲ್ಲೇಖವು ಚಿತ್ರದುರ್ಗದ ನಾಯಕರ ಕಾಲದಲ್ಲಿಯೂ ಇತ್ತೆಂದು ಹೇಳಬಹುದು. ಇದಕ್ಕೆ ಉತ್ತಮ ಉದಾಹರಣೆಯೆಂದರೆ ಭರಮಪ್ಪನಾಯಕನ ಆಳ್ವಿಕೆಯಲ್ಲಿ ಕಣಕುಪ್ಪೆಗೆ ಹೋಗುವಾಗ ಕೆಲವು ಆದೇಶಿಸಿದ ವಿಚಾರದಲ್ಲಿ ಈ ಉಲ್ಲೇಖ ಬರುತ್ತವೆ. ಗ್ರಾಮದ ಮುಖಂಡರಲೊಬ್ಬರಾದ ತಳವಾರ ಗ್ರಾಮವೊಂದಕ್ಕೆ ೧ ಟಗರು ಒಂದು ತುಪ್ಪದ ಕುಂಭ ತರಬೇಕೆಂದು ಆಯಗಾರಿಗೆ ಆದೇಶಿಸಿದ ಉಲ್ಲೇಖವಿದೆ(ಪುಟ್ಟಣ್ಣ,೧೯೭೭:೬೨).

ತುಪ್ಪ ಒಂದು ಉದ್ಯಮ ಮಾತ್ರವಾಗಿರದೇ ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ನ್ಯಾಯನಿಷ್ಠೆಗೆ ಪಾವಿತ್ರ್ಯಗೊಳಿಸಿದ ಉದಾಹರಣೆಯೂ ದೊರೆಯುತ್ತದೆ. ೧೬೭೭ರ ಅರಕಲಗೂಡಿನ ಒಂದು ಶಾಸನದಲ್ಲಿ ವೆಂಕಟಮ್ಮಯ್ಯ ಮತ್ತು ಅವನ ಅಧಿಕಾರಿ ನಂಜರಾಜನ ಮಧ್ಯೆ ರಾಜದ್ರೋಹದ ಅಪರಾಧ ಬಂದಾಗ ಆಗ ಅರ್ಕೇಶ್ವರ ದೇವರ ಸನ್ನಿಧಿಯಲ್ಲಿ ಕುದಿಯುವ ತುಪ್ಪಕ್ಕೆ ಬೆರಳದ್ದಿ ನಿರಪರಾಧಿ ಎಂದು ಸಾಕ್ಷೀಕರಿಸುವ ಉದಾಹರಣೆಯಾಗಿದೆ. ಕುಂಬಾರರಿಗೂ ಕ್ಷೌರಿಕರಿಗೂ ವಿವಾದವಾದ

ಇದೇ ಪರೀಕ್ಷೆ ನಡೆಸಿದ ವಿವರವಿದೆ(ಕೃಷ್ಣರಾವ್,ಕೇಶವಭಟ್ಟ(೪)೯೭೦:೯೪೧). ಈ ಅಂಶಗಳ ಆಧಾರದ ಮೇಲೆ ತುಪ್ಪವು ಒಂದು ಉದ್ಯಮವಾಗಿತ್ತೆಂದು ಪರಿಗಣಿಸಬಹುದಾಗಿದೆ.

**೫.೪. ತೂಕ ಮತ್ತು ಅಳತೆ ಮಾಪನಗಳು**

ಅಳತೆ ಮಾಪನಗಳು ಆರ್ಥಿಕ ಅಂಶಗಳಲ್ಲಿ ಮುಖ್ಯವಾದವುಗಳು. ದಾನ ನೀಡುವ ಪ್ರಕ್ರಿಯೆಯು ಎಂದು ಆರಂಭವಾಯಿತೋ ಅಂದೇ ಅಳತೆ ಎಂಬ ಪರಿಕಲ್ಪನೆ ಆರಂಭವಾದಂತೆ ತೋರುತ್ತದೆ. ಒಂದು ಗ್ರಾಮಕ್ಕೆ ಅಥವಾ ಊರಿಗೆ ಗಡಿಗಳನ್ನು ನಿರ್ಮಿಸುವ ಮೂಲಕ ಈ ಪ್ರದೇಶ ಇಂತಿಷ್ಟು ಎಂದು ನಿರ್ಧರಿಸುತ್ತಿದ್ದರು. ಭೂಮಿಯನ್ನು ಅಳೆಯಲು ಖಂಡುಗ ಕೊಳಗ, ಮತ್ತರ ಬಳ್ಳ, ಸೊಲಗೆ, ಪಡಿ, ನೆಲು, ಮಣ ಮೊದಲಾದ ಮಾನಗಳಿಂದ ಅಳೆಯಲಾಗುತ್ತಿತ್ತು(ಷೇಕ್ ಅಲಿ (೩)೨೦೧೮:೨೨೬). ಅಳತೆಯ ಈ ಸಾಧನಗಳು ಸ್ಥಳದಿಂದ ಸ್ಥಳಕ್ಕೆ ಬೇರೆಯಾಗಿರುತ್ತಿದ್ದವು. ಅಲ್ಲಿನ ಸಾಧನಗಳನ್ನು ಅವರ ಸಂಸ್ಥಾನಗಳು ಯಾವ ನಿಯಮ ಪಾಲಿಸುತ್ತಿದ್ದರೋ ಅದರ ಮೂಲಕ ಅವರು ಅಳತೆಯ ಮಾಪನಗಳನ್ನು ಅಳವಡಿಸಿಕೊಂಡಿದ್ದರು. ಉತ್ತರ ಕನ್ನಡ ಮತ್ತು ದಕ್ಷಿಣ ಕನ್ನಡ ಭಾಗಗಳಲ್ಲಿ ಭೂಕಂದಾಯವನ್ನು ಧಾನ್ಯರೂಪದಲ್ಲಿ ವಸೂಲಿ ಮಾಡುತ್ತಿದ್ದರಿಂದ ಸೇರುಗಳು ಅಳತೆಯ ಮಾಪನಗಳಾಗಿದ್ದವು. ವಿಜಯನಗರೋತ್ತರ ಕಾಲದ ಎಲ್ಲ ಪಾಳೆಯಗಾರರ ಮನೆತನಗಳಲ್ಲಿಯೂ ಸೇರು ಅಳತೆಯ ಮಾಪನವಾಗಿತ್ತು. ಕ್ರಿ.ಶ.೧೬೭೧ರಂದು ಪೋರ್ಚುಗೀಸರಿಗೂ ಒಂದು ಒಪ್ಪಂದ ನಡೆದು ಅದರ ಪ್ರಕಾರ ಬಿದನೂರು ರಾಜ್ಯದ ತೂಕ ಮತ್ತು ಅಳತೆಯನ್ನೇ ಬಳಸಬೇಕು ಎಂಬ ನಿಯಮ ವಿಧಿಸಿದ್ದರು. ಗಾಣ ಸ್ಥಾಪಿಸಬಾರದು ಎಂಬ ನಿಯಮವಿತ್ತು. ಭತ್ತ ಮತ್ತು ಧಾನ್ಯದ ಅಳತೆಗೆ ಕೊಳಗವನ್ನು ಬಳಸುತ್ತಿದ್ದರು. ಇದು ಮರದಿಂದ ಮಾಡಿದ ಒಂದು ವಸ್ತುವಾಗಿತ್ತು. ಚಟಾಕು, ಪಾವು, ಸೇರು ಜಾರಿಯಲ್ಲಿದ್ದವು.

೪ ಚಟಾಕು–೧ ಪಾವು

೪ ಪಾವು–೧ ಸೇರು

೧೦೦ ಸೇರು– ೧೦೦ಪಲ್ಲ (೧ ಕ್ವಿಂಟಾಲ್)

ಕೆಳದಿ ನಾಯಕರ ಕಾಲದಲ್ಲಿ ಈ ರೀತಿಯ ಅಳತೆಯ ಮಾಪನಗಳಿದ್ದವು. ಚಟಾಕು, ಪಾವು ಎನ್ನುವುದು ಎಣ್ಣೆಯನ್ನು ಅಳೆಯುವುದಕ್ಕೆ ಉಪಯೋಗಿಸಿದ ವಸ್ತುವಾಗಿರಬಹುದು. ಎಣ್ಣೆಯನ್ನು ಪಂಚೇರು(೫ಸೇರು) ಎಂದು ಅಳೆಯುವುದು ವಾಡಿಕೆ ಇತ್ತು(ಕಲಬುರ್ಗಿ,ರಾಮ್‌ಭಟ್ಟ, ೧೯೯೪:೨೬). ಅಡಿಕೆ ಬೆಳೆಯು ಅಂದಿನ ಪ್ರಮುಖ ವ್ಯಾಪಾರವಾಗಿದ್ದರಿಂದ ಅಡಿಕೆಯನ್ನು ಲಕ್ಷದ ಲೆಕ್ಕದಲ್ಲಿ ಅಳೆಯುತ್ತಿದ್ದರು. ತೆಂಗಿನ ಮರವನ್ನು ೧೦೦ರ ಲೆಕ್ಕದಲ್ಲಿ ಅಳೆಯುತ್ತಿದ್ದರು. ಕರಾವಳಿ ಭಾಗದಲ್ಲಿ ಅಕ್ಕಿಯು ಪ್ರಮುಖ ಉತ್ಪನ್ನವಾಗಿದ್ದು ಅಕ್ಕಿ ಅಳತೆಯನ್ನು ಕೋರ್ಟಿ ಎನ್ನುತ್ತಿದ್ದರು(ಶಾಸ್ತ್ರಿ, ೧೯೭೨:೧೫೯). ಈ ಒಂದು ಕೋರ್ಟಿಗೆ ೧೨ ಅಥವಾ ೧೪ ಪ್ರತಾಪದ ದರದಲ್ಲಿ ಅಕ್ಕಿಯನ್ನು ಕೊಳ್ಳುತ್ತಿದ್ದರು. ಅಕ್ಕಿ ಮತ್ತು ಕರಿಮೆಣಸು ಆಗಿನ ಕಾಲದ ಪ್ರಮುಖ ಕೃಷಿ ಉತ್ಪನ್ನವಾಗಿದ್ದರಿಂದ ಇವುಗಳ ಅಳತೆ ಮತ್ತು ತೂಕಕ್ಕೂ ಮಹತ್ವವನ್ನು ನೀಡಿದ್ದರು. ಪೋರ್ಚುಗೀಸರು ಕರಿಮೆಣಸನ್ನು

ಖಂಡಿಯ ಲೆಕ್ಕದಲ್ಲಿ ಕೊಳ್ಳುತ್ತಿದ್ದರು(ಶಾಸ್ತ್ರಿ,೧೯೭೨:೧೫೯). ಈ ವಿಚಾರಕ್ಕೆ ಪೂರಕವಾಗಿ ಶಿವರಾಮ ಕಾರಂತರ ಬೆಟ್ಟದ ಜೀವ ಕಾದಂಬರಿಯಲ್ಲಿ ಖಂಡಿಯ ಕುರಿತು ವಿವರಿಸುತ್ತಾರೆ. ಒಂದು ಖಂಡಿ ಎಂದರೆ ಎರಡೂವರೆ ಕ್ವಿಂಟಾಲ್ ಎಂದು ಅರ್ಥಬರುತ್ತದೆ. ಈ ಮೂಲಕ ಖಂಡಿಯ ಪರಿಚಯವನ್ನು ಅವರ ಕಾದಂಬರಿಯಲ್ಲಿ ನೋಡಬಹುದು. ಖಂಡಿಯನ್ನು ಬಯಲುಸೀಮೆಯಲ್ಲಿ ಬಳ್ಳ ಎಂದು ಕರೆಯುತ್ತಿದ್ದರು. ಈ ಮೂಲಕ ತಿಳಿಯುವುದೇನೆಂದರೆ ಅಳತೆ ಮಾಪನಗಳು ಪ್ರದೇಶದಿಂದ ಪ್ರದೇಶಕ್ಕೆ ಭಿನ್ನತೆ ಇರುವುದನ್ನು ಗಮನಿಸಬಹುದು. ಕೊಳಗ ಎಂಬುದು ವಿಜಯನಗರೋತ್ತರ ಕಾಲದ ಎಲ್ಲ ಮನೆಗಳಲ್ಲಿ ಕಾಣಬಹುದು. ಈ ಅಳತೆಯ ಮಾಪನ ನಿರ್ದಿಷ್ಟವಾಗಿಲ್ಲದಿದ್ದರಿಂದ ಚಿಕ್ಕದೇವರಾಜ ಒಡೆಯರು ಒಂದು ಕೊಳಗಕ್ಕೆ ಎಂಟು ಸೇರುಗಳನ್ನು ನಿರ್ಧರಿಸಿದರು. ಖಂಡುಗ, ಪಲ್ಲ ಕೂಡ ಧಾನ್ಯಗಳನ್ನು ಬೃಹತ್ ಪ್ರಮಾಣದಲ್ಲಿ ಅಳೆಯುವ ಸಾಧನಗಳಾಗಿದ್ದವು(ಬುಕಾನನ್,(೧)೧೮೦೭ :೧೨೫). ಮೈಸೂರು ಒಡೆಯರ ಕಾಲದಲ್ಲಿಯೂ ಈ ಮಾಪನಗಳು ಚಲಾವಣೆಯಲ್ಲಿದ್ದವು.

ಚಿಕ್ಕದೇವರಾಜ ಒಡೆಯರು ಗಂಟೆಯಾಕಾರ ಮುದ್ರೆಯೊಂದಿದ ಲೋಹದ ತೂಕದ ಬಟ್ಟುಗಳನ್ನು ಫರಿಚಯಿಸಿದರು. ಈ ಬಟ್ಟು ೪ ಕೆ.ಜಿ., ೨೬೫೦ಗ್ರಾಂ ತೂಕವಿದೆ. ಒಟ್ಟಾರೆಯಾಗಿ ಮೈಸೂರು ಸಂಸ್ಥಾನದಲ್ಲಿ ಹೊಸ ಅಳತೆ ಮಾಪನಗಳು ಇದ್ದವು. ಪರಿಚಯಿಸಲ್ಪಟ್ಟವು ತೂಕದ ಬಟ್ಟುಗಳ ಮೂಲಕ ಅಳತೆ ನಿರ್ಧರಿಸುತ್ತಿದ್ದರು(ಕುಮಾರ :೧).

೧೭೪೯ರ ಶಾಸನ ಒಂದರಲ್ಲಿ ದೇವರಾಯ ಖಂಡುಂಗ ಎಂಬ ಅಳತೆಯ ಸಾಧನದ ಉಲ್ಲೇಖವಿದೆ. ಇದು ಸಾಮಾನ್ಯ ಖಂಡುಗಕ್ಕಿಂತ ಸುಮಾರು ಐದು ಸೇರುಗಳಷ್ಟು ಹೆಚ್ಚು ಧಾನ್ಯ ಹಿಡಿಸುವಷ್ಟು ದೊಡ್ಡದಾಗಿತ್ತು(ಸುಧಾಮಣಿ ೨೦೦೯:೧೨೦).

ಪೂರ್ವ ಕರ್ನಾಟಕದ ಪಾಳೆಯಗಾರ ಆಳ್ವಿಕೆಯ ವೇಳೆಯಲ್ಲಿ ಅಳತೆಗೋಲಿನ ಸಹಾಯದಿಂದ ಹೊಲಗಳನ್ನು ಮತ್ತರ ಮತ್ತು ಕಮ್ಮ ಎಂದು ವಿಭಾಗಿಸಿದ್ದರು. ಈ ಅಳತೆಯ ಮಾಪನದಲ್ಲಿಯೂ ಏಕರೂಪತೆ ಇಲ್ಲ. ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ವ್ಯತ್ಯಾಸವಿದೆ. ಎಂಬುದು ಸ್ಪಷ್ಟವಾಗುತ್ತದೆ. ಹಾಗಾಗಿ ಈ ಬೆಳೆಗಳನ್ನು ನಿರ್ದಿಷ್ಟ ಮಾನದಂಡದಿಂದ ನಿರ್ಧರಿಸಲು ಕಷ್ಟವಾಗುತ್ತದೆ. ಬೆದ್ದಲು ಭೂಮಿಯನ್ನು ಅಳತೆ ಮಾಡುವುದಕ್ಕೆ ನೇಗಿಲುಗಳನ್ನು ಬಳಕೆ ಮಾಡಿಕೊಳ್ಳುತ್ತಿದ್ದರು (ಶ್ಯಾಮಲ,೨೦೧೭:೪೫೦). ಈ ಮೂಲಕ ಪೂರ್ವಕರ್ನಾಟಕವು ಹೆಚ್ಚು ಬಯಲು ಸೀಮೆಯನ್ನು ಹೊಂದಿದ್ದರಿಂದ ನೇಗಿಲು ಬಳಕೆಯ ಇನ್ನೊಂದು ವಿಧಾನವನ್ನು ಇವರು ಅಭಿವೃದ್ಧಿಗೊಳಿಸಿರಬಹುದು. ಮೈಸೂರು ಒಡೆಯರ ಕಾಲದಲ್ಲಿ ಬಳಕೆಯಲ್ಲಿದ್ದ ಮಾಪನಗಳೆಂದರೆ ಕೊಳಗ, ಪಲ್ಲಂ, ಖಂಡುಗಗಳು ಸಂಸ್ಥಾನದ ಬೇರೆ ಬೇರೆ ಪ್ರದೇಶಗಳಲ್ಲಿ ಸ್ಥಳೀಯ ನಿಯಮಗಳಿಗೆ ಅನುಗುಣವಾಗಿ ಜಾರಿಯಲ್ಲಿದ್ದವು. ಪೌಂಡ್, (೧/೪ ಸೇರು), ಅರ್ಪಾವು(೧/೨ ಪಾವು), ಚಟಾಕು(೧/೪ ಪಾವ್) ಇವುಗಳು ಅರಮನೆಯ ಮುದ್ರಾಂಕಿತ ಮಾಪನಗಳಿಂದ ಅಳೆಯುತ್ತಿದ್ದರು(ಚಂದ್ರಶೇಖರ್,ರಾವ್೨೦೧೬:೪೭). ಈ ಅಳತೆಯ ಮಾಪನಗಳ ಮೇಲೆ ಮೈಸೂರು ಸಂಸ್ಥಾನದ ಗಂಡಬೇರುಂಡ ಮುದ್ರೆಯನ್ನು ಹಾಕಿರುತ್ತಿದ್ದರು. ಮೈಸೂರು ಸಂಸ್ಥಾನದಲ್ಲಿ ಸಾಮಾನ್ಯ ವ್ಯಾಪಾರವನ್ನು ನಿರ್ವಹಿಸುವಂತಹವರ

ಮನೆಯಲ್ಲಿಯೂ ಈ ರೀತಿಯಾದಂತಹ ತೂಕ ಅಳತೆಯ ಮಾಪನಗಳನ್ನು ಹೊಂದಿರುತ್ತಿದ್ದರು. ವಿಜಯನಗರೋತ್ತರ ಕಾಲದ ಎಲ್ಲ ಸಾಮಂತ ಪ್ರಭುತ್ವಗಳಲ್ಲಿ ಇದೇ ಮಾದರಿಯ ಅಳತೆ ಮಾಪನಗಳನ್ನು ನಿರ್ವಹಿಸುತ್ತಿರಬಹುದು. ಸ್ಥಳೀಯ ಮಾರುಕಟ್ಟೆಗಳಲ್ಲಿ ಚಿಕ್ಕ ತಕ್ಕಡಿಗಳ ಮೂಲಕ ವ್ಯವಹಾರ ನಡೆಸುತ್ತಿದ್ದರು. ವರ್ತಕರು ವ್ಯಾಪಾರ ಮಾಡುವಂತಹ ಸಂದರ್ಭದಲ್ಲಿ ತೂಕಗಳನ್ನು ಕದಿಯುವ ಆಗಿರಲಿಲ್ಲ. ಪ್ರಾಮಾಣಿಕತೆಯಿಂದ ವ್ಯಾಪಾರವನ್ನು ನಿರ್ವಹಿಸಬೇಕೆಂದು ಸಂತೆಯ ಅಧಿಕಾರಿ ನಿಯಮವನ್ನು ರೂಪಿಸುತ್ತಿದ್ದನು. ಒಟ್ಟಾರೆಯಾಗಿ ಪೋರ್ಚುಗೀಸರು ಭಾರತಕ್ಕೆ ಬಂದಾಗ ಅಕ್ಕಿ ಮತ್ತು ಮೆಣಸಿನ ಅಳತೆಗೆ ಹೊಸ ಹೊಸ ವಿಧಾನಗಳನ್ನು ಅಳವಡಿಸಿದರೆಂದು ಹೇಳಬಹುದು. ಹೈದರ್ ಮತ್ತು ಟಿಪ್ಪು ಕಾಲದಲ್ಲಿ ಅದುವರೆಗೂ ಇದ್ದ ತೂಕ ಮತ್ತು ಅಳತೆಯ ಸಾಧನಗಳನ್ನು ಬದಲಾಯಿಸಿದರು. ಟಿಪ್ಪು ಸುಲ್ತಾನನ ಕಾಲದಲ್ಲಿ ಪರಿಚಯಿಸಲ್ಪಟ್ಟ ಮಾಪನವೆಂದರೆ ಭೂ ಅಳತೆಗೆ ಸಂಬಂಧಿಸಿದಂತೆ ಗಜವನ್ನು ಪರಿಚಯಿಸಿದ. ಇದು ೩೮೧/೨ ಇಂಚಿಗೆ ಸಮಾನವಾಗಿತ್ತು. ತೂಕ ಮತ್ತು ಅಳತೆಯ ಮಾಪನಗಳಿಗೆ ಸಂಬಂಧಿಸಿದಂತೆ ಕಂಠೀರಾಯ ಪಗೋಡ ಮತ್ತು ಪಣಂನಲ್ಲಿ ಇಡಲಾಗುತ್ತಿತ್ತು. ೨ ದುಡ್ಡುಗಳು ೦.೯%ಕ್ಕೆ ಹತ್ತಿರವಾಗಿತ್ತು. ಪಣಂನ್ನು ೧/೨ಕ್ಕೆ ೧ ಪಗೋಡದಂತೆ ವಿನಿಮಯ ಮಾಡಿಕೊಳ್ಳಲಾಗುತ್ತಿತ್ತು. ಇಲ್ಲಿ ಕಂಪನಿಯ ಹಣವು ೫.೬ ದುಡ್ಡಿಗೆ ಚಲಾವಣೆಯಾಗುತ್ತಿತ್ತು. (ಮಹಾದೇವಮ್ಮ೨೦೦೮:೮೯) ಅಂದರೆ ಟಿಪ್ಪು ಗಜವನ್ನು ಕಬ್ಬಿಣದ ಸರಪಳಿಯುಕ್ತ ಅಳತೆ ಸಾಧನ ಪರಿಚಯಿಸಿದ್ದು ಭೂಮಾಪನದಲ್ಲಿ ಆಗುವ ಅವ್ಯವಹಾರವನ್ನು ತಡೆಗಟ್ಟಬೇಕೆಂದು ನಿರ್ಧರಿಸಿದ್ದ .ಹಗ್ಗವನ್ನು ಅಳತೆಯ ಮಾಪನವಾಗಿ ಮಾಡಿದರೆ ಅದರಿಂದ ದೋಷವಾಗುವ ಸಾಧ್ಯತೆ ಇದೆ ಎಂದು ಮನಗಂಡು ಕಲ್ಯಾಣದ ಗಜ ಅಳತೆ ಮಾಪನ ಜಾರಿಗೆ ತಂದನು.

ಒಡೆಯರ ಕಾಲ ಮತ್ತು ಟಿಪ್ಪು ಸುಲ್ತಾನನ ಕಾಲವನ್ನು ಗಮನಿಸಿದಾಗ ಅವರ ಅಳತೆಯ ಮಾಪನದಲ್ಲಿ ವ್ಯತ್ಯಾಸಗಳಾಗಿರುವುದು ಕಂಡುಬರುತ್ತದೆ. ಇದುವರೆಗೂ ಅಸ್ತಿತ್ವದಲ್ಲಿದ್ದ ಮರದ ಬಟ್ಟುಗಳ ಬದಲಾಗಿ ಸರ್ಕಾರದ ಮುದ್ರೆ ಇರುವ ಕಬ್ಬಿಣದ ತೂಕಕಲ್ಲು(ಬಟ್ಟುಗಳನ್ನು) ಪರಿಚಯಿಸಿದನು. ಈ ಮೂಲಕ ವ್ಯಾಪಾರದಲ್ಲಿ ಆಗುವ ದೋಷವನ್ನು ನಿವಾರಿಸಲು ಹೊಸ ವಿಧಾನವನ್ನು ಅಳವಡಿಸಿದನು. ವಿಜಯನಗರೋತ್ತರ ಕಾಲದಲ್ಲಿ ವ್ಯಾಪಾರ-ವಾಣಿಜ್ಯ ಕಾಲವಾದ್ದರಿಂದ ತೂಕ ಮತ್ತು ಅಳತೆಯ ಸಾಧನಗಳಲ್ಲಿ ಹೊಸ ಮಾದರಿಗಳು ಪರಿಚಯಿಸಲ್ಪಟ್ಟವೆಂದು ಹೇಳಬಹುದು.

**೫.೫. ಸಾರಿಗೆ-ಸಂಪರ್ಕ**

ಸಾರಿಗೆ ಸಂಪರ್ಕಗಳು ಪ್ರಾಚೀನ ಕಾಲದಿಂದ ಇಂದಿನವರೆಗೂ ಒಂದು ಪ್ರದೇಶದ ಸರ್ವತೋಮುಖ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರ ವಹಿಸಿದ್ದನ್ನು ಗಮನಿಸಬಹುದು. ಸಾರಿಗೆ ಸಂಪರ್ಕಗಳು ಮಾನವ ಜೀವನದ ಅವಿಭಾಜ್ಯ ಅಂಗಗಳಾಗಿವೆ. ಒಂದು ನಾಡಿನ ಬೆಳವಣಿಗೆಯಲ್ಲಿ ಸಾರಿಗೆ ಸಂಪರ್ಕಗಳು ನಿರ್ಣಾಯಕ ಪಾತ್ರವಹಿಸುತ್ತವೆ. ಈ ಸೌಲಭ್ಯಗಳು ಕೇವಲ ಸರಕು ಸಾಮಗ್ರಿಗಳನ್ನು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಸಾಗಿಸಲು ಸಹಾಯಕವಾಗಿದ್ದಲ್ಲದೇ ಸಮಾಚಾರಗಳನ್ನು ಒಯ್ಯಲು ಹಾಗೂ ಸೈನ್ಯವನ್ನು ತನ್ನ ಗಡಿಗಳನ್ನು ಕಾಯುವುದಕ್ಕೆ ಹಾಗೂ

ಸೈನಿಕ ಕಾರ್ಯಾಚರಣೆಯನ್ನು ನಡೆಸಲು ಬಳಸಲಾಗುತ್ತಿತ್ತು. ಮಾನವ ಅಲೆಮಾರಿ ಜೀವನವನ್ನು ತೊರೆದು ಒಂದು ಕಡೆ ನೆಲೆ ನಿಂತಾಗ ತನ್ನ ಅವಶ್ಯಕತೆಗಳ ಪೂರೈಕೆಗೆ ಒಂದೆಡೆಯಿಂದ ಇನ್ನೊಂದೆಡೆಗೆ ಸಂಚರಿಸಲು ಸಂಪರ್ಕ ಕೇಂದ್ರಗಳನ್ನು ಆರಂಭಿಸಿದನು. ಹೀಗೆ ನಾಡಿನ ಅಥವಾ ದೇಶದ ವ್ಯಾಪಾರ ವಾಣಿಜ್ಯದ ಬೆಳವಣಿಗೆಯು ಅಲ್ಲಿನ ಸಾರಿಗೆ ಸಂಪರ್ಕವನ್ನು ಅವಲಂಬಿಸಿರುತ್ತದೆ. ಗ್ರಾಮೀಣ, ನಗರ ಆರ್ಥಿಕ ಚಟುವಟಿಕೆಗಳಾದ ಕೃಷಿ ಕೈಗಾರಿಕೆ, ಕರಕುಶಲ ಕೆಲಸ, ವ್ಯಾಪಾರ, ವಾಣಿಜ್ಯ, ಬ್ಯಾಂಕಿಂಗ್ ವ್ಯವಸ್ಥೆ, ವಾಣಿಜ್ಯ ಸಂಘ ಮತ್ತು ವರ್ತಕರು ಬೆಳವಣಿಗೆಯಾಗಬೇಕಾದರೆ ಉತ್ತಮವಾದ ಸಾರಿಗೆ ಸಂಪರ್ಕಗಳು ಅವಶ್ಯಕ. ಸಾರಿಗೆ ಸಂಪರ್ಕಗಳು ಮಾನವನ ಉಗಮದೊಂದಿಗೆ ಆರಂಭವಾಗಿವೆ. ಆದರೆ ಅವುಗಳ ಸ್ವರೂಪದಲ್ಲಿ ಭಿನ್ನತೆಗಳಿರಬಹುದು. ಜನರು ತಮ್ಮ ಅವಶ್ಯಕ ಉತ್ಪನ್ನಗಳ ಹೆಚ್ಚುವರಿ ಉತ್ಪಾದನೆಯಿಂದ ಸೀಮಿತ ಪ್ರದೇಶದಲ್ಲಿ ತಮ್ಮ ವ್ಯಾಪಾರ ಆರಂಭವಾಗಿ ನಂತರ ವಿಸ್ತರಿಸಲ್ಪಟ್ಟು ರಸ್ತೆ ಮಾರ್ಗಗಳು ಉಗಮವಾಗಿರಬಹುದು. ಮನುಷ್ಯ ಅಲೆಮಾರಿ ಜೀವನ ಬಿಟ್ಟು ಒಂದೆಡೆ ನೆಲೆ ನಿಂತಾಗಿನಿಂದ ತನ್ನ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಒಂದೆಡೆಯಿಂದ ಇನ್ನೊಂದೆಡೆಗೆ ಚಲಿಸಿ ಕೆಲವು ಸಂಪರ್ಕ ಕೇಂದ್ರಗಳನ್ನು ಕಂಡುಕೊಂಡಿದ್ದನ್ನು ಬೃಹತ್ ಶಿಲಾಯುಗದಿಂದಲೂ ಗಮನಿಸಬಹುದು. ಇದಕ್ಕೆ ಸಾಕ್ಷಿಯಾಗಿ ಇಂದಿನ ಕೆಲವು ಹೆದ್ದಾರಿಗಳು ಬೃಹತ್ ಶಿಲಾಯುಗದ ನೆಲೆಗಳ ಮುಖಾಂತರ ಹಾದು ಹೋಗಿರುವುದನ್ನು ಗಮನಿಸಬಹುದು. ಸಾರಿಗೆ ಸಂಪರ್ಕಗಳ ಅಭಿವೃದ್ಧಿಯನ್ನು ಅಂದಿನ ರಾಜರು. ವರ್ತಕ ಸಮುದಾಯದವರು ನಿರ್ಮಿಸಿರುವುದು ಮತ್ತು ಜೀರ್ಣೋದ್ಧಾರ ಮಾಡಿರುವುದು ಶಾಸನ, ಹಸ್ತಪ್ರತಿ, ಸಾಹಿತ್ಯ ಕೃತಿ ಮತ್ತು ಪ್ರವಾಸಿಗರ ಬರಹಗಳಿಂದ ತಿಳಿಯಬಹುದು. ಚೀನಾದ ಯಾತ್ರಿಕ ಫಾಹಿಯಾನ್ ಪ್ರಕಾರ ದಕ್ಷಿಣ ಭಾರತದ ವ್ಯಾಪಾರ ಮಾರ್ಗವು ಬಹಳ ಕಷ್ಟದಾಯಕವಾಗಿತ್ತು ಎಂದು ತಿಳಿಸಿದ್ದಾನೆ. ಕ್ರಿ.ಶ. ೭ನೇ ಶತಮಾನದಲ್ಲಿ ಭಾರತಕ್ಕೆ ಭೇಟಿ ಕೊಟ್ಟ ಮತ್ತೋರ್ವ ಚೀನಾ ಯಾತ್ರಿಕ ಹೂಯೆನ್‌ತ್ಸಾಂಗ್ ಕೂಡ ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸಿ ದಾರಿಕಳ್ಳರು, ಅರಣ್ಯಗಳು ಯಾತ್ರಾರ್ಥಿಗಳ ಚಲನವಲನಗಳಿಗೆ ಮತ್ತು ವ್ಯಾಪಾರ ಬೆಳವಣಿಗೆಗೆ ಅಡ್ಡಿಯುಂಟು ಮಾಡುತ್ತಿದ್ದರೆಂದು ಹೇಳಿದ್ದಾನೆ.

ಅಪ್ಪಾದೊರೈಯವರು ದಕ್ಷಿಣ ಭಾರತದಲ್ಲಿ ಕರ್ನಾಟಕ ಸೇರಿದಂತೆ ರಸ್ತೆ ಸಂಪರ್ಕಗಳಿದ್ದು, ಅವುಗಳನ್ನು ಅಂದಿನ ರಾಜರು ನಿರ್ಮಿಸುತ್ತಿದ್ದರು. ರಾಜಪಥಗಳು ಅಸ್ತಿತ್ವದಲ್ಲಿದ್ದುದನ್ನು ಹಾಗೂ ಅವುಗಳ ಉದ್ದ ಹಾಗೂ ಅಗಲ ಇತ್ಯಾದಿ ವಿವರಗಳನ್ನು ನೀಡಿರುವುದಲ್ಲದೇ ರಸ್ತೆಗಳಲ್ಲಿ ವಿಶ್ರಾಂತಿ ಗೃಹಗಳಿದ್ದುದನ್ನು ತಿಳಿಸಿದ್ದಾರೆ. ಅವರ ಪ್ರಕಾರ ದೂರದ ವ್ಯಾಪಾರಕ್ಕಾಗಿ ಸಾಕು ಪ್ರಾಣಿಗಳನ್ನು ಹಾಗೂ ಎತ್ತಿನ ಗಾಡಿಗಳನ್ನು ಹೆಚ್ಚಾಗಿ ಬಳಸಲಾಗುತ್ತಿತ್ತು(ಚಂದ್ರಶೇಖರ್,ರಾವ್(ಶಿ)೨೦೧೬:೬೭). ಹೀಗೆ ಕರ್ನಾಟಕದ ವ್ಯಾಪಾರ ವಾಣಿಜ್ಯದಲ್ಲಿ ಸರಕುಗಳನ್ನು ಸಾಗಿಸಲು ಈ ರೀತಿಯ ಸಲಕರಣೆಗಳನ್ನು ಸಾಗಿಸುತ್ತಿದ್ದರು. ಗುರುರಾಜಾಚಾರ್ ಅವರು ಕರ್ನಾಟಕದ ವರ್ತಕರು ಸಮುದ್ರಮಾರ್ಗದ ಮೂಲಕ ವಿದೇಶೀಯ ವ್ಯಾಪಾರವನ್ನು ಬೆಲೆ ಬಾಳುವ ವಸ್ತುಗಳ ಮೂಲಕ ವ್ಯಾಪಾರ ಮಾಡುತ್ತಿದ್ದರು. ವಿವಿಧ ರೀತಿಯ ರಸ್ತೆಗಳಿದ್ದುದನ್ನು ಅದರಲ್ಲೂ ಪ್ರಮುಖವಾಗಿ ಬಂಡಿ ದಾರಿ ಮತ್ತು ಹೆದ್ದಾರಿಗಳಿದ್ದು

ಅವು ಅಂದಿನ ರಾಜಧಾನಿಗಳೊಡನೆ ಸಂಪರ್ಕ ಹೊಂದಿದ್ದನ್ನು ತಿಳಿಸಿದ್ದಾರೆ(ಗುರುರಾಜಾಚಾರ್‌೧೯೭೪: ೧೨೬-೧೨೭).

ವಿದೇಶೀಯ ವ್ಯಾಪಾರವು ಮುಖ್ಯವಾಗಿ ಜಲಮಾರ್ಗಗಳ ಮೂಲಕ ನಡೆಯುತ್ತಿತ್ತು. ಭೂಮಾರ್ಗಗಳಲ್ಲಿ ಮೂಲಕವೂ ನಡೆಸುತ್ತಿದ್ದರು. ಸರಕುಗಳನ್ನು ಒಂದು ಕಡೆಯಿಂದ ಇನ್ನೊಂದು ಕಡೆಗೆ ಸಾಗಿಸಲು ಎತ್ತು, ಕತ್ತೆ, ಕೋಣ, ಕುದುರೆ ಮುಂತಾದ ಪ್ರಾಣಿಗಳ ಮೇಲೆ ಸಾಮಾನುಗಳನ್ನು ಹೇರಿ ಸಾಗಿಸುತ್ತಿದ್ದುದನ್ನು ಹಲವಾರು ಶಾಸನಗಳು ತಿಳಿಸುತ್ತವೆ. ಹಸುಬೆಯ ಚೀಲದ ವರ್ಣನೆಯು ಕ್ರಿ.ಶ. ೧೧೨೩ರ ಚಿತ್ರದುರ್ಗ ಜಿಲ್ಲೆಯ ಶಾಸನವೊಂದರಿಂದ ತಿಳಿದುಬಂದಿದೆ(ಎ.ಕ.೧೧,ಚಿ:೩೪). ವಿಜಯನಗರಪೂರ್ವ ಹೊಯ್ಸಳರ ಕಾಲಾವಧಿಯ ವೇಳೆಗೆ ಪ್ರಮುಖ ಸ್ಥಳಗಳು ರಸ್ತೆಗಳ ಮೂಲಕ ಸಂಪರ್ಕ ಹೊಂದಿದ್ದು, ಆಡಳಿತ ಹಾಗೂ ಯಾತ್ರಾ ಸ್ಥಳಗಳು ಹೆದ್ದಾರಿಗಳಿಂದ ಜೋಡಣೆಗೊಂಡಿರುವುದು ಸ್ಪಷ್ಟವಾಗುತ್ತದೆ. ಮುಂದುವರಿದಂತೆ ಕೆಲವು ಹೆದ್ದಾರಿಗಳು ಪಶ್ಚಿಮಘಟ್ಟದ ಪರ್ವತಶ್ರೇಣಿಗಳ ಮೂಲಕ ಹಾದುಹೋಗಿದ್ದು, ಕರಾವಳಿ, ಒಳನಾಡು ಹಾಗೂ ಪ್ರಸ್ಥಭೂಮಿಯ ನಡುವೆ ಸಂಪರ್ಕ ಹೊಂದಿತ್ತು. (ಚಂದ್ರಶೇಖರ್,ರಾವ್ ೨೦೧೬:೬೯) ಈ ಮೂಲಕ ಪ್ರಾಗೈತಿಹಾಸಿಕ ಕಾಲದಿಂದ ವಸಾಹತು ಕಾಲಘಟ್ಟದವರೆಗೂ ಅನೇಕ ರಸ್ತೆಗಳು ನಿರ್ಮಿಸಲ್ಪಟ್ಟವು. ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಸರಕುಗಳನ್ನು ಸಾಗಿಸುವ ಮಾಧ್ಯಮವಾಗಿ ಪ್ರಾಣಿಗಳು ಪ್ರಮುಖ ಪಾತ್ರ ವಹಿಸುತ್ತಿದ್ದವು. ವರ್ತಕರು ವ್ಯಾಪಾರವನ್ನು ಅಭಿವೃದ್ಧಿಗೊಳಿಸುವುದಕ್ಕಾಗಿ ಸರಕುಗಳನ್ನು ಸಾಗಿಸುವುದಕ್ಕಾಗಿ ಕಾಲುನಡಿಗೆಯ ಮಾರ್ಗಗಳನ್ನೇ ಬಂಡಿ ಮಾರ್ಗಗಳಾಗಿ ಅಭಿವೃದ್ಧಿಗೊಳಿಸಿದರು.

ಮೋತಿಚಂದ್ರ ಅವರು ದಕ್ಷಿಣ ಭಾರತದ ವ್ಯಾಪಾರಿ ಮಾರ್ಗಗಳು ನದಿಗಳ ಸಂಗಡ ಸಾಗುತ್ತವೆಂದು ಹೇಳಿ ಐದು ಪ್ರಮುಖ ಮಾರ್ಗಗಳನ್ನು ಗುರುತಿಸಿದ್ದಾರೆ. ಮಚಲೀಪಟ್ಟಣದಿಂದ ರೇಲ್ವೆದೊಡನೆ ಹೋಗುವ ಮಾರ್ಗ, ಎರಡನೆಯ ಮಾರ್ಗ ಪುಣೆಯಿಂದ ಕಾಂಜೀವರಕ್ಕೆ ಹೋಗುವ ಮಾರ್ಗ, ಮೂರನೆಯದು ಗೋವೆಯಿಂದ ತಂಜಾವೂರು ನೇಗಾ ಪಟ್ಟಣಗಳಿಗೆ ಹೋಗುವ ಮಾರ್ಗ. ಈ ಮಾರ್ಗಗಳು ಅತ್ಯಂತ ಮಹತ್ವದಾಗಿವೆ. ಪುಣೆ, ಮಚಲೀಪಟ್ಟಣ, ಗೋವಾ, ನಾಗಪಟ್ಟಣ, ತಂಜಾವೂರುಗಳು ಆಧುನಿಕ ಹೆದ್ದಾರಿಗಳನ್ನು ಸಂಪರ್ಕಿಸುವ ಮಾರ್ಗಗಳಾಗಿವೆ. ಈ ಮಾರ್ಗಗಳು ವ್ಯಾಪಾರದಲ್ಲಿ ಪ್ರಮುಖವಾಗಿ ಗುರುತಿಸಿಕೊಂಡಿವೆ. ಇದರಲ್ಲಿ ಮೂರನೇ ಮಾರ್ಗವಾದ ಮಹಾರಾಷ್ಟ್ರದ ದಕ್ಷಿಣ ತುದಿಯಿಂದ ಹೊರಟು ಕೃಷ್ಣಾ, ತುಂಗಭದ್ರೆಯ ನಡುವಿನಿಂದ ಇಲ್ಲವೇ ತುಂಗಭದ್ರೆಯನ್ನು ವಿಜಯನಗರದಲ್ಲಿ ದಾಟಿ ನೈರುತ್ಯದತ್ತ ಮುಂದೆ ಸಾಗಿ ಹರಿಹರದಲ್ಲಿ ತುಂಗಾನದಿಯನ್ನು ದಾಟಿ ಮೈಸೂರಿನಲ್ಲಿ ಕಾವೇರಿ ಜೊತೆ ಮುಂದುವರೆಯುತ್ತದೆ. ಈ ಮೂಲಕವಾಗಿ ಮುಂದುವರಿದು ತಮಿಳುನಾಡು ಮಧುರೆಯನ್ನು ತಲುಪುವ ಮಾರ್ಗವಾಗಿರಬಹುದು. ವಿಜಯನಗರದ ಅರಸರ ಕಾಲದಲ್ಲಿ ಭಾರತಕ್ಕೆ ಭೇಟಿ ಕೊಟ್ಟ ವರ್ತಕ ನಿಕೋಲೋ-ಡಿ-ಕಾಂಟಿ ವಿಜಯನಗರದ ೨ನೇ ದೇವರಾಯನ ಕಾಲದಲ್ಲಿ ಭಾರತದ ಕ್ಯಾಂಬೆಗೆ ಬಂದು ಅಲ್ಲಿಂದ ವಿಜಯನಗರ, ಪೆನುಗೊಂಡ, ಉದಯಗಿರಿ, ಚಂದ್ರಗಿರಿ ಮುಂತಾದ ಪ್ರದೇಶಗಳ ಮೂಲಕ ಬಂದನೆಂದು ತಿಳಿಸಿದ್ದಾನೆ. ಅಂದರೆ ಈ ಮಾರ್ಗವು ಸಹ ಪ್ರಮುಖ ವ್ಯಾಪಾರಿ ಮಾರ್ಗವಾಗಿರಬಹುದೆಂದು ಊಹಿಸಬಹುದು.

ಸಲಾಬತ್ ಜಂಗನು ಹಾಗಲವಾಡಿಯ ಕೆರೆಯ ಬಳಿ ಇಳಿದುಕೊಂಡು ತಮ್ಮ ಗಾಡಿಗಳಿಗೆ ಕಟ್ಟುವುದಕ್ಕೆ ಐವತ್ತು ಜೊತೆ ಎತ್ತುಗಳನ್ನು ಕಳುಹಿಸಬೇಕೆಂದು ಹೇಳಿಕೊಳ್ಳುವನು(ಶ್ಯಾಮಲ ೨೦೧೭:೪೯೧). ಒಳ್ಳೆಯ ಎತ್ತು ಮತ್ತು ಬಂಡಿ ಇಲ್ಲದ ಕೃಷಿಕರ ಆರಂಭ ವ್ಯರ್ಥವೆಂದು ಸರ್ವಜ್ಞ ಹೇಳಿದ್ದಾನೆ. ಬಂಡಿ ಒಂದು ಉತ್ತಮ ಸಂಚಾರಿ ವಾಹನ ಮತ್ತು ಹೇರು ಹೋರುವ ಸಾಧನ. ಚಕ್ಕಡಿ ಅಥವಾ ಬಂಡಿ ಪ್ರಾಚೀನ ಕಾಲದಿಂದಲೂ ಜನಸಾಮಾನ್ಯರ ಪ್ರಯಾಣದ ಮತ್ತು ಸರಕು ಸಾಗಿಸುವ ಬಹುಮುಖ್ಯ ಸಾಧನವಾಗಿತ್ತು. ವಿದೇಶೀಯರ ಬರವಣಿಗೆಯಲ್ಲಿ ಸಂಚಾರಿ ಮಾರ್ಗಗಳನ್ನು ಕುರಿತಂತೆ ಪ್ರತಿಷ್ಠಿತ ವ್ಯಕ್ತಿಗಳಿಗೆ ಪಲ್ಲಕ್ಕಿಯನ್ನು ಇಟ್ಟುಕೊಳ್ಳಲು ಪಲ್ಲಕ್ಕಿ ಉಂಬಳಿಯನ್ನು ಸರ್ಕಾರ ಕೊಡುತ್ತಿತ್ತು. ಈ ಉಲ್ಲೇಖಗಳು ವಿದೇಶೀಯ ಪ್ರವಾಸಿಗರು ಭಾರತಕ್ಕೆ ಬಂದಾಗ ಅವರನ್ನು ಒಂದು ಸ್ಥಳದಿಂದ ಬೇರೊಂದು ಸ್ಥಳಕ್ಕೆ ಹೋಗುವಾಗ ಪಲ್ಲಕ್ಕಿಯಲ್ಲಿ ಕರೆದೊಯ್ಯುತ್ತಿದ್ದರೆಂಬ ಉಲ್ಲೇಖಗಳು ದೊರೆಯುತ್ತವೆ. ಈ ಪಲ್ಲಕ್ಕಿಯಲ್ಲಿ ಪ್ರವಾಸಿಗ ಕುಳಿತಾಗ ಅವನನ್ನು ಯಾವ ಜನಾಂಗದವರು ಹೊರುತ್ತಿದ್ದರೆಂಬ ಸ್ಪಷ್ಟ ಉಲ್ಲೇಖ ಇಲ್ಲವಾದರೂ ಶ್ಯಾಮಲ ಸಿ.ಆರ್. ಅವರ ಕೃತಿಯಲ್ಲಿ ಬೋಯಿಗಳೆಂಬ ಜಾತಿಯವರು ಪಲ್ಲಕ್ಕಿಯನ್ನು ಹೊರುತ್ತಿದ್ದರೆಂದು ಹೇಳಲಾಗಿದೆ.

ವ್ಯಾಪಾರದಲ್ಲಿ ಭೂಮಾರ್ಗ ಮತ್ತು ಜಲಮಾರ್ಗಗಳೆಂಬ ಎರಡು ವಿಧಗಳಲ್ಲಿ ಗುರುತಿಸುತ್ತೇವೆ. ಭೂಮಾರ್ಗಗಳಲ್ಲಿ ಎತ್ತಿನ ಬಂಡಿ ಮತ್ತು ಪ್ರಾಣಿಗಳ ಮೂಲಕ ವ್ಯಾಪಾರ ನಡೆಯುತ್ತಿತ್ತು. ಜಲಮಾರ್ಗಗಳಲ್ಲಿ ಎರಡು ರೀತಿಗಳಿದ್ದವು. ಅವುಗಳೆಂದರೆ ಮೊದಲನೆಯದು ಸಣ್ಣ ಹಳ್ಳಗಳನ್ನು ದಾಟುವುದು ಹಾಗೂ ಎರಡನೆಯದು ದೊಡ್ಡ ನದಿಗಳನ್ನು ದಾಟುವ ಮಾರ್ಗಗಳನ್ನು ಕಡಹುಗಳೆಂದು ಕರೆಯಲಾಗುತ್ತಿತ್ತು. ಒಂದು ಕಡೆಯಿಂದ ಇನ್ನೊಂದು ಕಡೆ ದೋಣಿಗಳಲ್ಲಿ ಸಾಮಾನುಗಳನ್ನು ಸಾಗಿಸುತ್ತಿದ್ದರು. ಸಮುದ್ರದಲ್ಲಿ ದೊಡ್ಡ ಹಡಗುಗಳಲ್ಲಿ ಸಾಗಿಸುತ್ತಿದ್ದರು. ಬಹುತೇಕ ಹೆದ್ದಾರಿ ಹಾಗೂ ರಸ್ತೆಗಳು ವಿಶ್ರಾಂತಿ ಗೃಹಗಳು ಅಥವಾ ಅರವಟ್ಟಿಗೆಗಳನ್ನು ಹೊಂದಿದ್ದು ಅವುಗಳಲ್ಲಿ ವ್ಯಾಪಾರಿಗಳು ಹಾಗೂ ಪ್ರವಾಸಿಗರು ವಿಶ್ರಾಂತಿಗಾಗಿ ತಂಗುತ್ತಿದ್ದರು. ಇವೆಲ್ಲವೂ ಶ್ರೀಮಂತ ವ್ಯಾಪಾರಿಗಳು ಅಥವಾ ರಾಜ್ಯ ಮತ್ತು ಅದರ ಪ್ರಾತಿನಿಧಿಕ ಸಂಸ್ಥೆಗಳ ಮೂಲಕ ದಾನದತ್ತಿಗಳನ್ನು ಪಡೆದಿರುತ್ತಿದ್ದವುಗಳಾಗಿವೆ.

ವ್ಯಾಪಾರವು ವ್ಯಾಪಾರಿ ಮಾರ್ಗಗಳ ಅಭಿವೃದ್ಧಿಗೆ ಉತ್ತೇಜಕ ಅಂಶವಾಗಿದೆ. ಕರ್ನಾಟಕವು ತನ್ನ ನೆರೆಹೊರೆಯ ಪ್ರದೇಶಗಳಾದ ಚೋಳ ಮತ್ತು ಚೇರ ರಾಷ್ಟ್ರಗಳೊಂದಿಗೆ ವ್ಯಾಪಾರ ಸಂಪರ್ಕವನ್ನು ಹೊಂದಿತ್ತು. ಕಾವೇರಿಯ ಉಪನದಿಗಳಾದ ಸ್ವರ್ಣಾವತಿ ಮತ್ತು ಕಪಿಲಾ ಕಣಿವೆಗಳು ಕೇರಳ ಮತ್ತು ದಕ್ಷಿಣ ಕರ್ನಾಟಕದ ನಡುವೆ ಉತ್ತಮ ವ್ಯಾಪಾರಿ ಮಾರ್ಗಗಳಾಗಿ ಬಳಕೆಯಾಗುತ್ತಿದ್ದವು. ಅದೇ ರೀತಿ ಕೊಯಮತ್ತೂರು ಜಿಲ್ಲೆ ಮತ್ತು ಕರ್ನಾಟಕವನ್ನು ಸಂಧಿಸುವ ಹೊಯ್ಸಳ ರಾಜ್ಯವು ಮಧ್ಯಭಾರತದೊಡನೆ ಸಂಪರ್ಕ ಹೊಂದಿದ್ದು, ಅದು ಹಿರಿಯೂರಿನಿಂದ ಪಂಡರಾಪುರ, ಬಿಜಾಪುರದಿಂದ ಹರಿಹರ ಮಾರ್ಗವಾಗಿ ಬಳಿಕ ಬಾಣಾಮವ ಮತ್ತು ಹಳೇಬೀಡನ್ನು ಹಾದುಹೋಗಿತ್ತು. ಪೂರ್ವದ ಮತ್ತೊಂದು ರಸ್ತೆಯು ದೋರಸಮುದ್ರದಿಂದ ಕಣ್ಣಾನೂರು ಮತ್ತು ಶ್ರೀರಂಗಂ ಮುಖಾಂತರ ಬಾಣಾವರ ಚಿಕ್ಕನಾಯಕನಹಳ್ಳಿ ತುಮಕೂರು ಬೆಂಗಳೂರು ಹೊಸೂರು ಮತ್ತು ನಾಮಕ್ಕಲ್ ಸಂಧಿಸುವ ಹೆದ್ದಾರಿಯಾಗಿ ಅಸ್ತಿತ್ವದಲ್ಲಿದ್ದವು(ಚಂದ್ರಶೇಖರ್,ರಾವ್,೨೦೧೬:೭೦).

ಮಸ್ಕತ್, ಆರ್ಮುಜ್, ಏಡನ್, ಬಾಸ್ರಾ, ಬುಷ್ಪೇರ್ ಮತ್ತು ಜೆಡ್ಡಾಗಳೊಂದಿಗೆ ಮೈಸೂರು ಸಂಸ್ಥಾನವು ವಿದೇಶಿಯ ವ್ಯಾಪಾರದಲ್ಲಿ ಸಂಪರ್ಕವನ್ನು ಹೊಂದಿತ್ತು. ಟಿಪ್ಪು ಸುಲ್ತಾನನ ಪ್ರತಿನಿಧಿಯಾಗಿ ಬಾಸ್ರಾದಲ್ಲಿ ಅಬ್ದುಲ್ಲಾ ಎಂಬ ಅಧಿಕಾರಿ ಇದ್ದನು. ವಿದೇಶೀಯ ವ್ಯಾಪಾರದ ಸಂಬಂಧವನ್ನು ಮತ್ತು ವಿದೇಶೀಯ ವ್ಯಾಪಾರವು ಕರ್ನಾಟಕದ ಕರಾವಳಿಯ ಭಾಗಗಳಲ್ಲಿ ಕರ್ನಾಟಕದಲ್ಲಿ ಬೆಳೆಯುವ ಸಂಬಾರ ಪದಾರ್ಥಗಳು ಹಕ್ಕಿ, ಹತ್ತಿ ಮೊದಲಾದವುಗಳನ್ನು ವಿದೇಶಕ್ಕೆ ಜಲಮಾರ್ಗಗಳ ಮೂಲಕ ಹಡಗುಗಳಲ್ಲಿ ಸಾಗಿಸುತ್ತಿದ್ದರು. ಭಾರತೀಯ ಪದಾರ್ಥಗಳಿಗೆ ಯುರೋಪಿನಲ್ಲಿ ಬಾರಿ ಬೇಡಿಕೆಯಿದ್ದ ಕಾರಣ ಈ ಸರಕುಗಳನ್ನು ವಿದೇಶಕ್ಕೆ ಕೊಂಡೊಯ್ಯುತ್ತಿದ್ದರು.

ಭಾರತದ ಕರಾವಳಿ ಭಾಗಕ್ಕೆ ಅನೇಕ ಯುರೋಪಿಯನ್ನರು ಬಂದು ಒಂದೊಂದು ಕಡೆ ನೆಲೆಯೂರಿ ವಿದೇಶಿಯ ವ್ಯಾಪಾರದ ಸಂಪರ್ಕವನ್ನು ಇರಿಸಿಕೊಂಡಿದ್ದರು. ೧೭ನೇ ಶತಮಾನದಲ್ಲಿ ಕೈಗಾರೀಕರಣ ಮತ್ತು ವಿಜ್ಞಾನ-ತಂತ್ರಜ್ಞಾನದ ಆವಿಷ್ಕಾರಗಳು. ಸಾರಿಗೆ ವ್ಯವಸ್ಥೆಯಲ್ಲಿ ಪ್ರಮುಖ ಬದಲಾವಣೆಯನ್ನು ತಂದವು. ಇಡೀ ವಿಶ್ವದಲ್ಲಿಯೇ ರಾಜಕೀಯ, ಆರ್ಥಿಕ, ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಬದಲಾವಣೆಯ ಅಲೆಯನ್ನು ಎಬ್ಬಿಸಿತು. ಇದರ ಬೆನ್ನಲ್ಲೇ ವಾಣಿಜ್ಯ-ವ್ಯಾಪಾರದಲ್ಲಿಯೂ ವಸಾಹತು ಕಾಲಘಟ್ಟದಲ್ಲಿ ಹೊಸ ಅಧ್ಯಯನ ಅವಧಿಯೆಂದೇ ಹೇಳಬಹುದು. ಹಾಗೆಯೇ ಸಾರಿಗೆ ಸಂಪರ್ಕಗಳು ಅಲ್ಲಿನ ಭೌಗೋಳಿಕ ಅಂಶಗಳ ಮೇಲೆ ಪ್ರಭಾವ ಬೀರಿರುತ್ತವೆ. ಕಾರಣ ಆಧುನಿಕ ಸಂದರ್ಭದಲ್ಲಿಯೂ ದಟ್ಟ ಕಾಡುಗಳು ಇರುವ ಕಡೆ ಸಂಪರ್ಕಗಳನ್ನು ಕಲ್ಪಿಸಲಾಗಿಲ್ಲ, ಆದರೆ ಆಧುನಿಕ ಸಂದರ್ಭದಲ್ಲಿ ಹಲವಾರು ತಂತ್ರಜ್ಞಾನಗಳನ್ನು ಬಳಸಿ ಒಂದು ಕಡೆಯಿಂದ ಇನ್ನೊಂದು ಕಡೆಗೆ ಸಂಪರ್ಕ ಕಲ್ಪಿಸುತ್ತಿರುವುದನ್ನು ಗಮನಿಸಬಹುದು.

ಕರ್ನಾಟಕದ ಕರಾವಳಿ ಭಾಗದಲ್ಲಿ ಯುರೋಪಿಯನ್ನರ ಆಗಮನಕ್ಕಿಂತ ಪೂರ್ವದಲ್ಲಿ ಮುಸ್ಲಿಂ ವರ್ತಕರು ವ್ಯಾಪಾರ ವಾಣಿಜ್ಯದಲ್ಲಿ ಗುರುತಿಸಿಕೊಂಡಿದ್ದರು. ಭಾರತಕ್ಕೆ ಪೋರ್ಚುಗೀಸರು ಬರುವ ಪೂರ್ವದಲ್ಲಿ ಅರಬ್ಬರು ವ್ಯಾಪಾರ ವಾಣಿಜ್ಯದಲ್ಲಿ ಗುರುತಿಸಿಕೊಂಡಿದ್ದರು. ಪ್ರಮುಖ ವ್ಯಾಪಾರಿ ಮಾರ್ಗಗಳು ಪಶ್ಚಿಮ ಕರಾವಳಿಯ ಪ್ರಮುಖ ಪಟ್ಟಣಗಳಾದ ಹೊನ್ನಾವರ, ಭಟ್ಕಳದೊಂದಿಗೆ ಸಂಪರ್ಕ ಹೊಂದಿದ್ದವು. ವಿಜಯನಗರದಿಂದ ಭಟ್ಕಳಕ್ಕೆ ವಿವಿಧ ಸರಕುಗಳನ್ನು ಒಯ್ಯುತ್ತಿದ್ದುದನ್ನು ಪಯಸ್ ಹೇಳುತ್ತಾನೆ(ಷೇಕ್‌ಅಲಿ,೨೦೧೮:೨೯೦).

ವಿಜಯನಗರ ಕಾಲದಲ್ಲಿದ್ದಂತಹ ರಸ್ತೆಗಳು ವಿಜಯನಗರೋತ್ತರ ಕಾಲದಲ್ಲಿಯೂ ಮುಂದುವರಿದವು. ವಿಜಯನಗರದಿಂದ ಬಂಕಾಪುರದ ಮೂಲಕ ಗೋವಾಕ್ಕೆ ಹೋಗುವ ರಸ್ತೆಯಿತ್ತು. ಇನ್ನೊಂದು ಬಂಕಾಪುರದಿಂದ ಹೊನ್ನಾವರಕ್ಕೆ ಹೋಗುತ್ತಿತ್ತು. ವಿಜಯನಗರದಿಂದ ಮೈಲಾಪುರಕ್ಕೆ ಪೆನುಗೊಂಡ, ಚಂದ್ರಗಿರಿ, ತಿರುಪತಿ, ಮತ್ತು ಪುಲಿಕಾಟ್‌ಗಳ ಮೂಲಕ ಹಾದುಹೋಗುವ ಮಾರ್ಗವಿದ್ದಂತೆ ತೋರುತ್ತದೆ. ಆದರೆ ೧೫೬೫ರ ನಂತರ ಪ್ರಮುಖ ವ್ಯಾಪಾರಿ ಕೇಂದ್ರವಾಗಿ ಗುರುತಿಸಿಕೊಂಡ ವಿಜಯನಗರದ ವ್ಯಾಪಾರವು ಒಂದು ಕಡೆ ಕ್ಷೀಣಿಸಿತ್ತೆಂದು ಹೇಳಬಹುದು. ಇದಕ್ಕೆ ಕಾರಣಗಳೆಂದರೆ ಈ ಕಾಲಘಟ್ಟದಲ್ಲಿ ಪ್ರಮುಖ ವ್ಯಾಪಾರಿ ಕೇಂದ್ರವಾಗಿ ಗುರುತಿಸಿಕೊಂಡ

ವಿಜಯನಗರವು ತಾಳಿಕೋಟೆ ಯುದ್ಧದ ನಂತರ ವ್ಯಾಪಾರದಲ್ಲಿ ಮಹತ್ತರವಾದ ಬದಲಾವಣೆಗೆ ಒಳಪಟ್ಟ ಕಾಲವೆಂದು ಪರಿಗಣಿಸಬೇಕಾಗುತ್ತದೆ. ಆರ್ಥಿಕತೆ ಮತ್ತು ಸಮಾಜದ ಮೇಲೆ ಈ ಯುದ್ಧ ಮಹತ್ತರವಾದ ಪರಿಣಾಮವನ್ನು ಬೀರಲಾರಂಭಿಸಿತು. ವಿಜಯನಗರ ಕೇಂದ್ರದಿಂದ ಸಂಪೂರ್ಣ ವಿದೇಶೀಯ ವ್ಯಾಪಾರವು ತಟಸ್ಥವಾದ ಅಂಶವನ್ನು ಇಲ್ಲಿ ಗಮನಿಸಬಹುದು.

೧೬ನೇ ಶತಮಾನದಲ್ಲಿ ವಿಜಯನಗರಕ್ಕೆ ಬಂದ ಇಬ್ನಾಬತೂತ ಇಲ್ಲಿ ಯಾವುದೇ ರಸ್ತೆ ಮಾರ್ಗಗಳಿರಲಿಲ್ಲ. ವ್ಯಾಪಾರಿಗಳು ನೀಡಿದ ಸರಕುಗಳನ್ನು ಒಂದು ಕಡೆಯಿಂದ ಇನ್ನೊಂದು ಕಡೆಗೆ ಸಾಗಿಸಲು ಪುರುಷರನ್ನು ಬಳಸಿಕೊಳ್ಳುತ್ತಿದ್ದರೆಂದು ಹೇಳುತ್ತಾರೆ. ಆದರೆ ಇದು ಸತ್ಯಕ್ಕೆ ದೂರವಾದ ಮಾತೆಂದು ಹೇಳಬಹುದು. ಕಾರಣ ಪ್ರಾಚೀನ ಕಾಲದಿಂದಲೂ ಸರಕುಗಳನ್ನು ಒಂದು ಕಡೆಯಿಂದ ಇನ್ನೊಂದು ಕಡೆಗೆ ಸಾಗಿಸಲು ಪ್ರಾಣಿಗಳನ್ನು ಬಳಸಿಕೊಂಡಿರುವುದು ದಾಖಲೆಗಳಲ್ಲಿ ದೊರೆಯುತ್ತದೆ.

ಮೈಸೂರು ರಾಜ್ಯದಲ್ಲಿ ರಾಜರು ರಸ್ತೆಯ ಬದಿಗಳಲ್ಲಿ ವಿಶ್ರಾಂತಿಗೃಹಗಳನ್ನು ನಿರ್ಮಿಸುವ ಮೂಲಕ ವ್ಯಾಪಾರಿಗಳಿಗೆ ಅನುಕೂಲ ಮಾಡಿಕೊಟ್ಟಿದ್ದರು. ರಾಜಧಾನಿಯ ರಸ್ತೆಗಳ ವಿಸ್ತರಣೆಯಿಂದಾಗಿ ರಾಜ್ಯದ ವಿವಿಧ ವ್ಯಾಪಾರಿ ಕೇಂದ್ರಗಳು ಮತ್ತು ನಗರಗಳೊಂದಿಗೆ ಸಂಪರ್ಕ ಪಡೆಯಿತು.

೧. ಶ್ರೀರಂಗಪಟ್ಟಣದಿಂದ ಗುಂಡ್ಲುಪೇಟೆ ಮತ್ತು ಕೊಯಮತ್ತೂರು ದಕ್ಷಿಣ ಮೈಸೂರಿನ ವ್ಯಾಪಾರಿ ಕೇಂದ್ರಗಳಾದ ಪಾಲುಕಾಡಪೇಟೆ, ಕೊಡುವೈಪೇಟೆ, ಕೊಲ್ಲಂಗುಡುಪೇಟೆ, ಸೆರ್ವಾಪೇಟೆ ಇತ್ಯಾದಿ ಕೇಂದ್ರಗಳನ್ನು ಸಂಪರ್ಕಿಸುವ ರಸ್ತೆ.

೨. ವಿಜಯನಗರದಿಂದ ಶಿವನಸಮುದ್ರ ಮತ್ತು ಶ್ರೀರಂಗಪಟ್ಟಣದ ನಡುವಿನ ರಸ್ತೆ.

೩. ಪೂರ್ವದಲ್ಲಿ ಸೇಲಂನಿಂದ, ಪಶ್ಚಿಮದಲ್ಲಿ ಸಕ್ಕರೆ ಪಟ್ಟಣ ಮತ್ತು ಉತ್ತರದಲ್ಲಿ ಚಿಕ್ಕನಾಯಕನಹಳ್ಳಿ ಮುಂದೆ ಧರ್ಮಪುರಿಯವರೆಗೆ ರಸ್ತೆಯನ್ನು ಹೊಂದಿದ್ದು ವ್ಯಾಪಾರ ವಹಿವಾಟಿಗೆ ಅನುಕೂಲಕರವಾಗಿದ್ದವು. ಇದು ಮುಂದೆ ಬ್ರಿಟಿಶರ ವರದಿಯಲ್ಲಿ ದಾಖಲಾಗಿರುವುದು ಇದರ ಪ್ರಾಮುಖ್ಯತೆಯನ್ನು ತಿಳಿಸುವುದು.

೪. ಚಿತ್ರದುರ್ಗ, ಸಿರಾ, ತುಮಕೂರು, ಬೆಂಗಳೂರು ಮುಂದುವರಿದು ಕೋಲಾರ ಈ ರಸ್ತೆಯು ಪ್ರಸ್ತುತ ಎನ್.ಎಚ್.೪ ರಸ್ತೆಯನ್ನು ಸೂಚಿಸುತ್ತದೆ. ಈ ರಸ್ತೆಯು ಚಿತ್ರದುರ್ಗದಿಂದ ಹೊಸಪೇಟೆ ಮಾರ್ಗವಾಗಿ ಗುಲ್ಬರ್ಗಾಕ್ಕೆ ಹಾದು ಮುಂದೆ ಬಾಂಬೆಯನ್ನು ಸೇರುತ್ತದೆ.

೫. ಇಕ್ಕೇರಿ, ಶಿವಮೊಗ್ಗ, ಹಾಗಲವಾಡಿ, ತುರುವೆಕೆರೆ, ಮಾಗಡಿ, ಬೆಂಗಳೂರು ಸೇರುವ ಇನ್ನೊಂದು ಮಾರ್ಗವಿತ್ತು.

೬. ಮೈಸೂರು, ಮಂಡ್ಯ, ಬೆಂಗಳೂರು, ಕೋಲಾರಕ್ಕೆ ಸೇರುವ ಮಾರ್ಗ ಇತ್ತು. (ಸತ್ಯನಾರಾಯಣ ೧೯೯೬:ಅನುಬಂಧದ ನಕ್ಷೆ).

ಹೀಗೆ ಮೈಸೂರು ಒಡೆಯರು ಸ್ಥಳೀಯವಾಗಿ ಪ್ರಭುತ್ವಗಳ ಜೊತೆ ವ್ಯಾಪಾರದಿಂದ ಸಂಬಂಧವನ್ನಿಟ್ಟುಕೊಂಡಿದ್ದರು. ರಾಜ್ಯದ ಎಲ್ಲ ಭಾಗಗಳಿಂದಲೂ ಸರಕುಗಳು ಮೈಸೂರು ಸಂಧಿಸುವ ಮಾರ್ಗವನ್ನು ಗಮನಿಸಬಹುದಾಗಿದೆ. ಪ್ರಾಚೀನ ಕಾಲದಿಂದಲೂ ಮೈಸೂರು ಒಂದು ವಾಣಿಜ್ಯ ಕೇಂದ್ರವಾಗಿ ಗುರುತಿಸಿಕೊಂಡಿದ್ದು, ರಾಜ್ಯದ ಎಲ್ಲ ಕಡೆಯಿಂದಲೂ ಸರಕುಗಳು ಬೆಂಗಳೂರಿಗೆ

ಬಂದು ತಲುಪುತ್ತಿದ್ದವು. ಇಂದು ಬೆಂಗಳೂರು ರಾಜ್ಯದ ರಾಜಧಾನಿಯ ಸ್ಥಾನ ಪಡೆದು ಬೃಹತ್ ಬಂಡವಾಳಕೇಂದ್ರಿತ ಅರ್ಥವ್ಯವಸ್ಥೆಯೊಂದು ಬೆಂಗಳೂರಿನಲ್ಲಿ ಕೇಂದ್ರಿತವಾಗಿರುವುದನ್ನು ಗಮನಿಸಬಹುದು.

* ಪುಣೆಯಿಂದ ಹರಿಹರದವರೆಗೆ ಇದು ದಕ್ಷಿಣ ಮಹಾರಾಷ್ಟ್ರದಲ್ಲಿ ಎಲ್ಲಕ್ಕೂ ದೊಡ್ಡ ಮಾರ್ಗವಾಗಿರುತ್ತದೆ. ಈ ಮಾರ್ಗದಲ್ಲಿ ಬರುವ ಹೊಳೆಗಳಿಗೆ ಬಹುತೇಕ ಎಲ್ಲ ಕಡೆಯಲ್ಲಿ ಸೇತುವೆಗಳಾಗಿದ್ದವು. ಮಾರ್ಗದ ಮೇಲೆ ಆಗಾಗ್ಗೆ ಗರಸು ಹಾಕಿ ರೋಣಕಲ್ಲುಗಳನ್ನು ತಿರುಗಿಸುತ್ತಿರುವ ಕಾರಣ ಈ ಮಾರ್ಗವು ಹನ್ನೆರಡು ತಿಂಗಳು ಸುಗಮವಾಗಿ ನಡೆಯುತ್ತಿತ್ತು. ಈ ಮಾರ್ಗವನ್ನು ಕಟ್ಟಿಸುವುದಕ್ಕೆ ಸುಮಾರು ೧೨ ಲಕ್ಷ ರೂಪಾಯಿ ವೆಚ್ಚವಾಗಿರುತ್ತದೆ. ಈ ಮಾರ್ಗವು ಪುಣೆಯಿಂದ ಸಾತಾರೆ, ಕೊಲ್ಹಾಪುರ, ಕಾಗಲ, ಬೆಳಗಾವಿ, ಧಾರವಾಡ, ಹುಬ್ಬಳ್ಳಿಗಳ ಮೇಲಿಂದ ಹರಿಹರದ ತುಂಗಭದ್ರೆಯ ದಂಡೆಗೆ ತಲುಪುತ್ತದೆ. ಧಾರವಾಡ ಸೀಮೆಯಿಂದ, ಹರಿಹರದಿಂದ ಮೂಲಕ ಮೈಸೂರಿನ ಸೀಮೆಯಲ್ಲಿ ಹಾದು ಬೆಂಗಳೂರಿಗೂ, ಮೈಸೂರಿಗೂ ಹೋಗುತ್ತದೆ.
* ಸೊಲ್ಲಾಪುರದಿಂದ ವೆಂಗುರ್ತಿಗೆ ಇದು ನಿಜಾಮನ ರಾಜ್ಯದೊಳಗಿನಿಂದ ಬಂದು ಸೊಲ್ಲಾಪುರ, ವಿಜಾಪುರ, ಬಾಗಲಕೋಟೆ, ಕಾಲಡದಗಿ, ಬೆಳಗಾವಿಗಳ ಮೇಲಿಂದ ವೆಂಗುರ್ತಿಗೆ ಹೋಗುತ್ತದೆ. ಈ ಮಾರ್ಗದಲ್ಲಿ ಬರುವ ಹೊಳೆಗಳ ಮೇಲೆ ನಾವೆಗಳಿರುತ್ತವೆ. ಈ ಮಾರ್ಗದಿಂದ ಸರಕುಗಳು ಮುಂಬಯಿಗೆ ಹೋಗುತ್ತವೆ. ಈ ಮಾರ್ಗದಲ್ಲಿ ಮಳೆಗಾಲದಲ್ಲಿ ಕೆಲವು ಕಡೆಯಲ್ಲಿ ಕೆಸರಾಗಿ, ವ್ಯಾಪಾರಿಗಳಿಗೆ ಪ್ರಯಾಸವಾಗುತ್ತಿತ್ತು..
* ಬಾಗಲಕೋಟೆಯಿಂದ ಹುಬ್ಬಳ್ಳಿ ಮಾರ್ಗದಲ್ಲಿ ಭೀಮಾ, ಕೃಷ್ಣ, ಘಟಪ್ರಭಾ, ಮಲಾಪಹಾರಿ ಈ ಹೊಳೆಗಳನ್ನು ನಾವೆಗಳಲ್ಲಿ ದಾಟಬೇಕಾಗುತ್ತಿತ್ತು. ಈ ಮಾರ್ಗದಲ್ಲಿಯೂ ಮಳೆಗಾಲದಲ್ಲಿ ಅಲ್ಲಲ್ಲಿ ಕೆಸರಾಗುತ್ತಿತ್ತು.
* ವಿಜಾಪುರದಿಂದ ಸತಾರೆಗೂ ರತ್ನಾಗಿರಿಗೂ ಈ ಮಾರ್ಗವು ಬಾಬಾನಗರ ಬಿಜ್ಜರಗಿಗಳ ಮೇಲಿಂದ ಹೋಗುತ್ತದೆ.
* ಸೊಲ್ಲಾಪುರದಿಂದ ಬಳ್ಳಾರಿಗೆ ಇದು ಇಂಡಿ, ಮುದ್ದೇಬಿಹಾಳ, ಹುನುಗುಂದ, ಇಳಕಲ್ಲುಗಳ ಮೇಲಿಂದ ನಿಜಾಮನ ರಾಜ್ಯದಲ್ಲಿ ಬಳ್ಳಾರಿಗೆ ಹೋಗುತ್ತದೆ.
* ಧಾರವಾಡದಿಂದ ತಿನಯಿಘಾಟಯೆಂಬ ಘಟ್ಟದವರೆಗೆ ಇದು ತಿನಯಿ ಘಾಟದ ಕೆಳಗೆ ಗೋವೆಗೆ ಹೋಗುತ್ತದೆ.
* ಧಾರವಾಡದಿಂದ ಕುಮಟೆಗೆ ಇದು ಹುಬ್ಬಳ್ಳಿ, ಮುಂಡಗೋಡ, ಸಿರಸಿಗಳ ಮೇಲಿಂದ ಕುಮಟೆಗೆ ಹೋಗುತ್ತದೆ(ವೆಂಕಟರಂಗೋಕಟ್ಟೀ,೧೯೯೩:೨೯೫-೨೯೬).

ಈ ಮಾರ್ಗಗಳು ಪ್ರಾಚೀನ ಕಾಲದಿಂದಲೂ ಅಸ್ತಿತ್ವದಲ್ಲಿದ್ದು ಈ ಮಾರ್ಗಗಳು ವಸಾಹತು ಕರ್ನಾಟಕದಲ್ಲಿ ಹೆಚ್ಚು ಪ್ರಚಾರಕ್ಕೆ ಬಂದವು. ಈಗಲೂ ಈ ಮಾರ್ಗಗಳು ಕೆಲವು ಹೆದ್ದಾರಿ

ಮಾರ್ಗಗಳಾಗಿ ಸಂಪರ್ಕ ಕಲ್ಪಿಸುತ್ತಿರುವುದನ್ನು ನೋಡಬಹುದು. ಹಾಗೆಯೇ ಉತ್ತರ ಕರ್ನಾಟಕದ ಈ ವ್ಯಾಪಾರಿ ಮಾರ್ಗಗಳು ಮುಂದೆ ಸಂಚಾರಿ ಮಾರ್ಗಗಳಾಗಿ ಬದಲಾಗಿರುವುದನ್ನು ಗಮನಿಸಬಹುದಾಗಿದೆ.

ಯುರೋಪಿಯನ್ನರು ಕರ್ನಾಟಕವನ್ನು ತಮ್ಮ ವಸಾಹತುವನ್ನಾಗಿ ಮಾಡಿಕೊಂಡ ಬಂಡವಾಳ ಕೇಂದ್ರಿತ ಹೊಸದೊಂದು ಅರ್ಥವ್ಯವಸ್ಥೆಯು ಜಾರಿಗೆ ಬಂದಾಗ ಯುರೋಪಿಯನ್ನರು ತಮ್ಮ ಅವಶ್ಯಕತೆಗಳ ಪೂರೈಕೆಗಾಗಿ ಸರಕುಗಳನ್ನು ಒಂದು ಕಡೆಯಿಂದ ಇನ್ನೊಂದು ಕಡೆ ಸಾಗಿಸುವುದಕ್ಕಾಗಿ ಇಲ್ಲಿನ ಸಂಚಾರಿ ಮಾರ್ಗಗಳನ್ನು ಅಭಿವೃದ್ಧಿಪಡಿಸಿದರು. ಈ ಮೂಲಕ ಅಭಿವೃದ್ಧಿಯಾದ ಮಾರ್ಗಗಳು ಇಂದು ರಾಷ್ಟ್ರೀಯ ಹೆದ್ದಾರಿಗಳಾಗಿ ಕಾರ್ಯ ನಿರ್ವಹಿಸುತ್ತಿರುವುದನ್ನು ಗಮನಿಸಬಹುದಾಗಿದೆ.

ಕರ್ನಾಟಕ ದೇಶೀಯ ವ್ಯಾಪಾರದಲ್ಲಿ ಗುರುತಿಸಿಕೊಂಡಂತೆ ಪ್ರಾಚೀನ ಕಾಲದಿಂದಲೂ ವಿದೇಶೀಯ ವ್ಯಾಪಾರದಲ್ಲಿಯೂ ಪ್ರಾಮುಖ್ಯತೆ ಪಡೆದುಕೊಂಡಿದೆ.

ಮೈಸೂರು ಸಂಸ್ಥಾನದ ಕಾಲದಲ್ಲಿ ಭಟ್ಕಳ ಮತ್ತು ಹೊನ್ನಾವರ ಮತ್ತು ಬಸ್ರೂರು ಪ್ರದೇಶಗಳು ಕರಾವಳಿ ಕರ್ನಾಟಕದ ಪ್ರಮುಖ ವ್ಯಾಪಾರಿ ಕೇಂದ್ರಗಳಾಗಿ ವಿಜಯನಗರೋತ್ತರ ಕಾಲದಲ್ಲಿ ಪ್ರಮುಖವಾಗಿ ಗುರುತಿಸಿಕೊಂಡಿವೆ. ಕಳಲೆ ನಂಜರಾಜಯ್ಯನ ಕಾಲದಲ್ಲಿ ಚಿಕ್ಕನಾಯಕನಹಳ್ಳಿ, ಸಕ್ಕರೆ ಪಟ್ಟಣ ಹಾಗೂ ಸೇಲಂಗಳ ನಡುವೆ ಉತ್ತಮ ರಸ್ತೆಮಾರ್ಗ ನಿರ್ಮಿಸಿ ವ್ಯಾಪಾರಕ್ಕೆ ಅನುಕೂಲ ಮಾಡಿಕೊಟ್ಟದ್ದುದಾಗಿ ತಿಳಿದುಬರುತ್ತದೆ. ರಸ್ತೆಗಳ ಜೊತೆ ನದಿಗಳಿಗೆ ಅಡ್ಡಲಾಗಿ ಸೇತುವೆಗಳನ್ನು ನಿರ್ಮಿಸಿದ್ದರು. ಉದಾ. ದಳವಾಯಿ ನಂಜರಾಜಯ್ಯ ಕಪಿಲಾನದಿಗೆ ಸೇತುವೆ ಕಟ್ಟಿಸಿ ನಂಜನಗೂಡು, ಕಳಲೆ ಮತ್ತು ಮೈಸೂರಿನ ನಡುವೆ ಸಂಪರ್ಕ ಕಲ್ಪಿಸಿದ್ದನು(ಸುಧಾಮಣಿ,೨೦೦೯:೧೧೯). ವ್ಯಾಪಾರಕ್ಕೆ ಹೋಗಿಬರುವ ಪದಾರ್ಥಗಳಿಗೆ ಸುಂಕದ ಕಟ್ಟೆಯನ್ನು ನಿರ್ಮಿಸಿದ್ದರು. ಈ ಕಟ್ಟೆಗಳ ಮೇಲ್ವಿಚಾರಣೆಯನ್ನು ಮಣಿಗಾರ, ಶಾನುಭೋಗ, ಕೋಲುಕಾರರೆಂಬ ಅಧಿಕಾರಿಗಳಿರುತ್ತಿದ್ದರು. ಈ ಮೂಲಕ ಮೈಸೂರು ಸಂಸ್ಥಾನವನ್ನಾಳಿದ ದಳವಾಯಿಗಳು ಪ್ರಮುಖವಾಗಿ ಅಲ್ಲಿನ ರಸ್ತೆ ಮಾರ್ಗಗಳನ್ನು ಮತ್ತು ನದಿ ಮೂಲಕ ನಡೆಯುವ ಜಲಮಾರ್ಗಗಳನ್ನು ಅಭಿವೃದ್ಧಿಪಡಿಸಿದರು. ಪ್ರಭುತ್ವವು ಆಯಾ ಕಾಲಘಟ್ಟದಲ್ಲಿ ವ್ಯಾಪಾರಿ ಮಾರ್ಗಗಳ ನಿರ್ಮಾಣಕ್ಕೆ ಬೆಂಬಲವನ್ನು ನೀಡಿರುತ್ತದೆ. ಕಾರಣ ವ್ಯಾಪಾರವು ಹೆಚ್ಚು ಅಭಿವೃದ್ಧಿಯನ್ನು ಹೊಂದಿದ್ದರೆ ರಾಜ್ಯಕ್ಕೆ ಹೆಚ್ಚಿನ ಆದಾಯ ದೊರೆಯುತ್ತದೆ ಎಂಬ ಕಾರಣದಿಂದ ರಾಜ್ಯಗಳಲ್ಲಿ ಹೆಚ್ಚಿನ ಸಾರಿಗೆ ಸಂಪರ್ಕಗಳನ್ನು ಅಭಿವೃದ್ಧಿಪಡಿಸಿರುವುದು ಕಂಡುಬರುತ್ತದೆ.

ಹರಪನಹಳ್ಳಿ ಪಟ್ಟಣದ ಸಂತೆಯಲ್ಲಿ ಕುರುಸಾನಿಯನ್ನು ಹರಪನಹಳ್ಳಿಯಿಂದ ಹರಿಹರಕ್ಕೆ ವ್ಯಾಪಾರಿಗಳು ಕತ್ತೆಗಳ ಮೇಲೆ ಸಬರಹಾಕಿ ಸಾಗಿಸುತ್ತಿದ್ದರೆಂದು ಹೇಳಲಾಗಿದೆ(ಮಲ್ಲಿಕಾರ್ಜುನ, ೨೦೧೬:೧೮೬). ವಿಜಯನಗರ ಕಾಲದಲ್ಲಿದ್ದ ಸಾರಿಗೆ ಸಂಪರ್ಕದ ಸಾಧನಗಳು ವಿಜಯನಗರೋತ್ತರ ಕಾಲದಲ್ಲಿ ಮುಂದುವರಿದವು.

ಕೆಳದಿ ನಾಯಕರ ಕಾಲದಲ್ಲಿ ರಸ್ತೆಗಳನ್ನು ರಾಜಮಾರ್ಗ ಮತ್ತು ಒಳನಾಡಿನ ರಸ್ತೆಗಳೆಂದು ವಿಂಗಡಿಸಲಾಗಿತ್ತು. ರಾಜಮಾರ್ಗವು ಹೆಚ್ಚು ತಿರುವುಗಳಿರದೆ ನೇರವಾಗಿತ್ತು. ಇಕ್ಕೇರಿ ಮತ್ತು

ಸದಾಶಿವ ಸಾಗರದ ನಡುವಿನ ರಾಜಮಾರ್ಗವು ವಿಶಾಲವಾಗಿದ್ದು ಸಾಲುಮರಗಳನ್ನು ನೆಡಲಾಗಿತ್ತು. ರಾಜಧಾನಿ ಬಿದನೂರಿಗೆ ಉತ್ತರ ಮತ್ತು ಪೂರ್ವ ಭಾಗದಿಂದ ಬರುತ್ತಿದ್ದ ರಾಜಮಾರ್ಗವು ಮಲೆನಾಡಿನ ಬೆಟ್ಟ ಕಣಿವೆ ಮತ್ತು ಕಾಡಿನ ನಡುವೆ ನಿರ್ಮಾಣವಾಗಿತ್ತು. ದಾರಿಯಲ್ಲಿ ಸಿಗುವ ಕೆಲವು ನದಿ ಹಳ್ಳಗಳಿಗೆ ಮಾತ್ರ ಸೇತುವೆ ನಿರ್ಮಿಸಿದ್ದರು. ಬಿದನೂರಿನಿಂದ ಪಶ್ಚಿಮ ಕರಾವಳಿಯ ರೇವುಪಟ್ಟಣಗಳಿಗೆ ಅತ್ಯುತ್ತಮವಾದ ರಾಜಮಾರ್ಗವನ್ನು ನಿರ್ಮಿಸಲಾಗಿತ್ತು. ರಸ್ತೆಗಳು ಆಗುಂಬೆ, ಕೊಲ್ಲೂರು ಮತ್ತು ಹುಲಿಕಲ್ಲು ಘಾಟಿಗಳನ್ನು ಹಾದುಹೋಗಿತ್ತು.

ಕರಾವಳಿಯ ನದಿಗಳಲ್ಲಿ ದೊಡ್ಡ ಪ್ರಮಾಣದ ಸರಕುಗಳ ಸಾಗಾಣಿಕೆ ನಡೆಯುತ್ತಿತ್ತು. ಅರಬ್ಬಿ ಕಡಲಿನಿಂದ ಕಾಳಿನದಿಯ ದಡದವರೆಗೂ ೨೦ ಮೈಲಿ, ಗಂಗೊಳ್ಳಿಯಿಂದ ಗುಂಡಬಾಳದವರೆಗೆ ೧೫ ಮೈಲಿ, ತದ್ರಿ ನದಿಯ ಉಪ್ಪಿನ ಪಟ್ಟಣದವರೆಗೆ ೧೫ ಮೈಲಿ, ಶರಾವತಿ ನದಿಯ ಗೇರುಸೊಪ್ಪೆಯವರೆಗೆ ೧೭ ಮೈಲಿಗಳವರೆಗೆ ಸಣ್ಣ ಹಡಗು ಸಂಚರಿಸುತ್ತಿದ್ದವು. ದೋಣಿಗಳಿಗೆ ಮಣಿವೆ ಎಂಬ ಹೆಸರಿತ್ತು. ಅರಬ್ಬಿ ಕಡಲ ತೀರದಲ್ಲಿ ಮಂಗಳೂರು, ಹೊನ್ನಾವರ, ಮಲ್ಪೆ, ಕುಂದಾಪುರ ಮತ್ತು ಭಟ್ಕಳ ದೊಡ್ಡ ರೇವುಗಳಾಗಿದ್ದವು. ಈ ಪ್ರದೇಶಕ್ಕೆ ರಾಜ್ಯದ ಬೇರೆ ಬೇರೆ ರಸ್ತೆ ಮಾರ್ಗಗಳಿರುವುದನ್ನು ಗಮನಿಸಬಹುದು. ಇವು ಬಂದರು ಪ್ರದೇಶಕ್ಕೆ ಸರಕನ್ನು ಸಂಗ್ರಹಿಸುವ ಮಾರ್ಗಗಳಾಗಿರುವುದನ್ನು ಗಮನಿಸಬಹುದು(ಕಲಬುರ್ಗಿ,ರಾಮಭಟ್ಟ,೧೯೯೫:೩೦೬).

ವ್ಯಾಪಾರಕ್ಕೆ ಹೋಗುವಾಗ ಮೂಟೆ, ಹೆಡಗಿ, ಚರ್ಮದ ಚೀಲ, ತೆಂಗಿನ ನಾರಿನಿಂದ ಮಾಡಿದ ಚೀಲಗಳಲ್ಲಿ ಸರಕುಗಳನ್ನು ತುಂಬಿ ಅವುಗಳನ್ನು ಕುದುರೆ, ಕೋಣ, ಎತ್ತಿನ ಗಾಡಿಗಳ ಮೂಲಕ ಕೊಂಡೊಯ್ಯುತ್ತಿದ್ದರು. ವ್ಯಾಪಾರದ ಸ್ಥಳ ಹತ್ತಿರದಲ್ಲೇ ಇದ್ದು, ಕಡಿಮೆ ಬಾರವಾದ ವಸ್ತುಗಳಾದರೆ ಅದನ್ನು ತಲೆಯ ಮೇಲೆ ಹೊತ್ತುಕೊಂಡು ಹೋಗುತ್ತಿದ್ದರು. ಶಾಸನಗಳಲ್ಲಿ ಬಂಡಿ ದಾರಿ, ಸಂತೆದಾರಿ, ಕಾವಲುದಾರಿ, ಕಾಲುದಾರಿ ಹೆದ್ದಾರಿಗಳಿದ್ದುದರ ಬಗ್ಗೆ ಉಲ್ಲೇಖಗಳಿವೆ. (ಸುಧಾಮಣಿ,೨೦೦೯:೧೧೯) ಈ ಮೂಲಕ ವಿಜಯನಗರೋತ್ತರ ಕಾಲದ ಸಾರಿಗೆ ವ್ಯವಸ್ಥೆಯು ವಿಜಯನಗರ ಕಾಲದಲ್ಲಿದ್ದಂತೆ ಮುಂದುವರಿದಿದ್ದು, ಯುರೋಪಿಯನ್ನರ ಆಗಮನದ ಬಳಿಕ ಸಾರಿಗೆ ಸಂಪರ್ಕದಲ್ಲಿ ಹಲವಾರು ರೀತಿಯ ಬದಲಾವಣೆಗಳಾಗಿರುವುದನ್ನು ಅಲ್ಲಿನ ಶಾಸನ. ಪ್ರವಾಸಿಗರ ವರದಿಗಳಿಂದ ತಿಳಿಯಬಹುದು. ಸಾರಿಗೆ ಸಂಪರ್ಕವೆಂಬುದು ಮಾನವ ಜೀವನದ ಅವಶ್ಯಕ ಅಂಗವೆಂದರೂ ತಪ್ಪಾಗಲಾರದು.

ವಿಜಯನಗರೋತ್ತರ ಕಾಲದಲ್ಲಿ ಕನ್ನಡ ಪ್ರದೇಶದ ನಗರ ಮತ್ತು ಪಟ್ಟಣಗಳು ದಕ್ಷಿಣ ಭಾರತದ ಇತರ ಪ್ರಮುಖ ಪಟ್ಟಣಗಳೊಂದಿಗೆ ಸಂಪರ್ಕ ಕಲ್ಪಿಸಿಕೊಂಡಿದ್ದವು. ಉದಾ. ಪುಲಿಕಾಟ್–ತಿರುಪತಿ–ಪೆನುಗೊಂಡ–ವಿಜಯನಗರ–ಚಿತ್ರದುರ್ಗ–ಶ್ರೀರಂಗಪಟ್ಟಣ–ಮೈಸೂರು ಮಂಗಳೂರು ಮತ್ತು ಅಲ್ಲಿಂದ ಕಣ್ಣಾನೂರಿಗೆ ಸಂಪರ್ಕ ಹೊಂದಿದ್ದು ದಕ್ಷಿಣ ಭಾರತದ ವ್ಯಾಪಾರಿ ಸಂಪರ್ಕ ಪಡೆದ ನರಮಂಡಲ ವ್ಯವಸ್ಥೆಯಂತೆ ಅಭಿವೃದ್ಧಿ ಹೊಂದಿತ್ತು. ಹಾಗೆಯೇ ಉತ್ತರದಲ್ಲಿ ಬೀದರ ಪಟ್ಟಣ ಗೋವಾ ಹಾಗೂ ಅಲ್ಲಿಂದ ಮುಂದೆ ಭಟ್ಕಳ ಸಂಪರ್ಕಕ್ಕೆ ಹೊಂದಿ, ಹಾಗೆಯೇ ಬೆಜವಾಡ–

ಮಕ್ಕಾಪೇಟೆ-ಬಿಜಾಪುರ ಮತ್ತು ಅಲ್ಲಿಂದ ಗೋವಾಕ್ಕೆ ವ್ಯಾಪಾರ ಸಂಪರ್ಕ ಹೊಂದಿದ್ದವು. ಭಾರತದ ಕರಾವಳಿ ಭಾಗಗಳಿಂದ ಗೋವಾ, ಕೇರಳ, ಪಾಂಡಿಚೇರಿ, ಚೆನ್ನೈ ಮುಂತಾದ ಕಡೆ ಕರಾವಳಿಯ ಭಾಗಕ್ಕೆ ಸಂಪರ್ಕವನ್ನು ಕಲ್ಪಿಸುವ ಮಾರ್ಗಗಳಿವೆ(ಚಂದ್ರಶೇಖರ್,ರಾವ್,(ಶಿ) ೨೦೧೬:೭೭).

ವಿಜಯನಗರೋತ್ತರ ಕಾಲದ ವ್ಯಾಪಾರ ವಾಣಿಜ್ಯವು ಹಲವು ಬಗೆಯ ವ್ಯಾಪಾರ-ವಾಣಿಜ್ಯ ಸ್ಥಿತ್ಯಂತರಗಳನ್ನು ಅನುಭವಿಸಿದ ಕಾಲಘಟ್ಟವೆಂದು ಹೇಳಬಹುದು. ದಕ್ಷಿಣ ಭಾರತದ ಇತರ ಪ್ರಮುಖ ವ್ಯಾಪಾರಿ ಕೇಂದ್ರ ಹಾಗೂ ಸಾಗರೋತ್ತರ ಏಷ್ಯಾ ರಾಷ್ಟ್ರಗಳೊಂದಿಗೆ ಹೊಂದಿದ್ದ ವ್ಯಾಪಾರಿ ಸಂಪರ್ಕದೊಂದಿಗೆ ಮಾತ್ರ ಕೂಲಂಕಷವಾಗಿ ಅರ್ಥೈಸಿಕೊಳ್ಳಬಹುದು. ಕೆನರಾ ತೀರ ಪ್ರದೇಶಗಳು ಒಳನಾಡಿನ ದಕ್ಷಿಣ ಭಾರತದ ಇತರ ಪ್ರಮುಖ ನಗರಗಳು ಹಾಗೂ ಸಾಗರೋತ್ತರ ವ್ಯಾಪಾರ ವಹಿವಾಟಿನ ಸಂಪರ್ಕವನ್ನು ತಿಳಿಯಬಹುದು.

ಉತ್ತರದಲ್ಲಿ ಎಲಿ ಪರ್ವತದಿಂದ ದಕ್ಷಿಣದ ಮಂಗಳೂರಿನವರೆಗೆ ವಿಸ್ತಾರ ಕರಾವಳಿ ತೀರವನ್ನು ಕ್ಯಾನರಾ ತೀರವೆಂದು ಕರೆಯಲಾಗಿದೆ. ಈ ತೀರದುದ್ದಕ್ಕೂ ಹಲವು ಬಂದರು ಮತ್ತು ವ್ಯಾಪಾರಿ ಕೇಂದ್ರಗಳಿದ್ದು, ವಿಜಯನಗರ ಸಾಮ್ರಾಜ್ಯದ ವೇಳೆಗೆ ಆರ್ಥಿಕವಾಗಿ ತೀರ ಪ್ರದೇಶಗಳ ಮೇಲೆ ಹಿಡಿತ ಸಾಧಿಸಿತ್ತು. ಆ ಮುಖಾಂತರ ಅಲ್ಲಿನ ಆರ್ಥಿಕ ವ್ಯವಸ್ಥೆಯ ಮೇಲೆ ಹಿಡಿತ ಸಾಧಿಸಿ ಉತ್ತರದ ಮಿರ್ಜಾನ್‌ನಿಂದ ಹಿಡಿದು ದಕ್ಷಿಣಾಭಿಮುಖವಾಗಿ ಹೊನ್ನಾವರ, ಭಟ್ಕಳ, ಬಾರಕೂರು, ಬಸ್ರೂರು, ಮಂಗಳೂರು ಮತ್ತು ಕುಂಬ್ಳಾಗಳು ಪ್ರಮುಖ ಬಂದರುಗಳಾಗಿ ಬೆಳವಣಿಗೆಯಾದವು. ಇವೆಲ್ಲ ಬಂದರುಗಳಲ್ಲಿ ಭಟ್ಕಳ ನಂತರ ಬಸ್ರೂರು ಬಂದರು ಇಡೀ ಮಲಬಾರ್ ತೀರದ ಮುಖ್ಯ ಕೇಂದ್ರಿತ ರೇವು ಪಟ್ಟಣಗಳಾಗಿ ಬೆಳವಣಿಗೆಯಾಗಿದ್ದವು.

ಭಟ್ಕಳ ಬಂದರು ಪರ್ಶಿಯನ್ ಗಲ್ಫ್ ಹಾಗೂ ಕೆಂಪುಸಮುದ್ರಗಳ ನಡುವೆ ವ್ಯಾಪಾರ ಸಂಪರ್ಕ ಹೊಂದಿತ್ತು. ಈ ಬಂದರುಗಳಲ್ಲಿ ವಿಜಯನಗರ ಕಾಲದಲ್ಲಿ ನವಾಯಿತರೆಂಬ ಮುಸ್ಲಿಂ ಜನಾಂಗದ ವ್ಯಾಪಾರಿಗಳು ಇಲ್ಲಿನ ವ್ಯಾಪಾರವನ್ನು ನಿರ್ವಹಿಸಿದರೆ, ವಿಜಯನಗರೋತ್ತರ ಕಾಲಾವಧಿಯಲ್ಲಿ ಸಾರಸ್ವತರು ಇಲ್ಲಿನ ವ್ಯಾಪಾರ ವಾಣಿಜ್ಯದಲ್ಲಿ ಗುರುತಿಸಿಕೊಂಡಿದ್ದರು. ನಂತರದ ಕಾಲಘಟ್ಟದಲ್ಲಿ ಜೈನ ವ್ಯಾಪಾರಿಗಳು ಗುರುತಿಸಿಕೊಂಡಿರುವುದನ್ನು ನೋಡಬಹುದು.

ಕೋರಮಂಡಲ ತೀರ ಪ್ರದೇಶಗಳೊಂದಿಗೆ ವಿದೇಶೀಯ ಮತ್ತು ದೇಶೀಯ ವ್ಯಾಪಾರವು ನಡೆಯುತ್ತಿದ್ದು ಪುಲಿಕಾಟ್, ಪೋರ್ಟೋನೋವ ನಾಗಪಟ್ಟಣಂ, ತೊಂಡಿ, ದೇವಿಪಟ್ಟಣಂ, ಕೀಳಕರೈ, ಕಾಯಟ್ಟಣಂ, ಕೊಚ್ಚಿನ್‌ಗಳು ಪ್ರಮುಖ ಬಂದರು ಪಟ್ಟಣಗಳಾಗಿದ್ದವು. ಭಾರತದ ವಿದೇಶಿಯ ವ್ಯಾಪಾರವು ಈ ಪಟ್ಟಣಗಳ ಮೂಲಕ ನಡೆಯುತ್ತಿತ್ತು. ಕೋರಮಂಡಲ ಪ್ರದೇಶದ ಕೇದ ಮತ್ತು ಪೆನಾಗ ಪ್ರಾಂತ್ಯಗಳು ಬಂದರು ಪಟ್ಟಣಗಳಾಗಿದ್ದವು.

ಮಲಬಾರ್ ಕರಾವಳಿಯು ವಿಜಯನಗರಪೂರ್ವ ವ್ಯಾಪಾರ ವಾಣಿಜ್ಯದಲ್ಲಿ ಪ್ರಮುಖವಾಗಿ ಗುರುತಿಸಿಕೊಂಡಿತ್ತು. ಕೇರಳದ ಮಲಬಾರ್ ಪ್ರಾಂತ್ಯವು ಪ್ರಮುಖ ರೇವುಪಟ್ಟಣವಾಗಿ ಹೊಯ್ಸಳರ

ಕಾಲಾವಧಿಯಿಂದ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ. ಕರ್ನಾಟಕವನ್ನೊಳಗೊಂಡ ಮಲಬಾರಿನ ಬಾರಕೂರ್ ಪ್ರಾಂತ್ಯ ವಿಜಯನಗರ ಕಾಲದಲ್ಲಿ ಪ್ರಮುಖ ವ್ಯಾಪಾರ ಕೇಂದ್ರದ ಬಂದರು ಪಟ್ಟಣವಾಗಿ ಗುರುತಿಸಿಕೊಂಡಿದೆ.

ಪೋರ್ಚುಗೀಸರು ಭಾರತಕ್ಕೆ ಜಲಮಾರ್ಗ ಕಂಡುಹಿಡಿದ ಮೂಲ ಉದ್ದೇಶ ಭಾರತ ಒಳಗೊಂಡಂತೆ ಏಷ್ಯಾ ರಾಷ್ಟ್ರಗಳೊಂದಿಗೆ ನೇರ ವ್ಯಾಪಾರ ವಹಿವಾಟು ನಡೆಸುವ ಹಾಗೂ ಆ ಮೂಲಕ ಹೆಚ್ಚು ಲಾಭಗಳಿಸುವ ಸಲುವಾಗಿ ಕ್ರಿ.ಶ. ೧೪೯೮ರಲ್ಲಿ ವಾಸ್ಕೋಡಗಾಮ ಭಾರತಕ್ಕೆ ಜಲಮಾರ್ಗವನ್ನು ಕಂಡುಹಿಡಿದು ಭಾರತದೊಂದಿಗೆ ವಿದೇಶೀಯ ಸಂಪರ್ಕ ಹೊಂದುವಂತೆ ಮಾಡಿದನು. ಈ ಮೂಲಕವಾಗಿ ಕರ್ನಾಟಕದ ಕರಾವಳಿ ಭಾಗವು ವಿದೇಶಗಳೊಂದಿಗೆ ನೇರ ಸಂಪರ್ಕವನ್ನು ಹೊಂದುವ ಮೂಲಕ ರಾಜ್ಯದ ವ್ಯಾಪಾರದ ಸ್ವರೂಪದಲ್ಲಿ ತೀವ್ರ ಬದಲಾವಣೆಗಳಾಗಿರುವುದನ್ನು ವಿಜಯನಗರೋತ್ತರ ಕಾಲಾವಧಿಯಲ್ಲಿ ಪ್ರಮುಖವಾಗಿ ಗುರುತಿಸಬಹುದಾಗಿದೆ.

ಕರಾವಳಿ ಕರ್ನಾಟಕವು ವಿದೇಶಗಳೊಂದಿಗೆ ವ್ಯಾಪಾರ ವಾಣಿಜ್ಯಗಳೊಂದಿಗೆ ತೊಡಗಲು ನದಿ ಮುಖಜ ಭೂಮಿಯಲ್ಲಿ ಸ್ಥಾಪಿಸಲ್ಪಟ್ಟ ಬಂದರುಗಳು ಒಳನಾಡಿನ ಸರಕುಗಳನ್ನು ವಿದೇಶಕ್ಕೆ ರವಾನಿಸಲು ನದಿ ಮೂಲಕವಾಗಿ ಸರಕುಗಳನ್ನು ಹೇರಿಕೊಂಡು ಹಡಗುಗಳು ಬರುತ್ತಿದ್ದವು. ಮಂಗಳೂರು ಮತ್ತು ಕುಂಬ್ಳಾಗಳಲ್ಲಿ ಕೆಂಪು ಅಕ್ಕಿ ಮತ್ತು ಸಣ್ಣ ಅಕ್ಕಿಯನ್ನು ಕಣ್ಣನೂರು ದಕ್ಷಿಣ ಮಲಬಾರಿಗೆ ಹಾಗೂ ಉತ್ತರ ಕೊಂಕಣ ಮತ್ತು ಪರ್ಶಿಯನ್ ಕೊಲ್ಲಿ ಮತ್ತು ಕೆಂಪು ಸಮುದ್ರಗಳಿಗೆ ಈ ಬಂದರುಗಳ ಮೂಲಕ ನೀಲಿ ಜಲನೀತಿಯ ವ್ಯಾಪಾರದ ಸ್ವರೂಪವನ್ನು ಗಮನಿಸಬಹುದು. ಘಟ್ಟಪ್ರದೇಶದಿಂದ ಪೂರ್ವದಿಂದ ಪಶ್ಚಿಮಕ್ಕೆ ಇಳಿಯುವ ನದಿಗಳು ವ್ಯಾಪಾರದ ಸಂಪರ್ಕವನ್ನು ತಿಳಿಸುತ್ತವೆ. ಸಮುದ್ರಕ್ಕೆ ಸಾಕಷ್ಟು ಹತ್ತಿರ ಮತ್ತು ಆಳ ಅಗಲವಿರುವ ನದಿಗಳು ಸಾರಿಗೆಯ ಆದರ್ಶ ಸಾಧನಗಳಾಗಿ ರೂಪಗೊಂಡವು. ನದಿಗಳ ಸಂಗಮ ಸ್ಥಳಗಳಲ್ಲಿ ಬಂದರುಗಳು ನಿರ್ಮಾಣವಾದವು.

ಸಂಜಯ್ ಸುಬ್ರಮಣ್ಯಂ ಅವರು ಕರಾವಳಿ ಕರ್ನಾಟಕದ ವ್ಯಾಪಾರವನ್ನು ಕುರಿತು ಬರೆಯುತ್ತ ೧೬ನೇ ಶತಮಾನದ ಆರಂಭದಲ್ಲಿ ಭಾರತದ ಪಶ್ಚಿಮ ಕರಾವಳಿಯಲ್ಲಿ ಪೋರ್ಚುಗೀಸರ ಆಗಮನದ ಮೇಲೆ ಕೆನರಾ ಕರಾವಳಿಯ ವ್ಯಾಪಾರವು ಹೆಚ್ಚಾಗಿ ಬಸ್ರೂರಿನ ಉತ್ತರದ ಭಟ್ಕಳ ಬಂದರಿನ ಸುತ್ತ ಕೇಂದ್ರೀಕೃತವಾಗಿದೆ. ಮಂಗಳೂರು ಮತ್ತು ಕುಂಬ್ಳಾಗಳಲ್ಲಿ ಕೆಂಪು ಮತ್ತು ಸಣ್ಣ ಅಕ್ಕಿಯನ್ನು ಕಣ್ಣನೂರಿನ ದಕ್ಷಿಣ ಮಲಬಾರಿಗೆ ಹಾಗೂ ಉತ್ತರ ಕೊಂಕಣಿ ಮತ್ತು ಪರ್ಶಿಯನ್ ಕೊಲ್ಲಿ ಮತ್ತು ಕೆಂಪುಸಮುದ್ರದ ಬಂದರುಗಳಿಗೆ ಸಾಗಿಸಲಾಯಿತು. (ಸಾಕಿ,(೧):೧೯೯೮:೨೪೦)

ದಳವಾಯಿ ನಂಜರಾಜಯ್ಯನ ಕಾಲದಲ್ಲಿ ಕ್ರಿ.ಶ.೧೭೫೧ರ ಒಂದು ಶಾಸನ ವಿವರಿಸುವ ಹಾಗೆ ಕಳಲೆಮನೆತನವು ನಾಲ್ಕು ದಿಕ್ಕಿನ ೫೬ ದೇಶಗಳೊಡನೆ ವ್ಯಾಪಾರ ಸಂಪರ್ಕವನ್ನು ಹೊಂದಿದ್ದನ್ನು ವಿವರಿಸಿದೆ. ಶಾಸನಗಳಲ್ಲಿ ತಿಳಿಸಿರುವಂತೆ ಪಾಲುಕಾಡಪೇಟೆ, ನೆರ್ಜಪೇಟೆ, ಕೊಡುವಾಯಿಪೇಟೆ, ಕೊಲ್ಲಂಗೋಡುಪೇಟೆ, ವೇಣ್ಣೂರುಪೇಟೆ, ಕಬ್ಬಿನಪೇಟೆ, ಅಮೃತಮ್ಮನಪೇಟೆ, ಗುಂಡ್ಲುಪೇಟೆ ಈ ನಗರಗಳ ಉಭಯ ಮಾರ್ಗಗಳ ಮೂಲಕ ವ್ಯಾಪಾರ ನಡೆಯುತ್ತಿತ್ತು(ಸುಧಾಮಣಿ,೨೦೦೯:೧೧೭).

ವಿಜಯನಗರೋತ್ತರ ಕಾಲದಲ್ಲಿ ಕಣಿವೆ ಮಾರ್ಗಗಳ ಮೂಲಕವೂ ವ್ಯಾಪಾರ ನಡೆಯುತ್ತಿತ್ತು. ಬಿಳಿಗಿರಿರಂಗನಬೆಟ್ಟದ ಕಣಿವೆ, ಸತ್ಯಮಂಗಳ ಕಣಿವೆ, ಗೆಜ್ಜಲಹಟ್ಟಿ ಕಣಿವೆ, ಬೆಂಗಳೂರು ಮತ್ತು ಕೊಡಲೂರು ಕಣಿವೆಗಳ ಮೂಲಕ ಅಂತರರಾಜ್ಯ ವ್ಯಾಪಾರ ನಡೆಯುತ್ತಿತ್ತು. ವಿಜಯನಗರೋತ್ತರ ಕಾಲದಲ್ಲಿ ಕರ್ನಾಟಕದಲ್ಲಿ ಪ್ರಮುಖವಾಗಿ ಮೊಗಲರು ಸಹ ಗುರುತಿಸಿಕೊಳ್ಳುತ್ತಾರೆ. ಇವರು ತಮ್ಮ ಸೈನಿಕ ಅವಶ್ಯಕತೆಗೆ ದೇಶದ ಬೇರೆ ಬೇರೆ ಭಾಗಗಳಲ್ಲಿ ಸಂಪರ್ಕವನ್ನು ಕಲ್ಪಿಸಿದರು. ಅದರಲ್ಲಿ ಕರ್ನಾಟಕವು ಒಳಗೊಂಡಿತ್ತು. ಅವರಿಗೆ ಬೇಕಾದ ಸೈನಿಕ ಸರಬರಾಜು, ತಡಿಗಳು, ಡೇರೆಗಳು, ಬಂದೂಕುಗಳು ಅವಶ್ಯಕವಾಗಿದ್ದ ಕಾರಣ ಬುರ್ಜಾನ್ಪುರದಿಂದ ಅವರು ನಿರ್ಮಿಸಿದ ಮೂರನೇ ರಸ್ತೆ ಕರ್ನಾಟಕದಲ್ಲಿ ಕಂಡುಬರುತ್ತದೆ.(ಸುಬ್ರಮಣ್ಯಂ,೧೯೯೦: ೫೬). ಬುರ್ಜಾನ್ಪುರದಿಂದ ದಕ್ಷಿಣದ ಬಿಜಾಪುರ ಗೋಲ್ಕೊಂಡಕ್ಕೆ ಸಂಪರ್ಕ ಕಲ್ಪಿಸುವ ಮಾರ್ಗವಾಗಿ ಈ ರಸ್ತೆಯು ೧೭ನೇ ಶತಮಾನದಲ್ಲಿ ನಿರ್ಮಿತವಾದ ರಸ್ತೆಯೆಂದು ಗುರುತಿಸಬಹುದು.

ಟಿಪ್ಪು ವ್ಯಾಪಾರ ವಾಣಿಜ್ಯವನ್ನು ಅಭಿವೃದ್ಧಿಗೊಳಿಸುವುದಕ್ಕೆ ಕರಾವಳಿ ಭಾಗದಲ್ಲಿ ಉತ್ತಮವಾದ ರಸ್ತೆಗಳನ್ನು ನಿರ್ಮಿಸಿದ್ದನು. ಬಿದನೂರಿನಿಂದ ಸುಂಡದಲ್ಲಿ ಹೈದರ್ ಆಲಿಯು ಉತ್ತಮ ರಸ್ತೆಯನ್ನು ಹಾಗೂ ಪಾದಚಾರಿ ರಸ್ತೆಯನ್ನು ಶಿಲೆಯಿಂದ ಕಾಡಿನ ಉದ್ದಕ್ಕೂ ನಿರ್ಮಿಸಿದ್ದನು. ಪಾದಚಾರಿ ರಸ್ತೆ ಬಿಂಗಿ ಹಾಗೂ ಖದ್ರ ಬೆಟ್ಟಗಳ ನಡುವೆ ಇದ್ದು, ಇವು ಕದ್ವಾನ, ಸದಾಶಿವಗಢ್(ಮಜೀರಾಬಾದ್) ಹಾಗೂ ಮೀರಜ್‌ಗಳನ್ನು ಸಂಧಿಸುತ್ತಿದ್ದವು. ಉತ್ತರ ಕನ್ನಡದ ಅಪರ್ಸ್ ಹಾಗೂ ಬೈತಾ ಕೋಲ್‌ನಲ್ಲಿ ಉಪಯೋಗಿಸುವ ರಸ್ತೆಯೊಂದನ್ನು ಹೈದರ್ ರಸ್ತೆ ಎಂದು ಗುರುತಿಸಲಾಗಿದೆ. ಜುಮ್ಮಾಬಾದ್, ಮಂಗಳೂರು ಮತ್ತು ಮಜೀದಾಬಾದ್‌ನ(ಸದಾಶಿವಗಢ್) ರಸ್ತೆಯು ದಕ್ಷಿಣದಿಂದ ಉತ್ತರಕ್ಕೆ ಸಂಪರ್ಕವನ್ನು ಕಲ್ಪಿಸಿತ್ತು.

ಟಿಪ್ಪು ಸುಲ್ತಾನ್ ಮತ್ತು ಹೈದರ್ ಕಾಲಾವಧಿಯಲ್ಲಿ ಹೆಚ್ಚಿನ ರಸ್ತೆಗಳು ನಿರ್ಮಿಸಲ್ಪಟ್ಟವೆಂದು ಹೇಳಬಹುದು. ಕಾರಣ ಬಂಡವಾಳ, ಅಭಿವೃದ್ಧಿ ಹಾಗೂ ಮೈಸೂರು ಸಂಸ್ಥಾನವು ವಿದೇಶೀಯ ವ್ಯಾಪಾರದಲ್ಲಿ ಈ ಕಾಲದಲ್ಲಿ ಗುರುತಿಸಿಕೊಂಡಿತ್ತು. ಹೈದರ್ ಮಲಬಾರನ್ನು ವಶಪಡಿಸಿಕೊಂಡಾಗ ಅಲ್ಲಿ ಸಂಚರಿಸಲು ಮಾರ್ಗವಿರಲಿಲ್ಲ. ಬಹಳ ಕಷ್ಟದಿಂದ ಏಕಕಾಲದಲ್ಲಿ ಮೂರು ಜನ ಸಂಚರಿಸಬಹುದಾದ ಮಾರ್ಗವಿತ್ತೆಂದು ಹೇಳಬಹುದು(ಸಾಕಿ,(೧) ೧೯೯೮:೪೫೪). ಈ ಮೂಲಕ ಹೈದರ್ ಮತ್ತು ಟಿಪ್ಪು ಕಾಲದಲ್ಲಿ ಮಲಬಾರ್ ಮತ್ತು ರಾಜ್ಯದ ಎಲ್ಲ ಭಾಗಗಳಲ್ಲಿ ಸಂಚರಿಸಲು ರಸ್ತೆ ಮಾರ್ಗಗಳನ್ನು ನಿರ್ಮಿಸಿದ್ದರು.

ಬ್ರಿಟಿಶರು ಭಾರತವನ್ನು ವಶಪಡಿಸಿಕೊಳ್ಳುವುದಕ್ಕೂ ಮುಂಚೆ ಸುಲಭವಾದ ಸಂಚಾರಿ ಮಾರ್ಗಗಳನ್ನು ನಿರ್ಮಿಸಿದ ಕೀರ್ತಿ ಟಿಪ್ಪುವಿಗೆ ಸಲ್ಲುತ್ತದೆ. ಟಿಪ್ಪು ಈ ಮಾರ್ಗಗಳ ನಿರ್ಮಾಣದ ಹಿಂದಿನ ಉದ್ದೇಶವು ರಾಜಕೀಯ ಹಿನ್ನೆಲೆಯಿಂದ ಕೂಡಿದ್ದರೂ ಅದು ರಾಜ್ಯಕ್ಕೆ ಉಪಯುಕ್ತ ಕೆಲಸವನ್ನು ನಿರ್ವಹಿಸಿದೆ ಎಂದು ಹೇಳಬಹುದು. ವ್ಯಾಪಾರ ವಾಣಿಜ್ಯದ ಮೂಲಕ ರಸ್ತೆಗಳು ಅಭಿವೃದ್ಧಿಯಾದರೂ ಇಲ್ಲಿ ಗಮನಿಸುವುದು ಮುಖ್ಯವಾಗಿ ಟಿಪ್ಪು ವಿದೇಶಗಳೊಂದಿಗೆ ನೇರ ಸಂಪರ್ಕವನ್ನು ಹೊಂದಬೇಕೆಂಬ ಉದ್ದೇಶದಿಂದ ಈ ಮಾರ್ಗಗಳನ್ನು ಅಭಿವೃದ್ಧಿಪಡಿಸಿದ್ದನು.

ಕರ್ನಾಟಕದ ಕರಾವಳಿ ಭಾಗದಲ್ಲಿ ಹೆಚ್ಚಿನ ರಸ್ತೆ ಮಾರ್ಗಗಳು ಟಿಪ್ಪು ಕಾಲದಲ್ಲಿ ನಿರ್ಮಿಸಿಲ್ಪಟ್ಟವೆಂದರೆ ತಪ್ಪಾಗಲಾರದು. ನಿಕಲೇಗುಹಾ ಎಂಬ ಚರಿತ್ರೆಕಾರ ಮಲಬಾರಿನಲ್ಲಿ ರಸ್ತೆಗಳನ್ನು ನಿರ್ಮಿಸಿದ ಪ್ರವರ್ತಕ ಟಿಪ್ಪು ಎಂದು ಕರೆದಿದ್ದಾರೆ.

ಟಿಪ್ಪು ಸುಲ್ತಾನನ ಸಾಮ್ರಾಜ್ಯದಲ್ಲಿ ಆಧುನಿಕ ರಸ್ತೆಗಳು ನಿರ್ಮಾಣವಾಗಿರುವುದರ ಜೊತೆ ಪ್ರಾಚೀನ ಕಾಲದಿಂದಲೂ ಅಸ್ತಿತ್ವದಲ್ಲಿದ್ದ ಎತ್ತಿನ ಗಾಡಿಗಳು ಸಹ ರಾಜ್ಯದಲ್ಲಿದ್ದವು. ೧೭೭೦ರಲ್ಲಿ ನಜರ್‌ಬಾದ್(ಮೈಸೂರು)ಗೆ ಸುಮಾರು ೩೦,೦೦೦ ಎತ್ತಿನ ಗಾಡಿಗಳಲ್ಲಿ ತಂಬಾಕು ಪ್ರತಿವರ್ಷ ಕೊಯಮತ್ತೂರಿಗೆ ಸರಬರಾಜಾಗುತ್ತಿತ್ತು. ಈ ಸರಬರಾಜಿನ ಪ್ರಮಾಣ ಹೆಚ್ಚಿದ್ದರಿಂದ ಎತ್ತುಗಳನ್ನು ಬಾಡಿಗೆಗೆ ಪಡೆಯುವುದು ಈ ಕಾಲದಲ್ಲಿತ್ತು(ಮಹಾದೇವಮ್ಮ,೨೦೦೮:೮೧). ಈ ವ್ಯಾಪಾರದಿಂದ ಗಮನಿಸುವ ಇನ್ನೊಂದು ಅಂಶವೆಂದರೆ ಇಲ್ಲಿ ಮಿಲಿಟರಿ ರಾಜಕೀಯದ ಅಂಶಗಳ ಮೂಲಕವೂ ವ್ಯಾಪಾರವು ಅಭಿವೃದ್ಧಿಯಾಗಿದೆ. ಬಂದೂಕು, ಮದ್ದುಗುಂಡುಗಳ ತ್ವರಿತ ರವಾನೆಗೂ ಈ ರಸ್ತೆ ಸಂಪರ್ಕಗಳನ್ನು ಹೆಚ್ಚಾಗಿ ನಿರ್ಮಿಸಿರುವ ಸಾಧ್ಯತೆಯಿದೆ. ಬಂದೂಕುಗಳನ್ನು ಸಾಗಿಸುವುದಕ್ಕೆ ಒಂದು ಪ್ರತ್ಯೇಕವಾದ ರಸ್ತೆಯನ್ನು ಟಿಪ್ಪು ನಿರ್ಮಿಸಿದ್ದನೆಂದು ತಿಳಿದುಬರುತ್ತದೆ.

ಕಾರವಾರವು ಬ್ರಿಟನ್‌ನೊಂದಿಗೆ ನೇರ ವ್ಯಾಪಾರ ಸಂಬಂಧವನ್ನು ಹೊಂದಿತ್ತು. ವಾರಾಹಿನದಿ ದಂಡೆಯಲ್ಲಿರುವ ಬಸ್ರೂರು ವಿದೇಶೀಯ ವ್ಯಾಪಾರದಲ್ಲಿ ಹೆಸರುವಾಸಿಯಾದ ಪಟ್ಟಣ. ಪರ್ಶಿಯಾ, ಗ್ರೀಸ್, ರೋಮ್, ಚೀನಾ ಮುಂತಾದ ದೇಶಗಳೊಂದಿಗೆ ವ್ಯಾಪಾರ ಸಂಪರ್ಕವನ್ನು ಹೊಂದಿತ್ತು. ಬಸ್ರೂರಿನ ಹಡಗುಗಳು ಕೃಷಿ ಉತ್ಪನ್ನಗಳನ್ನು ತುಂಬಿಕೊಂಡು ಮಸ್ಕತ್, ಏಡನ್ ಅರ್ಮುಜ್‌ಗಳಿಗೆ ಹೋಗುತ್ತಿದ್ದವು. ಹೊನ್ನಾವರದಿಂದ ಅಕ್ಕಿ ಮಲಬಾರಿನಿಂದ ಪೂರ್ವ ಆಫ್ರಿಕಾ ಮತ್ತು ಕೆಂಪು ಸಮುದ್ರ ಮೂಲಕ ಚೀನಾ ಮತ್ತು ಆರ್ಮುಜ್ ದೇಶಗಳೊಂದಿಗೆ ವ್ಯಾಪಾರ ಸಂಪರ್ಕವಿತ್ತು (ಗೋವಿಂದರಾಜು,೨೦೧೧:೧೦-೧೧).

ಹೀಗೆ ವಿಜಯನಗರೋತ್ತರ ಕಾಲಾವಧಿಯು ಆರ್ಥಿಕ ಸಂದಿಗ್ಧತೆಯ ಕಾಲವಾಗಿದ್ದು, ಹಲವಾರು ಬಗೆಯ ಆರ್ಥಿಕ ಸ್ಥಿತ್ಯಂತರಗಳಿಗೆ ಒಳಗಾದ ಕಾಲವೆಂದು ಗುರುತಿಸಬಹುದು. ವಸಾಹತು ಕಾಲಘಟ್ಟದ ವೇಳೆಗೆ ಹಲವಾರು ಬದಲಾವಣೆಗೆ ಒಳಗಾದವು. ಅವುಗಳಲ್ಲಿ ಸಾರಿಗೆ ಸಂಪರ್ಕಗಳ ಬದಲಾವಣೆಯೂ ಒಂದೆಂದು ಗುರುತಿಸಬಹುದು. ೧೭ನೇ ಮತ್ತು ೧೮ನೇ ಶತಮಾನವು ಕೈಗಾರೀಕರಣ ಮತ್ತು ವಿಜ್ಞಾನ-ತಂತ್ರಜ್ಞಾನದ ಆವಿಷ್ಕಾರಗಳು ಸಾರಿಗೆ ವ್ಯವಸ್ಥೆಯಲ್ಲಿ ಮಹತ್ವದ ಬದಲಾವಣೆಯನ್ನು ತಂದವು. ಸೈನಿಕರ ರವಾನೆಗೆ ಮತ್ತು ಮಿಲಿಟರಿ ಸರಕುಗಳ ರವಾನೆ, ಸಾರಿಗೆ-ಸಂಪರ್ಕಗಳನ್ನು ಅಭಿವೃದ್ಧಿಗೊಳಿಸಿದರು. ವಸಾಹತು ಕಾಲಘಟ್ಟದ ವೇಳೆಯಲ್ಲಿ ಸಾರಿಗೆ-ಸಂಪರ್ಕದಲ್ಲಾದ ಮಹತ್ವದ ಬದಲಾವಣೆಯೆಂದರೆ ರೈಲ್ವೇ ಸುಧಾರಣೆಯು ಮುಖ್ಯವಾಗಿ ಗುರುತಿಸಿಕೊಳ್ಳುತ್ತದೆ.

ಈ ಮೂಲಕವಾಗಿ ಸಾರಿಗೆ ಸಂಪರ್ಕಗಳು ನಾಡಿನ ಜೀವನಾಡಿಗಳಾಗಿದ್ದು, ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಸಂಚರಿಸಲು ಇವು ಅವಶ್ಯಕವಾಗಿವೆ. ಆರಂಭ ಕಾಲಘಟ್ಟದಲ್ಲಿ ವ್ಯಾಪಾರಿಗಳು ತಮ್ಮ ವ್ಯಾಪಾರದ ಸರಕುಗಳನ್ನು ಸಾಗಿಸಲು ಆರಂಭವಾದವುಗಳು ಇಂದು ರಾಜ್ಯ ಮತ್ತು ರಾಷ್ಟ್ರ ಹೆದ್ದಾರಿಗಳಾಗಿ ಒಂದು ಕಡೆಯಿಂದ ಮತ್ತೊಂದು ಕಡೆಗೆ ಸಂಚರಿಸಲು ಉಪಯುಕ್ತವಾಗಿವೆ.

## ೫.೬. ನಾಣ್ಯ ವ್ಯವಸ್ಥೆ

ಮಾನವ ತನ್ನ ಜೀವನ ನಿರ್ವಹಣೆಗೆ ಚರಿತ್ರೆಯಲ್ಲಿ ವಿನಿಮಯ ಪದ್ಧತಿಯನ್ನು ಪ್ರಾಚೀನ ಕಾಲದಿಂದಲೂ ಅಳವಡಿಸಿಕೊಂಡನು. ತಮಗೆ ಅವಶ್ಯಕವಾದ ವಸ್ತುಗಳನ್ನು ಕೊಡುವ ಮತ್ತು ತೆಗೆದುಕೊಳ್ಳುವ ವಿನಿಮಯ ಪದ್ಧತಿಯನ್ನು ಆರಂಭಿಸಿದನು. ನಾಗರೀಕತೆಗಳ ಆರಂಭದಿಂದಲೂ ನಾಣ್ಯ ವ್ಯವಸ್ಥೆಯ ಉಗಮವು ಕಂಡುಬರುತ್ತದೆ. ಆರಂಭದಲ್ಲಿ ವಸ್ತು ವಿನಿಮಯ ಪದ್ಧತಿಯ ಮೂಲಕ ವ್ಯಾಪಾರವನ್ನು ನಿರ್ವಯಿಸುತ್ತಿದ್ದರು. ನಾಗರೀಕತೆ ಬೆಳೆದಂತೆ ನಾಣ್ಯ ಪರಿಕಲ್ಪನೆ ಬೆಳೆದು ಒಂದು ಸಾಮ್ರಾಜ್ಯದ ಆರ್ಥಿಕ ಪರಿಸ್ಥಿತಿಯನ್ನು ಅವರು ಹೊರಡಿಸಿದ ನಾಣ್ಯಗಳ ಮೂಲಕ ಗುರುತಿಸಬಹುದಾಗಿದೆ. ಯಾವ ಪ್ರಭುತ್ವ ಆರ್ಥಿಕವಾಗಿ ಬಲಿಷ್ಠವಾಗಿರುತ್ತದೆಯೋ ಆ ಪ್ರಭುತ್ವಗಳು ಬಂಗಾರದ ನಾಣ್ಯಗಳನ್ನು ಟಂಕಿಸುತ್ತಿದ್ದವು. ನಾಣ್ಯಗಳನ್ನು ಮುದ್ರಿಸುವ ಸ್ಥಳಗಳನ್ನು ಕಮ್ಮಟಗಳೆಂದು ಅಚ್ಚಿನ ಟಂಕಸಾಲೆಗಳೆಂದು ಕರೆಯಲಾಗುತ್ತಿತ್ತು. ಈ ನಾಣ್ಯಗಳನ್ನು ಟಂಕಿಸುವ ಅಧಿಕಾರವು ಅಂದಿನ ಪ್ರಭುತ್ವದ ನಿಯಂತ್ರಣದಲ್ಲಿರುತ್ತಾನೆ. ರಾಜಧಾನಿ ಕೇಂದ್ರಗಳಲ್ಲಿ ಇಲ್ಲವೇ ಉಪರಾಜಧಾನಿಗಳಲ್ಲಿ ನಾಣ್ಯಗಳನ್ನು ಟಂಕಿಸುತ್ತಿದ್ದರು.

ನಾಣ್ಯಗಳು ಒಂದು ದೇಶದ ಆರ್ಥಿಕ ಸಂಕೇತವಾದ್ದರಿಂದ ಇವು ಅಂದಿನ ಪ್ರಭುತ್ವಗಳ ಆರ್ಥಿಕತೆಯನ್ನು ತಿಳಿಯಲು ಸಹಕರಿಸುತ್ತವೆ. ಈ ನಾಣ್ಯಗಳ ಮೂಲಕ ಅಂದಿನ ಸಮಾಜದ ಸಮಾಜಿಕ, ಆರ್ಥಿಕ, ಧಾರ್ಮಿಕತೆಯನ್ನು ತಿಳಿಯಲು ಸಹಕಾರಿಯಾಗುತ್ತವೆ. ಈ ನಾಣ್ಯಗಳು ಮೂಲಕ ಅಂದಿನ ಸಮಾಜಿಕ ಜೀವನ, ಆರ್ಥಿಕ, ಧಾರ್ಮಿಕ, ಸಾಂಸ್ಕೃತಿಕ, ಸಾಂಸ್ಕೃತಿಕ, ಕಾಲ, ರಾಜರ ಹೆಸರು ಅಂದು ಬಳಕೆಯಲ್ಲಿದ್ದ ಲೋಹಗಳು ಮೊದಲಾದವುಗಳನ್ನು ತಿಳಿಯಬಹುದಾಗಿದೆ. ಹರಪನಹಳ್ಳಿ ಪಾಳೆಯಗಾರರು ವಿಜಯನಗರದ ನಾಣ್ಯಪರಂಪರೆಯನ್ನು ಮುಂದುವರೆಸಿದರು. ಗದ್ಯಾಣ ಅಥವಾ ಪೊನ್ ಎಂಬ ಹೆಸರಿನ ನಾಣ್ಯ ಪ್ರಸಿದ್ಧವಾಗಿತ್ತು.

೧. ಗದ್ಯಾಣ–ಹತ್ತು ಪಣ
೨. ೧–ಪಣ–ಎರಡು ಅಡ
೩. ೧–ಪಣ–ನಾಲ್ಕು ಹಾಗ
೪. ೧–ಪಣ ಇಪ್ಪತ್ತು ವೀಸ
೪. ಹಾಗ–ಎರಡು ಬೇಳೆ

ಈ ಮೂಲಕ ನಾಣ್ಯವನ್ನು ಅವರು ವಿಂಗಡಿಸಿದ್ದರು. ಅಕ್ಕಸಾಲಿಗರು ಈ ನಾಣ್ಯ ತಯಾರಿಸುವ ಕಾರ್ಯವನ್ನು ನಿರ್ವಹಿಸುತ್ತಿದ್ದರು. ಅಕ್ಕಸಾಲಿಗರಿಂದ ತಯಾರಾದ ಈ ನಾಣ್ಯ ಸರ್ಕಾರದಲ್ಲಿ ಚಲಾವಣೆಯಲ್ಲಿತ್ತು. (ಕುಂ.ಬಾ.ಸದಾಶಿವಪ್ಪ.೨೦೧೬:೭೩). ಹೀಗೆ ಹರಪನಹಳ್ಳಿ ಪಾಳೆಯಗಾರರು ವಿಜಯನಗರದ ಅರಸರ ಮಾದರಿಯಲ್ಲಿಯೇ ನಾಣ್ಯ ವ್ಯವಸ್ಥೆಯನ್ನು ಮುಂದುವರೆಸಿದರು.

ಗದ್ಯಾಣದ ತೂಕ–೫೮ರಿಂದ ೬೦.೧ ಗ್ರೇನಗಳೆಂದು ತಿಳಿದರೆ ೯೬ ಗ್ರೇನಗಳೆಂದು ಅಲ್ತೇಕರ್ ತಿಳಿಸಿದ್ದಾರೆ. ಹರಪನಹಳ್ಳಿ ಪಾಳೆಯಗಾರನಾದ ಸೋಮಶೇಖರನಾಯಕನ ಕಾಲದಲ್ಲಿ ನಾಣ್ಯಗಳ ಬಳಕೆಯನ್ನು ಗುರುತಿಸಬಹುದಾಗಿದೆ. ಹರಪನಹಳ್ಳಿಯ ಸಾಮಂತ ಅರಸ ಗಡಾದ ದೇಸಾಯಿ

ಭರಮನಗೌಡರು ಹರಪನಹಳ್ಳಿ ನಾಣ್ಯ ೧೫೦೦ನ್ನು ಬಳಸಿ ಕುರದಗಡ್ಡೆ ಕೋಟೆಯನ್ನು ನಿರ್ಮಿಸಿದ್ದಾಗಿ ತಿಳಿಸಿದ್ದನು. ಹಾಗೆಯೇ ಬಾಗಳಿಯ ಬಸಪ್ಪನಾಯಕ ಬೇರೆ ಅರಸು ಮನೆತನದೊಂದಿಗೆ ಹತ್ತು ಸಾವಿರ ವರಹ ವ್ಯವಹಾರ ನಡೆಸಿದನೆಂದು ಹರಪನಹಳ್ಳಿಯ ನಿಚ್ಚವನಹಳ್ಳಿಯ ಶಾಸನ ತಿಳಿಸುತ್ತದೆ. ಸೋಮಶೇಖರನಾಯಕ ಸ್ವಂತ ಟಂಕಸಾಲೆಯನ್ನು ಹೊಂದಿದ್ದನು. ಇವನ ಶಾಸನ ಮತ್ತು ನಿರೂಪಗಳಲ್ಲಿ ಹಣ ಕಾಣಿ, ಪವನ್, ಹೊನ್ನೂ ವರಹ, ಪಗೋಡಗಳನ್ನು ಬಳಸುತ್ತಿದ್ದರು.(ಮಲ್ಲಿಕಾರ್ಜುನಪ್ಪ ೨೦೧೬: ೧೨೨)ಹರಪನಹಳ್ಳಿನಾಯಕರು ಸಾಮಂತಾಧಿಕಾರಿಗಳಾಗಿದ್ದರೂ ಸಹ ತಮ್ಮದೇ ಟಂಕಸಾಲೆಯನ್ನು ಹೊಂದಿರುವುದು ,ಕಂಡುಬರುತ್ತದೆ.

ಚಿತ್ರದುರ್ಗದ ನಾಯಕರು ಪ್ರತ್ಯೇಕವಾದ ಟಂಕಸಾಲೆಯನ್ನು ಹೊಂದಿದ್ದರೂ ಇಲ್ಲವೋ ಎಂಬುದನ್ನು ಕುರಿತು ಅನೇಕ ಚರ್ಚೆಗಳಾಗಿವೆ. ಕೋಟೆಯ ಪರಿಸರದಲ್ಲಿ ಒಂದು ಟಂಕಸಾಲೆ ಇದೇ ಎಂದು ಎಂ.ಎಸ್.ಪುಟ್ಟಣ್ಣ ಅವರು ಅಭಿಪ್ರಾಯ ಪಡುತ್ತಾರೆ. ಲಕ್ಷ್ಮಣ್ ತೆಲಗಾವಿ ಅವರು ಚಿತ್ರದುರ್ಗದ ನಾಯಕರು ಟಂಕಸಾಲೆಯನ್ನು ಹೊಂದಿದ್ದರು ಎಂದು ಅಭಿಪ್ರಾಯ ಪಡುತ್ತಾರೆ. ಟಂಕ ಸಾಲೆಯ ಅಕ್ಕಸಾಲಿಗನು ಸಂಸ್ಥಾನದ ಆಭರಣವನ್ನು ಮತ್ತು ನಾಣ್ಯ ಟಂಕಿಸುವ ಅಧಿಕಾರವನ್ನು ಹೊಂದಿರಬೇಕಾಗಿತ್ತು. ಇವನ್ನು ಆಯಗಾರರಲ್ಲಿ ಒಬ್ಬನ್ನಾಗಿ ಸಂಸ್ಥಾನದೊಂದಿಗೆ ಸಂಬಂಧವನ್ನು ಹೊಂದಿರಬೇಕಾಗಿತ್ತು. ಚಿತ್ರದುರ್ಗದ ನಾಯಕರು 'ದುರ್ಗಿವರಹ ಎಂಬ ಬಂಗಾರದ ನಾಣ್ಯವನ್ನು ಚಲಾವಣೆಗೆ ತಂದರು. ಈ ದುರ್ಗಿವರಹವನ್ನು ಕುರಿತಂತೆ ಅನೇಕ ಚರ್ಚೆಗಳು ನಡೆದಿವೆ. ಚಿತ್ರದುರ್ಗದಲ್ಲಿ ಟಂಕಸಾಲೆಯಿದ್ದಿತು. ಇದು ಅರಮನೆಯ ಆವರಣದಲ್ಲೇ ಮಹಡಿಯ ಮೇಲೆ ಕಾರ್ಯ ನಿರ್ವಹಿಸುತ್ತಿತ್ತು. ಚಿನ್ನದ ತಾಂತ್ರಿಕತೆಯಲ್ಲಿ ನಿಪುಣರಾಗಿದ್ದ ೮ ಜನರನ್ನು ಇಲ್ಲಿ ಕಾರ್ಯ ನಿರ್ವಹಿಸಲು ನಿಯಮಿತವಾಗಿತ್ತು. ಚಿನ್ನದಮನೆ ಎಂದು ಈ ಕಟ್ಟಡ ಖ್ಯಾತವಾಗಿತ್ತು. ಹೇಮಣ್ಣನೆಂಬವನು ಇಲ್ಲಿ ಟಂಕಾಧಿಕಾರಿಯ ಕಾರ್ಯ ನಿರ್ವಹಿಸುತ್ತಿದ್ದನು. ಇವನ ನೇತೃತ್ವದಲ್ಲಿ ಚಿನ್ನ-ಬೆಳ್ಳಿಗಳನ್ನು ತೆಗೆದುಕೊಂಡು ಬಂದು ಅವುಗಳಿಂದ ನಾಣ್ಯಗಳನ್ನು ಟಂಕಿಸುತ್ತಿದ್ದರು. (ತೆಲಗಾವಿ ೨೦೧೮: ೧೦೧). ಚಿತ್ರದುರ್ಗದ ಮದಕರಿವಂಶಜರ ದುರ್ಗಿವರಹ : ತೂಕ ೩:೪ ಗ್ರಾಂ ಇದ್ದು ಕುಳಿತಿರುವ ದುರ್ಗಿಯ ದೇವತೆಯ ಚಿತ್ರ ಆ ನಾಣ್ಯಗಳ ಮೇಲೆ ಇರುತ್ತದೆ. ಚಿತ್ರದುರ್ಗದ ಕಾಮಗೇತಿ ಅರಸರು ವಿಜಯನಗರದ ಮಾದರಿಯ ದುರ್ಗಾವರಹವನ್ನು ಟಂಕಿಸುತ್ತಿದ್ದರು. (ಗೋಪಾಲ್, ೨೦೦೫ :೨೭೧) ಈ ದುರ್ಗಿವರಹ ಕುರಿತು ಅಲ್ಲಿನ ಗಿರಿದುರ್ಗ ಕುರಿತದ್ದು ಮತ್ತು ಕಾಳಿಯಾದ ವಿಜಯನಗರದ ಅರಸ ಹೆಸರಿನಿಂದ ಪ್ರಕಟವಾಗಿರುವುದರಿಂದ ಈ ನಾಣ್ಯ ಕುರಿತ ಸ್ಪಷ್ಟ ಮಾಹಿತಿಯು ದೊರೆಯುವುದಿಲ್ಲ.

ಕೆಳದಿ ನಾಯಕರ ಸುವ್ಯವಸ್ಥಿತ ಆಡಳಿತದಲ್ಲಿ ನಾಣ್ಯ ವ್ಯವಸ್ಥೆಯು ಒಂದು ಅಂಗವಾಗಿದೆ. ವಿಜಯನಗರ ವರಹಗಳು ೫೨ ಗ್ರೇನ್ ತೂಕದಿಂದ ಕೂಡಿವೆ. ವರಹ ಕೆಳದಿಯ ನಾಯಕರ ಕಾಲದ ಹೆಚ್ಚಿನ ಮೌಲ್ಯವನ್ನು ಹೊಂದಿರುವ ಚಿನ್ನದ ನಾಣ್ಯ ಇದು ಗದ್ಯಾಣಕ್ಕೆ ಸಮನಾದದ್ದು. ಈ ನಾಣ್ಯದ ತೂಕ ೫೨ ಗ್ರೇನ್ : ವ್ಯಾಸ ಅರ್ಧ ಅಂಗುಲದಿಂದ. ೦.೪ ಅಂಗುಲದವರೆಗೆ ಇದೆ. ಇಕ್ಕೆರಿ ವರಹಗಳು ವರಹದ ಅರ್ಧ ಭಾಗವೇ ಹೊನ್ನು ಚಿನ್ನದ ನಾಣ್ಯ ೨೬ ಗ್ರೇನ್ ತೂಕ ಹೊಂದಿದೆ. ಇದರ ವ್ಯಾಸ ೦.೪ ಅಂಗುಲವಾಗಿತ್ತು. ವಿಜಯನಗರ ಕಾಲದಲ್ಲಿ ಅರ್ಧ ವರಹದ

ನಾಣ್ಯವನ್ನು ಪ್ರತಾಪ ಎಂದು ಕರೆಯುತ್ತಿದ್ದರು. ಇದನ್ನು ಕೆಳದಿ ನಾಯಕರು ಬಳಸಿಲ್ಲ. ಪೊನ್ ಅಥವಾ ಹೊನ್ ಎಂಬ ವಿಜಯನಗರ ನಾಣ್ಯ ವರಹಕ್ಕೆ ಸಮನಾದದು. ಆದರೆ ಕೆಳದಿ ನಾಯಕರ ಕಾಲದಲ್ಲಿ ಹೊನ್ನು ವರಹದ ಅರ್ಧಭಾಗವಾಗಿತ್ತು. (ಕಲಬುರ್ಗಿ, ರಾಮಭಟ್ಟ ೧೯೯೪: ೩೧೯) ವಿಜಯನಗರ ನಾಣ್ಯವಲ್ಲದೆ ಇವರ ಕಾಲದಲ್ಲಿ ಧರಣ ಎಂಬ ಚಿನ್ನದ ನಾಣ್ಯ ಪರಿಚಿತವಾಗಿದೆ.

ಹೊನ್ನು ವರಹ ಪೊನ್ನು ಧರಣ, ಹಣ ಅಥವಾ ಪಣ, ಅಚ್ಚ ಇವು ಕೆಳದಿ ನಾಯಕರ ಕಾಲದ ಚಿನ್ನದ ನಾಣ್ಯಗಳಾಗಿದ್ದವು. ಬೆಳ್ಳಿಯ ನಾಣ್ಯವು ಕೆಳದಿ ನಾಯಕರ ಕಾಲದಲ್ಲಿ ಕಂಡು ಬಂದಿಲ್ಲ. ಕಾಸು, ಅರೆವೀಸ ತಾಮ್ರದ ನಾಣ್ಯಗಳಾಗಿದ್ದವು. ನಗರ ಮತ್ತು ಬಿದನೂರಿನಲ್ಲಿ ಟಂಕಸಾಲೆಗಳಿದ್ದು ಟಂಕಸಾಲೆಯ ಅಧಿಕಾರಿ ಅದನ್ನು ನೋಡಿಕೊಳ್ಳುತ್ತಿದ್ದನು. ಸದಾಶಿವನಾಯಕ, ಶಿವಪ್ಪನಾಯಕ, ವೆಂಕಟಪ್ಪನಾಯಕ ಕಾಲದ ನಾಣ್ಯಗಳು ಪ್ರಸ್ತುತ ದೊರೆತಿರುವುದು ಕಂಡುಬರುತ್ತದೆ. ಹೀಗೆ ಕೆಳದಿ ನಾಯಕರು ವಿಜಯನಗರದ ನಾಣ್ಯವ್ಯವಸ್ಥೆಯನ್ನು ಅಳವಡಿಸುವುದರ ಜೊತೆ ಕೆಲವು ಹೊಸ ನಾಣ್ಯಗಳನ್ನು ಅಗತ್ಯಕ್ಕೆ ತಕ್ಕಂತೆ ಟಂಕಿಸಿರುವುದು ಕಂಡುಬರುತ್ತದೆ.

ಬಿಜಾಪುರದ ಸುಲ್ತಾನರ ಆರಂಭದ ಅರಸರು ನಾಣ್ಯವನ್ನು ಟಂಕಿಸಲಿಲ್ಲ, ಇಬ್ರಾಹಿಂ ಆದಿಲ್‌ಶಾಹನನ್ನು ತಮ್ಮದೇಯಾದ ವೃತ್ತಾಕಾರದ ಮತ್ತು ಚೌಕಾಕಾರದ ನಾಣ್ಯವನ್ನು ಟಂಕಿಸಿದನು ಲಾರಿನ್ ಎಂಬ ನಾಣ್ಯ ಹೇರ್‌ಪಿನ್ ಮಾದರಿಯಲ್ಲಿದೆ. ಈ ನಾಣ್ಯವು ವೈಶಿಷ್ಟಪೂರ್ಣವಾದ ನಾಣ್ಯ ಪರ್ಶಿಯನ್ ಅಕ್ಷರ ಸುಲ್ತಾನನ ಬಿರುದು. ಟಂಕಸಾಲೆ ಮತ್ತು ಕಾಲವು ಈ ನಾಣ್ಯದಲ್ಲಿದೆ. ಲಾರಿನ್ ಎಂಬ ಇನ್ನೊಂದು ಬೆಳ್ಳಿಯ ನಾಣ್ಯವಾಗಿದ್ದು ೩.೭೫ ತೂಕ ೭೫ ಗ್ರೇನ್ ತೂಕವಿದೆ. (ನರಸಿಂಹಮೂರ್ತಿ, ೨೦೦೮ :೧೧೪ ಹೀಗೆ ಬಿಜಾಪುರದ ಸುಲ್ತಾನರು ನಾಣ್ಯವ್ಯವಸ್ಥೆ ಕಂಡುಬರುತ್ತಿದೆ. ಇದೇ ಮಾದರಿಯನ್ನು ಬರೀದ್‌ಶಾಹಿಗಳು ಮುಂದುವರೆಸಿರುವುದು ಕಂಡುಬರುತ್ತದೆ. ಮೈಸೂರು ಒಡೆಯರ ಕಾಲದಲ್ಲಿಯೂ ವಸ್ತುವಿನಿಮಯ ಮತ್ತು ನಗದು ರೂಪದ ವ್ಯವಹಾರ ಎರಡು ರೀತಿಯಲ್ಲಿ ವ್ಯವಹಾರ ನಡೆಯಿತ್ತಿತ್ತು. ಮೈಸೂರಿನ ಕಂಠೀರವ ನರಸರಾಜ ಒಡೆಯರ್ ಮೊದಲ ಬಾರಿಗೆ (೧೬೩೮-೧೬೫೯) ೧೬೪೬ ರಲ್ಲಿ ಶ್ರೀರಂಗಪಟ್ಟಣದಲ್ಲಿ ಟಂಕಸಾಲೆಯನ್ನು ಆರಂಭಿಸಿದರು. ಅಂದಿನಿಂದ ಅವರು ಸ್ವತಂತ್ರ ನಾಣ್ಯವನ್ನು ಟಂಕಿಸಿದರು. ಕಂಠೀರವ ಪಗೋಡ (ಗುಲಿಜ್)ಇದು ವರಹಾ ನಾಣ್ಯಕ್ಕೆ ಹೋಲುತ್ತಿತ್ತದೆ. ಅರ್ದ ವರಹಾ ಇದು ೧೬೭೪ ರ ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಉಲ್ಲೇಖಿತವಾಗಿದೆ.

ಕಂಠೀರವ ಗುಲಿಜ ಮತ್ತು ವರಹವು ನಾಣ್ಯದಲ್ಲಿ ಸಮನಾದವುಗಳಾಗಿವೆ. ನಿಷ್ಕಾ ಎಂಬ ನಾಣ್ಯದ ಉಲ್ಲೇಖವು ೧೭೨೨ರಲ್ಲಿ ಉಲ್ಲೇಖಿಸಲ್ಪಟ್ಟಿದ್ದ ಚಿನ್ನದ ನಾಣ್ಯವಾಗಿತ್ತು. (ಸತ್ಯನಾರಾಯಣ ೧೯೯೬: ೨೨೯) ಹೈದರ್ ಮತ್ತು ಟಿಪ್ಪು ಸುಲ್ತಾನನ್ನು ಚಿನ್ನಮತ್ತು ಬೆಳ್ಳಿಯ ನಾಣ್ಯಗಳನ್ನು ಟಂಕಿಸಿದರು ಚಿನ್ನದ ವರಹವನ್ನು ಪಗೋಡ ಎಂದು ಕರೆದನು. ಇದು ೫೨ ಗ್ರೇನ್ ತೂಕ ಉಳ್ಳದಾಗಿತ್ತು. ಟಂಕಸಾಲೆಗಳನ್ನು ಸ್ಥಾಪಿಸಿ ಪ್ರತಿಯೊಂದು ಟಂಕಸಾಲೆಗೂ ಪರ್ಶಿಯನ್ ಹೆಸರನ್ನು ಕೊಟ್ಟನು ಪಟ್ಟನ್ (ಶ್ರೀರಂಗಪಟ್ಟಣ), ನಗರ (ಬಿದನೂರು-ನಜರ್‌ಬಾದ್) ಚಿತ್ರದುರ್ಗ (ಫರುಕ್‌ಯಾಬ್ ಹಿಸಾದ್), ಧಾರವಾಡ (ಖುರ್ಷಿದ್ ಸವಾರ್) ಗುತ್ತಿ (ಫೈಸ್ ಹಿಸಾದ್) ಕದ್ರಿ ಹೀಗೆ ಮೊದಲಾದ

ಭಾಗಗಳಲ್ಲಿ ನಾಣ್ಯ ಟಂಕಿಸುವ ಟಂಕಸಾಲೆಗಳನ್ನು ಆರಂಭಿಸಿದನು.ಅಹದೀ, ಸದೀಕಿ, ಫಾರೂಕೀ ಮತ್ತು ಪಣಂ ಚಿನ್ನದ ನಾಣ್ಯಗಳು, ಹೈದರಿ, ಇಮಾಮೀ ಅಬಿದೀ, ಚಾಕರೀ, ಜಫರೀ, ಕಾಜಮೀ ಖಿಜ್ರೀ ಬೆಳ್ಳಿಯ ನಾಣ್ಯಗಳಾಗಿವೆ. ಹೀಗೆ ಟಿಪ್ಪು ಹೈದರ್ ಕಾಲವು ಹಲವಾರು ಸುಧಾರಣೆ ಮತ್ತು ಬದಲಾವಣೆಗಳಲ್ಲಿ ನಾಣ್ಯ ಸುಧಾರಣೆಯು ಒಂದಾಗಿದೆ. (ನರಸಿಂಹಮೂರ್ತಿ ೨೦೦೮: ೧೩೮.೧೩೯).

ಭಾರತಕ್ಕೆ ಬಂದ ಯುರೋಪಿಯನ್ನರು ತಮ್ಮದೇ ಆದ ನಾಣ್ಯ ವ್ಯವಸ್ಥೆಯನ್ನು ಟಂಕಿಸಿ ಚಲಾಯಿಸುತ್ತಿದ್ದರು. ೧೪೯೮ರಲ್ಲಿ ಪೋರ್ಚುಗೀಸರು ಭಾರತಕ್ಕೆ ಬಂದರು ರುಪಿಯ ಎಂಬ ಬೆಳ್ಳಿಯ ನಾಣ್ಯ ಮುದ್ರಿಸಲಾರಂಭಿಸಿದ್ದರು. ಆದರೆ ೧೮೪೯ರಲ್ಲಿ ಅದನ್ನು ಗೋವಾದ ಟಂಕಸಾಲೆ ಮುಚ್ಚಲಾಯಿತು. ನಂತರ ಮುಂಬೈನ ಬ್ರಿಟಿಷ್ ಟಂಕಸಾಲೆಯಿಂದ ನಾಣ್ಯಗಳನ್ನು ಮುದ್ರಿಸಲಾರಂಭಿಸಿದರು ಕರ್ನಾಟಕದ ಕರಾವಳಿಯಲ್ಲಿ ಇವರ ಯಾವುದೇ ನಾಣ್ಯಗಳು ಕಂಡುಬರುವುದಿಲ್ಲ ಕೊಚ್ಚಿನ್, ಬಸೇನ್, ಡಾಮನ್, ಡಿಯು ಚೌರಗಳಲ್ಲಿ ಟಂಕಸಾಲೆಯಳನ್ನು ಇವರು ಸ್ಥಾಪಿಸಿದ್ದರು. ಇವರು ಅಶ್ರಫಿ ಎಂದು ಕರೆಯುವ ನಾಣ್ಯವನ್ನು ಬಳಸುತ್ತಿದ್ದರೆಂಬ ಉಲ್ಲೇಖ ದೊರೆಯುತ್ತದೆ. ನಂತರ ಬ್ರಿಟಿಶರು ೧೮೩೦ರ ನಂತರ ಟಂಕಸಾಲೆ ಮತ್ತು ತಮ್ಮದೇ ನಾಣ್ಯ ಟಂಕಿಸಲಾರಂಭಿಸಿದ್ದರು. ಅಂದಿನ ಸ್ಥಳೀಯ ನಾಯಕರಲ್ಲಿದ್ದ ನಾಣ್ಯಗಳನ್ನೇ ಮುಂದುವರೆಸಿದರು. ಹೀಗೆ ವಿಜಯನಗರೋತ್ತರ ಕಾಲದ ಕೆಳದಿ, ಚಿತ್ರದುರ್ಗ, ಮೈಸೂರು ಒಡೆಯರ್ ಹೈದರ್ ಮತ್ತು ಟಿಪ್ಪು ಸುಲ್ತಾನನ ನಾಣ್ಯ ವ್ಯವಸ್ಥೆಯನ್ನು ಗಮನಿಸಬಹುದಾಗಿದೆ.

ಅಧ್ಯಾಯ – ಆರು

# ಸ್ಥಳೀಯ ನಾಯಕರು ಮತ್ತು ಯುರೋಪಿಯನ್ ಕಂಪನಿಗಳೊಂದಿಗೆ ಆರ್ಥಿಕ ಸಂಬಂಧಗಳು

೬.೧. ಸ್ಥಳೀಯ ನಾಯಕರು ಮತ್ತು ಪೋರ್ಚುಗೀಸರ ಆರ್ಥಿಕ ಸಂಬಂಧಗಳು
೬.೨. ಸ್ಥಳೀಯ ನಾಯಕರು ಮತ್ತು ಡಚ್ಚರ ಆರ್ಥಿಕ ಸಂಬಂಧಗಳು
೬.೩. ಸ್ಥಳೀಯ ನಾಯಕರು ಮತ್ತು ಫ್ರೆಂಚರ ಆರ್ಥಿಕ ಸಂಬಂಧಗಳು
೬.೪. ಸ್ಥಳೀಯ ನಾಯಕರು ಮತ್ತು ಇಂಗ್ಲಿಶ್‌ರ ಆರ್ಥಿಕ ಸಂಬಂಧಗಳು

## ಅಧ್ಯಾಯ – ಆರು

# ಸ್ಥಳೀಯ ನಾಯಕರು ಮತ್ತು ಯುರೋಪಿಯನ್ ಕಂಪನಿಗಳೊಂದಿಗೆ ಸಂಬಂಧಗಳು

ಭಾರತದ ಚರಿತ್ರೆಯನ್ನು ಪ್ರಾಚೀನ, ಮಧ್ಯಕಾಲೀನ ಮತ್ತು ಆಧುನಿಕ ಎಂಬ ಮೂರು ಕಾಲಘಟ್ಟಗಳನ್ನು ಯುರೋಪಿಯನ್ ಇತಿಹಾಸಕಾರನಾದ ಜೆ.ಎಸ್.ಮಿಲ್ ಅವರು ಎ ಹಿಸ್ಟ್ರೀ ಆಫ್ ಇಂಡಿಯಾ' ಎಂಬ ಕೃತಿಯಲ್ಲಿ ವರ್ಗೀಕರಿಸಿದ್ದಾರೆ. ಪ್ರಾಚೀನ ಕಾಲದ ಅರಸುಮನೆತನಗಳ ಮೂಲಕ ಸಾಮ್ರಾಜ್ಯಶಾಹಿಯನ್ನು ಕಂಡುಕೊಂಡ ಕಾಲವಾಗಿದೆ. ಮಧ್ಯಕಾಲೀನ ಭಾರತದಲ್ಲಿ ಸ್ಥಳೀಯ ಪ್ರಭುತ್ವಗಳ ಸಂಘಟನೆ ಮತ್ತು ಹೋರಾಟ ಹಾಗೂ ಪಾಶ್ಚಿಮಾತ್ಯರ ಆಗಮನ ಕಾಲವಾಗಿದೆ. ಈ ಕಾಲಘಟ್ಟದಲ್ಲಿ ವಿವಿಧ ಭಾಷೆ ಸಂಸ್ಕೃತಿಗಳ ತಿಕ್ಕಾಟ, ಹಲವಾರು ಭಾಷೆಗಳ ಅಸ್ತಿತ್ವದ ಯಜಮಾನಿಕೆಯನ್ನು ಗಮನಿಸುತ್ತೇವೆ. ಕೊನೆಯ ಘಟ್ಟವಾದ ಆಧುನಿಕ ಕಾಲ ಎಂಬುದು ಪ್ರತ್ಯೇಕ ವಲಯವಾಗಿ ಗುರುತಿಸಿಕೊಂಡಿದ್ದು, ಭಾರತ ವಸಾಹತು ನೆಲೆಯಾಗಿ ಯುರೋಪಿಯನ್ನರಾದ ಪೋರ್ಚುಗೀಸರು, ಡಚ್ಚರು, ಫ್ರೆಂಚ್, ಬ್ರಿಟಿಶ್ ಕಂಪನಿಗಳ ಮೂಲಕ ಆಡಳಿತ, ಸಂಸ್ಕೃತಿ, ಶಿಕ್ಷಣ, ಭಾಷೆ ಹಿನ್ನೆಲೆಯಲ್ಲಿ ಗುರುತಿಸಿಕೊಂಡಿದೆ. ಪ್ರಸ್ತುತ ಅಧ್ಯಯನವು ವಿಜಯನಗರೋತ್ತರಕ್ಕೆ ಸೀಮಿತವಾಗಿರುವುದರಿಂದ ಇದು ಮಧ್ಯಯುಗದ ಅಂತಿಮ ಹಾಗೂ ಆಧುನಿಕ ಕಾಲದ ಆರಂಭಕ್ಕೆ ಸೇರಿದ ಕಾಲಘಟ್ಟವಾಗಿದೆ. ಭಾರತವು ಈ ಕಾಲದಲ್ಲಿ ಅಷ್ಟೇ ಅಲ್ಲದೆ ಪ್ರಾಚೀನ ಕಾಲದಿಂದಲೂ ವ್ಯಾಪಾರ ವಾಣಿಜ್ಯ ಸಂಬಂಧವನ್ನು ಹೊಂದಿರುವ ಅಂಶಗಳನ್ನು ನೋಡುವುದಾದರೆ ಪ್ರಾಚೀನ ಕಾಲದಿಂದಲೂ ಅಂತಾರಾಷ್ಟ್ರೀಯ ವಾಣಿಜ್ಯವು ದೇಶೀಯ ವಿದೇಶೀಯವೆಂಬ ಎರಡು ಬಗೆಯಲ್ಲಿ ಮಹತ್ವ ಪಡೆದಿತ್ತು. ಮೊದಲನೆಯದಾಗಿ ಅಂತಾರಾಷ್ಟ್ರೀಯ ವ್ಯಾಪಾರ ದೇಶೀಯ ಉತ್ಪನ್ನಗಳಿಗೆ ಬೇಡಿಕೆಯನ್ನು ಹೆಚ್ಚಿಸುತ್ತಿತ್ತು. ಮತ್ತು ವಿದೇಶೀಯ ಉತ್ಪನ್ನಗಳನ್ನು ಪಡೆಯಲು ನೆರವಾಗುತ್ತಿತ್ತು. ಇದರಿಂದ ಒಂದು ದೇಶದ ಆರ್ಥಿಕ ಚಟುವಟಿಕೆ ಹೆಚ್ಚಾಗಲು ಮತ್ತು ಹೊರಗಿನ ಸಂಪರ್ಕ ಸಾಧಿಸಲು ಅವಕಾಶವಾಗುತ್ತಿತ್ತು. ಎರಡನೆಯದಾಗಿ ಅದು ರಾಜ್ಯ ಬೊಕ್ಕಸವನ್ನು ಹೆಚ್ಚಿಸುತ್ತಿತ್ತು.

ಒಂದು ದೇಶದ ಆರ್ಥಿಕ ಉತ್ಪನ್ನಗಳಿಗೆ ಬೇಡಿಕೆ ಇರಲಿ ಇಲ್ಲದಿರಲಿ ಆ ದೇಶದ ಮೂಲಕ ಅಂತಾರಾಷ್ಟ್ರೀಯ ವಾಣಿಜ್ಯ ನಡೆಯುತ್ತಿದ್ದರೆ ಅಲ್ಲಿಗೆ ಬರುತ್ತಿದ್ದ ಹಡಗುಗಳ ಮೇಲೆ ಮತ್ತು ಪ್ರಾಣಿಗಳ ಮೇಲೆ ಸ್ಥಳೀಯ ರಾಜರು ಸುಂಕವನ್ನು ವಿಧಿಸುತ್ತಿದ್ದರು. ಅಲ್ಲಿ ವಹಿವಾಟು ಬೆಳೆದಷ್ಟು ಆ ರಾಜ್ಯದ ಆದಾಯ ಹೆಚ್ಚುತ್ತಿತ್ತು. ಈ ಕಾರಣಗಳಿಂದಾಗಿ ಕೆಲವು ಆಯಕಟ್ಟಿನ ಸ್ಥಳಗಳಲ್ಲಿ ಅಂತಾರಾಷ್ಟ್ರೀಯ ಸರಕು, ಸಾಗಣಿಕೆ ಮಾರ್ಗವನ್ನು ಹತೋಟಿಯಲ್ಲಿಟ್ಟುಕೊಳ್ಳಲು ಪ್ರಭುತ್ವ ಮತ್ತು ರಾಜಕೀಯ ಸಂಘಟನೆಗಳು ಸೆಣಸುತ್ತಿದ್ದವು. ಈ ಹಿನ್ನೆಲೆಯಲ್ಲಿ ಶಾತವಾಹನ, ಶಕರು, ಗುಪ್ತರು, ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರ ಇತಿಹಾಸವನ್ನು ಪರಿಶೀಲಿಸಿದಾಗ ಅದೊಂದು ಸ್ವಾರಸ್ಯಪೂರ್ಣವಾದ ಅಧ್ಯಾಯಗಳಾಗಿವೆ. ಆದ್ದರಿಂದ ಈ ಪ್ರಾಚೀನ ಪ್ರಪಂಚದ ಅಂತರಾಷ್ಟ್ರೀಯ ವಾಣಿಜ್ಯ ಮಾರ್ಗಗಳನ್ನು ಕುರಿತು ತಿಳಿದಿರುವುದು ಈ ಅಧ್ಯಯನಕ್ಕೆ ಉಪಯುಕ್ತ. ಕ್ರಿ.ಪೂದಿಂದಲೂ ಅಂತಾರಾಷ್ಟ್ರೀಯ ವ್ಯಾಪಾರ, ಭೂಮಾರ್ಗವಾಗಿ ಜಲಮಾರ್ಗ, ಮಧ್ಯವರ್ತಿಗಳ ಮೂಲಕ ನಡೆದುಬಂದಿರುವುದು ಗೊತ್ತಿರುವ ಸಂಗತಿ ಆದರೆ ರೋಮನ್ ಸಾಮ್ರಾಜ್ಯದ ಸ್ಥಾಪನೆಯ ನಂತರ ಹೊಸ ವ್ಯವಸ್ಥೆಯೊಂದು ರೂಪುಗೊಂಡಿತ್ತು. ಈ ವ್ಯವಸ್ಥೆ ವಾಸ್ಕೋಡಗಾಮ ಕ್ರಿ.ಶ. ೧೪೯೮ರಲ್ಲಿ ಆಫ್ರಿಕಾ ಖಂಡವನ್ನು ಬಳಸಿ ಸಮುದ್ರದ ಮೂಲಕ ಇಂಡಿಯಾ ತಲುಪಿದವರಲ್ಲಿ ವಾಸ್ಕೋಡಗಾಮನೇ ಮೊದಲಿಗನಲ್ಲ, ಪ್ರಾಚೀನ ಪೊನೀಡಿಯನ್ನರು ಪೂರ್ವದಿಂದ ಪಶ್ಚಿಮಕ್ಕೆ ಜಲಯಾನ ಮಾಡಿದ್ದಾಗಿ ಹೇಳಿಕೊಂಡಿದ್ದಾರೆ. ಯುಡೂಕ್ಸೋಸ್‌ನಂತೂ ಕೆಂಪು ಸಮುದ್ರದಿಂದ ಭಾರತಕ್ಕೆ ಎರಡು ಬಾರಿ ಯಶಸ್ವಿಯಾಗಿ ಯಾನ ಮಾಡಿ ಬಳಿಕ ಗುಡ್‌ಹೋಪ್ ಭೂಶಿರವನ್ನು ಸುತ್ತಿ ಸ್ಪೈನ್ ತೀರವನ್ನು ತಲುಪಿದ್ದರ ಬಗ್ಗೆ ಬಹುಮಟ್ಟಿಗೆ ತಿಳಿದುಬರುತ್ತದೆ.

ಗ್ರೀಕರನ್ನು ಬಿಟ್ಟರೆ ರೋಮನ್ ಸಾಮ್ರಾಜ್ಯದ ಮೂಲಕ ಇತಿಹಾಸದಲ್ಲಿ ಮೊದಲ ಬಾರಿಗೆ ಐರೋಪ್ಯ ರಾಷ್ಟ್ರವಾದ ಇಟಲಿ ವ್ಯಾಪಕವಾಗಿ ಪ್ರಪಂಚದ ಗಮನ ಸೆಳೆಯಿತು. ರೋಮನ್ ಸಾಮ್ರಾಜ್ಯದ ಕೇಂದ್ರವು ಇಟಲಿಯ ಪರ್ಯಾಯ ದ್ವೀಪದಲ್ಲಿದ್ದುದರಿಂದ ಅದು ಪೂರ್ವ ದೇಶಗಳು ಮತ್ತು ಆಗ ತಾನೇ ನಾಗರಿಕ ಜೀವನಕ್ಕೆ ಕಾಲಿಡುತ್ತಿದ್ದ ಯುರೋಪ್ ಖಂಡದ ವಿವಿಧ ಜನವಸತಿ ಪ್ರದೇಶಗಳ ನಡುವೆ ವ್ಯಾಪಾರ ಸಂಪರ್ಕವನ್ನು ಕಲ್ಪಿಸುವ ಕೊಂಡಿಯಾಗಿ ಪರಿಣಮಿಸಿತು. ಏಷ್ಯಾ ಮೈನರ್‌ನಿಂದ ಪರ್ಷಿಯಾವರೆಗಿನ ಪ್ರದೇಶವನ್ನು ತನ್ನ ಹತೋಟಿಯಲ್ಲಿಟ್ಟುಕೊಂಡಿದ್ದ ರೋಮನ್ ಸಾಮ್ರಾಜ್ಯ ಒಂದು ರೀತಿಯಲ್ಲಿ ಪೂರ್ವ ಪಶ್ಚಿಮ ರಾಷ್ಟ್ರಗಳ ವಾಣಿಜ್ಯವನ್ನು ನಿಯಂತ್ರಿಸುವ ಸ್ಥಿತಿಯಲ್ಲಿತ್ತು. ಈ ಭೌಗೋಳಿಕ ಸ್ಥಿತಿ ಮತ್ತು ರಾಜಕೀಯ ವ್ಯವಸ್ಥೆಯಿಂದಾಗಿ ಭಾರತ ಮತ್ತು ಚೀನಾದಿಂದ ಹೋಗುವ ಎಲ್ಲ ಮುಖ್ಯ ಮಾರ್ಗಗಳೂ ರೋಮ್ ಕಡೆ ಕೇಂದ್ರೀಕೃತವಾಗಿದ್ದವು. ಈ ಮಾರ್ಗಗಳನ್ನು ಮುಖ್ಯವಾಗಿ ಮೂರು ಭಾಗಗಳಾಗಿ ವಿಂಗಡಿಸಬಹುದು. (ವಾರ್ಮಿಂಗ್‌ಟನ್, ೧೯೭೮, ೧೮-೨೪).

ಮೊದಲನೆಯದು ಇಟಲಿಯ ಪಶ್ಚಿಮ ತೀರದ ರೋಮ್ ಅಥವಾ ಪುಟೋಲಿಯಿಂದ ಹೊರಟು ಅಲೆಗ್ಸಾಂಡ್ರಿಯಾ ತಲುಪಿ ಕೆಂಪು ಸಮುದ್ರ ಮತ್ತು ಅರಬ್ಬಿ ಸಮುದ್ರಗಳ ಮೂಲಕ ನೇರವಾಗಿ ಭಾರತ

ಪರ್ಯಾಯ ದ್ವೀಪವನ್ನು ಮುಟ್ಟುತ್ತಿತ್ತು. ಎರಡನೆಯದು ಇಟಲಿಯ ಪೂರ್ವ ತೀರದ ಬ್ರಿಂಡಿಸನಿಂದ (ಪ್ರಾಚೀನ ಬ್ರುಂದೇಸಿಯಂ) ಹೊರಟು ಆಂಟಿಯಾಕ ಮೂಲಕ ಈಗಿನ ಸಿರಿಯಾ ಇರಾಕ್‌ಗಳನ್ನು ದಾಟಿ ಪರ್ಷಿಯಾ ಕೊಲ್ಲಿಯನ್ನು ಹಾಯ್ದು ಸಿಂಧೂನದಿ ಮುಖಜಭೂಮಿ ತಲುಪುತ್ತಿತ್ತು. ಅಲ್ಲಿಂದ ಸಿಂಧೂನದಿಯ ಮೂಲಕ ವಾಯವ್ಯ ಭಾರತದ ಕೆಲವು ಭಾಗಗಳಿಗೂ ಮತ್ತು ಹಿಂದೂಕುಷ್ ದಾಟಿ ಚೀನಾಕ್ಕೂ ಈ ಮಾರ್ಗ ಹೋಗುತ್ತಿತ್ತು. ಮೂರನೆಯ ಮಾರ್ಗ ಇಟಲಿಯಿಂದ ನೇರವಾಗಿ ಗ್ರೀಕ್ ದ್ವೀಪಗಳ ನಡುವೆ ಹಾದು ಏಷ್ಯಾ ಮೈನರ್ ಮೂಲಕ ಕ್ಯಾಸ್ಪಿಯನ್ ಸಮುದ್ರ ತೀರವಾಗಿ ಮಧ್ಯ ಏಷ್ಯಾದಲ್ಲಿ ಸಾಗಿ ನೇರವಾಗಿ ಮಂಗೋಲಿಯಾ ಮತ್ತು ಚೀನಾಗಳನ್ನು ಸಂಪರ್ಕಿಸುತ್ತಿತ್ತು. ಅತ್ತ ಚೀನಾ, ಇಂಡೋಚೀನಾ(ಜಾವಾ, ಸುಮಾತ್ರ, ಮಲೆಯ) ಸಂಪರ್ಕಿಸುವ ಜಲಮಾರ್ಗ ಭಾರತದ ಪೂರ್ವ ತೀರ(ಈಗಿನ ತಮಿಳುನಾಡು) ಮತ್ತು ಸಿಂಹಳಗಳನ್ನು ಬಂದು ತಲುಪುತ್ತಿತ್ತು. ಅಲ್ಲಿಂದ ಸಮುದ್ರ ತೀರವನ್ನೇ ಹಿಡಿದು ಕೇರಳ ಮತ್ತು ಕರ್ನಾಟಕದ ತೀರದ ಬಂದರುಗಳಿಗೆ ಹಡಗುಗಳು ಬಂದು ತಂಗುತ್ತಿದ್ದವು. ಮುಂದೆ ಗುಜರಾತಿಗಾಗಲಿ ನೇರವಾಗಿ ಕೆಂಪು ಸಮುದ್ರ ಅಥವಾ ಪರ್ಷಿಯಾ ಕೊಲ್ಲಿಗಳಲ್ಲಿ ಪೂರ್ವೋಕ್ತ ಮಾರ್ಗದಲ್ಲಿ ಸಾಗುವ ವ್ಯವಸ್ಥೆ ಇತ್ತು.

ಪ್ರಾಚೀನ ಜಲ ಮಾರ್ಗಗಳ ಸಂಪರ್ಕದಿಂದಾಗಿ ದಕ್ಷಿಣ ಭಾರತ ಮಹತ್ವದ ಸ್ಥಾನ ಪಡೆಯಿತು. ಭೂಮಾರ್ಗಗಳು ಕಳ್ಳಕಾಕರ ಪೀಡನೆ ಒಳ್ಳೆಯ ರಸ್ತೆಗಳಿಲ್ಲದ ತೊಂದರೆಗಳಿಂದ ಅಷ್ಟು ಸುರಕ್ಷಿತವಲ್ಲದ್ದರಿಂದ ಜಲಮಾರ್ಗಗಳೇ ಹೆಚ್ಚು ಬಳಕೆಯಲ್ಲಿದ್ದವು. ಇದರಿಂದ ಅಂತಾರಾಷ್ಟ್ರೀಯ ಮಾರ್ಗದಲ್ಲಿ ಸಂಚರಿಸುವ ನೌಕೆಗಳು ಈಗಿನ ಕೇರಳ ಮತ್ತು ಕರ್ನಾಟಕದ ಉತ್ತರ ಭಾಗದ ತೀರಗಳಲ್ಲಿ ಹೆಚ್ಚು ಕಾಲ ತಂಗುತ್ತಿದ್ದವು. ಪ್ರಾಚೀನ ಸಂಗಂ ಸಾಹಿತ್ಯದಲ್ಲಿ ಯವನರ ಹಡಗುಗಳು ವ್ಯಾಪಾರಕ್ಕಾಗಿ ಬರುತ್ತಿದ್ದುದನ್ನು ಅವು ಚಿನ್ನವನ್ನು ಹೇರಿಕೊಂಡು ಬಂದು ವಿವಿಧ ವಸ್ತುಗಳನ್ನು ಖರೀದಿಸಿಕೊಂಡು ಹೋಗುತ್ತಿದ್ದರು.

ಈ ಎಲ್ಲ ವಿದ್ಯಮಾನಗಳು ಪ್ರಾಚೀನ ಭಾರತದ ಸಾಗರೋತ್ತರ ವ್ಯಾಪಾರವನ್ನು ಬಿಂಬಿಸುತ್ತವೆ. ಹಾಗೆಯೇ ವಿಜಯನಗರೋತ್ತರ ಕಾಲದಲ್ಲಿ ಯುರೋಪಿನಲ್ಲಾದ ಕೈಗಾರಿಕಾ ಕ್ರಾಂತಿಯಿಂದಾಗಿ ಯುರೋಪಿನ ಅನೇಕ ರಾಷ್ಟ್ರಗಳು ಮುಸ್ಲಿಂ ಆಡಳಿತದ ಮಾರ್ಗವಾಗಿ ಏಷ್ಯಾದೊಂದಿಗೆ ವ್ಯಾಪಾರ ನಡೆಸುವುದು ತುಂಬಾ ಕಷ್ಟದ ಕೆಲಸವಾಗಿತ್ತು. ಹಾಗಾಗಿ ಜಲಮಾರ್ಗಗಳ ಮೂಲಕ ಹೊಸ ಮಾರ್ಗವನ್ನು ಕಂಡುಹಿಡಿಯುವಲ್ಲಿ ಮೊದಲಿಗೆ ಪೋರ್ಚುಗಲ್ ದೇಶ ಮುಂದಾಯಿತು. ಇದರ ಮೂಲಕ ಭಾರತದ ಆರಂಭಿಕ ವಸಾಹತು ನೆಲೆಯಾಗಿ ಭಾರತ ರಚನೆಯಾಗುವುದರೊಂದಿಗೆ ಆಡಳಿತ, ಸಂಸ್ಕೃತಿ, ಆರ್ಥಿಕತೆಯಲ್ಲಿ ಮಹತ್ತರವಾದ ಬದಲಾವಣೆ ಕಂಡುಕೊಂಡಿತು.

**೬.೧. ಸ್ಥಳೀಯ ನಾಯಕರು ಮತ್ತು ಪೋರ್ಚುಗೀಸರ ಆರ್ಥಿಕ ಸಂಬಂಧಗಳು**

ವಿಜಯನಗರದ ಅರಸರು ಪೋರ್ಚುಗೀಸರೊಂದಿಗೆ ವ್ಯಾಪಾರ ಸಂಬಂಧವನ್ನು ಹೊಂದಿದ್ದರು. ರಾಮರಾಯನು ಪೋರ್ಚುಗೀಸರೊಂದಿಗೆ ವ್ಯಾಪಾರ ಸಂಬಂಧವನ್ನು ಹೊಂದಿದ್ದು, ಕೆಲವು ಒಪ್ಪಂದಗಳಿಗೆ ಸಹಿ ಮಾಡಿದ ಅಂಶಗಳು ತಿಳಿಯುತ್ತವೆ. ಮುಖ್ಯವಾಗಿ ಸಮುದ್ರ ವ್ಯಾಪಾರದ

ಏಕಸ್ವಾಮ್ಯವನ್ನು ಪೋರ್ಚುಗೀಸರು ಹೊಂದಿದರು. ಪೋರ್ಚುಗೀಸರು ಅದರಲ್ಲೂ ವಿಶೇಷವಾಗಿ ಎಲ್ಲಕ್ಕಿಂತ ಮುಖ್ಯವಾದ ಕುದುರೆಗಳ ವ್ಯಾಪಾರ ಅವರಿಂದಲೇ ನಡೆಯುತ್ತಿತ್ತು. ಕೃಷ್ಣದೇವರಾಯನ ಕಾಲದಲ್ಲಿ ವಿಜಯನಗರೊಂದಿಗೆ ಸ್ನೇಹದಿಂದಿದ್ದ ಪೋರ್ಚುಗೀಸರು ನಂತರ ಅಲ್ಲಿನ ಬಿಕ್ಕಟ್ಟಿನ ಸಂದರ್ಭದಲ್ಲಿ ತಮ್ಮ ಶತ್ರುತ್ವ ಸಾಧಿಸುವುದರೊಂದಿಗೆ ಆ ಪರಿಸ್ಥಿತಿಯ ದುರುಪಯೋಗ ಮಾಡಿಕೊಳ್ಳಲಾರಂಭಿಸಿದರು.

ವಾಸ್ಕೋಡಗಾಮನು ೧೪೯೭ರ ಬೇಸಿಗೆಯಲ್ಲಿ ಪೋರ್ಚುಗಲ್ಲಿನಿಂದ ಹೊರಟು ಕ್ರಿಸ್‌ಮಸ್ ದಿನದಂದು ಗುಡ್‌ಹೋಪ್ ಭೂಶಿರವನ್ನು ಬಳಸಿದ ತರುವಾಯ ಆತ ಪಕ್ಕದ ಭೂಪ್ರದೇಶಕ್ಕೆ ಬಂದು ಸೇರಿದನು. ಅದಕ್ಕೆ ಕ್ರಿಸ್ತನ ಜನ್ಮದಿನದ ನೆನಪಿಗಾಗಿ ನೇಟಲ್‌ನ ಹೆಸರನ್ನು ಕೊಟ್ಟನು. ಅನಂತರ ಆತ ಸೊಫಾಲಾವನ್ನು ಹಾದು ಕೊನೆಗೆ ೧೪೯೮ರ ಮಾರ್ಚ್‌ನಲ್ಲಿ ಮಾಜಾಂಬಿಕವನ್ನು ತಲುಪಿದನು. ಸೊಫಾಲಾ ಮತ್ತು ಆಫ್ರಿಕಾದ ಕರಾವಳಿಯ ಉದ್ದಕ್ಕೂ ವಸಾಹತುಗಾರರು ನೆಲೆಗಳನ್ನು ಸ್ಥಾಪಿಸಿದ್ದರು. ಅವರು ದಂತ ಮತ್ತು ಚಿನ್ನದ ವ್ಯಾಪಾರ ವಹಿವಾಟನ್ನು ಅಲ್ಲಿ ನಿಯಂತ್ರಿಸಿದ್ದರು. ಮೊಂಬಕ್ ಅವರಿಗೆ ಗುಜರಾತಿ ನಾವಿಕನೊಬ್ಬನ ಸಹಾಯ ದೊರೆಯಿತು. ಅರೇಬಿಯನ್ ಸಮುದ್ರದ ಕಡೆಗೆ ವಾಸ್ಕೋಡಗಾಮ ಪ್ರಯಾಣ ಬೆಳೆಸಿದನು. ಕೊನೆಗೆ ೧೪೯೮ರ ಮೇ ೨೧ರಂದು ಕಲ್ಲಿಕೋಟೆಯ ಕರಾವಳಿಯನ್ನು ಸೇರಿದನು. ಭಾರತದ ಕರಾವಳಿಯಲ್ಲಿ ಆತ ಹೆಚ್ಚು ಕಾಲ ನಿಲ್ಲಲಿಲ್ಲ. ೧೪೯೮ರ ಆಗಸ್ಟ್‌ನಲ್ಲಿ ಆತ ತನ್ನ ಮರು ಪ್ರಯಾಣವನ್ನು ಆರಂಭಿಸಿದನು.(ಜುಯ್ನೆನ,೧೯೧೦,೫೧). ಭಾರತಕ್ಕೆ ಪೋರ್ಚುಗೀಸರು ಬಂದಿಳಿದುದು ಭಾರತದ ಆರ್ಥಿಕತೆಯಲ್ಲಿ ಬದಲಾವಣೆ ಕಂಡ ಕಾಲ. ಮಲಬಾರಿನ ಕರಾವಳಿಯು ಆಗ ತುಂಡು ಅರಸರ ಆಳ್ವಿಕೆಗೆ ಒಳಪಟ್ಟಿತ್ತು. ಪೋರ್ಚುಗೀಸರನ್ನು ಎದುರಿಸಲು ಅವರು ತೀರಾ ದುರ್ಬಲರಾಗಿದ್ದರು ಹಾಗೂ ಅಂತಃಕಲಹಗಳಿಂದ ಜರ್ಜರಿತವಾಗಿದ್ದರು. ಒಂದೆಡೆ ಸಿಂಹಳ, ಮಲಾಕ್ಕ ಮತ್ತು ಸ್ಪೈಸ್ ಐರ್‌ಲ್ಯಾಂಡ್ಸ್ ಹಾಗೂ ಇನ್ನೊಂದೆಡೆ ಪರ್ಷಿಯನ್ ಕೊಲ್ಲಿ ಪ್ರದೇಶ ಕೆಂಪು ಸಮುದ್ರ ಮತ್ತು ಪೂರ್ವ ಆಫ್ರಿಕಗಳ ಬಂದರುಗಳು ಅವುಗಳ ನಡುವಿನ ಮಲಬಾರಿನ ಕರಾವಳಿಯ ಮಾರ್ಗದ ಮಾಧ್ಯಮವಾಗಿತ್ತು.

ಕರಾವಳಿಯ ಭಟ್ಕಳ ಮತ್ತು ಹೊನ್ನಾವರ ಪಟ್ಟಣಗಳನ್ನು ವಿಜಯನಗರ ಸಾಮ್ರಾಜ್ಯವು ನಿಯಂತ್ರಿಸಿತು. ನಂತರ ಕೆಳದಿ ಸಂಸ್ಥಾನದ ಅಧೀನಕ್ಕೆ ಒಳಗಾದವು. ಆದರೆ ಕರಾವಳಿಯ ರಾಜರ ವ್ಯವಹಾರಗಳಲ್ಲಿ ಅದು ತಲೆಹಾಕಲಿಲ್ಲ. ವಿಜಯನಗರ ವ್ಯವಹಾರ ಮತ್ತು ಸ್ನೇಹ ಸಂಬಂಧ ಹೊಂದುವುದರಲ್ಲಿ ಸ್ವಹಿತಾಸಕ್ತಿಗಳ ರಕ್ಷಣೆ ಇದೆ ಎಂಬುದನ್ನು ಪೋರ್ಚುಗೀಸರು ಬಹು ಬೇಗನೆ ಗ್ರಹಿಸಿದರು. ಬಹಮನಿ ಸಾಮ್ರಾಜ್ಯವು ಆಂತರಿಕ ವೈಷಮ್ಯಗಳಿಂದ ಜರ್ಜರಿತವಾಗಿತ್ತು ಮತ್ತು ನಿಧಾನವಾಗಿ ವಿಭಜಿತವಾಗುತ್ತಿತ್ತು. ಆ ಸಾಮ್ರಾಜ್ಯದ ಶಾಖೆಗಳಲ್ಲಿ ಒಂದಾದ ಬಿಜಾಪುರ ರಾಜ್ಯವು ಗೋವೆಯ ಪ್ರದೇಶವನ್ನು ಆಳುತ್ತಿತ್ತು. ಸಮರ್ಥ ನೌಕಾಬಲವನ್ನು ಅದು ಹೊಂದಿರಲಿಲ್ಲ. ಬಿಜಾಪುರದ ವಿರುದ್ಧ ಪೋರ್ಚುಗೀಸರು ಕರಾವಳಿಯಲ್ಲಿನ ತಿಮ್ಮೋಜನಂಥ ಪ್ರಬಲ ಕಡಲ್ಗಳ್ಳರ ಪ್ರಮುಖರೊಂದಿಗೆ ಹಾಗೂ ಹೊನ್ನಾವರ, ಬಂಕಾಪುರ ಮತ್ತು ಭಟ್ಕಳದ ಸ್ಥಳೀಯ ರಾಜರೊಂದಿಗೆ ಮೈತ್ರಿ ಬೆಳೆಸಿದರು. ಇವರೆಲ್ಲ ವಿಜಯನಗರದ ಸಾಮಂತ ರಾಜರಾಗಿದ್ದರು.

ಮೊಗಲ್ ಸಾಮ್ರಾಜ್ಯವು ಇನ್ನೂ ಸ್ಥಾಪನೆಯಾಗಿರಲಿಲ್ಲ. ಆದ್ದರಿಂದ ಉತ್ತರ ಭಾರತದಲ್ಲಾಗಲಿ, ದಕ್ಷಿಣ ಭಾರತದಲ್ಲಾಗಲಿ ಕರಾವಳಿಯಲ್ಲಿ ಪೋರ್ಚುಗೀಸ್ ಪ್ರಭುತ್ವದ ಸ್ಥಾಪನೆಯನ್ನು ಪರಿಣಾಮಕಾರಿಯಾಗಿ ತಡೆಯಲು ಸಮರ್ಥವಾದ ಯಾವ ಪ್ರಭುತ್ವವೂ ಇರಲಿಲ್ಲ. ಆ ಕಾಲದಲ್ಲಿ ಜಾಮೊರಿನ್ನನ ಕೈಕೆಳಗಿದ್ದ ಕಲ್ಲಿಕೋಟೆಯ ಉನ್ನತ ಮಟ್ಟದ ಅಭಿವೃದ್ಧಿ ಹೊಂದಿದ್ದು (ಪಿ.ಪಿ.ಶಿರೋಡ್ಕರ್, ೨೦೧೩, ೫೭-೫೯). ಕಲ್ಲಿಕೋಟೆಯಲ್ಲಿ ಪೋರ್ಚುಗೀಸರು ಕ್ರಿ.ಶ. ೧೫೦೦ರಲ್ಲಿ ಮೊದಲ ಕಾರ್ಖಾನೆಯನ್ನು ಸ್ಥಾಪಿಸಿದರು. ಹಾಗೆಯೇ ಭಾರತದ ಪಶ್ಚಿಮ ಕರಾವಳಿಯ ಪ್ರದೇಶಗಳಾದ ಕೊಚ್ಚಿನ್, ಕಣ್ಣಾನೂರು, ಕ್ವಿಲಾನ್, ಮಂಗಳೂರು, ಹೊನ್ನಾವರ, ಭಟ್ಕಳ, ಗೋವಾ, ಡಿಯು, ಬಸ್ಸಿನ್, ಸೂರತ್ ಮತ್ತು ಡಾಮನ್‌ಗಳಲ್ಲೂ ಸಹ ಕಾರ್ಖಾನೆಗಳನ್ನು ಆರಂಭಿಸಿದರು. ನಂತರ ಮೊಗಲರ ಅನುಮತಿ ಪಡೆದರು. ಪೂರ್ವ ಕರಾವಳಿಯ ಚಿತ್ರಗಂಗಾ, ಸತ್‌ಗಾಂವ್ ಮತ್ತು ಹೂಗ್ಲಿಗಳಲ್ಲೂ ಕಾರ್ಖಾನೆಗಳನ್ನು ಸ್ಥಾಪಿಸಿದರು.

ಪೋರ್ಚುಗೀಸರು ಮೆಣಸು, ಶುಂಠಿ, ದಾಲ್ಚಿನ್ನಿ, ಏಲಕ್ಕಿ, ಶ್ರೀಗಂಧ, ಮಸ್ಲಿನ್ ಪದಾರ್ಥಗಳಲ್ಲದೆ ಆನೆ ಮುಂತಾದ ಪ್ರಾಣಿಗಳನ್ನು ಆಮದು ಮಾಡಿಕೊಳ್ಳುತ್ತಿದ್ದರು. ಪ್ರತಿಯಾಗಿ ಕೊಡಲು ಅವರಲ್ಲಿ ಏನೂ ಇಲ್ಲದ್ದರಿಂದ ಚಿನ್ನ-ಬೆಳ್ಳಿಯ ಗಟ್ಟಿಗಳನ್ನು ವ್ಯಾಪಾರಕ್ಕಾಗಿ ತರುತ್ತಿದ್ದರು. (ತಂಬಂಡ,೨೦೧೦: ೪೪೪).

ಕ್ರಿ.ಶ. ೧೬ನೇ ಶತಮಾನದಲ್ಲಿ ಮತ್ತೊಮ್ಮೆ ಚುರುಕುಗೊಂಡ ಸಾಗರೋತ್ತರ ವ್ಯಾಪಾರ ವಹಿವಾಟಿನಿಂದಾಗಿ ಮಲಬಾರ್ ತೀರದಲ್ಲಿ ಅನೇಕ ಸ್ಥಳೀಯ ಸಂಸ್ಥಾನಗಳ ಆರ್ಥಿಕ-ರಾಜಕೀಯ ಸಂಬಂಧ, ಸಮುದ್ರ ತೀರದ ವ್ಯಾಪಾರವನ್ನು ಒಳಗೊಂಡಂತೆ ಕ್ರಿ.ಶ. ೧೬ನೇ ಶತಮಾನದ ವಿದ್ಯಮಾನಗಳ ಬಗ್ಗೆ ಅನೇಕ ಸ್ಥಳೀಯ ಆಕರಗಳು ಬೆಳಕು ಚೆಲ್ಲುತ್ತವೆ.(ಶಾಸ್ತ್ರಿ,ರಮಣಯ್ಯ, ೧೯೪೬, ೧೯೬-೧೯೮). ಆದರೆ ಈ ದೇಶೀಯ ಆಕರಗಳನ್ನಷ್ಟೇ ಅಲ್ಲದೇ ವಿದೇಶೀಯ ಆಕರಗಳನ್ನು ಅವಲಂಬಿಸಿ ಸಂಶೋಧನೆ ಕೈಗೊಳ್ಳುವುದು ಒಂದು ಅರ್ಥಪೂರ್ಣ ಕೆಲಸವಾಗುತ್ತದೆ.

ಯುರೋಪಿಯನ್ನರ ಆಗಮನದಿಂದಾಗಿ ವ್ಯಾಪಾರ ಚುರುಕುಗೊಂಡಂತೆಲ್ಲಾ ಆರ್ಥಿಕ ಶಕ್ತಿಯಾಗಿ ಬೆಳೆದಿದ್ದರಿಂದ ಇವು ಅನೇಕ ನಗರ ಪಟ್ಟಣಗಳ ಬೆಳವಣಿಗೆಗೆ ಹೆಚ್ಚಿನ ಆದ್ಯತೆ, ಪ್ರೋತ್ಸಾಹವನ್ನು ನೀಡಿದವು. ಪರಿಣಾಮ ಮಿರ್ಜಾನ್, ಹೊನ್ನಾವರ, ಬಸ್ರೂರು, ಗೇರುಸೊಪ್ಪ, ಕೇಂಡೀಶ್ವರ, ಹಾರುಹಳ್ಳಿ, ಬೈಂದೂರು, ಕಾರ್ಕಳ, ವೇಣೂರು, ಮೂಡಬಿದಿರೆ, ಪಡುಬಿದರೆ, ಉಡುಪಿ, ಬಾರಕೂರು, ಬ್ರಹ್ಮಾವರ, ಕುಂದಾಪುರ, ಕುಂಬ್ಳೆ, ಉಪ್ಪುಂದ್ರ, ಉಳ್ಳಾಳ, ಮಂಗಳೂರು, ಕಳಸ, ಗಂಗೊಳ್ಳಿ, ಬಂಗವಾಡಿ ಹೀಗೆ ಹತ್ತು ಹಲವು ಪೇಟೆ ಪಟ್ಟಣಗಳು ಕೆನರಾ ತೀರದುದ್ದಕ್ಕೂ ಬೆಳವಣಿಗೆಯಾದವು. ಈ ಎಲ್ಲ ಪೇಟೆ-ಪಟ್ಟಣಗಳು ಸಾಗರೋತ್ತರ ವ್ಯಾಪಾರ ವಹಿವಾಟಿನೊಂದಿಗೆ ನೇರವಾಗಿ ಇಲ್ಲದೆ ಪರೋಕ್ಷವಾಗಿ ಬೆಸುಗೆ ಹೊಂದಿ ಅಭಿವೃದ್ಧಿ ಕಂಡವು. ಹಯವದನರಾವ್ ಅವರ ಗೆಜೆಟಿಯರ್ ನಲ್ಲಿಉಲ್ಲೇಖಿಸಿದ್ದಾರೆ. ಇವುಗಳ ಬೆಳವಣಿಗೆಗೆ ಪೋರ್ಚುಗೀಸರಿಂದ ಚುರುಕುಗೊಂಡ ಸಾಗರೋತ್ತರ ವ್ಯಾಪಾರ ಒಂದಾದರೆ ಇನ್ನೊಂದು ಸ್ಥಳೀಯ ಅರಸರ ಸಂಬಂಧಗಳ ಈ ಪ್ರದೇಶಗಳ ಅಭಿವೃದ್ಧಿಗೆ ಪೂರಕವಾದ ಮಾಹಿತಿ, ಒಪ್ಪಂದ ಮುಂತಾದ ವಿಷಯಗಳು ತಿಳಿಸುತ್ತವೆ.

ಪೋರ್ಚುಗೀಸರು ಹೆಚ್ಚಾಗಿ ಕೆಳದಿಯೊಂದಿಗೆ ವ್ಯವಹಾರ ಮಾಡಿದ ದಾಖಲೆಗಳು ಸಿಗುತ್ತವೆ. ಕೆಳದಿಯ ನಾಯಕರು ಕ್ರಿ.ಶ. ೧೬ನೇ ಶತಮಾನದ ಆರಂಭಿಕ ದಶಕಗಳಲ್ಲಿ ವಿಜಯನಗರ ಸಾಮ್ರಾಜ್ಯದ ವಿಧೇಯ ಸಾಮಂತರಾಗಿ ಕೆನರಾ ಭಾಗದ ಘಟ್ಟಪ್ರದೇಶಗಳಲ್ಲಿ ತಮ್ಮ ನೆಲೆ ಕಂಡುಕೊಂಡಿದ್ದರು. ವಿಜಯನಗರ ಸಾಮ್ರಾಜ್ಯ ಪತನದ ನಂತರದಲ್ಲಿ ಅವರಿಗೆ ಸವಾಲು ಎದುರಾದದ್ದು ಮೈಸೂರು ಒಡೆಯರಿಂದ. ಆದರೂ ಮೈಸೂರು ಒಡೆಯರು ದೀರ್ಘಕಾಲ ಘಟ್ಟಪ್ರದೇಶಗಳತ್ತ ಸೆಣಸಾಡುವಲ್ಲಿ ಸೋತರು. ಮುಂದೆ ಪೋರ್ಚುಗೀಸರು ಇಕ್ಕೇರಿ ನಾಯಕರಿಗೆ ಸವಾಲೊಡ್ಡಿದ್ದರು. ಇಕ್ಕೇರಿ ನಾಯಕರಿಗೆ ಅದರಲ್ಲೂ ವೆಂಕಟಪ್ಪನಾಯಕನಿಂದ (೧೫೮೬-೧೬೨೯) ತೀವ್ರ ಪ್ರತಿಸ್ಪರ್ಧೆಯನ್ನು ಪೋರ್ಚುಗೀಸರು ಎದುರಿಸಬೇಕಾಯಿತು. (ಸ್ವಾಮಿನಾಥನ್,೧೯೫೭:೧೫೮-೧೬೩).

ಕ್ರಿ.ಶ. ೧೬೦೦-೧೬೨೦ರ ನಡುವೆ ಪೋರ್ಚುಗೀಸ್ ಮತ್ತು ಇಕ್ಕೇರಿ ನಾಯಕರ ನಡುವಿನ ಸಂಬಂಧಗಳು ಒಂದು ರೀತಿಯ ಬೂದಿ ಮುಚ್ಚಿದ ಕೆಂಡದಂತೆ ಗೋಚರಿಸತೊಡಗಿದ್ದವು. ಇದಕ್ಕೆ ಮುಖ್ಯ ಕಾರಣ ಈ ಅವಧಿಯಲ್ಲಿ ವೆಂಕಟಪ್ಪನಾಯಕನ ಆಳ್ವಿಕೆಯಲ್ಲಿ ಇಕ್ಕೇರಿ ನಾಯಕರು ಕೆನರಾ ತೀರಪ್ರದೇಶದ ಬಂದರುಗಳಲ್ಲಿ ಪ್ರಭಾವವನ್ನು ಹೊಂದಿದ್ದರು. ಪೋರ್ಚುಗೀಸರು ಇಕ್ಕೇರಿ ನಾಯಕರ ಜೊತೆ ಸೆಣಸುವ ಸಲುವಾಗಿಯೇ ಸ್ಥಳೀಯ ಇತರ ಸಣ್ಣ ಸಂಸ್ಥಾನಗಳಾದ ಗೇರುಸೊಪ್ಪೆ ಮತ್ತು ಗಂಗೊಳ್ಳಿ ಮುಖ್ಯಸ್ಥರ ಜೊತೆ ಆತ್ಮೀಯ ಮೈತ್ರಿಯನ್ನು ಏರ್ಪಡಿಸಿಕೊಂಡಿದ್ದರು. ಈ ಮೈತ್ರಿಯ ಸೂಕ್ಷ್ಮತೆಯ ಅರಿವಿದ್ದ ವೆಂಕಟಪ್ಪ ನಾಯಕನು ಕ್ರಿ.ಶ. ೧೬೦೮ರಲ್ಲಿ ಪೋರ್ಚುಗೀಸರಿಗೆ ಬಸ್ರೂರಿನಲ್ಲಿ ಮತ್ತೆ ಅವರ ಸುಂಕದ ಠಾಣಗಳನ್ನು ತೆರೆಯುವಂತಹ ಪ್ರೋತ್ಸಾಹಗಳನ್ನು ನೀಡಿದನು. ಇದರ ಫಲವಾಗಿ ೧೫೭೦ರಲ್ಲಿ ಸ್ಥಗಿತಗೊಳಿಸಲಾಗಿದ್ದ ಸುಂಕಠಾಣವನ್ನು ಮತ್ತೆ ೧೬೦೮ರಲ್ಲಿ ಬಸ್ರೂರಿನಲ್ಲಿ ಆರಂಭಿಸಿದರು. ಇದರ ಸಲುವಾಗಿ ವೆಂಕಟಪ್ಪನಾಯಕನು ಪೋರ್ಚುಗೀಸರ ಗೋವಾದ ಗವರ್ನರ್ ಆಗಿದ್ದ ಡಿ.ಪೈ. ಅಲೆಕ್ಸೊಡೆ ಮೆನೆಸಸ್ ಜೊತೆ ೧೬೦೮ರಲ್ಲಿ ಒಪ್ಪಂದ ಮಾಡಿಕೊಂಡನು. ಇದರ ಅನ್ವಯ ಪೋರ್ಚುಗೀಸರು ಬಸ್ರೂರಿನಲ್ಲಿ ಸುಂಕಠಾಣವನ್ನು ತೆರೆದು ಇಲ್ಲಿಂದ ದಕ್ಷಿಣದ ಕೊಚ್ಚಿನ್ ಮತ್ತು ಉತ್ತರದಲ್ಲಿ ಗೋವಾ ಮತ್ತು ಅಲ್ಲಿಂದ ಅಮೂಜ್ ಜಲಸಂಧಿಗೆ ಸರಬರಾಜು ಮಾಡುವ ಮತ್ತು ವ್ಯಾಪಾರಿ ಕೇಂದ್ರಗಳಿಂದ ರವಾನೆಯಾಗುತ್ತಿದ್ದ ಸರಕುಗಳ ಮೇಲೆ ಶೇಕಡ ೬ರ ಪ್ರಮಾಣದ ಸುಂಕವನ್ನು ವಿಧಿಸಿದರು(ಶಾಸ್ತ್ರಿ,೧೯೭೨-೫೭).

ಇದಾದ ಒಂದು ದಶಕದ ಬಳಿಕ ಅಂದರೆ ಕ್ರಿ.ಶ. ೧೬೧೮ರಲ್ಲಿ ಅಂದಿನ ಪೋರ್ಚುಗೀಸ್ ವೈಸರಾಯ್ ಡಿ. ಜೊರೋನಿಮೋ ಡೇ ಅಜೆವೆಡೊ ಬಾಂಗ್ಯೆರ್ ಮತ್ತು ಉಲ್ಲಾಳ ಸಂಸ್ಥಾನಗಳ ಜೊತೆಗೂಡಿ ಇಕ್ಕೇರಿ ನಾಯಕರ ಪ್ರಭಾವ ಅಡಗಿಸಲು ಯುದ್ಧವನ್ನು ಮಾಡಿದರು. ಆದರೆ ಇದರಿಂದ ಪೋರ್ಚುಗೀಸರು ಅನಿವಾರ್ಯವಾಗಿ ಅವರೊಂದಿಗೆ ಒಪ್ಪಂದಕ್ಕೆ ಬರಬೇಕಾಯಿತು. ಇದರ ಪರಿಣಾಮ ಹೊನ್ನಾವರ, ಬಸ್ರೂರು ಮತ್ತು ಮಂಗಳೂರುಗಳಲ್ಲಿ ತಾವು ಹೊಂದಿದ್ದ ಪ್ರಾಬಲ್ಯಕ್ಕೆ ಧಕ್ಕೆಯುಂಟಾಯಿತು. ಆದರೂ ಸಹ ಬಸ್ರೂರು ಮತ್ತು ಹೊನ್ನಾವರದಿಂದ ಸಾಗರೋತ್ತರ ವಿದೇಶಿ ವ್ಯಾಪಾರವನ್ನು ಎಂದಿನಂತೆ ಕೈಗೊಳ್ಳಲು ಅನುಮತಿ ನೀಡಲಾಯಿತು. ಕ್ರಿ.ಶ. ೧೬೦೦-

೧೬೫೦ರ ಅವಧಿಯಲ್ಲಿ ಮೆಣಸು ಸರಬರಾಜಿನ ಮುಖ್ಯ ಬಂದರಾಗಿದ್ದ ಹೊನ್ನಾವರ, ಭತ್ತ ಸರಬರಾಜಿಗೆ ಪ್ರಾಮುಖ್ಯತೆ ಗಳಿಸಿಕೊಂಡಿದ್ದ ಬಸ್ರೂರು ಬಂದರುಗಳ ಮುಖಾಂತರ ಎಂದಿನಂತೆ ಮಸ್ಕಟ್ ಸಿಲೋನ್ ಮತ್ತು ಮಲಕ್ಕಾಗಳಿಗೆ ರಫ್ತು ಮಾಡುವ ಸಾಗರೋತ್ತರ ವ್ಯಾಪಾರ-ವಾಣಿಜ್ಯದಲ್ಲಿ ತೊಡಗಿಕೊಂಡರು.

ಕೆಳದಿ ವೀರಭದ್ರನಾಯಕನು ಅಧಿಕಾರದಲ್ಲಿದ್ದಾಗ ಕ್ರಿ.ಶ. ೧೬೩೧ರ ಒಪ್ಪಂದವೂ ಆಯಿತು. ಇದು ಪೋರ್ಚುಗೀಸರೊಂದಿಗಿನ ಮೊದಲ ಒಪ್ಪಂದವಾಗಿತ್ತು. ಇದಕ್ಕೆ ಕಾರಣವೆಂದರೆ ಆಗ ತಾನೇ ಅಧಿಕಾರಕ್ಕೆ ಬಂದಿದ್ದ ವೀರಭದ್ರನಾಯಕನಿಗೆ ಹಲವಾರು ತೊಂದರೆಗಳು ಎದುರಾದವು. ಇದೇ ಸಂದರ್ಭದಲ್ಲಿ ಪೋರ್ಚುಗೀಸರು ಗಂಗೊಳ್ಳಿಯ ಮೇಲೆ ಆಕ್ರಮಣ ಮಾಡಿದರು. ಇದೇ ವೇಳೆ ವೀರಭದ್ರನಾಯಕನ ಸಂಬಂಧಿ ವೀರಪ್ಪನಾಯಕನು ಪೋರ್ಚುಗೀಸರ ಬೆಂಬಲ ಪಡೆದು ಕೆಳದಿ ಸಿಂಹಾಸನವೇರಲು ಪ್ರಯತ್ನಿಸಿದನು. ಇವನು ಪೋರ್ಚುಗೀಸರೊಂದಿಗೆ ಒಂದು ಕರಾರು ಮಾಡಿಕೊಳ್ಳುವ ಮಟ್ಟಕ್ಕೆ ಹೋದನು.(ಪಿಸುರ್ಲೆಂಕರ್,೧೯೪೧:೨೪೯-೨೫೦).

ಈ ಕರಾರು ಕ್ರಿ.ಶ. ೧೬೩೧ರ ಮಾರ್ಚ್ ೭ರಂದು ಬಾಸಿಲೋರ್‌ನಲ್ಲಿ(ಕುಂದಾಪುರ) ಅಸ್ತಿತ್ವಕ್ಕೆ ಬಂದಿತ್ತು. ಈ ಕರಾರಿಗೆ ಪೋರ್ಚುಗೀಸರ ವೈಸರಾಯ್ ಕಾಂಡೆ ಡಿ ಲಿನ್ನಾರೆಸ್ ವಿಠಲಶೆಣ್ಯೆನೊಂದಿಗೆ ಹೋಗಿದ್ದನು. ವೀರಭದ್ರನಾಯಕನ ಪ್ರತಿನಿಧಿಯಾಗಿ ತಿರುಮಲ ಭಾಗವಹಿಸಿದ್ದ. ಈ ಸನ್ನಿಧಿಯಲ್ಲಿ ಪೋರ್ಚುಗೀಸರೊಂದಿಗೆ ಕೆಳದಿಯ ನಾಯಕರು ಈ ಒಪ್ಪಂದದ ಬಗ್ಗೆ ಆಸಕ್ತಿಯನ್ನು ಹೊಂದಿದ್ದರು. ಈ ಒಪ್ಪಂದದ ಪ್ರಕಾರ ಬೇರೆ ಯಾವ ರೀತಿಯಲ್ಲಿ ಕೆಳದಿ ರಾಜರ ಮೇಲೆ ಹಕ್ಕು ಚಲಾಯಿಸಲು ಅವರಿಗೆ ಸಾಧ್ಯವಾಗಿರಲಿಲ್ಲ. ಕೆಳದಿಯ ಆಂತರಿಕ ಕಲಹದಿಂದಾಗಿ ಪೋರ್ಚುಗೀಸರು ಮಧ್ಯ ಪ್ರವೇಶಿಸುವಂತಾಯಿತು. ಈ ಒಪ್ಪಂದದಲ್ಲಿ ಕೆಳದಿಯು ಪೋರ್ಚುಗೀಸರ ಮಿತ್ರರನ್ನು ಮಿತ್ರರಂತೆ, ಶತ್ರುಗಳನ್ನು ಶತ್ರುಗಳಂತೆ ಭಾವಿಸಬೇಕು ಎಂದು ತೀರ್ಮಾನಿಸಲಾಯಿತು. ಇದು ಪೋರ್ಚುಗೀಸರಿಗೂ ಅನ್ವಯವಾಯಿತು. ಇದು ಇವೆರಡು ರಾಜ್ಯಗಳ ನಡುವೆ ರಾಜಕೀಯ ಕರಾರಾಗಿತ್ತು. ಪೋರ್ಚುಗೀಸರಿಗೆ ಈ ನೀತಿಯಿಂದ ಹಾಗೂ ಕರಾರಿನಿಂದ ಬಹಳ ಲಾಭವಾಯಿತು.

ಗಂಗೊಳ್ಳಿಯು ಪೋರ್ಚುಗೀಸರೊಂದಿಗೆ ವ್ಯಾಪಾರ ಸಂಬಂಧವನ್ನು ಹೊಂದಿದ್ದ ಪ್ರಮುಖ ವ್ಯಾಪಾರಿ ಕೇಂದ್ರವಾಗಿ ಗುರುತಿಸಿಕೊಂಡಿತ್ತು. ಪೋರ್ಚುಗೀಸರು ಕರಾವಳಿ ಕರ್ನಾಟಕದ ರಾಜಕೀಯ ಅಭದ್ರತೆಯ ಲಾಭ ಪಡೆದು ಬಸ್ರೂರಿನ ವರ್ತಕರಿಂದ ಪಡೆದುಕೊಂಡದ್ದು, ಇದನ್ನು ಇವರು ದ್ವೀಪ ಮಾಡಲು ಯತ್ನಿಸಿ ಪ್ರಕೃತಿಯ ವಿಕೋಪದಿಂದ ವಿಫಲವಾದದ್ದು ಉಂಟು. ಕ್ರೈಸ್ತ ಜನರನ್ನು ಇಲ್ಲಿಗೆ ಕರೆಯಿಸಿ, ಸ್ಥಳೀಯರ ಮತ್ತು ಕೆಳದಿ ವೀರಭದ್ರನ ವಿರೋಧವನ್ನು ಕಟ್ಟಿಕೊಳ್ಳಲಾಯಿತು(ಶಾಸ್ತ್ರಿ ೧೯೭೨,೪೯-೫೦).

ಶಿವಪ್ಪನಾಯಕನು ಗಂಗೊಳ್ಳಿಯಿಂದ ಪೋರ್ಚುಗೀಸರನ್ನು ಓಡಿಸಿದನು. ನಂತರ ಕೆಳದಿ ಕಿರಿಯ ವೆಂಕಟಪ್ಪನಾಯಕನು ಪೋರ್ಚುಗೀಸರನ್ನು ಕರ್ನಾಟಕದ ಕರಾವಳಿ ಗಂಗೊಳ್ಳಿಯಿಂದ ಅವರನ್ನು ಓಡಿಸಿದ. ಕೊನೆಯ ವೇಳೆಯಲ್ಲಿ ವ್ಯಾಪಾರವನ್ನು ಮಾಡಲು ಮಾತ್ರ ಅನುಮತಿ

ಮಾಡಿಕೊಟ್ಟನು. ಸೋಮಶೇಖರ ನಾಯಕರನ್ನು ಗಂಗೊಳ್ಳಿಯಲ್ಲಿ ವ್ಯಾಪಾರ ಮಾಡಲು ಅವಕಾಶ ಮಾಡಿಕೊಟ್ಟನು.(ಅಸೆಂಟೋಸ್ ನಂ.೧,೧೯೬೪, ೫೫೫, ೫೫೬)

ಇನ್ನೂ ಕೆಲವು ಪೋರ್ಚುಗೀಸರ ದಾಖಲೆಗಳು(ಪಿಸ್ಸುಲೆಂಕರ್‌ರ) ಸಂಪಾದಿಸಿ ವ್ಯಾಖ್ಯಾನಿಸಿದ ಅಸ್ಸೆಂಟೋಸ್ ಗಂಗೊಳ್ಳಿಯ ಆರ್ಥಿಕ ಸಾಧನೆಗಳನ್ನು ತಿಳಿಸಿವೆ. ಉದಾ. ಕ್ರಿ.ಶ. ೧೬೩೨ರ ದಾಖಲೆಯ ವರದಿಯಂತೆ ಗಂಗೊಳ್ಳಿಯ ವಾರ್ಷಿಕ ಉತ್ಪನ್ನ ೫,೦೦೦೦೫೭೧೪ ಸೆರಫಿಯಸ್ ಇದ್ದುದನ್ನು ೫೦,೦೦೦ದಿಂದ ೫೭,೧೪೦ ಸೆರಫಿಯಸ್‌ನಷ್ಟು ಉತ್ಪನ್ನ ಆದಾಯ ಹೆಚ್ಚಿಸಲಾಯಿತು. ತಮ್ಮ ಹಿಡಿತಕ್ಕೆ ಬಂದ ನಂತರ ಗಂಗೊಳ್ಳಿಯಲ್ಲಿ ೨೦,೦೦೦ ಚೀಲ ಜರಸಾಲ ಜಾತಿಯ ಅಕ್ಕಿ ಬೆಳೆಯುತ್ತದೆ. ಇದನ್ನು ಇಲ್ಲಿಂದ ಪ್ರತಿ ವರ್ಷ ತೆಗೆದುಕೊಂಡರೆ ಪೋರ್ಚುಗೀಸರಿಗೆ ಗೋವೆಯಲ್ಲಿ ಆಹಾರದ ಸಮಸ್ಯೆ ಇರುವುದಿಲ್ಲ.(ಅಸ್ಸೆಂಟೋಸ್, ನ.೧,೧೯೬೪: ೫೧೨). ಇಷ್ಟಲ್ಲದೇ ಇನ್ನಿತರೆ ತೋಟದ ಬೆಳೆಗಳಾದ ತೆಂಗು, ಕಬ್ಬು, ಅನಾನಸು ಕೃಷಿ ಮಾಡಿಸಿ ಇನ್ನಷ್ಟು ಲಾಭ ಪಡೆಯುವ ಸಾಧ್ಯತೆ ಇದೆ ಎಂದು ಪೋರ್ಚುಗೀಸರು ಮನಗಂಡಿದ್ದರು. ಗಂಗೊಳ್ಳಿಯು ರೇವುಪಟ್ಟಣವಾಗಲು ಕೆಲವು ಕುಂದುಕೊರತೆಗಳನ್ನು ಮನಗಂಡು ಇದನ್ನು ನಿವಾರಿಸಲು ಕೆಲವು ಕ್ರಮಗಳನ್ನು ಪೋರ್ಚುಗೀಸರು ಆಲೋಚಿಸಿದ್ದರೆಂದು ಇವರ ಕೆಲವು ದಾಖಲೆಗಳು ತಿಳಿಸಿವೆ. ಉದಾ. ಏಪ್ರಿಲ್ ೨೬, ೧೬೩೬ರ ವೈಸ್‌ರಾಯ್ ಸಲಹಾ ಸಮಿತಿಯ ವರದಿಯಂತೆ ಗಂಗೊಳ್ಳಿ ನದಿ ಸಮುದ್ರವನ್ನು ಸೇರುವ ಭಾಗ ಪ್ರತಿವರ್ಷ ಇಲ್ಲಿ ಈಗ ಕುಂದಾಪುರದ ಕೋಟೆ ಇದ್ದು, ಮರಳು ತುಂಬುತ್ತಾ ಹೋಗುತ್ತದೆ. ದೊಡ್ಡ ದೊಡ್ಡ ಹಡಗುಗಳು ಇಲ್ಲಿಗೆ ಬರಲಾಗುವುದಿಲ್ಲ. ಬಂದ ಹಡಗುಗಳಿಗೆ ರಕ್ಷಣೆಯಿಲ್ಲ. ಆದ್ದರಿಂದ ರೇವುಸ್ಥಳವನ್ನು ೧ ಮೈಲು ಉತ್ತರದ ಸಮುದ್ರ ಕೆನರಾದಲ್ಲಿ ಸ್ಥಾಪಿಸಲು ಸಮುದ್ರದಲ್ಲಿ ಕಾಪುಗೋಡೆ ಕಟ್ಟಬೇಕು. ಇಲ್ಲಿ ಕೋಟೆ ಕಟ್ಟಿಸಿದರೆ ಪೋರ್ಚುಗೀಸರಿಗೆ ಉತ್ತಮ ರಕ್ಷಣೆ ಸಿಗುತ್ತದೆ. ಆದರೆ ಇದನ್ನೆಲ್ಲ ನಡೆಸಲು ವಿಪರೀತ ಖರ್ಚು ಆಗುತ್ತದೆ.(ಶಾಸ್ತ್ರಿ, ೧೯೭೨: ೬೮-೭೧) ಗಂಗೊಳ್ಳಿಯನ್ನು ದ್ವೀಪ ಮಾಡಲು ಕಾಲುವೆ ತೋಡಿಸಿದ್ದು ಅದು ಮರಳು ತುಂಬಿದ್ದರಿಂದ ಆ ಕಾಮಗಾರಿಯನ್ನು ಕೈಬಿಟ್ಟಿರುವ ಅಂಶಗಳನ್ನು ಗಮನಿಸಬಹುದು.

ಹಿರಿಯ ವೆಂಕಟಪ್ಪನಾಯಕನ ಕಾಲದಲ್ಲಿ ಪೋರ್ಚುಗೀಸರು ವ್ಯಾಪಾರದಲ್ಲಿ ಹೆಚ್ಚು ತೆರಿಗೆ ರಿಯಾಯಿತಿ ಪಡೆಯಲು ಪ್ರಯತ್ನಿಸಿದರು. ೧೬೬೦ರಲ್ಲಿ ಪೋರ್ಚುಗೀಸರು ಕೆಳದಿಯ ಹಡಗನ್ನು ವಶಪಡಿಸಿಕೊಂಡರು. ಕೆಳದಿ ನಾಯಕ ವೆಂಕಟಪ್ಪನು ಪಾದ್ರಿಯೊಬ್ಬನನ್ನು ಸೆರೆಹಿಡಿದು ಬಿದನೂರಿಗೆ ಕಳುಹಿಸಿದ. ಆದರೆ ಅರಸನ ಸಚಿವರು ಲಂಚ ಪಡೆಯದೆ ಇವರ ಬೇಡಿಕೆಯನ್ನು ಮನ್ನಿಸಲು ಸಾಧ್ಯವಿಲ್ಲವೆಂದು ನಿರಾಕರಿಸಿದರು. ಕೊನೆಗೆ ಪೋರ್ಚುಗೀಸರು ಇವರಿಗೆ ೫೦೦ ಅಶ್ರಫಿ ಕೊಡುವುದಾಗಿ ಒಪ್ಪಿಕೊಳ್ಳಬೇಕಾಯಿತು.

ಕ್ರಿ.ಶ. ೧೬೪೮ರಲ್ಲಿ ಪೋರ್ಚುಗೀಸರ ಸಂಬಂಧವನ್ನು ಕೆಳದಿ ಅರಸರು ಬೆಳೆಸಿಕೊಳ್ಳಲು ಬಯಸಿದನೆಂದು ಪೋರ್ಚುಗೀಸ್ ವೈಸ್‌ರಾಯ್ ಪತ್ರದಲ್ಲಿ ಪೋರ್ಚುಗೀಸರಿಗೆ ಕುಂದಾಪುರ ಮತ್ತು ಮಂಗಳೂರುಗಳಲ್ಲಿ ವ್ಯಾಪಾರ ಕೇಂದ್ರಗಳನ್ನು ಸ್ಥಾಪಿಸಲು ಅನುಮತಿ ನೀಡಿದ್ದನು ಎಂದು ತಿಳಿಸಲಾಗಿದೆ. ಅವನು ಪೋರ್ಚುಗೀಸರ ಎಲ್ಲ ಹಡಗುಗಳನ್ನು ತನ್ನ ಎಲ್ಲ ಬಂದರುಗಳಿಗೆ

ಬರುವುದಕ್ಕೆ ಅವಕಾಶ ನೀಡಲು ಒಪ್ಪಿದನು ಹಾಗೂ ಕೆಳದಿಯಲ್ಲಿರುವ ಕ್ರೈಸ್ತರಿಗೆ ರಕ್ಷಣೆ ನೀಡುವುದಾಗಿ ಒಪ್ಪಿದನು. ಈ ವೇಳೆಯಲ್ಲಿ ಶಿವಪ್ಪನಾಯಕ ಪೋರ್ಚುಗೀಸರಿಗೆ ಹೆಚ್ಚಿನ ದರಕ್ಕೆ ಕರಿಮೆಣಸಿನ ಮಾರಾಟ ಮಾಡಲು ನಿರ್ಧರಿಸಿದನು. ಆದರೆ ಪೋರ್ಚುಗೀಸರು ಒಂದು ಕಂಡಿಗೆ ೨೫ ಪಗೋಡದಂತೆ ಕೇವಲ ೨೦೦ ಕಂಡಿ ಮೆಣಸನ್ನು ಪಡೆದುಕೊಳ್ಳಲು ಮಾತ್ರ ಸಿದ್ಧರಿದ್ದರು. ಅದಕ್ಕಿಂತ ಹೆಚ್ಚು ಕರಿಮೆಣಸು ಕಡಿಮೆ ದರದಲ್ಲಿ ಕೊಳ್ಳಲು ಸಿದ್ಧರಿರುವುದಾಗಿ ತಿಳಿಸಿದರು. ಅದೇ ರೀತಿ ಬಿಜಾಪುರದ ಆದಿಲ್‌ಷಾಹಿಗಳ ವಿರುದ್ಧ ಪೋರ್ಚುಗೀಸರ ಸಹಾಯವನ್ನು ಶಿವಪ್ಪನಾಯಕ ಬಯಸಿದ್ದನು. ೧೬೪೭–೪೮ರಲ್ಲಿ ಮಧ್ಯೆ ಗಂಗೊಳ್ಳಿಯ ಕಾಸರಗೋಡಿನಲ್ಲಿ ಅಕ್ಕಿ ಮತ್ತು ಗೋಧಿ ಸಿಗದಿರುವ ಕಾರಣ ಆ ಬಗ್ಗೆ ಆಸಕ್ತಿ ವಹಿಸಲಿಲ್ಲ.

ರಾಯಭಾರಿಯಾಗಿ ಶಿವಪ್ಪನಾಯಕ ವಿಠಲಮಲ್ಯನನ್ನು ಗೋವಾಕ್ಕೆ ಕಳುಹಿಸಿಕೊಟ್ಟನು. ಆ ನಿಯೋಗದಲ್ಲಿ ಪೋರ್ಚುಗೀಸರು ಪ್ರಸ್ತಾಪಿಸಿರುವುದಕ್ಕಿಂತ ಹೆಚ್ಚಿನ ದರದಲ್ಲಿ ಕರಿಮೆಣಸು ರಫ್ತು ಆಗಬೇಕು ಎಂಬ ಬೇಡಿಕೆಯನ್ನು ಶಿವಪ್ಪನಾಯಕನ ಪರವಾಗಿ ಇಟ್ಟಾಗ ವೈಸ್‌ರಾಯ್ ಕೌನ್ಸಿಲ್ ತನ್ನ ಆಗಸ್ಟ್ ೧೪ರ ಸಭೆಯಲ್ಲಿ ಒಂದು ಕಂಡಿಗೆ ೨೮ ಪಗೋಡಾಗಳ ಹೆಚ್ಚುವರಿ ದರದಲ್ಲಿ ಕರಿಮೆಣಸನ್ನು ವಿಕ್ರಯಿಸಲು ನಿರ್ಧರಿಸಿತು. ಒಂದು ವೇಳೆ ಶಿವಪ್ಪನಾಯಕ ಇದರಿಂದ ತೃಪ್ತಿಯಾಗದಿದ್ದಲ್ಲಿ ೨೫ಕ್ಕೂ ಹೆಚ್ಚುವರಿ ಕಂಡಿ ಮೆಣಸು ವಿಕ್ರಯಿಸಲು ಆದೇಶಿಸುತ್ತಾನೆ. ಈ ರೀತಿ ರಾಜಿಸಂಧಾನ ಮನೋಭಾವ ತಳೆಯುವ ಮೂಲಕ ಶಿವಪ್ಪನಾಯಕನಲ್ಲಿ ಹಗೆತನ ಸಾಧಿಸುವ ಪ್ರಯತ್ನವನ್ನು ತಪ್ಪಿಸಲು ಸತತ ಪ್ರಯತ್ನ ನಡೆಸಿದರು.(ಕೊಂಚಾಡಿ,೨೦೧೮: ೯೮–೯೯).

ಹೊನ್ನಾವರದ ಸಾಮಂತ ಗೇರುಸೊಪ್ಪೆಯ ರಾಣಿಗೆ ಬಾಕಿಯಿರುವ ಕಪ್ಪ ಕಾಣಿಕೆಯನ್ನು ಪಾವತಿಸಬೇಕೆಂದು ಪೋರ್ಚುಗೀಸರು ಒತ್ತಾಯಿಸಿದರು. ಅಷ್ಟು ಮಾತ್ರವಲ್ಲದೆ ಒಂದು ಕಂಡಿಗೆ ೨೨.೫ ಪಗೋಡಸ್ ದರದಲ್ಲಿ ಒಂದು ಹಡಗಿಗೆ ಬೇಕಾದಷ್ಟು ಕರಿಮೆಣಸನ್ನು ಒದಗಿಸಬೇಕೆಂದು ಒತ್ತಾಯಿಸಲಾಯಿತು. ಈಗಾಗಲೇ ನಡೆದ ಯುದ್ಧದ ಖರ್ಚು ೨೦,೦೦೦ ಕ್ರೂಸ್‌ದಾಸನ್ನು ರಾಣಿಯು ಪಾವತಿಸಬೇಕೆಂದು ಪೋರ್ಚುಗೀಸ್ ಗವರ್ನರ್ ಒತ್ತಾಯಿಸಿದಾಗ ರಾಣಿ ದಿಕ್ಕು ತೋಚದಾದಳು. ರಾಣಿ ಉತ್ತರಿಸಲು ಹಿಂದು ಮುಂದೆ ನೋಡುತ್ತಿರುವುದನ್ನು ಗಮನಿಸಿದ ಗವರ್ನರ್ ಅವರೂ ಸ್ಪಷ್ಟ ಉತ್ತರಕ್ಕಾಗಿ ಕಾಯಲು ಸಮಯಾವಕಾಶವಿಲ್ಲದಿರುವುದಾಗಿ ಹೇಳಿದರು. ಆ ಪ್ರಕಾರ ತುರ್ತಾಗಿ ಗವರ್ನರ್ ಅಟ್ಟಾಡೆಯು ಬಸ್ರೂರನ್ನು ವಶಪಡಿಸಿಕೊಳ್ಳಲು ತನ್ನ ಸೈನ್ಯವನ್ನು ಅಲ್ಲಿಗೆ ತೆಗೆದುಕೊಂಡು ಹೋಗಲು ನಿರ್ಧರಿಸಿ ಕೊನೆಗೆ ಆ ಷರತ್ತುಗಳನ್ನು ರಾಣಿಯು ಒಪ್ಪಲು ಸಾಧ್ಯವಿಲ್ಲವೆಂದು ನಿರಾಕರಿಸಿದಳು.(ಶಾಸ್ತ್ರಿ,೧೯೭೨: ೮೭). ೧೫೭೦ರ ಆರಂಭದಲ್ಲಿ ಗೇರುಸೊಪ್ಪೆಯ ರಾಣಿಯು ಹೊನ್ನಾವರದ ಮೇಲೆ ದಾಳಿ ನಡೆಸುವ ಸಾಧ್ಯತೆ ಇದೆ ಎಂಬ ಮಾಹಿತಿಯನ್ನು ಸಂಗ್ರಹಿಸಿದ ವೈಸ್‌ರಾಯ್ ಅಟ್ಟಾಡೆಯು ಒಂದು ದೊಡ್ಡ ಸೈನಿಕ ನೌಕೆಯನ್ನು ಅಲ್ಲಿಗೆ ಕಳುಹಿಸಿಕೊಟ್ಟನು.

ಭಾರತದಲ್ಲಿ ಪೋರ್ಚುಗೀಸ್ ಸಾರ್ವಭೌಮತ್ವಕ್ಕೆ ಸಂಸ್ಥಾಪಕರೂ ಚತುರ ದಂಡನಾಯಕನೂ ಎಂದು ಪರಿಗಣಿಸಲ್ಪಟ್ಟಿದ್ದ ಆಲ್ಫಾನ್ಸೋ ಅಲ್ಬುಕರ್ಕನು ಕರಾವಳಿ ಕರ್ನಾಟಕದ ಮತ್ತು ಮಲಬಾರ್

ತೀರದ ಎಲ್ಲ ರಾಜರುಗಳಿಗೆ ಸಾಮಂತರಿಗೆ ವಿದೇಶೀಯರು ಮತ್ತು ವಿದೇಶಿಯ ಮುಸ್ಲಿಂ ವ್ಯಾಪಾರಿಗಳಿಗೆ ಸಿಂಹಸ್ವಪ್ನವಾಗಿದ್ದ ಕಾರಣ ಅವರೆಲ್ಲರೂ ಅಸಹಾಯಕರಾಗಿದ್ದರು. ಅಲ್ಬುಕರ್ಕನು ೧೫೧೬ರಲ್ಲಿ ಮರಣವನ್ನಪ್ಪಿದ ನಂತರ ಪೋರ್ಚುಗೀಸರ ವಿರುದ್ಧ ಅಲ್ಲಲ್ಲಿ ಪ್ರತಿರೋಧಗಳು ಬೆಳೆದವು. ಈಗಾಗಲೇ ಭಟ್ಕಳದಲ್ಲಿ ಮುಸ್ಲಿಂ ವ್ಯಾಪಾರಿ ಸಮುದಾಯದ ವಿವಿಧ ಸಂದರ್ಭಗಳಲ್ಲಿ ಪೋರ್ಚುಗೀಸರ ವಿರುದ್ಧ ತಿರುಗಿ ಬಿದ್ದಿರುವುದನ್ನು ಗಮನಿಸಿದ್ದೇವೆ. ಇದೇ ರೀತಿಯ ಮತ್ತೊಂದು ದಂಗೆ ೧೫೧೬ರ ಆರಂಭದಲ್ಲಿ ಪೋರ್ಚುಗೀಸರು ತಮ್ಮ ದೊಡ್ಡ ಹಡಗಿನಲ್ಲಿ ಭಟ್ಕಳದಲ್ಲಿ ಸಕ್ಕರೆ, ಕಬ್ಬಿಣ, ಅಕ್ಕಿ, ಕರಿಮೆಣಸು ಮೊದಲಾದ ಆಹಾರ ವಸ್ತುಗಳನ್ನು ಮತ್ತು ಸಾಂಬಾರು ಪದಾರ್ಥಗಳನ್ನು ತುಂಬಿಸಿಕೊಳ್ಳುತ್ತಿದ್ದಾಗ ನಡೆದಿದೆ.

ಹಡಗಿನ ಕ್ಯಾಪ್ಟನ್ ಆದ ಸಾಮಾವ್ರೋ ಡಿ ಅಂದ್ರಾಡೆ ಅವರಿಗೆ ಸಹಾಯಕರಾಗಿ ಭಟ್ಕಳ ಬಂದರಿನ ಫ್ಯಾಕ್ಟರ್ ಅಥವಾ ಮುಖ್ಯಸ್ಥ ಅಲೆಕ್ಸಿಕೋ ಅವರು ಕೆಲಸದ ಮೇಲುಸ್ತುವಾರಿ ನಿರ್ವಹಿಸುತ್ತಿದ್ದರು. ಆ ಸಮಯದಲ್ಲಿ ಯಾವುದೋ ಕ್ಷುಲ್ಲಕ ಕಾರಣಕ್ಕೆ ಬೆಳೆದುಬಂದ ಸಣ್ಣ ಪ್ರಮಾಣದ ಜಗಳ ಹಿಂಸೆಗೆ ತಿರುಗಿ ಸ್ಥಳೀಯ ವ್ಯಾಪಾರಿಗಳು ಪೋರ್ಚುಗೀಸ್ ಸಿಬ್ಬಂದಿಗಳ ಮೇಲೆ ಮುಗಿಬಿದ್ದು ೨೪ ಮಂದಿಯನ್ನು ಕೊಂದರು. ಇನ್ನೂ ಹಲವಾರು ಮಂದಿ ಗಾಯಗೊಂಡರು. ಇಷ್ಟು ಮಾತ್ರವಲ್ಲದೆ ಸುಮಾರು ೧೦ ಸಾವಿರಕ್ಕೂ ಹೆಚ್ಚಿನ ಬೆಲೆಬಾಳುವ ವಸ್ತುಗಳನ್ನು ದರೋಡೆ ಮಾಡಿದರು.(ಶಾಸ್ತ್ರಿ,೧೯೭೭:೬೬). ಈ ಹಿಂಸಾತ್ಮಕ ಘಟನೆಗೆ ಪೋರ್ಚುಗೀಸರು ಪ್ರಯತ್ನಿಸಿ ಶ್ರಮಿಸಿದ ಬಗ್ಗೆ ವಿವರಗಳು ಆ ಕಾಲದ ಚಾರಿತ್ರಿಕ ದಾಖಲೆಗಳಲ್ಲಾಗಲೀ ಅಥವಾ ಆಸ್ಥಾನ ಬರಹಗಾರರ ದಾಖಲೆಗಳಲ್ಲಾಗಲೀ ದೊರೆಯುವುದಿಲ್ಲ.

ಬಹುಶಃ ಈ ಘಟನೆ ಭಟ್ಕಳದಲ್ಲಿ ಪೋರ್ಚುಗೀಸರಿಂದ ಭೀಕರ ಮಾರಣಹೋಮ ಮತ್ತು ಭಯಾನಕ ಹಿಂಸೆ ನಡೆದಿತ್ತು. ಬೆಂಕಿ ಆಹುತಿಗೆ ಭಟ್ಕಳ ಬಲಿಯಾಗಿರಬಹುದಾದ ಸಾಧ್ಯತೆಗಳು ಹೆಚ್ಚಿವೆ. ಏಕೆಂದರೆ ಪೋರ್ಚುಗೀಸರು ಆರಂಭದಿಂದಲೇ ವ್ಯಾಪಾರಿ ಸಮುದಾಯದ ಮಧ್ಯೆ ಸಾಮಂತ ರಾಜರ ಮಧ್ಯೆ ಹಾಗೂ ಜನಸಾಮಾನ್ಯರ ಮಧ್ಯೆ ಭಯಮಿಶ್ರಿತ ವಾತಾವರಣವನ್ನು ನಿರ್ಮಾಣ ಮಾಡಲು ಪ್ರಯತ್ನಿಸುತ್ತಿದ್ದರು. ಇಂತಹ ಈ ಪ್ರಯತ್ನ ೧೬ನೇ ಶತಮಾನದ ಆರಂಭದ ದಶಕದಲ್ಲಿ ನಿರೀಕ್ಷಿತ ಪ್ರತಿಫಲವನ್ನು ನೀಡಿದ್ದನ್ನು ಈಗಾಗಲೇ ಉಲ್ಲೇಖಿಸಲಾಗಿದೆ. ಸಂಜಯ್ ಸುಬ್ರಮಣ್ಯಂ ಅವರ ಪ್ರಕಾರ ಮುಸ್ಲಿಂ ವ್ಯಾಪಾರಿಗಳು ದಂಗೆ ಎದ್ದು ೩೪ ಮಂದಿಯನ್ನು ಕೊಲೆ ಮಾಡಿದರು. ಮೃತಪಟ್ಟವರಲ್ಲಿ ಕಮಾಂಡರ್ ಸೀಮೋವೋಡಿ ಅಂದ್ರಾಡೆಯವರು ಸಹ ಸೇರಿರುತ್ತಾರೆ ಎಂದು ವಿವರಿಸಿದ್ದಾನೆ.(ಸುಬ್ರಮಣ್ಯಂ:೧೨೬).

ಕೋಟೆಯನ್ನು ಕಾವಲು ಕಾಯುತ್ತಿದ್ದ ಸೈನಿಕರಿಗೆ ಮತ್ತು ಬರಿಸುವ ಕಾಯಿಯೊಂದನ್ನು ತಿನ್ನಿಸುವ ಮೂಲಕ ಬಹು ಸುಲಭವಾಗಿ ದಾಳಿ ನಡೆಸುವ ವ್ಯವಸ್ಥಿತ ಪಿತೂರಿಯೊಂದನ್ನು ಹೆಣೆದರು. ಆದರೆ ಈ ಪಿತೂರಿ ವಿಫಲವಾಗಿ ಪೋರ್ಚುಗೀಸರು ಪಿತೂರಿಗಾರರನ್ನು ಗಲ್ಲಿಗೇರಿಸಿದರು. ಹೊನ್ನಾವರದ ಮೇಲೆ ದಾಳಿ ಮಾಡುವ ಯೋಜನೆಗೆ ಬಿಜಾಪುರದ ಆದಿಲ್‌ಷಾಹಿಯು ಕೂಡ

ಪ್ರಚೋದನೆ ನೀಡುತ್ತಿದ್ದನು. ಹೊನ್ನಾವರದಲ್ಲಿ ಗೇರುಸೊಪ್ಪೆಯ ರಾಣಿಯ ಸೈನ್ಯದೊಂದಿಗೆ ಆದಿಲ್‌ಷಾಹಿ ಮತ್ತು ಜಾಮೋರಿನನ ಸೈನ್ಯವನ್ನು ಪೋರ್ಚುಗೀಸರು ಎದುರಿಸುವ ಮೂಲಕ ಹೊನ್ನಾವರವನ್ನು ಕಬಳಿಸಿಕೊಂಡರು.

ವಿಜಯನಗರ ಸಾಮ್ರಾಜ್ಯದ ಅವನತಿಯ ನಂತರ ವಿದೇಶೀಯ ವ್ಯಾಪಾರವು ಬಿಜಾಪುರದ ಆದಿಲ್‌ಶಾಹಿಗಳ ನೇತೃತ್ವದಲ್ಲಿ ಮುಂದುವರಿಯಿತು. ಮೆಣಸಿನ ವ್ಯಾಪಾರದಲ್ಲಿ ಮತ್ತು ಮೆಣಸನ್ನು ಪೋರ್ಚುಗೀಸರಿಗೆ ಪೂರೈಸುವ ಕೆಲಸವನ್ನು ಬಿಜಾಪುರದ ಸುಲ್ತಾನರು ನಿರ್ವಹಿಸಿದರು. ೧೬೩೮ರಲ್ಲಿ ಬಿಜಾಪುರಕ್ಕೆ ಭೇಟಿ ನೀಡಿದ್ದ ಮಾಡೆಲ್‌ಸೋ ದಾಖಲು ಮಾಡಿದ್ದಾರೆ. ಬಿಜಾಪುರ ರಾಜ್ಯದ ಮುಖ್ಯ ರಫ್ತು ಸಾಮಗ್ರಿ ಮೆಣಸು. ಅಲ್ಲಿಂದ ಅದು ಮಧ್ಯಪ್ರಾಚ್ಯ ಮತ್ತು ಯುರೋಪ್‌ಗೆ ಹೋಗುತ್ತಿತ್ತು. ಗುಜರಾತಿನ ಸೂರತ್‌ಗೂ ಹೋಗುತ್ತಿತ್ತು. ಬಿಜಾಪುರದ ರಾಜ್ಯದಲ್ಲಿ ಮೆಣಸು, ಏಲಕ್ಕಿ ಮಾರುಕಟ್ಟೆಗಳಿದ್ದವು.(ಷೇಕ್‌ಅಲಿ, ೪, ೨೦೧೮:೩೧೦). ಹೀಗೆ ವ್ಯಾಪಾರ ವಾಣಿಜ್ಯದಲ್ಲಿ ವಿಜಯನಗರ ಪತನಾನಂತರ ಬಿಜಾಪುರಕ್ಕೆ ವಿದೇಶೀಯ ವ್ಯಾಪಾರ ಸ್ಥಿತ್ಯಂತರಕ್ಕೆ ವರ್ಗಾಯಿಸಲ್ಪಟ್ಟ ಕಾಲವೆಂದು ಹೇಳಬಹುದು.

೧೫೪೭ ಸೆಪ್ಟೆಂಬರ್ ೧೯ರಂದು ವಿಜಯನಗರ ರಾಜನೊಂದಿಗೆ ಪೋರ್ಚುಗೀಸರು ಒಂದು ಒಪ್ಪಂದವನ್ನು ಮಾಡಿಕೊಂಡಿದ್ದರು. ಗೋವಾದ ವೈಸ್‌ರಾಯ್‌ನಾದ ಜೋನಾಡಿ ಕ್ಯಾಸ್ಕೊ ನಡುವೆ ಸಹಿ ಹಾಕಲಾಗಿತ್ತು. ಅವರು ಸಾಮ್ರಾಜ್ಯದ ವಿವಿಧ ಗಣಿಗಳಲ್ಲಿ ಹೊರ ತೆಗೆಯಲಾದ ಉಪ್ಪಿನ(ಮಣ್ಣುಪ್ಪು) ಮಾಳಗಳನ್ನು ಪೋರ್ಚುಗೀಸರಿಗೆ ನೀಡಬೇಕು ಮತ್ತು ಸುಲ್ತಾನನ ಭೂಪ್ರದೇಶ ತಲುಪಬಾರದೆಂಬ ನಿಯಮವನ್ನು ವಿಧಿಸಿದ್ದರು. ಇದರಿಂದ ತಿಳಿದುಬರುವ ಅಂಶವೆಂದರೆ ಪೋರ್ಚುಗೀಸರ ಸರಕುಗಳ ಮೇಲೆ ನಿಯಂತ್ರಣವನ್ನು ಸಾಧಿಸಬೇಕೆಂಬ ಉದ್ದೇಶವನ್ನು ಹೊಂದಿದಂತೆ ತಿಳಿಯುತ್ತದೆ. ಗನ್ ಫೌಡರ್ ಬಳಕೆಯಲ್ಲಿ ಮಣ್ಣುಪ್ಪನ್ನು ಬಳಸುತ್ತಿದ್ದರು. ಇದು ಯುರೋಪ್‌ನಲ್ಲಿ ದೊರೆಯದ ಕಾರಣ ಕರ್ನಾಟಕದಿಂದ ಪಡೆಯಲು ಬಯಸಿದರು. ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೆಂದರೆ ೧೫೬೫ರ ನಂತರ ಅವರ ವ್ಯಾಪಾರಿ ಒಪ್ಪಂದಗಳು ಸಂಪೂರ್ಣ ಬಿಜಾಪುರದ ಕಡೆ ವರ್ಗಾಯಿಸಿದ್ದು ಮುಖ್ಯ. ಇದೇ ಒಪ್ಪಂದವನ್ನು ೧೫೭೯ರಲ್ಲಿ ಬಿಜಾಪುರದ ಆದಿಲ್‌ಶಾಹಿನೊಂದಿಗೆ ಒಪ್ಪಂದಕ್ಕೆ ಸಹಿ ಹಾಕಿಸಿದರು. ಅವರು ಪೋರ್ಚುಗೀಸರಿಗೆ ಗಂಧಕ ಮತ್ತು ಕಬ್ಬಿಣದ ಜೊತೆ ಉಪ್ಪು ಕೊಡಲು ಒಪ್ಪಿದರು(ಜೆಯಾಶೀಲಾ, :೯೭).

ಬಿಜಾಪುರದ ಆದಿಲ್‌ಷಾಹಿ ದೊರೆಗಳು ತಮ್ಮ ಪ್ರಯತ್ನವನ್ನು ಮುಂದುವರಿಸಿ ಜುಲೈ ೧೫೭೧ರಲ್ಲಿ ಮತ್ತೊಮ್ಮೆ ೨೦೦೦ ಸೈನಿಕರ ತುಕಡಿಯನ್ನು ಹೊನ್ನಾವರದ ಮೇಲೆ ದಾಳಿಗಾಗಿ ಕಳುಹಿಸಿಕೊಟ್ಟರು. ಇಲ್ಲಿನ ರಾಣಿಯು ೩೦೦೦ ಜನರ ಸೈನ್ಯದೊಂದಿಗೆ ಒಗ್ಗಟ್ಟಾಗಿ ಪೋರ್ಚುಗೀಸರ ಮೇಲೆ ದಾಳಿ ನಡೆಸಿದಳು. ಹೊನ್ನಾವರದ ಕೋಟೆಗೆ ಮುತ್ತಿಗೆ ಹಾಕಿರುವ ವಿಷಯ ತಿಳಿದುಕೊಂಡು, ವೈಸ್‌ರಾಯ್ ೧೦ ಹಡಗುಗಳುಳ್ಳ ಒಂದು ಸೈನಿಕ ತಂಡವನ್ನು ಕಳುಹಿಸಿಕೊಟ್ಟನು. ಪೋರ್ಚುಗೀಸರ ಸೈನ್ಯವು ರಾಣಿಯ ಜಂಟಿ ಸೈನ್ಯದ ಮೇಲೆ ಎರಗಿದಾಗ ಅವರು ಸೋತು ಚೆಲ್ಲಾಪಿಲ್ಲಿಯಾಗಿ

ಪಲಾಯನಗೈದರು. ಈ ಯುದ್ಧದಲ್ಲಿ ಗೇರುಸೊಪ್ಪೆಯ ರಾಣಿಯ ಬಹಳಷ್ಟು ದೊಡ್ಡ ಸಂಖ್ಯೆಯ ಸೈನಿಕರು ಹತರಾದರು. ಸಾಕಷ್ಟು ಸಂಖ್ಯೆಯ ಆಯುಧಗಳನ್ನು ಕಳೆದುಕೊಂಡರು. ಈ ಸೋಲಿನಿಂದ ತತ್ತರಿಸಿದ ರಾಣಿ ಇಂತಹ ಪ್ರಯತ್ನಕ್ಕೆ ಕೈಹಾಕಲಿಲ್ಲ(ಹೇರಾಸ್ ೧೯೭೮:೨೪).

ಹೀಗೆ ನಿರಂತರವಾಗಿ ಸ್ಥಳೀಯ ಸಂಸ್ಥಾನಗಳೊಂದಿಗೆ ಯುದ್ಧದಲ್ಲಿ ಪೋರ್ಚುಗೀಸರು ತೊಡಗಿಕೊಂಡಿದ್ದರು. ಹಾಗೆಯೇ ಕುದುರೆಯನ್ನು ಹೊರತುಪಡಿಸಿದ ಕರಿಮೆಣಸು, ಅಕ್ಕಿ, ಸಂಬಾರು ಪದಾರ್ಥಗಳು ಇಲ್ಲಿಂದ ರಫ್ತಾಗುತ್ತಿದ್ದವು. ೧೬೩೭ರಲ್ಲಿ ಇಂಗ್ಲಿಶ್ ಪ್ರವಾಸಿಗ ಹಾಗೂ ವ್ಯಾಪಾರಿ ಪೀಟರ್ ಮಂಡಿಯವರು ಭಟ್ಕಳದಲ್ಲಿ ಪೋರ್ಚುಗೀಸರಿಗೆ ಸಂಬಂಧಿಸಿದ ಸಂಪೂರ್ಣವಾಗಿ ದಪ್ಪನಿಯನ್ನು ಒಳಗೊಂಡ ಹಡಗು ಕೆನರಾ ಪ್ರಾಂತ್ಯದ ಗಸ್ತುಪಡೆಯೊಂದಿಗೆ ಲಂಗರು ಹಾಕಿರುವುದನ್ನು ಗಮನಿಸಿದ್ದಾರೆ(ಡಿಸ್ನೇ೨೦೧೧:೨೫). ಆದ್ದರಿಂದ ಕರಾವಳಿ ಕರ್ನಾಟಕದಲ್ಲಿ ಭಟ್ಕಳ ಮತ್ತು ಹೊನ್ನಾವರ ಪ್ರಮುಖ ಬಂದರುಗಳಾಗಿ, ವಾಣಿಜ್ಯೋದ್ಯಮ ಮತ್ತು ಸಂಘರ್ಷಗಳು ಉಗಮ ಮತ್ತು ವಿಕಾಸಗೊಂಡು ಚರಿತ್ರೆಯಲ್ಲಿ ಮರೆಯಲಾರದ ಘಟನೆಗಳು ಸಂಭವಿಸಿದ್ದು ಸ್ಮರಣೀಯ.

ಕ್ರಿ.ಶ. ೧೬ನೇ ಶತಮಾನದ ಅಂತ್ಯದ ಹಾಗೂ ೧೭ನೇ ಶತಮಾನದ ಆದಿ ಭಾಗದ ವೇಳೆಗೆ ಬಸ್ರೂರು ಭಟ್ಕಳ ಬಂದರಿಗೆ ಸರಿಸಮನಾಗಿ ಬೆಳೆಯಿತು. ೧೫೭೦ರ ದಶಕದಿಂದ ಬಸ್ರೂರು ಬಂದರಿನಲ್ಲಿ ಸುಮಾರು ಮೂವತ್ತೈದು ಮಂದಿ ಪೋರ್ಚುಗೀಸ್ ವರ್ತಕರು ತಮ್ಮದೇ ಹಲವು ಹಡಗುಗಳನ್ನು ಹೊಂದಿದ್ದು, ಸಾಗರೋತ್ತರ ವ್ಯಾಪಾರ-ವಾಣಿಜ್ಯದಲ್ಲಿ ಸಕ್ರಿಯಗೊಂಡಿದ್ದರು. ಬಸ್ರೂರು ಮುಂದಿನ ಮೂರು ದಶಕಗಳವರೆಗೆ ಭತ್ತವನ್ನು ರಫ್ತು ಮಾಡುವ ಪ್ರಮುಖ ಬಂದರಾಗಿ ಅಭಿವೃದ್ಧಿ ಹೊಂದಿತ್ತು. ಇದೇ ಅವಧಿಯಲ್ಲಿ ಭತ್ತ ಸಾಗಣೆ ವ್ಯಾಪಾರದಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿದ್ದ ಪೋರ್ಚುಗೀಸರು ಈ ಬಂದರು ಪಟ್ಟಣದಲ್ಲಿ ಸಣ್ಣ ವ್ಯಾಪಾರಿ ಕೋಟೆಯನ್ನು ನಿರ್ಮಿಸಿಕೊಂಡಿದ್ದರು. ಈ ಮೊದಲು ಸಾರಸ್ವತರು ಭತ್ತ ವ್ಯಾಪಾರ-ವಹಿವಾಟಿನಲ್ಲಿ ಪ್ರಾಬಲ್ಯ ಗಳಿಸಿದ್ದರು. ಇವರು ಮೂಲತಃ ಬಸ್ರೂರಿನವರೇ ಆಗಿದ್ದು, ಸಮೀಪದ ಕುಂದಾಪುರವನ್ನು ಭತ್ತ ಸಗಟು ಕೇಂದ್ರವನ್ನಾಗಿ ನಿರ್ಮಿಸಿ ಒಳನಾಡಿನ ವಿವಿಧ ಭಾಗಗಳಿಂದ ರೈತರು ವರ್ತಕರು ಭತ್ತವನ್ನು ತಂದು ಈ ಕೇಂದ್ರದಲ್ಲಿ ವಿಕ್ರಯಿಸುತ್ತಿದ್ದರು. ಈ ಕ್ರಯ ವಿಕ್ರಯ ಚಟುವಟಿಕೆಗಳಲ್ಲಿ ಸಾರಸ್ವತ ವರ್ತಕರು ಮುಂಚೂಣಿಯಲ್ಲಿದ್ದರು. ಇವರು ಸಮೀಪದ ಬಸ್ರೂರು ಬಂದರಿಗೆ ತಂದು ಮಸ್ಕಟ್, ಕೆಂಪು ಸಮುದ್ರ ಮತ್ತು ಪರ್ಶಿಯಾ, ಕೊಲ್ಲಿ ರಾಷ್ಟ್ರಗಳಿಗೆ ರಫ್ತು ಮಾಡುತ್ತಿದ್ದರು. ಕ್ರಿ.ಶ. ೧೫೭೦ ಮತ್ತು ೧೭೮೦ರ ದಶಕದಲ್ಲಿ ಈ ಸಾರಸ್ವತ ಸಗಟು ವ್ಯಾಪಾರಿ ಮತ್ತು ರಫ್ತುದಾರರು ಪೋರ್ಚುಗೀಸರಿಂದ ತೀವ್ರ ಪೈಪೋಟಿಯನ್ನು ಎದುರಿಸಬೇಕಾಯಿತು(ಚಂದ್ರಶೇಖರ್,ರಾವ್೨೦೧೬:೮೦-೮೧).

ಈ ಸ್ಥಳೀಯ ಸಾರಸ್ವತ ವರ್ತಕರ ಒತ್ತಡಕ್ಕೆ ಮಣಿದು ಪೋರ್ಚುಗೀಸರು ಇಲ್ಲಿ ತೆರೆದಿದ್ದ ಸುಂಕ ಠಾಣವನ್ನು ಮುಚ್ಚಬೇಕಾಯಿತು. ಅರ್ಥಾತ್ ಭತ್ತ ವ್ಯಾಪಾರದಲ್ಲಿ ತಾವು ಹೊಂದಿದ್ದ ವ್ಯಾಪಾರಿ ಏಕಸ್ವಾಮ್ಯ ಅಲ್ಪಾವಧಿಯಲ್ಲಿಯೇ ಅಂತ್ಯ ಕಾಣಬೇಕಾಯಿತು. ಆದರೂ ಪೋರ್ಚುಗೀಸ್ ಮತ್ತು ಸಾರಸ್ವತ ವರ್ತಕ ಸಮುದಾಯ ಸರಿಸಮಾನವಾಗಿಯೇ ಈ ಭತ್ತ ವ್ಯಾಪಾರ-ವಹಿವಾಟುಗಳಲ್ಲಿ

ಪಾಲ್ಗೊಂಡಿದ್ದವು. ಪೋರ್ಚುಗೀಸರು ಈಗಾಗಲೇ ತಾವು ಸಾರ್ವಭೌಮ ಸಾಧಿಸಿದ್ದ ಗೋವಾ ಮತ್ತು ಕೊಚ್ಚಿನ್ ಬಂದರು ಪ್ರದೇಶಗಳ ಮುಖಾಂತರ ಬಸ್ರೂರಿನಿಂದ ಸಗಟು ರೂಪದಲ್ಲಿ ಭತ್ತವನ್ನು ತಂದು ಆ ಮೂಲಕ ಸಿಲೋನ್, ಮಲಾಕ್ಕ ಮತ್ತು ಮೊಜಾಂಬಿಕ್ ರಾಷ್ಟ್ರಗಳಿಗೆ ರಫ್ತು ಮಾಡುತ್ತಿದ್ದರು. ಹೀಗೆ ಸಾರಸ್ವತ ಮತ್ತು ಪೋರ್ಚುಗೀಸ್ ವರ್ತಕರು 'ಜೀರಿಗೈ' ಎಂದು ಕರೆಯುತ್ತಿದ್ದ ಅತ್ಯುತ್ತಮ ಗುಣಮಟ್ಟದ ಭತ್ತ ಹಾಗೂ ಆ 'ಮುಟ್ಟಿ' ಎಂದು ಕರೆಯುತ್ತಿದ್ದ ಸಾಧಾರಣ ಭತ್ತವನ್ನು ಹೇರಳ ಪ್ರಮಾಣದಲ್ಲಿ ರಫ್ತು ಮಾಡುತ್ತಿದ್ದರು(ಸುಬ್ರಮಣ್ಯಂ,೧೯೯೦:೫೫).

ಕೆಳದಿ ನಾಯಕರಿಗೂ ಪೋರ್ಚುಗೀಸರಿಗೂ ನಿರಂತರ ಯುದ್ಧ ಒಪ್ಪಂದಗಳು ನಡೆಯುತ್ತಲೇ ಇದ್ದವು. ಅದರಲ್ಲಿ ಶಿವಪ್ಪನಾಯಕನ ಕಾಲದಲ್ಲಿ ಸ್ವಲ್ಪಮಟ್ಟಿಗೆ ಯುದ್ಧಗಳು ಹೆಚ್ಚಾಗಿ ನಡೆದಿದ್ದು ನಂತರದ ಸೋಮಶೇಖರನಾಯಕ, ಚೆನ್ನಮ್ಮಾಜಿ, ಭದ್ರಪ್ಪನಾಯಕರ ಕಾಲದಲ್ಲಿ ಪೋರ್ಚುಗೀಸರೊಂದಿಗೆ ನಿರಂತರ ಸಂಬಂಧಗಳಲ್ಲಿ ಸಂಪೂರ್ಣವಾಗಿ ಕಂಪನಿಯ ಒಪ್ಪಂದ, ಕರಾರುಗಳಿಗೆ ಮಣಿಯಬೇಕಾದ ಸಂದಿಗ್ಧ ಪರಿಸ್ಥಿತಿ ನಿರ್ಮಾಣವಾಯಿತು. ವಿಶೇಷವಾಗಿ ಬಸಪ್ಪನಾಯಕನ ಕಾಲದಲ್ಲಿ ಪೋರ್ಚುಗೀಸರೊಂದಿಗೆ ಒಪ್ಪಂದ ಮಾಡಿಕೊಂಡಿದ್ದ ಕಂಪನಿಯೊಂದಿಗೆ ಉತ್ತಮ ಸಂಬಂಧ ಬೆಳೆಸಲು ಕಾಣಿಕೆಗಳನ್ನು ನೀಡಿದರು(ವಸಂತಮಾಧವ,೧೯೯೧:೭೬). ಆದರೆ ಆರಂಭದಲ್ಲಿ ಉತ್ತಮವಾಗಿದ್ದ ಸಂಬಂಧವು ನಂತರ ಅಕ್ಕಿಯ ವ್ಯಾಪಾರದ ವಿಚಾರದಲ್ಲಿ ಕಡಿಮೆಯಾಗಲಾರಂಭಿಸಿತು. ಅರಬ್ಬರಿಗೆ ಕೆಳದಿ ನಾಯಕರು ಅಕ್ಕಿ ಕೊಡುವುದನ್ನು ವಿರೋಧಿಸಿ ಪೋರ್ಚುಗೀಸರು ಅವರಿಗೆ ಕೆಳದಿ ರಾಜ್ಯಕ್ಕೆ ಬರುವುದನ್ನು ತಡೆಯಲಾರಂಭಿಸಿದರು. ನಂತರ ಅಕ್ಕಿ ತುಂಬಿಕೊಂಡು ಹೋಗುತ್ತಿದ್ದ ಕೆಳದಿಯ ಹಡಗುಗಳನ್ನು ತಡೆದರು. ಕರ್ನಾಟಕದ ಕರಾವಳಿ ಪ್ರದೇಶದಲ್ಲಿ ಅರಬ್ಬರಿಗೆ ಪ್ರೋತ್ಸಾಹ ನೀಡಬಾರದೆಂದು ಬಸಪ್ಪನಾಯಕನಿಗೆ ತಿಳಿಸಿದರು. ಕೆಳದಿಯ ರಾಜ್ಯದಲ್ಲಿ ದೊರೆಯುವ ಅಕ್ಕಿಯನ್ನೆಲ್ಲ ತಾವೇ ಕೊಳ್ಳಲು ನಿರ್ಧರಿಸಿದರು. ಈ ಭಿನ್ನಾಭಿಪ್ರಾಯಗಳನ್ನು ನಿವಾರಿಸಲು ಕ್ರಿ.ಶ. ೧೭೧೪ರಲ್ಲಿ ಒಪ್ಪಂದವನ್ನು ಮಾಡಿಕೊಳ್ಳಲಾಯಿತು. ಈ ಒಪ್ಪಂದದಲ್ಲಿ ಪರಸ್ಪರ ಒಬ್ಬರಿಗೊಬ್ಬರು ಸಹಕಾರ ನೀಡುತ್ತಾ ಸ್ನೇಹ ಸಂಬಂಧ ಉಳಿಸಿಕೊಳ್ಳಬೇಕೆಂದು ತೀರ್ಮಾನಿಸಲಾಯಿತು. ಬಸಪ್ಪನಾಯಕನಿಗೂ ಪೋರ್ಚುಗೀಸರಿಗೂ ಆದ ಒಪ್ಪಂದದ ಪ್ರಥಮ ಭಾಗವು ಪೋರ್ಚುಗೀಸರು ನಿರೂಪಿಸಿದ ಹತ್ತೊಂಬತ್ತು ಷರತ್ತುಗಳನ್ನು ಒಳಗೊಂಡಿತ್ತು. ದ್ವಿತೀಯ ಭಾಗವು ಬಸಪ್ಪನಾಯಕನ ಹತ್ತು ಷರತ್ತುಗಳನ್ನು ಒಳಗೊಂಡಿತ್ತು. ಪೋರ್ಚುಗೀಸರ ಷರತ್ತುಗಳು ಈ ಕೆಳಗಿನಂತಿವೆ.

೧. ಬಸಪ್ಪನಾಯಕನು ಅವರಿಗೆ ೩೦,೦೦೦ ಅಶ್ರಫಿಗಳ ಪರಿಹಾರ ಕೊಡಬೇಕು. ಅವನಿಂದ ಅದುವರೆಗೆ ತಪ್ಪಾಗಿಯೋ ಸರಿಯಾಗಿಯೋ ಅವರು ಕಿತ್ತುಕೊಂಡ ಹಡಗುಗಳ ಪರಿಹಾರ ಕೇಳಬಾರದು. ಅದಕ್ಕೆ ಪ್ರತಿಯಾಗಿ ಅವರು ಅವನಿಂದ ಅದುವರೆಗೆ ಬಾಕಿ ಉಳಿದಿದ್ದ ಕಪ್ಪ ತೆರಿಗೆ ಮತ್ತಿತರ ನಷ್ಟಗಳನ್ನು ಕೇಳುವಂತಿಲ್ಲ.

೨. ಮಂಗಳೂರು ಮತ್ತು ಕುಂದಾಪುರಗಳಲ್ಲಿ ರೂಢಿಯಲ್ಲಿದ್ದ ಕಪ್ಪವನ್ನು ಬಸಪ್ಪನಾಯಕನು ಅವರಿಗೆ ಕೊಡಬೇಕು.

೩. ಮಂಗಳೂರು ಬಂದರಿನಲ್ಲಿ ವ್ಯಾಪಾರಿ ಕೇಂದ್ರವೊಂದನ್ನು ಸ್ಥಾಪಿಸಲು ಬಸಪ್ಪನು ಅವರಿಗೆ ಜಾಗ ಕೊಡಬೇಕು. ಕೇಂದ್ರಕ್ಕೆ ಬೇಕಾದ ಕಟ್ಟಡ ಕಟ್ಟಲು ಕಲ್ಲು ಸುಣ್ಣ ಮತ್ತು ಮರಗಳನ್ನು ಕ್ರಯ ತೆಗೆದುಕೊಳ್ಳದೆ ಅವನು ಅವರಿಗೆ ಕೊಡಬೇಕು. ಈ ಕಟ್ಟಡ ಕಟ್ಟುವುದರಲ್ಲಿ ಭಾಗವಹಿಸಿದ ಅವನ ನೌಕರರಿಗೆ ಅವರು ಸಂಬಳ ಕೊಡಬೇಕು.

೩. ಎರಡನೆಯ ಕಾಲಂನಲ್ಲಿ ಕಾಣಿಸಿದ ಕಪ್ಪ ಮಾತ್ರವಲ್ಲದೆ, ೧,೫೦೦ ಚೀಲ ಉತ್ತಮ ಜಾತಿಯ ಮತ್ತು ಸ್ವಚ್ಛ ಅಕ್ಕಿಯನ್ನು ಮಂಗಳೂರಿನಲ್ಲಿ ಬಸಪ್ಪನು ಪ್ರತಿ ವರ್ಷ ಕೊಡಬೇಕು.

೪. ಅರಬ್ಬರು ಅವನ ಕೇಂದ್ರಗಳಲ್ಲಿ ಸ್ಥಾಪಿಸಿದ ವ್ಯಾಪಾರ ಕೇಂದ್ರಗಳನ್ನು ನೆಲಸಮಗೊಳಿಸಬೇಕು ಮುಂದಕ್ಕೆ ಅವರನ್ನು ತನ್ನ ರಾಜ್ಯದಲ್ಲಿ ವ್ಯಾಪಾರ ಮಾಡಲು ಬಿಡಬಾರದು. ಬಸಪ್ಪನ ಯಾವುದೇ ಬಂದರಿನಲ್ಲಿ ಅರಬ್ಬರ ಹಡಗನ್ನು ಕಂಡಾಗ ಪೋರ್ಚುಗೀಸರು ಅದನ್ನು ಆಕ್ರಮಿಸಲು ಆತಂಕವಿರಬಾರದು. ಹಾಗೆ ಆಕ್ರಮಿಸಿದಾಗ ಸದ್ಯದ ಒಪ್ಪಂದ ಉಲ್ಲಂಘಿಸಲ್ಪಟ್ಟಿತ್ತೆಂದು ತಿಳಿಯಬಾರದು.

೫. ಬಸಪ್ಪ ಅಥವಾ ಆತನ ಪ್ರಜೆಗಳ ಹಡಗುಗಳು ಪೋರ್ಚುಗೀಸರು ಕೊಟ್ಟ ಅಧಿಕಾರ ಪತ್ರಗಳಿಲ್ಲದೆ ಅಧಿಕಾರ ಪತ್ರ ಕೊಡುವಾಗ ವೇತನ ತೆಗೆದುಕೊಳ್ಳಲಾಗುವುದು. ಕನ್ಯಾಕುಮಾರಿ ಮತ್ತು ದೀವ್‌ಗಳ ಮಧ್ಯೆ ಚಲಿಸುವ ಹಡಗುಗಳಿಗೆ ಮಂಗಳೂರಿನ ಪೋರ್ಚುಗೀಸ್ ವರ್ತಕ ಕಾರ್ಯಭಾರಿಯು ಕೊಟ್ಟ ಅಧಿಕಾರ ಪತ್ರ ಸಾಕು. ಆದರೆ ಭಾರತದ ಪೂರ್ವ ಕರಾವಳಿ, ಬಂಗಾಳ, ಕೆಂಪು ಸಮುದ್ರ ಜಲಸಂಧಿ ಅಥವಾ ಪರ್ಶಿಯನ್ ಜಲಸಂಧಿಗೆ ಹೋಗುವ ಹಡಗುಗಳಿಗೆ ಗೋವೆಯಲ್ಲಿ ಅಧಿಕಾರ ಪತ್ರ ಪಡೆಯಬೇಕು. ಪೋರ್ಚುಗೀಸರ ನೌಕೆಗಳೊಂದಿಗೆ ಗೋವೆಗೆ ಹೋಗುವ ಹಡಗುಗಳಿಗೆ ಕೂಡ ಮಂಗಳೂರಿನಲ್ಲಿ ಕೊಟ್ಟ ಅಧಿಕಾರ ಪತ್ರವಿರಬೇಕು. ಈ ನಿಯಮಗಳನ್ನು ಉಲ್ಲಂಘಿಸಿದ ಹಡಗುಗಳನ್ನು ಅವರು ವಶಪಡಿಸಿಕೊಳ್ಳಬಹುದು.

೬. ಮಂಗಳೂರಿನಲ್ಲಿ ಅವರ ವ್ಯಾಪಾರ ಕೇಂದ್ರಕ್ಕೆ ಕೋಟೆಯ ಸಾರಿಗೆ ಸಂಪರ್ಕ ಸೌಕರ್ಯಗಳನ್ನು ಒದಗಿಸಬೇಕು ಹಾಗೂ ಹಿಂದೆ ರೂಢಿಯಲ್ಲಿದ್ದ ತೆರಿಗೆಗಳನ್ನು ಅದರ ಕಾರ್ಯಭಾರಿಗೆ ಕೊಡಬೇಕು. ಬಸಪ್ಪನ ಅಧಿಕಾರಿಗಳು ಈ ಬಗೆಗೆ ಆ ಕಾರ್ಯಭಾರಿಯೊಡನೆ ಸಹಕರಿಸಬೇಕು.

೭. ವ್ಯಾಪಾರ ಕೇಂದ್ರದ ಆವರಣದಲ್ಲಿ ಹೊಗೆಸೊಪ್ಪು, ಆಹಾರ ಧಾನ್ಯ, ಮದ್ಯ ಇತ್ಯಾದಿಗಳ ಅಂಗಡಿಗಳನ್ನಿರಿಸಲು ಪೋರ್ಚುಗೀಸರಿಗೆ ಅನುಮತಿಯಿರಬೇಕು. ದಿನಕ್ಕೆ ಐದು ಗಾಡಿಗಳಷ್ಟು ಸರಕುಗಳನ್ನು ತೆರಿಗೆಯಿಲ್ಲದೆ ಬಿದನೂರು ರಾಜ್ಯದಿಂದ ಈ ಅಂಗಡಿಗಳಿಗೆ ಕೊಂಡು ಹೋಗಲು ಬಿಡಬೇಕು.

೮. ವ್ಯಾಪಾರ ಕೇಂದ್ರದ ಆವರಣದಲ್ಲಿ ಇಗರ್ಜಿಯೊಂದನ್ನು ಕಟ್ಟಲು ಒಪ್ಪಿಗೆ ಕೊಡಬೇಕು. ಅವಿಧೇಯ ಕ್ರೈಸ್ತರನ್ನು ಶಿಕ್ಷೆಗೊಳಪಡಿಸಲು ಪಾದ್ರಿಗಳಿಗೆ ಅಧಿಕಾರವಿರಬೇಕು. ಈ ವಿಷಯದಲ್ಲಿ ಬಿದನೂರು ರಾಜ್ಯದ ಠಾಣೆದಾರರೂ, ಮಣೆಗಾರರೂ ಸಹಕರಿಸಬೇಕು.

೯. ಆ ರಾಜ್ಯದಲ್ಲಿ ವಾಸಿಸುವ ಕ್ರೈಸ್ತರೊಳಗೆ ವಾದ ವಿವಾದಗಳಿದ್ದಾಗ ಅವುಗಳನ್ನು ಇತ್ಯರ್ಥ ಮಾಡುವ ಅಧಿಕಾರ ಮಂಗಳೂರಿನ ಪೋರ್ಚುಗೀಸರ ಕಾರ್ಯಭಾರಿ ಹಾಗೂ ಪಾದ್ರಿಗಳಿಗೆ ಸೇರತಕ್ಕದ್ದು.

೧೦. ಬಿದನೂರು ರಾಜ್ಯದಲ್ಲಿ ಪಾದ್ರಿಗಳಿಗೆ, ಕ್ರೈಸ್ತಧರ್ಮ ಪ್ರಚಾರಕರಿಗೆ ಮತ್ತು ಇತರ ಪೋರ್ಚುಗೀಸರ ಪ್ರಜೆಗಳಿಗೆ ನಿರಂತರವಾಗಿ ಹಾದುಹೋಗುವ ಅಧಿಕಾರವಿರಬೇಕು. ಅವರಲ್ಲಿದ್ದ ವ್ಯಾಪಾರ ಸರಕುಗಳ ಹೊರತಾಗಿ ಬೇರೆ ಯಾವ ವಸ್ತುಗಳ ಮೇಲೆಯೂ ತೆರಿಗೆ ಹೇರಬಾರದು.

೧೧. ಆ ರಾಜ್ಯದಲ್ಲಿ ವಿಶೇಷವಾಗಿ ಮಿರ್ಜಾನ್, ಚಂದ್ರಪುರ, ಹೊನ್ನಾವರ, ಭಟ್ಕಳ ಮತ್ತು ಕಲ್ಯಾಣಪುರಗಳಲ್ಲಿ ಕೋಟೆಗಳನ್ನು ಕಟ್ಟಲು ಅನುಮತಿ ಕೊಡಬೇಕು.

೧೨. ಪೋರ್ಚುಗೀಸರ ಹಡಗುಗಳನ್ನು ಆಕ್ರಮಿಸಿದ ಕಡಲ್ಗಳ್ಳರನ್ನು ಅವರು ಬಿದನೂರಿನ ಪ್ರಜೆಗಳಾಗಿದ್ದಲ್ಲಿ ಬಸಪ್ಪನು ಶಿಕ್ಷಿಸಬೇಕಲ್ಲದೆ ಹಡಗುಗಳನ್ನು ಸರಕು ಸಮೇತ ಪೋರ್ಚುಗೀಸರಿಗೆ ಹಿಂದಿರುಗಿಸಬೇಕು.

೧೩. ವ್ಯಾಪಾರ ಕೇಂದ್ರ ಆವರಣದಲ್ಲಿ ಆಹಾರಧಾನ್ಯಗಳನ್ನು ಸಂಗ್ರಹಿಸುವ ಸಲುವಾಗಿ ಉಗ್ರಾಣ ಕಟ್ಟಲು ಸಮ್ಮತಿ ಕೊಡಬೇಕು. ಕೇಂದ್ರದ ಸುತ್ತಲೂ ಕೋಟೆ ಕಟ್ಟಿ ಕಳ್ಳರಿಂದ ರಕ್ಷಿಸಿಕೊಳ್ಳಲು ತೋಪು ಇತ್ಯಾದಿ ಯುದ್ಧ ಸಲಕರಣೆಗಳನ್ನು ಇಟ್ಟುಕೊಳ್ಳಲು ಅನುಮತಿ ಇರಬೇಕು.

೧೪. ಪೋರ್ಚುಗೀಸರು ಒಡೆಯರಿಗೆ ಬಿದನೂರಿಗೆ ಓಡಿಹೋಗುವ ದಾಸರನ್ನು, ಕಳ್ಳರನ್ನು ವಂಚಕರನ್ನು ವೆಚ್ಚವಿಲ್ಲದೆ ಹಿಂದಿರುಗಿಸಬೇಕು.

೧೫. ಬಿದನೂರು ರಾಜ್ಯದ ಅಧಿಕಾರಗಳು ಪೋರ್ಚುಗೀಸರ ವರ್ತಕ ಕಾರ್ಯಭಾರಿಗೆ ಗೌರವ ಕೊಡಬೇಕು. ಅವನನ್ನು ಭೇಟಿಯಾಗಬೇಕಾದರೆ ಮೊದಲು ಅವನ ಅನುಮತಿ ಪಡೆಯಬೇಕು. ಬಿದನೂರು ರಾಜ್ಯದ ಅಧಿಕಾರಿಗಳು ವ್ಯಾಪಾರ ಕೇಂದ್ರ ಆವರಣದೊಳಗೆ ಗಲ್ಲು ಮರ ಅಥವಾ ಇತರೆ ಹಿಂಸಾತ್ಮಕ ಶಿಕ್ಷೆಯ ಸಾಧನಗಳನ್ನು ಇಟ್ಟುಕೊಳ್ಳಬಾರದು.

೧೬. ವ್ಯಾಪಾರ ಕೇಂದ್ರ ಆವರಣದೊಳಗೆ ಪೋರ್ಚುಗೀಸರ ವರ್ತಕರು ವ್ಯಾಪಾರ ವಸ್ತುಗಳನ್ನು ನಿರಾತಂಕವಾಗಿ ಸಂಗ್ರಹಿಸಬಹುದು. ಅವರು ಮಾರಿದ ವಸ್ತುಗಳ ಮೇಲೆ ಮಾತ್ರ ಕೆಳದಿ ಬಸಪ್ಪ ನಾಯಕ ತೆರಿಗೆ ಹಾಕಬೇಕು.

೧೭. ಕೇಂದ್ರದಲ್ಲಿ ಉಪಯೋಗಿಸಲ್ಪಡುವ ಸಾಮಾನುಗಳನ್ನೆಲ್ಲ ಬಿದನೂರಿನಿಂದ ತೆರಿಗೆಯಿಲ್ಲದೆ ತರಲು ಪೋರ್ಚುಗೀಸರ ವರ್ತಕ ಕಾರ್ಯಭಾರಿಗೆ ಎಡೆಕೊಡಬೇಕು.

**ಬಸಪ್ಪನ ಷರತ್ತುಗಳು ಈ ಕೆಳಗಿನಂತಿವೆ.**

೧. ಬಸಪ್ಪನಿಗೆ ವೈರಿಗಳನ್ನೆದುರಿಸಲು ಪೋರ್ಚುಗೀಸರ ಯುದ್ಧ ನೌಕೆಗಳೊಂದಿಗೆ ಸಹಾಯ ನೀಡಬೇಕು. ಆದರೆ ಸಹಾಯ ಆ ವೈರಿಗಳು ಅವರ ಮಿತ್ರರಾಗಿಲ್ಲದಿದ್ದರೆ ಮಾತ್ರ ಅವರು ಅವನ ವೈರಿಗಳೊಂದಿಗೆ ಅವನ ವಿರುದ್ಧ ಒಪ್ಪಂದ ಮಾಡಿಕೊಳ್ಳಬಾರದು.

೨. ಅರಬ್ಬರು ಬಿದನೂರು ರಾಜ್ಯವನ್ನು ಕ್ರಮಿಸಲೆತ್ನಿಸಿದಾಗಲೆಲ್ಲ ಅವರು ಬಸಪ್ಪನಿಗೆ ಸಹಾಯ ಮಾಡಬೇಕು.

೩. ವ್ಯಾಪಾರ ಕೇಂದ್ರದಲ್ಲಿ ಅವರು ಗಾಣ ಸ್ಥಾಪಿಸಬಾರದು.

೪. ಬಿರುಗಾಳಿ ಸಮಯದಲ್ಲಿ ಬಸಪ್ಪನ ನೌಕೆಗಳಿಗೆ ವ್ಯಾಪಾರ ಕೇಂದ್ರದಲ್ಲಿ ಆಶ್ರಯ ಕೊಡಬೇಕು. ಮಾರಿದ ವಸ್ತುಗಳ ಹೊರತಾಗಿ ಅಂತಹ ನೌಕೆಗಳಲ್ಲಿದ್ದ ಬೇರೆ ಸರಕುಗಳ ಮೇಲೆ ಅಲ್ಲಿ ತೆರಿಗೆ ಹೇರಬಾರದು.

೫. ಗೋವೆಯ ಬಂದರುಗಳಿಗೆ ಹೋಗುವ ಬಿದನೂರು ರಾಜ್ಯದ ಹಡಗುಗಳಿಂದ ವಾಡಿಕೆಯ ಸಲ್ಲುವಿಕೆಗಳನ್ನು ಮಾತ್ರ ತೆಗೆದುಕೊಳ್ಳಬೇಕು.

೬. ಬಿದನೂರು ರಾಜ್ಯದಲ್ಲಿ ನೆಲೆಸುವ ಪಾದ್ರಿಗಳು ಯಾರನ್ನೂ ಬಲಾತ್ಕಾರದಿಂದ ಮತಾಂತರಗೊಳಿಸಬಾರದು. ತಬ್ಬಲಿಗಳನ್ನು ತೆಗೆದುಕೊಳ್ಳಬಾರದು ಮತ್ತು ದನಗಳನ್ನು ಕೊಲ್ಲಬಾರದು.

೭. ಅಕ್ಕಿ ಸಾಗಿಸುವ ಆ ರಾಜ್ಯದ ಹಡಗುಗಳನ್ನು ಬೆಂಗಾವಲಿಸುವ ಪೋರ್ಚುಗೀಸರ ನೌಕೆಗಳ ಅಧಿಕಾರಿಗಳ ಬಿದನೂರು ಹಡಗುಗಳ ಒಡೆಯರಿಂದ ಅಕ್ಕಿ ಚೀಲ ಅಥವಾ ಇತರೆ ಲಂಚ ಕೇಳಬಾರದು. ಕೊಂಗೋ ಅಥವಾ ಓರ್ಮುಜ್ ಪ್ರದೇಶದಿಂದ ಕುದುರೆಗಳನ್ನು ತರಲು ಬಸಪ್ಪನಿಗೆ ಸಮ್ಮತಿಸಬೇಕು.

೮. ಅವನ ಹಡಗುಗಳು ಅರೇಬಿಯಾದ ರೇವುಗಳಿಗೆ ಹೋದರೆ, ಆ ಹಡಗುಗಳನ್ನು ಅವರು ವಶಪಡಿಸಿಕೊಳ್ಳಬಹುದು.

೯. ಪೋರ್ಚುಗೀಸರ ಪ್ರಜೆಗಳ ಪೈಕಿ ಯಾರಾದರೂ ಬಸಪ್ಪನ ಪ್ರಜೆಗೆ ಅಪರಾಧ ಮಾಡಿದರೆ ಬಸಪ್ಪನ ಅಧಿಕಾರಿಗಳು ಪೋರ್ಚುಗೀಸರ ವರ್ತಕ ಕಾರ್ಯಭಾರಿಗೆ ಫಿರ್ಯಾದು ಮಾಡಬೇಕು. ಆ ಕಾರ್ಯಭಾರಿಯು ನ್ಯಾಯವಾದ ತೀರ್ಮಾನ ಕೊಡದಿದ್ದಲ್ಲಿ ವೈಸರಾಯನಿಗೆ ಫಿರ್ಯಾದು ಮಾಡಬೇಕು. ಆಗ ವೈಸರಾಯನು ನಿಷ್ಪಕ್ಷಪಾತದಿಂದ ತೀರ್ಮಾನ ಕೊಡಬೇಕು. ಅದೇ ರೀತಿಯಲ್ಲಿ ಬಸಪ್ಪನ ಪ್ರಜೆಗಳ ಪೈಕಿಯಾದರೂ ಪೋರ್ಚುಗೀಸರ ಪ್ರಜೆಗೆ ಅನ್ಯಾಯ ಮಾಡಬೇಕು. ಆ ಅಧಿಕಾರಿಗಳು ಸರಿಯಾದ ತೀರ್ಮಾನ ಕೊಡದಿದ್ದರೆ ಬಸಪ್ಪನಿಗೆ ದೂರು ಕೊಡಬೇಕು. ಆಗ ಅವನು ನ್ಯಾಯಬದ್ಧ ತೀರ್ಮಾನ ಕೊಡುವಂತಿರಬೇಕು(ಕುಮುದಿನಿ,೨೦೦೭ : ಅನುಬಂಧ ೪).

ಬಸಪ್ಪನಾಯಕನ ನಂತರ ಬಂದ ಅರಸರು ಪೋರ್ಚುಗೀಸರೊಂದಿಗೆ ಸಾಮಾನ್ಯವಾದ ಬಾಂಧವ್ಯವನ್ನು ಮುಂದುವರಿಸಿಕೊಂಡು ಹೋದರು. ಕೆಳದಿ ನಾಯಕರಿಗೆ ಈಗಾಗಲೇ ಅವನತಿಯತ್ತ ಸಾಗುತ್ತಿದ್ದ ಪೋರ್ಚುಗೀಸರನ್ನು ರಾಜಕೀಯವಾಗಿ ಎದುರಿಸುವ ಶಕ್ತಿ ಇರಲಿಲ್ಲ. ಇದರಿಂದ ಇವರ ಸಂಬಂಧಗಳು ಸಾಮಾನ್ಯವಾಗಿ ಮುಂದುವರಿದಿದ್ದವು. ಪೋರ್ಚುಗೀಸರು ಬೇರೆ ವಿದೇಶಿಯರಿಗೆ ಇಲ್ಲಿ ನೆಲೆ ನಿಲ್ಲಲು ಬಿಡುತ್ತಿರಲಿಲ್ಲ. ಏಕೆಂದರೆ ಅದರಿಂದಾಗಿ ಇಲ್ಲಿನ ಮಾರುಕಟ್ಟೆಯಲ್ಲಿ ಸ್ಪರ್ಧೆಯುಂಟಾಗಿ ಸ್ಥಳೀಯರಿಗೆ ಹೆಚ್ಚು ಲಾಭವಾಗುತ್ತಿತ್ತು. ಇದರಿಂದ ಪೋರ್ಚುಗೀಸರಿಗೆ ನಷ್ಟವಾಗುತ್ತಿದ್ದುದನ್ನು ಮನಗಂಡಿದ್ದರು.

ಬಿಜಾಪುರದ ಸುಲ್ತಾನರ ಜೊತೆ ಪೋರ್ಚುಗೀಸರು ವ್ಯಾಪಾರ ಸಂಬಂಧವನ್ನು ಹೊಂದಿದ್ದರು. ಇದಕ್ಕೆ ಸಂಬಂಧಿಸಿದಂತೆ ಆದಿಲ್‌ಶಾಹನ ವಿರುದ್ಧ ಬಂಡೆದ್ದ ದೇಸಾಯಿಗಳು ಗೋವಾದ ವೈಸ್‌ರಾಯ್‌ನಾದ ಅಂತೋನಿಯ ಹತ್ತಿರ ಬಂದು ಸಹಾಯ ಕೇಳಿದ ವಿಚಾರ ಮತ್ತು ವ್ಯಾಪಾರಕ್ಕೆ ಕಾರವಾರಕ್ಕೆ ಹೋಗಿದ್ದ ಆದಿಲ್‌ಶಾಹನ ನೌಕೆಯನ್ನು ಪೋರ್ಚುಗೀಸರು ಸೆರೆಯಾಗಿಸಿದ್ದ ವಿಚಾರ ದಿನಾಂಕ: ೨೮ ಜೂನ್ ೧೬೬೪ರ ಒಂದು ಪತ್ರದಿಂದ ತಿಳಿಯುತ್ತದೆ.(ಚಂದ್ರಕಾಂತ ಪೋಕಳೆ ೨೦೧೬:೯೦).

ಒಟ್ಟಾರೆಯಾಗಿ ಕೆಳದಿ ನಾಯಕರು, ಬಿಜಾಪುರದ ಸುಲ್ತಾನರು ಇನ್ನಿತರೆ ಕರಾವಳಿ ಪ್ರದೇಶದ ಸಣ್ಣ ಪುಟ್ಟ ಸ್ಥಳೀಯ ಸಂಸ್ಥಾನಗಳೊಂದಿಗೆ ವ್ಯಾಪಾರ–ವಾಣಿಜ್ಯ ಸಂಬಂಧಗಳನ್ನು ಹೊಂದಿದ್ದರು. ಮುಖ್ಯವಾಗಿ ಕೆಳದಿ ನಾಯಕರ ಆಡಳಿತದಲ್ಲಿ ಪೋರ್ಚುಗೀಸರೇ ಮುಖ್ಯ ಪಾತ್ರ ವಹಿಸಿದ್ದರೂ ಕೂಡ ಇತರ ಐರೋಪ್ಯರಾದ ಡಚ್, ಫ್ರೆಂಚ್ ಹಾಗೂ ಇಂಗ್ಲಿಶರು ಕೂಡ ತಮ್ಮ ಪ್ರಭಾವ ಬೀರಿದ್ದರು. ಪೋರ್ಚುಗೀಸ್ ಅನುಮಾನಾಸ್ಪದ ನಡವಳಿಕೆಯಿಂದ ಕೆಳದಿ ನಾಯಕರಿಗೆ ಅವರ ಮೇಲೆ ಪೂರ್ಣ ಪ್ರಮಾಣದ ನಂಬಿಕೆ ಇರಲಿಲ್ಲ. ಅವರು ಮೂರನೇ ಯಾವುದಾದರೂ ಶಕ್ತಿ ಬರುವುದಾದರೆ ಬೆಂಬಲಿಸಲು ಸಿದ್ಧವಿದ್ದರು. ಏಕೆಂದರೆ ಇತರೆ ವಿದೇಶಿಯರ ಆಗಮನದಿಂದ ಇಲ್ಲಿನ ವಾಣಿಜ್ಯ ಬೆಳೆಗಳಿಗೆ ಬೇಡಿಕೆ ಹೆಚ್ಚಾಗಿ ಬೆಲೆಯಲ್ಲಿ ಏರಿಕೆಯುಂಟಾಗುತ್ತಿತ್ತು. ಇದರಿಂದ ಕೆಳದಿಯ ರಾಜ್ಯದ ಬೊಕ್ಕಸಕ್ಕೆ ಲಾಭ ಹೆಚ್ಚಾಗುತ್ತಿತ್ತು. ಹಾಗೆಯೇ ಸ್ಥಳೀಯ ರಾಜರ ಮೇಲೆ ಯುದ್ಧ ಮಾಡುವಾಗ ಪೋರ್ಚುಗೀಸರು ಪೂರ್ಣ ಪ್ರಮಾಣದಲ್ಲಿ ಸಹಾಯ ಮಾಡುತ್ತಿರಲಿಲ್ಲ. ಕೆಳದಿ ನಾಯಕರು ಅವರ ನೌಕಾಬಲದ ಮೇಲೆ ಅವಲಂಬಿತರಾಗಿದ್ದರು. ಬೇರೆಯವರ ಆಗಮನದ ಮೂಲಕ ಈ ಅವಲಂಬನೆ ತಪ್ಪುತ್ತಿತ್ತು. ಈ ರೀತಿಯ ಯೋಚನೆಗಳೊಂದಿಗೆ ಇತರೆ ವಿದೇಶಿಯರೊಂದಿಗೂ ಕೆಳದಿ ನಾಯಕರು ಹಾಗೂ ಸ್ಥಳೀಯ ಸಂಸ್ಥಾನಗಳು ಸಂಬಂಧ ಬೆಳೆಸಿದರು. ನಂತರ ಮೈಸೂರಿನಲ್ಲಿ ತನ್ನ ಸರ್ವಾಧಿಕಾರ ಸ್ಥಾಪಿಸಿದ ಹೈದರ್ ಆಲಿ ಆಂಗ್ಲರ ಕಡುವೈರಿಯಾಗಿದ್ದರು. ತನ್ನ ಸೈನ್ಯಕ್ಕೆ ಯುರೋಪಿಯನ್ ಮಾದರಿಯಲ್ಲಿ ಯುದ್ಧ ಕೌಶಲ್ಯ ತರಬೇತಿ ನೀಡಲು ಆಂಗ್ಲ ವಿರೋಧಿ ಪೋರ್ಚುಗೀಸರನ್ನು ನೇಮಿಸಿಕೊಂಡಿದ್ದನು. ಆಗ ಪಿಕ್ಲೊತು ಎಂಬ ಪೋರ್ಚುಗೀಸ್ ಸಾಹಸಿಗ ತನ್ನ ಕೆಲವು ಪೋರ್ಚುಗೀಸ್ ಸಹಚರರೊಂದಿಗೆ ಮೈಸೂರಿನ ಸೈನ್ಯದಲ್ಲಿ ಸೇವೆ ಸಲ್ಲಿಸುತ್ತಿದ್ದನು. ಈ ಅವಧಿಯ ನಂತರ ಮುಂದೆ ಕರ್ನಾಟಕದಲ್ಲಿ ಪೋರ್ಚುಗೀಸರ ಪ್ರಭಾವ ಕಂಡುಬರುವುದಿಲ್ಲ.

**೬.೨. ಸ್ಥಳೀಯ ನಾಯಕರು ಮತ್ತು ಡಚ್ಚರ ಆರ್ಥಿಕ ಸಂಬಂಧಗಳು**

ವ್ಯಾಪಾರ ತತ್ವದ ವಿಚಾರಗಳು ೧೬೦೦ ಮತ್ತು ೧೭೦೦ರ ಅವಧಿಯಲ್ಲಿ ಬಹಳಷ್ಟು ಪ್ರಭಾವಶಾಲಿಯಾಗಿದ್ದವು. ಕ್ರಮೇಣ ಚಿನ್ನ, ಬೆಳ್ಳಿಗಳು ದೇಶವನ್ನು ಶ್ರೀಮಂತವಾಗಿಸಲಾರವೆಂಬ ಸತ್ಯ ಅರಿವಿಗೆ ಬಂತು. ಉದಾಹರಣೆಗೆ ಸ್ಪೇನ್‌ನಲ್ಲಿ ಇಂಥ ಲೋಹಗಳನ್ನು ಅಮೆರಿಕ ವಸಾಹತುಗಳಿಂದ ಸಂಗ್ರಹಿಸಿದ್ದರೂ ಅವು ಬಹಳ ಕಾಲ ಉಳಿಯಲಿಲ್ಲ. ಇವುಗಳಿಂದ ಸ್ಪೇನಿನ ಜನ ಇಂಗ್ಲೆಂಡ್‌ಗಳಲ್ಲಿ ಉತ್ಪಾದನೆಯನ್ನು ಹೆಚ್ಚಿಸಲು ಸಹಾಯಕಾರಿಯಾಗಿದ್ದ ವ್ಯವಸಾಯದ ಹಾಗೂ ಕೈಗಾರಿಕೆಯ ಸಾಧನಗಳನ್ನು ಕೊಂಡರು. ಯುರೋಪ್‌ನಲ್ಲಿ ಎಲ್ಲ ವಸ್ತುಗಳ ಬೆಲೆ ಏರಿತು. ಬೆಲೆ ಏರಿಕೆ, ಆರ್ಥಿಕ ಸ್ಥಗಿತತೆ, ಧಾರ್ಮಿಕ ಯುದ್ಧಗಳು, ಜನಸಂಖ್ಯೆಯ ಇಳಿಕೆ ಇತ್ಯಾದಿ ಕಾರಣಗಳಿಂದ ಪೋರ್ಚುಗಲ್, ಸ್ಪೇನ್, ಇಟಲಿ ಹಾಗೂ ಯುರೋಪಿನ ಬಹುಭಾಗಗಳು ೧೭ನೆಯ ಶತಮಾನದ ಆದಿಭಾಗದಲ್ಲಿ ಒಂದು ಬಗೆಯ ಸಂಕಷ್ಟಕ್ಕೆ ಒಳಗಾಗಿದ್ದವು. ಆದರೆ ಈ ಸಂಕಷ್ಟವು ಯುರೋಪಿನ ಎಲ್ಲ ಕಡೆ ವ್ಯಾಪಿಸಲಿಲ್ಲ. ಡಚ್ಚರು ಹಾಗೂ ಇಂಗ್ಲಿಶರು ಈ ಸಂಕಷ್ಟದ ಸ್ಥಿತಿಯನ್ನು ಮೀರಿ ಆರ್ಥಿಕ ಸ್ಥಿತಿಯನ್ನು

ಸುಧಾರಿಸಿದರು. ಫ್ರಾನ್ಸ್ ಸಹ ತನ್ನ ವ್ಯಾಪಾರ ತತ್ವದ ಸಹಾಯದಿಂದ ಈ ಸ್ಥಿತಿಯನ್ನು ಸಮರ್ಥವಾಗಿ ಎದುರಿಸಿತು. ಕ್ರಿ.ಶ.೧೭೦೦ರ ವೇಳೆಗೆ ಹಾಲೆಂಡ್, ಫ್ರಾನ್ಸ್ ಮತ್ತು ಇಂಗ್ಲೆಂಡ್‌ಗಳು ಯುರೋಪಿನ ಪ್ರಮುಖ ಶಕ್ತಿಗಳಾಗಿದ್ದವು. ಆದರೆ ೧೮ನೇ ಶತಮಾನದಲ್ಲಿ ಇವೆಲ್ಲವೂ ಪರಸ್ಪರ ವಿರೋಧಿ ವಸಾಹತು ಶಕ್ತಿಗಳಾಗಿ ಬೆಳೆದವು. ಬ್ರಿಟನ್ ತನ್ನ ಕೈಗಾರಿಕಾ ಕ್ರಾಂತಿಯ ಬಲದಿಂದ ೧೮ನೆಯ ಶತಮಾನದಲ್ಲಿ ಅತ್ಯಂತ ಬಲಿಷ್ಠ ರಾಷ್ಟ್ರವಾಗಿ ಉದಯವಾಯಿತು.

ತಮ್ಮ ವ್ಯಾಪಾರವನ್ನು ಅಭಿವೃದ್ಧಿಪಡಿಸುವ ಉದ್ದೇಶದಿಂದ ಡಚ್ಚರು ಡಚ್ ಈಸ್ಟ್ ಇಂಡಿಯಾ ಕಂಪನಿಯನ್ನು ಸ್ಥಾಪಿಸಿದರು. ಅವರು ತಮ್ಮ ಮೊದಲ ಕಾರ್ಖಾನೆಗಳನ್ನು ಕ್ರಿ.ಶ.೧೬೦೬ರಲ್ಲಿ ಮಚಲಿಪಟ್ಟಣಂ ಹಾಗೂ ಉತ್ತರ ಕೋರಮಂಡಲ್‌ನ ಪೇಟಪುಲಿಯಲ್ಲಿ ಸ್ಥಾಪಿಸಿದರು. ಆಗ ಡಚ್ಚರ ಮುಖ್ಯ ಗುರಿ ಭಾರತವಾಗಿರದೆ, ಹೆಚ್ಚು ಸಂಬಾರ ಪದಾರ್ಥಗಳು ದೊರೆಯುತ್ತಿದ್ದ ಇಂಡೋನೇಷ್ಯದ ದ್ವೀಪಗಳಾದ ಜಾವಾ, ಸುಮಾತ್ರಾಗಳಾಗಿದ್ದವು. ಆದರೆ ಕ್ರಮೇಣ ಭಾರತದ ಬಟ್ಟೆಗಳ ಗುಣಮಟ್ಟ ಇಂಡೋನೇಷ್ಯಾಕ್ಕಿಂತ ಒಳ್ಳೆಯದು ಎಂದು ಅರಿವಾದಾಗ ಅವರು ಪುಲಿಕಾಟ್, ಕ್ಯಾಂಟೆ, ಸೂರತ್, ಆಗ್ರಾ, ಹರಿಹರಪುರ, ಪಾಟ್ನಾ, ಉದಯ್‌ಗಂಜ್, ಚಿನ್ಸುರಾ, ಖಾಸಿಂಬಜಾರ್, ಬರಂಗೋರೆ, ಬಾಲಸೋರ್ ಮತ್ತು ನಾಗಪಟ್ಟಣಂಗಳಲ್ಲಿ ಕಾರ್ಖಾನೆಗಳನ್ನು ಆರಂಭಿಸಿದರು. ೧೬೫೮ರಲ್ಲಿ ಸಿಲೋನ್ ಅನ್ನೂ ಸಹ ಅವರು ಪೋರ್ಚುಗೀಸರಿಂದ ವಶಪಡಿಸಿಕೊಂಡರು(ತಂಬಂಡ೨೦೧೧:೪೫೦, ೫೧).

ಡಚ್ಚರು ಕರ್ನಾಟಕ ಭಾಗದಲ್ಲಿ ತಮ್ಮ ನೆಲೆಗಳನ್ನು ಹೆಚ್ಚಾಗಿ ಸ್ಥಾಪಿಸಿರಲಿಲ್ಲ. ಆದರೆ ಬಂದರು ಪ್ರದೇಶಗಳೊಂದಿಗೆ ವ್ಯಾಪಾರ ಸಂಬಂಧಗಳನ್ನು ಹೊಂದಿರುವುದು ಕಾಣಬಹುದು. ಕರ್ನಾಟಕದ ಕರಾವಳಿಯಲ್ಲಿ ಪೋರ್ಚುಗೀಸರಿಗೂ ಫ್ರೆಂಚರಿಗೂ ಘರ್ಷಣೆಗಳಾಗಿರುವುದು ಕಂಡುಬರುತ್ತದೆ. ಪೋರ್ಚುಗೀಸರು ಅಕ್ಕಿಯನ್ನು ಗೋವಾದಿಂದ ರವಾನಿಸುತ್ತಿದ್ದರು. ಕೆನರಾದ ಪ್ರಸಿದ್ಧ ವ್ಯಾಪಾರಿಯಾದ ರಾಮಕಿವಿ ಮಂಗಳೂರು ನಿವಾಸಿಯಾಗಿದ್ದು ಅಕ್ಕಿ ಸಂಗ್ರಹಿಸಿದ್ದನ್ನು ತಪ್ಪು ತಿಳಿದ ಪೋರ್ಚುಗೀಸರು ಅವರನ್ನು ಬಂಧಿಸಿ ಗಲ್ಲಿಗೇರಿಸುತ್ತಾರೆ(ಸುಬ್ರಮಣ್ಯಂ, ೧೯೯೦ : ೫೯). ಇಲ್ಲಿ ಮುಖ್ಯವಾಗಿ ಗಮನಿಸಬೇಕಾದದ್ದು ಕರಾವಳಿ ಕರ್ನಾಟಕ ವಾಣಿಜೋದ್ಯಮ ಮತ್ತು ಸಂಘರ್ಷದಲ್ಲಿ ಯುರೋಪಿಯನ್ ವಸಾಹತುಗಳನ್ನು ಸ್ಥಾಪಿಸುವ ಸಂದರ್ಭದಲ್ಲಿ ಘರ್ಷಣೆ ನಡೆದಿರುವುದನ್ನು ಗಮನಿಸಬಹುದು. ವ್ಯಾಪಾರ ಮಾಡಲು ಪೋರ್ಚುಗೀಸರಿಗೂ ಡಚ್ಚರಿಗೂ ಇಲ್ಲಿ ಪೈಪೋಟಿ ಆಗಿರುವುದನ್ನು ಕೆಳದಿ ರಾಜ್ಯದ ಬಗ್ಗೆ ಡಚ್ಚರ ಪ್ರವರ್ತಕನಾದ ಲಿನ್‌ಸ್ಕೋಟಿನ್‌ನ ವರದಿಗಳಿಂದ ಡಚ್ಚರಿಗೆ ತಿಳಿದುಬಂದಿತು(ಫಣಿಕರ್,೧೯೯ : ೫೬). ಪೋರ್ಚುಗೀಸರ ಏಕಸ್ವಾಮ್ಯವನ್ನು ಡಚ್ಚರು ವಿರೋಧಿಸುತ್ತಿದ್ದರು ಹಾಗೂ ಅವರ ಹಿತಾಸಕ್ತಿಗೆ ವಿರುದ್ಧವಾಗಿ ಕೆಲಸ ಮಾಡುತ್ತಿದ್ದರು. ಕೆಳದಿ ನಾಯಕರು ಪೋರ್ಚುಗೀಸರನ್ನು ಎದುರು ಹಾಕಿಕೊಳ್ಳದ ಕಾರಣ ಡಚ್ಚರಿಗೆ ಕರ್ನಾಟಕದ ಕರಾವಳಿಯಲ್ಲಿ ಬೆಂಬಲ ಸಿಕ್ಕಿರಲಿಲ್ಲ. ಶಿವಪ್ಪನಾಯಕನ ಕಾಲದಲ್ಲಿ ಕೆಲವು ಪ್ರದೇಶಗಳ ಮೇಲೆ ಹಿಡಿತ ಸಾಧಿಸಲು ನಿರ್ಧರಿಸಿ ಪೋರ್ಚುಗೀಸರೊಂದಿಗೆ ಡಚ್ಚರು ಸ್ಪರ್ಧೆಗಿಳಿರುವುದನ್ನು ಕಾಣಬಹುದು (ಶಾಸ್ತ್ರಿ೧೯೭೨:೮೫). ಶಿವಪ್ಪನಾಯನಕನು ತನ್ನ ಅಧಿಕಾರಾವಧಿಯಲ್ಲಿ ವಿದೇಶಿಯರೊಂದಿಗೆ ಉತ್ತಮ ಸಂಬಂಧ

ಹೊಂದಿದ್ದರೂ, ಅವರಿಗೆ ಸ್ವಂತ ಕೋಟೆ ನಿರ್ಮಿಸಿಕೊಳ್ಳಲು ಹಾಗೂ ಆಡಳಿತ ನಡೆಸಿ ಅಧಿಕಾರ ಚಲಾಯಿಸಲು ಅವಕಾಶ ನೀಡಲಿಲ್ಲ. ಡಚ್ಚರ ಪ್ರವೇಶದಿಂದಾಗಿ ಕೆಳದಿ ರಾಜ್ಯದ ಮೇಲೆ ಇಬ್ಬರು ವಿದೇಶಿಯರು ವ್ಯಾಪಾರಕ್ಕಾಗಿ ರಾಜರ ಜೊತೆ ಸ್ನೇಹ ಬೆಳೆಸಲು ಆರಂಭಿಸಿದರು. ವಿದೇಶಿಯರಿಗೆ ಸಮುದ್ರದ ಮೇಲೆ ಎಷ್ಟೇ ಹಿಡಿತವಿದ್ದರೂ ಒಳನಾಡಿನಲ್ಲಿ ಕೆಳದಿ ನಾಯಕರನ್ನು ಸೋಲಿಸುವ ಸಾಮರ್ಥ್ಯ ಇರಲಿಲ್ಲ.

ಡಚ್ಚರು ಶಿವಪ್ಪನಾಯಕನೊಂದಿಗೆ ಸ್ನೇಹ ಸಂಪಾದಿಸುವ ಸಲುವಾಗಿ ಸ್ಥಳೀಯ ಕೆಲವು ಅರಸರು ಕೆಳದಿಯ ವಿರುದ್ಧ ದಂಗೆ ಎದ್ದಾಗ ಕೆಳದಿಗೆ ಸಹಾಯ ಮಾಡಲು ಬಂದರು. ಕಾರಣವೇನೆಂದರೆ, ಕರಾವಳಿ ಕರ್ನಾಟಕದ ಮೇಲೆ ತಮ್ಮ ನೌಕಾನೆಲೆಯನ್ನು ಸ್ಥಾಪಿಸುವುದು ಅವರ ಉದ್ದೇಶವಾಗಿತ್ತು. ಕೆಳದಿ ನಾಯಕರು ಪೋರ್ಚುಗೀಸರಿಂದ ದೂರ ಉಳಿದರೆ ಆ ಪ್ರದೇಶದ ಆರ್ಥಿಕ ಚಟುವಟಿಕೆಗಳನ್ನು ತಾವು ಹತೋಟಿಯಲ್ಲಿಟ್ಟುಕೊಳ್ಳಬಹುದೆಂದು ಡಚ್ಚರು ನಂಬಿದ್ದರು. ಶಿವಪ್ಪನಾಯಕನು ತನ್ನ ಅವಧಿಯಲ್ಲಿ ಪೋರ್ಚುಗೀಸರಿಂದ ಎಲ್ಲ ಬಂದರುಗಳನ್ನು ವಶಪಡಿಸಿಕೊಂಡಿದ್ದನು. ಇದೇ ವೇಳೆಯಲ್ಲಿ ಡಚ್ಚರು ಶಿವಪ್ಪನಾಯಕನೊಂದಿಗೆ ಸ್ನೇಹದಿಂದಿದ್ದರು. ಶಿವಪ್ಪನಾಯಕನ ಆಳ್ವಿಕೆಯ ಅಂತ್ಯದ ನಂತರ ಕ್ರಿ.ಶ.೧೬೬೪ ನವೆಂಬರ್ ೨೦ರಂದು ಕರಾವಳಿ ಕರ್ನಾಟಕದ ಬಂದರುಗಳನ್ನು ಪುನಃ ಪೋರ್ಚುಗೀಸರು ಪಡೆದುಕೊಂಡರು. ಡಚ್ಚರು ಆ ಬಂದರುಗಳನ್ನು ತಮ್ಮ ವಶಕ್ಕೆ ಕೊಡಬೇಕೆಂದು ಪೋರ್ಚುಗೀಸರನ್ನು ಒತ್ತಾಯಿಸಿದರು. ಏಕೆಂದರೆ ಶಿವಪ್ಪನಾಯಕನು ಪೋರ್ಚುಗೀಸರೊಂದಿಗೆ ವಿರೋಧ ಕಟ್ಟಿಕೊಂಡಾಗ ಆ ಬಂದರುಗಳನ್ನು ತಮಗೆ ಕೊಡುವುದಾಗಿ ಒಪ್ಪಂದ ಮಾಡಿಕೊಂಡಿದ್ದು, ಬೇರೆ ಯಾರಿಗೂ ಇಲ್ಲಿ ಅವಕಾಶ ನೀಡುವುದಿಲ್ಲವೆಂದು ಹೇಳಿದ್ದಾನೆಂದು ಡಚ್ಚರು ತಿಳಿಸಿದರು. ಆದರೆ ಈ ಸಂದರ್ಭದಲ್ಲಿ ಒಪ್ಪಂದದಲ್ಲಿ ಭಾಗವಹಿಸಿದವರು ಜೀವಂತವಾಗಿ ಇಲ್ಲದಿರುವುದರಿಂದ ಈ ಸಮಸ್ಯೆ ಕಗ್ಗಂಟಾಗಿಯೇ ಉಳಿಯಿತು. ಆದರೆ ಪೋರ್ಚುಗೀಸರು ಅನೇಕ ವಾದಗಳನ್ನು ಮುಂದಿಟ್ಟು ಆ ಪ್ರದೇಶಗಳನ್ನು ತಮ್ಮ ಹತೋಟಿಯಲ್ಲಿಟ್ಟುಕೊಂಡಿದ್ದರು. ಗೋವೆಯ ವೈಸ್‌ರಾಯ್ 'ಅಂಟೋನಿಯೋ ಡಿ ಮೊಲ್ಲೊಡಿಕಾಸ್ಟ್ರೋ'ನು ಪೋರ್ಚುಗಲ್‌ನ ಲಿಸ್ಬನ್ ಆಸ್ಥಾನಕ್ಕೆ ಪತ್ರ ಬರೆದು 'ಕೆನರಾ ರಾಜನೊಂದಿಗೆ ಒಪ್ಪಂದ ಮಾಡಿಕೊಂಡ ಪ್ರಕಾರ ಅವನು ಪೋರ್ಚುಗೀಸರಿಂದ ಹಿಂದೆ ವಶಪಡಿಸಿಕೊಂಡ ಬಂದರುಗಳನ್ನು ಹಿಂತಿರುಗಿಸಲು ಒಪ್ಪಿದ್ದಾನೆ(ಅರುಣ್ ೨೦೦೬ : ೨೧೪-೨೧೫). ಹಾಗೂ ಅಷ್ಟೇನೂ ಪ್ರಮುಖವಲ್ಲದ ಕರಾರುಗಳ ಮೇಲೆ ತನ್ನ ರಾಜ್ಯದ ಮೆಣಸನ್ನು ಕೊಂಡುಕೊಳ್ಳುವಂತೆ ಬಲಾತ್ಕರಿಸಕೂಡದು ಎಂಬ ಮಾತಿಗೆ ಒಪ್ಪಿದ್ದಾನೆ. ಇದರಂತೆ ಅವನು ಹಿಂತಿರುಗಿಸಿದ ಪ್ರದೇಶಗಳನ್ನು ವಶಪಡಿಸಿಕೊಳ್ಳಲು ಹೋದ ನಮ್ಮ ದಂಡನಾಯಕನಿಗೆ ಡಚ್ಚರ ಅಡ್ಮಿರಲ್‌ನು ಬಾರ್ಸಿಲೋರ್‌ನ್ನು ವಶಪಡಿಸಿಕೊಳ್ಳಲು ಅಡ್ಡಿಪಡಿಸಿದನು ಹಾಗೂ ಮಂಗಳೂರಿನಲ್ಲೂ ಡಚ್ಚರು ವಿರೋಧ ವ್ಯಕ್ತಪಡಿಸಿದರು. ಕಾರಣ 'ಕೊಡಿಯಾಲ ಬಂದರು' ಎಂದು ಕರೆಯಲಾಗುತ್ತಿದ್ದ ಮಂಗಳೂರು ಬಂದರು ಸಾಕಷ್ಟು ವ್ಯಾಪಾರ ಚಟುವಟಿಕೆಗಳ ಕೇಂದ್ರವಾಗಿದ್ದರೂ, ಭೌಗೋಳಿಕವಾಗಿ ಅಗತ್ಯವಾದ ಅನುಕೂಲತೆಗಳನ್ನು

ಸದಾಕಾಲವೂ ಹೊಂದಿರಲಿಲ್ಲ. ಕರಾವಳಿಯ ಹವಮಾನದ ವೈಪರೀತ್ಯಗಳಿಂದಾಗಿ ಅದರ ಅಳಿವೆ ಪ್ರದೇಶದಲ್ಲಿ ಆಗಾಗ್ಗೆ ಬಹಳಷ್ಟು ಬದಲಾವಣೆಗಳಾಗುತ್ತಿದ್ದವು. ಗುರುಪುರ ಹಾಗೂ ನೇತ್ರಾವತಿ ನದಿಗಳು ಸಂಗಮವಾಗಿ ಅರಬ್ಬಿ ಸಮುದ್ರ ಸೇರುವಲ್ಲೇ ಬಂದರಿನ ಉಗಮವಾಗಿತ್ತು. ಈ ಬಂದರಿಗೆ ಒಂದೇ ಪ್ರವೇಶವಿದ್ದು, ಸರಳು ಇಳಿಸಿದ ಬಳಿಕವೇ ಹಡಗುಗಳು ಇಲ್ಲಿ ಪ್ರವೇಶಿಸುವಷ್ಟು ಆಳವನ್ನು ಇದು ಹೊಂದಿತ್ತು. ಸೆಪ್ಟೆಂಬರ್ ೧೮೩೭ ಮತ್ತು ಜನವರಿ ೧೮೪೪ರ ಮಲಬಾರ್ ಮತ್ತು ಕೆನರಾದ ಸಿವಿಲ್ ಇಂಜಿನಿಯರ್‌ಗಳ ಡೈರಿಗಳಿಂದ ಲಭ್ಯವಾಗುವ ಮಾಹಿತಿಯಂತೆ, ೧೮೦೧ರ ಮೊದಲು ಇಲ್ಲಿ ಗುರುಪುರ ಮತ್ತು ನೇತ್ರಾವತಿ ನದಿಗಳು ಜೊತೆಯಾಗಿ ಸಮುದ್ರವನ್ನು ಸೇರುತ್ತಿರುವ ಪ್ರದೇಶದಲ್ಲೆ ಸಾಕಷ್ಟು ಆಳವಿದ್ದುದರಿಂದ, ದೊಡ್ಡ ಹಡಗುಗಳು ಪ್ರವೇಶಿಸುವುದು ಸಾಧ್ಯವಾಯಿತು. ಆದರೆ ೧೮೦೧ರ ಅತಿವೃಷ್ಟಿಯಿಂದಾಗಿ ಹಿನ್ನೀರುಗಳಲ್ಲಿ ಸಣ್ಣ ಪ್ರವಾಹವು ಉಕ್ಕಿ ಈ ಪ್ರದೇಶ ಮುಳುಗಿ ನೀರು ಹರಿದು ಮೊದಲಿನ ಅಳಿವೆಯಲ್ಲಿ ಉಸುಕು ತುಂಬಿ ಹಡಗುಗಳ ಪ್ರವೇಶಕ್ಕೆ ಧಕ್ಕೆ ಉಂಟಾಯಿತು. ಆದರೂ ಹಳೆಯ ಬಂದರು ಪ್ರದೇಶದಲ್ಲಿ ಅಕ್ಕಿ ಇಲ್ಲಿನ ಪ್ರಮುಖ ರಫ್ತಿನ ಸರಕಾಗಿದ್ದು ಕರ್ನಾಟಕದ ಕರಾವಳಿಯಿಂದ ಮಸ್ಕತ್, ಗೋವಾ, ಮುಂಬೈ ಮತ್ತು ಮಲಬಾರ್‌ಗಳಿಗೆ ರಫ್ತಾಗುತ್ತಿದ್ದ ಒಟ್ಟು ಪ್ರಮಾಣದ ೩/೪ ಅಂಶದಷ್ಟು ಇಲ್ಲಿಂದಲೇ ರಫ್ತಾಗುತ್ತಿತ್ತು. ಅಡಿಕೆ, ಕಾಳುಮೆಣಸು, ಶ್ರೀಗಂಧ, ಗೇರುಬೀಜ, ಅರಿಶಿನ, ಮರಮುಟ್ಟು, ಸಂಬಾರದಿನಸು, ತೆಂಗಿನಕಾಯಿ, ತೆಂಗಿನನಾರು, ಹೊಗೆಸೊಪ್ಪು, ಚರ್ಮ ಮತ್ತು ಆನೆದಂತಗಳು ಇನ್ನಿತರ ರಫ್ತಿನ ವಸ್ತುಗಳಾಗಿದ್ದವು. ೧೮೪೦ರ ಬಳಿಕ ಇಲ್ಲಿಂದ ಕಾಫಿಯ ರಫ್ತು ಹೆಚ್ಚಿ ಅಕ್ಕಿಗಿಂತಲೂ ಹೆಚ್ಚಿನ ಪ್ರಮಾಣದಲ್ಲಿ ಮುಂಬೈಗೆ ಮತ್ತು ಅಲ್ಲಿಂದ ಇಂಗ್ಲೆಂಡಿಗೆ ರಫ್ತಾಗುತ್ತಿತ್ತು.

ಚೀನಾ ಮತ್ತು ಬಂಗಾಳದಿಂದ ಆಮದು ಮಾಡಿಕೊಳ್ಳುತ್ತಿದ್ದ ಕಚ್ಚಾ ರೇಷ್ಮೆಯು ಘಟ್ಟದ ಮೇಲಿನ ರೇಷ್ಮೆ ತಯಾರಕರಿಗೆ, ಗೋವಾ ಮತ್ತು ಮುಂಬೈಯಿಂದ ಸ್ಥಳೀಯ ಅವಶ್ಯಕತೆಗಳಿಗೆಂದು ಉಪ್ಪು, ಬಂಗಾಳದಿಂದ ಸಕ್ಕರೆ, ಸೂರತ್‌ನಿಂದ ಎಣ್ಣೆ ಮತ್ತು ತುಪ್ಪ, ಕೃಷಿ ಉಪಕರಣಗಳು, ಧಾನ್ಯಗಳು, ಹತ್ತಿ ಮತ್ತು ಉಣ್ಣೆಯ ಬಟ್ಟೆಗಳು, ಮಸ್ಕತ್‌ನಿಂದ ಕೆಂಪು ಬಣ್ಣ, ಅರೇಬಿಯಾದಿಂದ ಒಣ ಖರ್ಜೂರ ಮುಂತಾದವುಗಳು ಪ್ರಮುಖ ಆಮದಿನ ಸರಕುಗಳಾಗಿದ್ದವು. ಇವಲ್ಲದೆ ಯುರೋಪಿನಿಂದ ಅಂದರೆ ಡಚ್ ಕಂಪನಿಯು ಕೆಲವು ಕಂಪನಿಯ ನೌಕರರಿಗೆ ಹಾಗೂ ಅಧಿಕಾರಿಗಳಿಗೆ ಕೆಲವು ವಸ್ತುಗಳನ್ನು ಆಮದು ಮಾಡಿಕೊಳ್ಳುತ್ತಿದ್ದರು(ಸೀಡಿಂಗ್ಸ್ ಆಫ್ ದಿ ಮದ್ರಾಸ್ ಬೋರ್ಡ್ ಆಫ್ ರೆವಿನ್ಯೂ, ೧೧. ೧೧. ೧೮೦೧, ಸಂ.೩೦೨, ಪು.ಸಂ.೧೩, ೩೪೫). ಟಿಪ್ಪುವಿನ ಆಳ್ವಿಕೆಯಲ್ಲಿ ಮಂಗಳೂರು ಬಂದರಿನಲ್ಲಿ ವ್ಯಾಪಾರ ಚಟುವಟಿಕೆಗಳು ಕುಂಠಿತಗೊಂಡಿದ್ದು, ಇಂಗ್ಲಿಶ್ ಈಸ್ಟ್ ಇಂಡಿಯಾ ಕಂಪನಿ ಸರ್ಕಾರವು ಟಿಪ್ಪುವಿನ ಪತನಾನಂತರ ಈ ಪ್ರದೇಶವನ್ನು ವಶಪಡಿಸಿಕೊಂಡ ಬಳಿಕ, ಈ ಬಂದರಿನಲ್ಲಿ ವ್ಯಾಪಾರ ವಹಿವಾಟು ಗಣನೀಯವಾಗಿ ಚೇತರಿಸಿಕೊಂಡಿತು. (ಮಿಲ್ಬರ್ನ್, ೧೮೧೭: ೩೧೮). ಮಂಗಳೂರಿನ ಬಂದರಿನ ಅಭಿವೃದ್ಧಿ ಪ್ರಕ್ರಿಯೆಗಳು ನಂತರದವೇ ಆಗಿದ್ದರೂ ಮೂಲ ವ್ಯಾಪಾರಕ್ಕೆ ಅಂಗಡಿಗಳಿಗೆ ವಸ್ತುಗಳ ವಿನಿಮಯ ಮಾಡಿಕೊಳ್ಳಲು ಡಚ್ಚರು, ಕೆಳದಿ

ನಾಯಕರು ನಮಗೆ ಈ ಸ್ಥಳವನ್ನು ಒಪ್ಪಂದದ ಮೂಲಕ ಕೊಟ್ಟಿದ್ದಾರೆ. ಪೋರ್ಚುಗೀಸರಿಗೆ ಇಲ್ಲಿ ಅವಕಾಶವಿಲ್ಲ. ಅವರೊಂದಿಗೆ ವ್ಯಾಪಾರ ಸಂಬಂಧವಿರಿಸಿಕೊಳ್ಳುವುದಿಲ್ಲವೆಂದು ಹೇಳುತ್ತಿದ್ದಾರೆ. ಇಂಗ್ಲಿಶರು ಸಹಾಯ ಮಾಡದಿದ್ದರೆ ಎಲ್ಲ ಕಳೆದು ಹೋಗುತ್ತದೆ. ಅವರ ಮೂರು ಹಡಗುಗಳು ಡಚ್ಚರ ಹೆದರಿಕೆಯಿಂದ ಗೋವೆಯಲ್ಲಿ ಆಶ್ರಯ ಪಡೆದಿದ್ದು ಹೊರಬರುತ್ತಿಲ್ಲ ಎಂದು ಕ್ರಿ.ಶ.೧೬೬೪ ಡಿಸೆಂಬರ್ ೨೧ನೇ ತಾರೀಕಿನಂದು ಆಂಟೋನಿಯೋ ತಿಳಿಸಿದ್ದಾನೆ(ಮೆಕ್ಲೀನ್, ೧೯೯೩ : ೩೦೦). ನಂತರದ ಕ್ರಿ.ಶ.೧೬೬೪ ಡಿಸೆಂಬರ್ ೨೪ರ ಪೋರ್ಚುಗೀಸ್ ದಾಖಲೆಯೊಂದು ಗೋವಾ ರಾಜ್ಯ ಪತ್ರಾಗಾರದಲ್ಲಿ ದೊರೆತಿದ್ದು, 'ಆ ದಿನಂದು ಮಂಗಳೂರನ್ನು ತಮಗೆ ವಹಿಸಿಕೊಡುವಂತೆ ಕೇಳಿರುವುದನ್ನು ಪೋರ್ಚುಗೀಸ್ ನೌಕಾಧಿಕಾರಿ ನಿರಾಕರಿಸಿದ್ದಾನೆ. ಡಚ್ಚರು ಉಲ್ಲಾಳ ರಾಣಿಯೊಂದಿಗೆ ಸ್ನೇಹ ಸಂಪಾದಿಸಿದ್ದಾರೆ ಹಾಗೂ ಕೆನರಾ ಬಂದರುಗಳನ್ನು ಪೋರ್ಚುಗೀಸರು ಪ್ರವೇಶಿಸಬೇಕಾದರೆ ಡಚ್ಚರ ಒಪ್ಪಿಗೆ ಪಡೆಯಬೇಕೆಂದು ಒತ್ತಾಯಿಸುತ್ತಿದ್ದಾರೆ ಎಂದು ಆ ಪತ್ರದಲ್ಲಿ ತಿಳಿಸಲಾಗಿದೆ (ಇಂಡೋಲೂಸ್ತಿಯಾನ, ೫, ಇಂಡಿಕಾ, ನಂ-೧೨, ನಂ-೧, ೧೯೭೮ : ೪೫).

ಕರ್ನಾಟಕದ ಕರಾವಳಿ ವ್ಯಾಪಾರ ನಿರತರಾಗಿದ್ದ ವಿದೇಶಿ ವರ್ತಕರ ಸಾಲಿಗೆ ಇಂಗ್ಲಿಶರು ಸೇರಿದ್ದರಿಂದ ಅವರ ನಡುವೆ ವೈಮನಸ್ಸು ಹೊಸ ರೂಪವನ್ನು ಪಡೆಯಿತು. ಇಂಗ್ಲಿಶರು ಮತ್ತು ಡಚ್ಚರು ಮಲಬಾರ್ ಅರಸರ ಮತ್ತು ಕೆಳದಿಯ ನಾಯಕರ ನಡುವೆ ಪಕ್ಷ ಬದಲಿಸುತ್ತಿದ್ದರು. ಉದಾ: ಸೋಮಶೇಖರನಾಯಕನ ಆಳ್ವಿಕೆಯಲ್ಲಿ(೧೬೬೪-೧೬೭೧) ಡಚ್ಚರಿಗೆ ಕೆಳದಿಯ ಆಸ್ಥಾನದಲ್ಲಿ ಹೆಚ್ಚಿನ ಪಕ್ಷಪಾತ ದೊರಕಿದಂತೆ ತೋರುತ್ತದೆ. ಆದರೆ ಯುದ್ಧದಲ್ಲಿ ಡಚ್ಚರು ಮಲಬಾರಿನ ಅರಸರಿಗೆ ಬೆಂಬಲ ತೋರಿಸುವುದರಿಂದ ನಾಯಕರು ಅವರನ್ನು ತಿರಸ್ಕರಿಸಿದರು. ಮತ್ತೆ ಬಸಪ್ಪನಾಯಕನ ಕಾಲದಲ್ಲಿ ಮೆಣಸು ಮತ್ತು ಅಕ್ಕಿ ವ್ಯಾಪಾರದ ಸ್ವಾಮ್ಯವನ್ನು ಪಡೆಯುವ ಬಹಳ ತೀವ್ರವಾದ ಪ್ರಯತ್ನ ಮಾಡಿದರು. ಇದು ಬಸಪ್ಪನಾಯಕನು ಗೋವಾದ ಗವರ್ನರ್‌ನೊಂದಿಗೆ ೧೭೦೭ರಲ್ಲಿ ಮಾಡಿಕೊಂಡ ಒಪ್ಪಂದದಿಂದ ತಿಳಿದುಬರುತ್ತದೆ. ಅವನ ಮಗ ಸೋಮಶೇಖರನು ಡಚ್ಚರ ಮತ್ತು ಇಂಗ್ಲಿಶರ ನಡುವೆ ವ್ಯಾಪಾರ ಮೈಮನಸ್ಸು ಎದುರಿಸಬೇಕಾಗುತ್ತದೆ(ಷೇಕ್‌ಅಲಿ, ೨೦೧೮, ೩, :೩೧೦-೩೧೧).

ಇವೆಲ್ಲವನ್ನು ಗಮನಿಸಿದಾಗ ಡಚ್ಚರು ಕೆಳದಿಯೊಂದಿಗೆ ಹೊಂದಿದ್ದ ಸಂಬಂಧವು ಅಷ್ಟೇನು ಉತ್ತಮವಾಗೇನೂ ಇರಲಿಲ್ಲ ಎಂದು ತಿಳಿದುಬರುತ್ತದೆ. ಡಚ್ಚರು ಪೋರ್ಚುಗೀಸರೊಂದಿಗಿನ ಘರ್ಷಣೆಯಲ್ಲೇ ಕಾಲ ಕಳೆದರು. ಡಚ್ಚರು ಕೆಲವು ದಿನಗಳ ನಂತರ ಸಿಲೋನ್‌ಗೆ ತಮ್ಮ ವ್ಯಾಪಾರವನ್ನು ಕೇಂದ್ರೀಕರಿಸಿದರು. ಇದರಿಂದ ಕೆಳದಿ ನಾಯಕರು ಡಚ್ಚರಿಗಿಂತ ಪೋರ್ಚುಗೀಸರು ಹಾಗೂ ಫ್ರೆಂಚರೊಂದಿಗೆ ಹೆಚ್ಚಿನ ಆರ್ಥಿಕ ಸಂಬಂಧವಿರಿಸಿಕೊಂಡಿರುವುದನ್ನು ಸೂಕ್ಷ್ಮವಾಗಿ ಗಮನಿಸಬಹುದಾಗಿದೆ(ಅರುಣ್, ೨೦೦೬ :೨೧೮).

ಒಟ್ಟಾರೆಯಾಗಿ ಡಚ್ಚರು ಕೋರಮಂಡಲ ಕರಾವಳಿ ಪ್ರದೇಶ, ಗುಜರಾತ್, ಬಂಗಾಳ ಮತ್ತು ಕೆಳಗಿನ ಗಂಗಾಕಣಿವೆಯ ಒಳಭಾಗವನ್ನು ಪ್ರವೇಶಿಸಿ ಒರಿಸ್ಸಾದಲ್ಲಿ ಕೋಟೆಗಳನ್ನು ಸ್ಥಾಪಿಸಿದರು.

ಭಾರತದಲ್ಲಿ ಪ್ರಮುಖವಾಗಿ ಮಚಲಿಪಟ್ಟಣ ಪುಲಿಕಾಟ್, ಸೂರತ್, ಬಿಮ್ಲಿಪಟಂ, ಕಾರೈಕಲ್, ಚಿನ್ಸುರಾ, ಖಾಸಿಂಬಜಾರ್, ಚೊಂನಾಗೋರ್, ಪಾಟ್ನಾ, ಬಲಾಸೂರ್, ನಾಗಪಟ್ಟಣ ಮತ್ತು ಕೊಚ್ಚಿನ್‌ಗಳಲ್ಲಿ ತಮ್ಮ ಕೋಟೆಗಳನ್ನು ಸ್ಥಾಪಿಸಿಕೊಂಡರು. ಪೋರ್ಚುಗೀಸರನ್ನು ಅಡಗಿಸುವ ಮೂಲಕ ಡಚ್ಚರು ೧೭ನೇ ಶತಮಾನದ ಪೂರ್ವದಲ್ಲಿನ ಸಂಬಾರ ವ್ಯಾಪಾರದ ಮೇಲೆ ಏಕಸ್ವಾಮ್ಯ ಪಡೆದಿದ್ದರು. ಸೂರತ್, ಮಧ್ಯಭಾರತ ಮತ್ತು ಯಮುನಾ ಕಣಿವೆ ಪ್ರದೇಶದಲ್ಲಿ ತಯಾರಾಗುತ್ತಿದ್ದ ನೀಲಿ ಭಾರಿ ಪ್ರಮಾಣದಲ್ಲಿ ಡಚ್ಚರಿಗೆ ಸರಬರಾಜಾಗುತ್ತಿತ್ತು. ಬಿಹಾರ್, ಗುಜರಾತ್ ಹಾಗೂ ಕೋರಮಂಡಲದ ಮೂಲಕ ಅವರು ಕಚ್ಚಾ ರೇಷ್ಮೆ, ಬಟ್ಟೆ, ಪೆಟ್ಲುಪ್ಪು ಹಾಗೂ ಅಫೀಮುಗಳನ್ನು ರಫ್ತು ಮಾಡುತ್ತಿದ್ದರು. (ಮಾರ್ಷಲ್, ೧೮೮೩ :೩೩೦).

೧೭ನೇ ಶತಮಾನದಲ್ಲಿ ಡಚ್ಚರೊಡನೆ ಇಂಗ್ಲಿಶರಿಗಿದ್ದ ವೈರತ್ವ ಪೋರ್ಚುಗೀಸರಿಗಿಂತ ಅಧಿಕವಾಯಿತು. ಪ್ರಾಚ್ಯದಲ್ಲಿ ಡಚ್ಚರ ನೀತಿ ಎರಡು ಧ್ಯೇಯಗಳಿಂದ ಕೂಡಿದುದಾಗಿತ್ತು. ಮೊದಲನೆಯದಾಗಿ ತಮ್ಮ ಸ್ವಾತಂತ್ರ್ಯದ ಶತ್ರುವಾಗಿದ್ದ ಕ್ಯಾಥೋಲಿಕ್ ಸ್ಪೈನ್ ಮತ್ತು ಅದರ ಮಿತ್ರರಾಷ್ಟ್ರ ಪೋರ್ಚುಗಲ್‌ನ ವಿರುದ್ಧ ಸೇಡು ತೀರಿಸಿಕೊಳ್ಳುವುದು, ಎರಡನೆಯದಾಗಿ ಈಸ್ಟ್ ಇಂಡೀಸ್ ವಲಯದಲ್ಲಿ ವಾಣಿಜ್ಯ ಸ್ವಾಮ್ಯಗಳಿಸುವ ದೃಷ್ಟಿಯಿಂದ ಅಲ್ಲಿ ವಸಾಹತುಗಳನ್ನು ಸ್ಥಾಪಿಸಿ ನೆಲಸುನಾಡನ್ನು ಸ್ಥಾಪಿಸುವುದು ಅವರ ಧ್ಯೇಯವಾಗಿತ್ತು. ಪೋರ್ಚುಗೀಸರ ಪ್ರಭಾವ ಕಾಲಕ್ರಮೇಣ ಕುಸಿದುದರಿಂದ ಅವರ ಮೊದಲ ಧ್ಯೇಯ ಸಿದ್ಧಿಸಿತು. ತಮ್ಮ ಎರಡನೇ ಧ್ಯೇಯ ಸಾಧನೆಯ ಪ್ರಯತ್ನದಲ್ಲಿ ಅವರು ಇಂಗ್ಲಿಶರೊಡನೆ ತೀವ್ರ ಪೈಪೋಟಿಗೆ ಇಳಿದರು. ಡಚ್ಚರ ನೌಕಾ ಪ್ರಾಬಲ್ಯ ಮತ್ತು ೧೬೦೯ರಲ್ಲಿ ಸ್ಪೈನ್ ಹಾಗೂ ಹಾಲೆಂಡ್‌ಗಳ ನಡುವೆ ಆದ ೨೧ ವರ್ಷಗಳ ಒಪ್ಪಂದದಿಂದ ಯುರೋಪಿನಲ್ಲಿ ಡಚ್ಚರನ್ನು ಯುದ್ಧಬೀತಿಯಿಂದ ಮತ್ತು ಮಲಕ್ಕಾ ದ್ವೀಪಗಳನ್ನು ಕೆಲವು ನಿರ್ಬಂಧಗಳಿಂದ ಮುಕ್ತಿಗೊಳಿಸಿದುದರಿಂದ ಈಸ್ಟ್ ಇಂಡೀಸ್‌ನಲ್ಲಿ ಇಂಗ್ಲಿಶರ ಪೈಪೋಟಿಯನ್ನು ಮೊದಲಿಗಿಂತ ಹೆಚ್ಚು ತೀವ್ರವಾಗಿ ಎದುರಿಸಲು ಡಚ್ಚರನ್ನು ಪ್ರೋತ್ಸಾಹಿಸಿತು. ಡಚ್ಚರು ಕೋರಮಂಡಲದ ಕರಾವಳಿಯಲ್ಲಿ ಸ್ಥಿರವಾಗಿ ನಿಂತರು. ಹಾಗಾಗಿ ಮಧ್ಯಭಾರತ ಅಥವಾ ಕರ್ನಾಟಕದೊಂದಿಗೆ ಇವರ ಸಂಬಂಧಗಳು ಅಷ್ಟಾಗಿ ಕಾಣಬರುವುದಿಲ್ಲ. ಡಚ್ಚರು ಹಾಗೂ ಇಂಗ್ಲಿಶರ ನಡುವೆ ವಾಣಿಜ್ಯ ಪೈಪೋಟಿ ಯುರೋಪ್ ಸೇರಿದಂತೆ ಭಾರತದಲ್ಲೂ ೧೭೫೯ರವರೆಗೆ ತೀವ್ರವಾಗಿಯೇ ಇದ್ದಿತು.

**೬.೩. ಸ್ಥಳೀಯ ನಾಯಕರು ಮತ್ತು ಫ್ರೆಂಚರ ಆರ್ಥಿಕ ಸಂಬಂಧಗಳು**

ಫ್ರೆಂಚರು ೧೬೬೪ರಲ್ಲಿ ಬೇರೆಲ್ಲ ಯುರೋಪಿಯನ್ ದೇಶಗಳಿಗಿಂತ ತಡವಾಗಿ "ದಿ ಫ್ರೆಂಚ್ ಈಸ್ಟ್ ಇಂಡಿಯಾ ಕಂಪನಿ"ಯನ್ನು ಸ್ಥಾಪಿಸಿದರು. ೧೬೬೮ರಲ್ಲಿ ಅವರು ಸೂರತ್‌ನಲ್ಲಿ ತಮ್ಮ ಪ್ರಥಮ ಕಾರ್ಖಾನೆ ಸ್ಥಾಪಿಸಿ, ೧೬೭೩ರಲ್ಲಿ ಅವರಿಗೆ ಪೂರ್ವ ಕರಾವಳಿಯ ಪಾಂಡಿಚೆರಿಯನ್ನು ಕಾಣಿಕೆಯಾಗಿ ಕೊಡಲಾಯಿತು. ಬಂಗಾಳದ ರಾಜ ಅವರಿಗೆ ೧೬೭೪ರಲ್ಲಿ ಕಲ್ಕತ್ತಾದ ಬಳಿ ಒಂದು ಜಾಗವನ್ನು ಕೊಟ್ಟ, ಅಲ್ಲಿ ಅವರು ಚಂದ್ರನಾಗೋರ್ ಎಂಬ ಪಟ್ಟಣವನ್ನು ಸ್ಥಾಪಿಸಿದರು(ತಂಬಂಡ :೪೫೪).

ಯುರೋಪಿನಲ್ಲಾದ ಕ್ರಾಂತಿಯಿಂದಾಗಿ ಭಾರತದಲ್ಲಿ ಯುರೋಪಿನ ರಾಷ್ಟ್ರಗಳು ವಸಾಹತುಗಳ ಸ್ಥಾಪನೆಗೆ ಪೈಪೋಟಿಯನ್ನು ಆರಂಭಿಸಿದರು. ಈ ವಿದ್ಯಮಾನಗಳಿಂದಾಗಿ ಜಾಗತಿಕ, ಆರ್ಥಿಕ ಮತ್ತು ಧಾರ್ಮಿಕ ನೆಲೆಗಳಲ್ಲಿ ಭಾರತವು ಗುರುತಿಸಿಕೊಳ್ಳುವಂತಾಯಿತು.

ಪೂರ್ವದಲ್ಲಿ ವ್ಯಾಪಾರ ನಡೆಸುವ ಉತ್ಕಟ ಆಕಾಂಕ್ಷಿ ಫ್ರೆಂಚರಲ್ಲಿ ಈ ಮೊದಲೇ ಇತ್ತು. ಪೂರ್ವದಲ್ಲಿ ಯುರೋಪಿನ ರಾಷ್ಟ್ರಗಳ ಪೈಕಿ ಇತರ ಕಂಪನಿಗಳವರೊಡನೆ ವಾಣಿಜ್ಯಗಳಿಗಾಗಿ ಪೈಪೋಟಿ ನಡೆಸಿದವರಲ್ಲಿ ಫ್ರೆಂಚರು ಕೊನೆಯವರು. ೪ನೇ ಹೆನ್ರಿ, ರಿಕ್ಷೆಲಿಯೋ ಮುಂತಾದವರು ವಾಣಿಜ್ಯ ಪ್ರಾಮುಖ್ಯವನ್ನು ಮನಗೊಂಡರು. ಕೊಲ್‌ಬರ್ಟ್‌ನ ಸೂಚನೆಯಂತೆ ಕ್ರಿ.ಶ.೧೬೬೪ರಲ್ಲಿ ಇವರು ವಸಾಹತು ನೆಲೆಯನ್ನು ಕಂಡುಕೊಂಡರು. ಭಾರತದಲ್ಲಿ ಫ್ರೆಂಚರ ಪ್ರಪ್ರಥಮ ಕೋಟೆಯನ್ನು ೧೬೬೮ರಲ್ಲಿ ಸೂರತ್‌ನಲ್ಲಿ ಫ್ರಾಂಕಾಯ್ಸ್ ಕೆರಾನ್ ಸ್ಥಾಪಿಸಿದನು. ಡಚ್ಚರು ಮತ್ತು ಫ್ರೆಂಚರ ನಡುವಣ ಯುರೋಪಿಯನ್ ಹಗೆತನ ಭಾರತದಲ್ಲಿ ಫ್ರೆಂಚರ ಸ್ಥಾನದ ಮೇಲೆ ಪ್ರತಿಕೂಲ ಪರಿಣಾಮ ಬೀರಿತು. ಆದರೆ ೧೭೨೦ರ ಜೂನ್‌ನಲ್ಲಿ "ಇಂಡೀಸ್‌ನ ಸಾರ್ವಕಾಲೀಕ ಕಂಪನಿ" ಎಂದು ಕರೆಯಲಾದ ಕಂಪನಿಯ ಪುನರ್ ಸಂಘಟನೆಯಿಂದಾಗಿ, ೧೭೨೦ ಮತ್ತು ೧೭೪೨ರ ನಡುವೆ ಲೆನಾಯರ್ ಮತ್ತು ಡ್ಯೂಮಾಸ್ ಇವರ ಸಮರ್ಥ ಆಡಳಿತದಿಂದ ಮತ್ತೆ ಅದು ಅಭಿವೃದ್ಧಿಗೊಂಡಿತು. ಫ್ರೆಂಚರು ೧೭೨೧ರಲ್ಲಿ ಮಾರಿಸ್ಸನ್ನು, ೧೭೨೫ರಲ್ಲಿ ಮಲಬಾರ್ ಕರಾವಳಿಯ ಮಾಹೆಯನ್ನು, ೧೭೩೯ರಲ್ಲಿ ಕಾರೈಕಲ್ಲನ್ನು ಆಕ್ರಮಿಸಿಕೊಂಡರು. ಪಾಂಡಿಚೇರಿ, ಮಚಲಿಪಟ್ಟಣ ಮತ್ತು ಚಂದ್ರನಾಗೂರ್‌ಗಳು ಫ್ರೆಂಚರ ಮುಖ್ಯ ವ್ಯಾಪಾರ ಕೇಂದ್ರಗಳಾಗಿದ್ದವು(ರವೀಂದ್ರ, ೧೯೯೬ :೧೩೭).

ಫ್ರೆಂಚರು ವ್ಯಾಪಾರದ ಉದ್ದೇಶಕ್ಕಾಗಿಯೇ ಭಾರತಕ್ಕೆ ಬಂದವರಾಗಿದ್ದರು. ಇವರು ಪಾಂಡಿಚೆರಿಯನ್ನು ತಮ್ಮ ಮುಖ್ಯ ಕೇಂದ್ರವಾಗಿಸಿಕೊಂಡಿದ್ದು ದಕ್ಷಿಣ ಭಾರತದ ವ್ಯಾಪಾರವನ್ನು ತಮ್ಮ ಏಕಸ್ವಾಮ್ಯತೆಗೆ ಒಳಪಡಿಸಿಕೊಳ್ಳಲು ಬಯಸಿದರು. ಕರಾವಳಿ ತೀರದ ವ್ಯಾಪಾರಕ್ಕೆ ಸಂಬಂಧಿಸಿದಂತೆ ಬಂದರು ಪ್ರದೇಶಗಳನ್ನು ಹೊಂದಿದ್ದ ಕರಾವಳಿಯಲ್ಲಿ ಮಾತ್ರ ಇವರ ಅಧಿಕಾರದ ಹಿಡಿತ ನಡೆದಿತ್ತು. ಕೆಳದಿ ನಾಯಕರಿಗೂ ಹಾಗೂ ಫ್ರೆಂಚರಿಗೂ ವ್ಯಾಪಾರದಲ್ಲಿ ಹೆಚ್ಚು ಸಂಬಂಧವಿರಲಿಲ್ಲ. ಕೆಳದಿಯ ಮೆಣಸಿನ ವ್ಯಾಪಾರದ ಬಗ್ಗೆ ಫ್ರೆಂಚರಿಗೆ ಆಸಕ್ತಿಯಿದ್ದರೂ, ಅದರಲ್ಲಿ ಭಾಗವಹಿಸಲು ಸರಿಯಾದ ಸಂದರ್ಭ ಬಂದಿರಲಿಲ್ಲ. ಭಾರತದಲ್ಲಿ ಫ್ರೆಂಚ್ ಸಾಮ್ರಾಜ್ಯವನ್ನು ವಿಸ್ತರಿಸಲು 'ಡೂಪ್ಲೆ' ಒಂದು ಯೋಜನೆಯನ್ನೇ ಮಾಡಿದ್ದನು. ಫ್ರೆಂಚ್ ವರ್ತಕರು ಬಾರಕೂರಿನ ನಾರಾಯಣ ಮಲ್ಯನೊಂದಿಗೆ ವ್ಯಾಪಾರ ಸಂಬಂಧವನ್ನು ಹೊಂದಿದ್ದರು ಎಂದು ಕ್ರಿ.ಶ.೧೬೬೮ರ ಸೆಪ್ಟೆಂಬರ್ ೧೬ರ ಒಂದು ಪತ್ರ ತಿಳಿಸುತ್ತದೆ(ಶಾಸ್ತ್ರಿ೧೯೭೨:೧೭೩). ಆದರೂ ಫ್ರೆಂಚರು ಕೆಳದಿ ಸಾಮ್ರಾಜ್ಯದಲ್ಲಿ ಭಾಗವಹಿಸಿದ ಯಾವುದೇ ನಿದರ್ಶನಗಳು ಕಂಡುಬರುವುದಿಲ್ಲ. ಆದರೆ ಕ್ರಿ.ಶ.೧೭೫೧ರಲ್ಲಿ ನಡೆದ ಘಟನೆಯೊಂದಿಗೆ ಫ್ರೆಂಚರು ಕೆಳದಿ ರಾಜ್ಯದಲ್ಲಿ ಅಧಿಕೃತವಾಗಿ ಹೆಜ್ಜೆಯಿರಿಸಿದರು. ಎರಡನೇ ಬಸಪ್ಪನಾಯಕನು ನೆರೆಯ ಮಲಬಾರಿನ ಕೊಳತ್ತಿರಿ ರಾಜನ ಮೇಲೆ ಯುದ್ಧ ಘೋಷಿಸಿದನು. ಫ್ರೆಂಚರು ಈ ಯುದ್ಧದಲ್ಲಿ ಮಲಬಾರಿನ

ಅರಸರನ್ನು ಬೆಂಬಲಿಸಿದರು. ಕೆಳದಿ ಹಾಗೂ ಮಲಬಾರಿನ ನಡುವೆ ಹಿಂದಿನಿಂದಲೂ ಸಣ್ಣಪುಟ್ಟ ಕದನಗಳು ನಡೆದಿದ್ದು, ಮಲಬಾರ್ ಅರಸರು ಸೋತಿದ್ದರು. ಈ ನೆರೆಹೊರೆಯ ಯುದ್ಧದಲ್ಲಿ ಡೂಪ್ಲೆ ತನ್ನ ನೀತಿಯ ಪ್ರದರ್ಶನ ಮಾಡಿದನು. ಇದೇ ಸಂದರ್ಭದಲ್ಲಿ ಡೂಪ್ಲೆ ಪೋರ್ಚುಗೀಸರಿಗೆ ಕೆಳದಿಯ ವಿರುದ್ಧ ಯುದ್ಧದಲ್ಲಿ ಬೆಂಬಲಿಸಬೇಕೆಂದು ಕೇಳಿದನು. ಇದೇ ವೇಳೆ ಮಾಡಿಕೊಂಡ ಒಪ್ಪಂದದ ಪ್ರಕಾರ ಕೆಳದಿಗೆ ಸಹಾಯ ಮಾಡಬೇಕೆಂದು ಬಸಪ್ಪನಾಯಕನು ಪೋರ್ಚುಗೀಸರನ್ನು ಕೇಳಿದನು. ಆದರೆ ಪೋರ್ಚುಗೀಸರು ಯಾರನ್ನೂ ಬೆಂಬಲಿಸದೆ ತಟಸ್ಥರಾದರು. ಫ್ರೆಂಚರು ಬಸಪ್ಪನಾಯಕನಿಂದ ಮಂಗಳೂರು ಬಂದರನ್ನು ವಶಪಡಿಸಿಕೊಂಡರು. ನೌಕಾಬಲದಲ್ಲಿ ದುರ್ಬಲನಾಗಿದ್ದ ಬಸಪ್ಪನಾಯಕ ಫ್ರೆಂಚರಿಗೆ ಸೋತನು. ಪೋರ್ಚುಗೀಸರು ಫ್ರೆಂಚರನ್ನು ಎದುರು ಹಾಕಿಕೊಳ್ಳಲು ಇಚ್ಛಿಸಲಿಲ್ಲ.

ಇದಾದ ಕೆಲವೇ ದಿನಗಳ ನಂತರ ಪುನಃ ಕ್ರಿ.ಶ.೧೭೫೨ರಲ್ಲಿ ಫ್ರೆಂಚರು ಬಸಪ್ಪನಾಯಕನ ಮೇಲೆ ದಾಳಿ ನಡೆಸಿದರು. ಈ ಸಂದರ್ಭದಲ್ಲಿ ಪೋರ್ಚುಗೀಸರು ಸಂಧಾನ ನೀತಿ ಅನುಸರಿಸಲು ಮಧ್ಯಸ್ಥಿಕೆಯನ್ನು ವಹಿಸಲು ತೀರ್ಮಾನಿಸಿದರು. ಆದರೆ ಇವರ ಮಧ್ಯಸ್ಥಿಕೆಯನ್ನು ಕೆಳದಿ ನಾಯಕನು ಒಪ್ಪಿಕೊಳ್ಳಲಿಲ್ಲ. ತಾನೇ ನೇರವಾಗಿ ತನ್ನ ರಾಯಭಾರಿಯನ್ನು ಪಾಂಡಿಚೆರಿಗೆ ಕಳುಹಿಸಲು ಬಸಪ್ಪನಾಯಕನು ನಿರ್ಧರಿಸಿದನು. ಫ್ರೆಂಚರು ಮಲಬಾರನ್ನು ತಮ್ಮ ಹಿಡಿತದಲ್ಲಿಟ್ಟುಕೊಳ್ಳಲು ಯೋಚಿಸಿದ್ದರು. ಆದ್ದರಿಂದ ಅವರು ಮಲಬಾರಿನ ರಾಜನ ಪರವಾಗಿ ಬೆಂಬಲಿಸಿದ್ದರು. ಈ ರೀತಿಯಲ್ಲಿ ಕೆಳದಿ ರಾಜ್ಯವು ಫ್ರೆಂಚರೊಂದಿಗೆ ಕೆಲಕಾಲ ಘರ್ಷಣೆ ಹಾಗೂ ಸ್ನೇಹದಲ್ಲಿ ಆಡಳಿತ ನಡೆಸಿರುವುದನ್ನು ದಾಖಲೆಗಳಿಂದ ತಿಳಿದುಬರುತ್ತದೆ(ಅರುಣ್, ೨೦೦೬:೨೧೬).

ಕೆಳದಿಯ ನಂತರ ಟಿಪ್ಪು ಸುಲ್ತಾನ್ ಹಾಗೂ ಫ್ರೆಂಚರ ನಡುವೆ ಅವಿನಾಭಾವ ಸಂಬಂಧವಿತ್ತು. ಎಚ್.ಎಚ್.ಡಾಡ್‌ವೇಲ್ ಅವರು ಡೂಪ್ಲೆಯ ಆಪ್ತಕಾರ್ಯದರ್ಶಿಯಾದ ಆನಂದರಂಗ ಪಿಳ್ಳೆ ಅವರ ದಿನಚರಿಯಲ್ಲಿ ಅಪಾರವಾದ ಚಾರಿತ್ರಿಕ ಘಟನೆಗಳನ್ನು ದಾಖಲಿಸಿದ್ದಾರೆ. ಚಿತ್ರದುರ್ಗಕ್ಕೆ ಸೇರಿದ ಮಾಯಕೊಂಡ ಕೋಟೆಗೆ ಸವಣೂರು ಹಕೀಂಖಾನನ ಸಹಾಯದಿಂದ ಮುತ್ತಿಗೆ ಆರಂಭವಾಯಿತು. ಸವಣೂರು ನವಾಬರ ಚರಿತ್ರೆಯಲ್ಲಿ ಹಕೀಂಖಾನನ ಕಾಲ ೧೭೫೪-೧೭೯೫. ಈ ಕಾರಣದಿಂದ ಈ ಕಾಲದಲ್ಲಿದ್ದವನು ಅಬ್ದುಲ್ ಮಜೀದ್‌ಖಾನ್ ಎಂಬುದಾಗಿ ಕಂಡುಬರುತ್ತಾರೆ.

೧.೨.೧೭೪೮ರಂದು ಜರುಗಿದ ಈ ಕದನದಲ್ಲಿ ಅಬ್ದುಲ್ ಮಜೀದ್‌ಖಾನನನ್ನು ಒಳಗೊಂಡು ಅನೆಗೊಂದಿ, ರಾಯದುರ್ಗ, ಹರಪನಹಳ್ಳಿ ಪಾಳೆಯಗಾರರು, ಕೆಳದಿ ಬಸಪ್ಪನಾಯಕನನ್ನು ಮುಂದಿರಿಸಿಕೊಂಡು ಮಾಯಕೊಂಡ ಕೋಟೆಯನ್ನು ವಶಪಡಿಸಿಕೊಂಡರು. ಈ ಕಾಳಗದಲ್ಲಿ ಹಿರೇ ಮದಕರಿನಾಯಕನು ಗಾಯಗೊಂಡು ಮರಣ ಹೊಂದಿದನು. ಕರ್ನಾಟಕದ ಇತಿಹಾಸದಲ್ಲಿ ಚಿತ್ರದುರ್ಗದ ನಾಯಕರ ಚರಿತ್ರೆಯ ವಿದ್ವಾಂಸರಾದ ಹುಲ್ಲೂರು ಶ್ರೀನಿವಾಸ ಜೋಯಿಸರು ಅಭಿಪ್ರಾಯಪಟ್ಟಂತೆ ಇದು ಒಂದು ಮುಖ್ಯ ಕಾಳಗ(ತೆಲಗಾವಿ, ಶ್ರೀನಿವಾಸ, ೧೯೭೬ :೯೪). ಯುರೋಪಿನಿಂದ ಭರತಖಂಡಕ್ಕೆ ತಕ್ಕಡಿ ಹಿಡಿದು ವ್ಯಾಪಾರೋದ್ಯಮಕ್ಕೆ ಧಾವಿಸಿ ಬಂದ ಬಿಳಿಯರು ಈ ನಾಡಿನ

ಆಂತರಿಕ ವ್ಯವಹಾರ ಹಾಗೂ ಆಂತರಿಕ ಕಲಹಗಳಲ್ಲಿ ಪ್ರವೇಶಿಸಲು ಆಗ ತಾನೇ ಆರಂಭಿಸಿದ್ದರು. ಆರ್ಕಾಟಿನ ಗದ್ದುಗೆಗೆ ವಾರಸುದಾರನಾದ ಮಹಮ್ಮದಾಲಿಯ ಪಕ್ಷವನ್ನು ಇಂಗ್ಲಿಶರು, ಚಂದಾಸಾಹೇಬನ ಪಕ್ಷವನ್ನು ಫ್ರೆಂಚರು ವಹಿಸಿದರು. ಕೆಳದಿ ಅರಸರನ್ನು ಮೂಲೆಗುಂಪು ಮಾಡಿ ತಮ್ಮ ಅಧೀನಪಡಿಸಿಕೊಂಡು, ಯುರೋಪಿಯನ್ ಕ್ರೈಸ್ತ ಮೈತ್ರಿಕೂಟವನ್ನು ರೂಪಿಸುವುದು ಅವರ ಉದ್ದೇಶವಾಗಿತ್ತು. ಇದನ್ನು ಈಡೇರಿಸಿಕೊಳ್ಳಲು ಫ್ರೆಂಚ್ ವೈಸ್‌ರಾಯ್ ಡೂಪ್ಲೆಯು ತಮಗೆ ಆಯುಧಗಳನ್ನೂ, ಸೈನಿಕರನ್ನೂ ಸಹಾಯವಾಗಿ ದೊರಕಿಸಿಕೊಟ್ಟು ಮಂಗಳೂರು ಹಾಗೂ ಇತರ ಬಂದರುಗಳಲ್ಲಿ ಕೆಳದಿ ಬಸಪ್ಪನಾಯಕನಿಗೆ ಎದುರಾಗಿ ಬಹಿರಂಗ ಹಗೆಯನ್ನು ಘೋಷಿಸಲು ಪೋರ್ಚುಗೀಸರನ್ನು ವಿನಂತಿ ಮಾಡಿಕೊಂಡನು(ಪಿಂಟೋ, ೧೯೯೮ :೯೬). ಆಗ ಅಂತಿಮವಾಗಿ ಜಯ ಸಾಧಿಸಿದ್ದು ಫ್ರೆಂಚರು ಎಂದು ಗುರುತಿಸಬಹುದು.

೧೭೮೫ರ ಮಾರ್ಚ್‌ನಲ್ಲಿ ಪಾಂಡಿಚೆರಿಯಲ್ಲಿದ್ದ ಫ್ರೆಂಚರ ಅಧಿಕಾರಿಗಳು ಟಿಪ್ಪು ಸುಲ್ತಾನನ ಮೈಸೂರಿನ ಸೈನಿಕ ಮತ್ತು ಆರ್ಥಿಕತೆಯ ವಿವರಣೆಯನ್ನು ಕೊಟ್ಟಿದ್ದಾರೆ. ಈ ವಿವರಣೆಯು ಮೈಸೂರಿನ ಪ್ರಾಕೃತಿಕ ಆಧಾರಗಳನ್ನು ಒಂದೊಂದಾಗಿ ವಿವರಿಸುತ್ತದೆ. ಮೈಸೂರಿನ ವಿಶಾಲವಾದ ಅಡವಿಗಳು ನೌಕಾಬಲದ ಅಭಿವೃದ್ಧಿಗೆ ಬೇಕಾದ ಸಾಮಗ್ರಿಗಳನ್ನು ಒದಗಿಸುತ್ತದೆ. ಚರ್ಮ, ತೆಂಗಿನ ನಾರು, ಕಬ್ಬಿಣ, ಬರೆಯುವ ಮಸಿ, ಮಕ್‌ಮಲ್ ಬಟ್ಟೆ, ವಾಯಲ್‌ಬಟ್ಟೆ, ಮೊದಲಾದವನ್ನು ಉತ್ಪಾದಿಸಲಾಗುತ್ತದೆ ಹಾಗೂ ದಿನಕ್ಕೆ ಹತ್ತು ತುಪಾಕಿಗಳು ತಯಾರಾಗುತ್ತವೆ. ಮದ್ದುಗುಂಡುಗಳ ದಾಸ್ತಾನುಗಳಿವೆ. ಬೆಂಗಳೂರು ಮತ್ತು ನಗರ ಪ್ರದೇಶಗಳಲ್ಲಿ ಅವರ ತುಪಾಕಿಗಳು ಮತ್ತು ಫಿರಂಗಿಗಳಿಗೆ ಬೇಕಾದ ಮದ್ದುಗುಂಡುಗಳು ತಯಾರಾಗುತ್ತವೆ. ನವಾಬನು ಈ ಪ್ರದೇಶಗಳಲ್ಲಿ ಕಾರ್ಯಾಗಾರಗಳನ್ನು ಸ್ಥಾಪಿಸಿದ್ದಾನೆ ಮತ್ತು ಅವುಗಳಲ್ಲಿ ಕಂಚಿನ ಫಿರಂಗಿಗಳು ತಯಾರಾಗುತ್ತವೆ. ಟಿಪ್ಪುವಿನ ರಾಜ್ಯದ ಕೊಡಗಿನ ಪರ್ವತ ಶ್ರೇಣಿಗಳಲ್ಲಿ ಬಂಗಾರದ ಗಣಿಗಳಿವೆ. ಅವನ ರಾಜ್ಯದಲ್ಲಿ ಹರಿಯುವ ನದಿಗಳು ಬಂಗಾರದ ತುಣುಕುಗಳನ್ನು ಹೊತ್ತು ಹರಿಯುತ್ತವೆ. ಕೆಲವೊಮ್ಮೆ ಆ ತುಣುಕುಗಳು ಕಾಳುಮೆಣಸಿನಷ್ಟು ದೊಡ್ಡವಾಗಿರುತ್ತವೆ ಎಂದು ಬರೆದಿದ್ದಾರೆ. ಅದೇ ವರ್ಷದ ಆನಂತರ ಕಳುಹಿಸಿದ ಒಂದು ವರದಿಯಲ್ಲಿ ಈ ವಿಷಯವನ್ನು ದೃಢಪಡಿಸಲಾಗಿದೆ(ಇ.ಹಿ.ಕಾ.೧೮,೧೯೯೯:೧೪೬).

ಒಂದು ಕಡೆ ಬ್ರಿಟಿಶರು ಟಿಪ್ಪುವಿಗೆ ಶತ್ರುತ್ವವನ್ನು ಪ್ರತಿರೋಧಿಸುತ್ತಿದ್ದರೆ ಮತ್ತೊಂದೆಡೆ ಫ್ರೆಂಚರೊಂದಿಗೆ ಉತ್ತಮ ಸಂಬಂಧವನ್ನು ಟಿಪ್ಪು ಹೊಂದಿದ್ದು, ಕೃಷಿ ಉತ್ಪಾದನೆಯಿಂದ ಸರಕಾರಕ್ಕೆ ಹೆಚ್ಚಿನ ಆದಾಯ ತರುತ್ತಿತ್ತು. ವಿದೇಶಿ ವ್ಯಾಪಾರಕ್ಕೆ ಟಿಪ್ಪು ಫ್ರೆಂಚರಿಗೆ ಸಹಾಯ ಮಾಡುತ್ತಿದ್ದ. ಟಿಪ್ಪು ಸುಲ್ತಾನ್ ಬೃಹತ್ ಪ್ರಮಾಣದಲ್ಲಿ ಸಿದ್ಧ ವಸ್ತುಗಳ ಉತ್ಪಾದನೆಯಲ್ಲಿಯೂ ಯಶಸ್ಸು ಕಂಡಿದ್ದನು. ಈ ಪ್ರಕ್ರಿಯೆ ಹೈದರಾಲಿ ಕಾಲದಲ್ಲಿಯೇ ಆರಂಭವಾಗಿದ್ದು, ಅವನ ಸೈನ್ಯಾಡಳಿತದ ಆಧುನೀಕರಣಕ್ಕೆ ಹೆಚ್ಚು ಒತ್ತು ನೀಡಿದ ಕಾರಣ ಅವನ ಸೈನ್ಯ ಉತ್ತಮ ಶ್ರೇಣಿಯ ಬಂದೂಕುಗಳನ್ನು ಹೊಂದಿತ್ತು. ೧೭೮೭ರಲ್ಲಿ ಮೈಸೂರಿನಿಂದ ಫ್ರಾನ್ಸ್ ದೇಶಕ್ಕೆ ರಾಯಬಾರಿಯನ್ನು ಕಳುಹಿಸಿ ಅಲ್ಲಿನ ಪ್ರಭುತ್ವಕ್ಕೆ ತನ್ನ ಸಾಮ್ರಾಜ್ಯದಲ್ಲಿ ೧೦ ಮದ್ದುಗುಂಡು ತಯಾರಿಸುವ ಕಾರ್ಖಾನೆಗಳಿದ್ದು ಇಲ್ಲಿ ಲೆಕ್ಕವಿಲ್ಲದಷ್ಟು

ಬಂದೂಕುಗಳನ್ನೂ ತಯಾರಿಸುತ್ತಿದ್ದೇವೆ ಎಂದು ತಿಳಿಸಿದನು. ಈ ಬಂದೂಕುಗಳನ್ನು ಯುರೋಪ್ ಮಾದರಿಯಲ್ಲೇ ತಯಾರಿಸಲಾಗಿತ್ತು. ೧೭೮೬ರಲ್ಲಿ ಪಾಂಡಿಚೆರಿಯಲ್ಲಿನ ಫ್ರೆಂಚರ ರಾಜ್ಯಪಾಲ ಕೋಸಿಗ್ನಿ ಈ ಕಾರ್ಖಾನೆಗಳಲ್ಲಿ ತಯಾರಾಗುವ ಮದ್ದುಗುಂಡುಗಳನ್ನು ಪರಿಶೀಲಿಸಿ ಗುಣಮಟ್ಟದಲ್ಲಿ ಯುರೋಪಿನ ಮದ್ದುಗುಂಡುಗಳಿಗೆ ಏನೂ ವ್ಯತ್ಯಾಸವಿಲ್ಲ ಎಂದು ಅಭಿಪ್ರಾಯ ಪಟ್ಟಿದ್ದನು. ಇದೇ ರೀತಿಯ ಅಭಿಪ್ರಾಯವನ್ನು ೧೭೮೮ರಲ್ಲಿ ಟಿಪ್ಪು ರಾಯಭಾರಿ ಮೂಲಕ ಉಡುಗೊರೆಯಾಗಿ ಎರಡು ಪಿಸ್ತೂಲುಗಳನ್ನು ಸ್ವೀಕರಿಸಿದ ಹದಿನಾರನೆಯ ಲೂಯಿಯು ವ್ಯಕ್ತಪಡಿಸಿದನು(ಶ್ರೀಧರನ್ ೧೯೮೪:೫೦೬). ೧೭೮೫-೮೬ರಲ್ಲಿ ·ಆಟೋಮನ್ ಸಾಮ್ರಾಟನ ಅರಮನೆಗೆ ಭೇಟಿ ನೀಡಿದ ಟಿಪ್ಪುವಿನ ರಾಯಭಾರಿಗಳು ಮೈಸೂರಿನಲ್ಲಿ ತಯಾರಿಸಿದ ಬಂದೂಕುಗಳನ್ನು ಹೆಮ್ಮೆಯಿಂದ ಪ್ರದರ್ಶನ ಮಾಡಿದ್ದರು. ಆದರೂ ಇನ್ನೂ ಹೆಚ್ಚಿನ ಅಭಿವೃದ್ಧಿ ಹೊಂದಲು ಪ್ಯಾರಿಸ್‌ನಿಂದ ನಿಪುಣ ಕುಶಲಕರ್ಮಿಗಳನ್ನು ಮೈಸೂರಿಗೆ ಬರಮಾಡಿಕೊಂಡು ಉತ್ಕೃಷ್ಟವಾದ ಬಂದೂಕುಗಳನ್ನು ತಯಾರಿಸಲು ಅಧಿಕಾರಿಗಳಿಗೆ ಆಜ್ಞೆ ಮಾಡಿದ್ದನು. ಅವರ ಸೇವೆಗೆ ಉತ್ತಮ ಸಂಬಳವನ್ನು ಅವನ ಸರಕಾರ ನೀಡುವ ಭರವಸೆ ಕೊಟ್ಟಿತು. ಇದಕ್ಕೆ ಪೂರಕವಾಗಿ ಬುಕಾನನ್ ತನ್ನ ವರದಿಯಲ್ಲಿ ಶ್ರೀರಂಗಪಟ್ಟಣದಲ್ಲಿ ಫ್ರೆಂಚರ ಕರಕುಶಲಗಾರರು ನಿರ್ಮಿಸಿದ ತೋಪುಗಳನ್ನು ಉಲ್ಲೇಖಿಸಿ ಅವುಗಳನ್ನು ಬಂಡಿಯ ಸಹಾಯದಿಂದ ಯುದ್ಧದ ಕಾಲದಲ್ಲಿ ಸಾಗಿಸಲಾಗುತ್ತಿತ್ತು ಎಂದು ವರದಿಯಲ್ಲಿ ತಿಳಿಸಿದ್ದಾನೆ(ಬುಕಾನನ್೧೮೦೦-೧೮೦೧ಸಂ-೧ : ೭೦, ೭೧,೮೨, ೮೩,೧೬೪,೨೩೫).

ಟಿಪ್ಪು ಸುಲ್ತಾನನು ಅವನ ತಂದೆ ಹೈದರಾಲಿಗಿಂತ ಒಂದು ಹೆಜ್ಜೆ ಮುಂದೆ ಹೋಗಿ ಆಧುನಿಕ ತಾಂತ್ರಿಕ ಕಾರ್ಯವಿಧಾನಗಳನ್ನು ಶಸ್ತ್ರಾಸ್ತ್ರಗಳ ತಯಾರಿಕೆಯಲ್ಲಿ ಬಳಸಿಕೊಂಡಿದ್ದ ರಾಯಭಾರಿಗಳನ್ನು ಫ್ರಾನ್ಸ್‌ಗೆ ಕಳುಹಿಸಿ ಪುಸ್ತಕ ಮುದ್ರಿಸುವವರ ಸೇವೆಯನ್ನು ಪಡೆಯಲು ಯಶಸ್ವಿಯಾದನು. ಗಡಿಯಾರ ತಯಾರಕರು, ಗ್ಲಾಸ್ ಮತ್ತು ಕನ್ನಡಿ ತಯಾರಕರನ್ನು ಮೈಸೂರಿಗೆ ಸ್ವಾಗತಿಸಿ ಅವರ ಸೇವೆಯನ್ನು ಪಡೆದನು(ಶ್ರೀಧರನ್೧೯೮೪:೫೦೫). ೧೭೯೭ರ ಹೊತ್ತಿಗೆ ಫ್ರೆಂಚರ ಸರ್ಕಾರಕ್ಕೆ ಒಂದು ಬೇಡಿಕೆ ಸಲ್ಲಿಸಿ ೧೦ ಮಂದಿ ತೋಪು ತಯಾರಕರು, ೧೦ ಮಂದಿ ಹಡಗು ನಿರ್ಮಾಪಕರು, ೧೦ ಮಂದಿ ಗ್ಲಾಸ್ ಮತ್ತು ಕನ್ನಡಿ ತಯಾರಿಸುವವರು ಹಾಗೂ ಗೋಲ್ಡ್ ಪ್ಲೇಟಿಂಗ್‌ನಲ್ಲಿ ಪರಿಣತಿ ಹೊಂದಿದವರನ್ನು ಮೈಸೂರಿಗೆ ಕಳುಹಿಸಿಕೊಡಲು ಮನವಿ ಮಾಡಿದ್ದನು(ಹೆಚ್.ಡೆಡ್‌ವಾಲ್೧೯೮೫:೨೫೮,೨೫೯).

ಮುದ್ರಣಾಲಯವನ್ನು ಟಿಪ್ಪು ತೆರೆಯದೆ ಇದ್ದಿರಬಹುದು. ಆದರೆ, ಆಧುನಿಕ ಮಾದರಿಯಂತೆ ಕಾಗದ ತಯಾರಿಸುವ ಕ್ರಮವನ್ನು ಟಿಪ್ಪು ಆರಂಭಿಸಿದ್ದನು. ಜೊತೆಗೆ ಕೈಗಡಿಯಾರ ಮತ್ತು ಅಡುಗೆ ಸಾಮಾನುಗಳನ್ನು ಉತ್ಪಾದಿಸುವ ತಂತ್ರಜ್ಞಾನದ ವೃದ್ಧಿಗೆ ಕ್ರಮ ಕೈಗೊಂಡಿದ್ದನು. ಟಿಪ್ಪುವಿನ ಕೊನೆಯ ದಿನಗಳಲ್ಲಿ ಶ್ರೀರಂಗಪಟ್ಟಣದಲ್ಲಿ ಫ್ರೆಂಚರ ಕೈಗಡಿಯಾರ ತಯಾರಕರು ನೆಲೆಸಿರುವುದು ದಾಖಲೆಗಳಿಂದ ತಿಳಿದುಬರುತ್ತದೆ(ಹೆಚ್.ಡೆಡ್‌ವಾಲ್೧೯೮೫:೩೧೭). ಅವರ ಸೇವೆಯನ್ನು, ಗಡಿಯಾರ ಬಿಡಿಭಾಗಗಳ ಜೋಡಣೆ ಮತ್ತು ಕೈಗಡಿಯಾರಗಳ ತಯಾರಿಕೆಗೆ ಮೀಸಲಿಡಲಾಗಿತ್ತು. ಅಡುಗೆ ಸಾಮಾನುಗಳಾದ

ಚೂರಿ, ಕತ್ತರಿ ಮತ್ತು ಸೂಜಿಗಳನ್ನು ಕಾರ್ಖಾನೆಗಳಲ್ಲಿ ಉತ್ಪಾದಿಸಲಾಗುತ್ತಿತ್ತು. ಅಕ್ಕಸಾಲಿಗರ ಸೂಪರಿಂಟೆಂಡೆಂಟರು ಬೇರೆ ಬೇರೆ ಪ್ರಾಂತ್ಯಗಳನ್ನು ಪ್ರತಿನಿಧಿಸುತ್ತಿದ್ದು, ಅವರು ಅಕ್ಕಸಾಲಿಗರಿಗೆ ಅಡಿಗೆ ಸಾಮಾನುಗಳನ್ನು ತಯಾರಿಸಲು ತರಬೇತಿ ನೀಡುತ್ತಿದ್ದರು.

ಮೈಸೂರು ಪ್ರಾಂತ್ಯ ಆರ್ಥಿಕ ಮತ್ತು ಕೈಗಾರಿಕಾ ಅಭಿವೃದ್ಧಿಯಲ್ಲಿ ಯಶಸ್ಸು ಸಾಧಿಸಲು ಫ್ರೆಂಚರ ಸಂಬಂಧಗಳು ಅತಿ ಮುಖ್ಯವಾದದ್ದು. ಯುರೋಪಿನ ೧೭೪೪ರಲ್ಲಿ ಆಸ್ಟ್ರೀಯಾದಲ್ಲಿ ಉತ್ತರಾಧಿಕಾತ್ವಕ್ಕೆ ಸಂಬಂಧಿಸಿದಂತೆ ಬ್ರಿಟನ್ ಹಾಗೂ ಫ್ರಾನ್ಸ್‌ಗಳ ನಡುವೆ ಔಪಚಾರಿಕವಾದ ಯುದ್ಧ ಘೋಷಿಸಲಾಯಿತು. ಈ ಯುದ್ಧವು ಭಾರತಕ್ಕೂ ಹರಡಿತು. ಲಾಬೂರ್ಡೋನ್ನೆಯ ಕೆಳಗೆ ಫ್ರೆಂಚ್ ನೌಕಾ ಪಡೆಯೊಂದು ಪಾಂಡಿಚೆರಿಗೆ ಬಂದಿತು.

ಡೂಪ್ಲೆಯು ಈ ನೌಕೆಗಳೊಳಗೆ ತನ್ನ ಸಿಪಾಯಿಗಳನ್ನು ಕಳುಹಿಸಿಕೊಟ್ಟು ಲಾಬೂರ್ಡೋನ್ನೆಯು ಅವರನ್ನು ಮದ್ರಾಸಿನಲ್ಲಿಳಿಸಿ ಆ ನಗರವನ್ನು ವಶಪಡಿಸಿಕೊಂಡ. ಆದರೆ ಹೀಗೆ ಗೆದ್ದುಕೊಂಡ ಮದ್ರಾಸ್ ನಗರವನ್ನು ಹೇಗೆ ಬಳಸಬೇಕು ಎಂಬ ಬಗೆಗೆ ಜೀಗೆನೆಯೇ ಬೂರ್ಷ್ವಾ ಡೂಪ್ಲೆ ಹಾಗೂ ಕುಲೀನ ಲಾಬೂರ್ಡೋನ್ನೆಗಳ ನಡುವೆ ಭಿನ್ನಾಭಿಪ್ರಾಯ ತಲೆದೋರಿತು. ತನ್ನ ಸ್ವಂತ ಖರ್ಚಿನಲ್ಲಿ ನಿರ್ಮಿಸಿದ್ದ ನೌಕೆಗಳಿಂದ ವಶಪಡಿಸಿಕೊಳ್ಳಲಾಗಿದ್ದುದರಿಂದ ಲಾಬೊರ್ಡೋನ್ನೆಯು ಮದ್ರಾಸ್ ನಗರವನ್ನು ಸಂಪೂರ್ಣವಾಗಿ ನಾಶಗೊಳಿಸಬೇಕೆಂದೂ ಹಾಗೆ ಭಾರತದ ಆ ಭಾಗದಲ್ಲಿ ಎಲ್ಲ ಬ್ರಿಟಿಶ್ ಪ್ರಭಾವವನ್ನು ತೊಡೆದು ಹಾಕಬೇಕೆಂದೂ ಒತ್ತಾಯಿಸಿದರು (ಸುಂದರಂ,೧೯೮೮:೩೦೦).

ಈ ಭಿನ್ನಾಭಿಪ್ರಾಯದ ಫಲವಾಗಿ ಡೂಪ್ಲೆ ಲಾಬೂರ್ಡೋನ್ನೆಯು ತನ್ನ ಹಡಗುಗಳನ್ನು ಭಾರತದಿಂದ ದೂರ ಕೊಂಡೊಯ್ದು ನೌಕಾದಳದ ನೆರವಿಲ್ಲದೆ ಬ್ರಿಟಿಶರ ವಿರುದ್ಧ ಪರಿಣಾಮಕಾರಿಯಾಗಿ ಹೋರಾಟ ನಡೆಸಿದ.

೧೭೪೮ರಲ್ಲಿ ಆದ ಅಖೆನ್ ಒಪ್ಪಂದದ ಪ್ರಕಾರ ಫ್ರೆಂಚ್ ಸರಕಾರವು ಮದ್ರಾಸನ್ನು ಅದರ ಕೋಟೆ ಕೊತ್ತಲಗಳನ್ನು ನಾಶಗೊಳಿಸದೆಯೇ ಬ್ರಿಟಿಶರಿಗೆ ಹಿಂದಿರುಗಿಸಬೇಕಾಯಿತು. ಇದಕ್ಕೆ ಪ್ರತಿಫಲವಾಗಿ ಫ್ರೆಂಚರು ಯುರೋಪಿನಲ್ಲಿ ಬ್ರಿಟಿಶರಿಂದ ಕೆಲವು ರಿಯಾಯಿತಿಗಳನ್ನು ಪಡೆದುಕೊಂಡರು. ಇದರ ಪರಿಣಾಮ ಮರುವರ್ಷವೇ ಗೋಚರಕ್ಕೆ ಬಂದಿತು. ಯುರೋಪಿನಲ್ಲಿ ಶಾಂತಿ ಇದ್ದರೂ ಭಾರತದಲ್ಲಿದ್ದ ಬ್ರಿಟಿಶ್ ಹಾಗೂ ಫ್ರೆಂಚ್ ವ್ಯಾಪಾರ ಕಂಪನಿಗಳ ನಡುವೆ ಯುದ್ಧ ಆರಂಭವಾಯಿತು. ೧೭೪೮ರಲ್ಲಿ ಆಸಫ್ ಝಾನ ಮರಣದ ನಂತರ ಡೂಪ್ಲೆ ಅವನ ಇಬ್ಬರು ಮಕ್ಕಳು ನಾಸಿರ್ ಜಂಗ್ ಹಾಗೂ ಮುಜಾಫರ್ ಜಂಗ್‌ರ ನಡುವೆ ಪ್ರಾರಂಭವಾದ ರಾಜವಂಶೀಯ ಸಂಘರ್ಷದಲ್ಲಿ ಮಧ್ಯೆ ಪ್ರವೇಶಿಸಿದ. ಮುಜಾಫರ್ ಜಂಗ್‌ನಿಗೆ ಸಹಾಯ ಮಾಡುವ ಸಲುವಾಗಿ ಅವನ ಬಂಧುಗಳಲ್ಲೊಬ್ಬನಾದ ಚಂದಾ ಸಾಹೇಬ್‌ನನ್ನು ಐನೂರು ಫ್ರೆಂಚ್ ಸೈನಿಕರು ಮತ್ತು ಎರಡು ಸಾವಿರ ಭಾರತೀಯ ಸಿಪಾಯಿಗಳನ್ನುಳ್ಳ ಒಂದು ಸೈನ್ಯದಳದೊಂದಿಗೆ ಪಾಂಡಿಚೆರಿಯಿಂದ ಕಳುಹಿಸಿ ಕೊಡಲಾಯಿತು.(ಸುಂದರಂ, ೧೯೮೮:೩೦೭). ಮುಜಾಫರ್‌ನನ್ನು ಸಿಂಹಾಸನದ ಮೇಲೆ ಕೂರಿಸಲಾಯಿತು. ಚಂದಾ ಸಾಹೇಬನನ್ನು ಅಧೀನ ಆರ್ಕಾಟ್ ರಾಜ್ಯದ ನವಾಬನನ್ನಾಗಿ ಮಾಡಲಾಯಿತು. ಹೀಗೆ ದಖ್ಖನ್ ಪರ್ಯಾಯ ದ್ವೀಪದ ಇಡೀ ಆಗ್ನೇಯ ಭಾಗವು ಈಗ ಫ್ರೆಂಚರ ಆಶ್ರಿತರ ಕೈಗಳಲ್ಲಿದ್ದಿತು.

ಇದು ಭಾರತದಲ್ಲಿ ತಮ್ಮ ಸ್ಥಾನಕ್ಕೆ ಆಪತ್ತು ಎಂದು ಮನಗಂಡು ಬ್ರಿಟಿಶರು ತಾವೂ ಈ ಯುದ್ಧದಲ್ಲಿ ಸೇರಿಕೊಂಡರು. ಹೈದರಾಬಾದಿನಲ್ಲಿ ನಾಸಿರ್ ಜಂಗ್‌ನಿಗೂ ಆರ್ಕಾಟ್‌ನಲ್ಲಿ ಮಹಮ್ಮದ್ ಆಲಿ(ಮಾಜಿ ನವಾಬನ ಮಗ)ಗೂ ಸಹಾಯ ನೀಡಿದರು. ಮುಜಾಫರ್ ಜಂಗ್‌ನು ಬಂಡಾಯವೆದ್ದಿದ್ದ ಸಾಮಂತ ಪ್ರಭುಗಳಿಂದ ಕೊಲ್ಲಲ್ಪಟ್ಟ. ಆಗ ಹೈದರಾಬಾದ್‌ನಲ್ಲಿ ಫ್ರೆಂಚ್ ದಳದ ಅಧಿಪತಿಯಾಗಿದ್ದ ಬುಸ್ಸೀಯು ನಾಸಿರ್ ಜಂಗ್‌ನ ಎಳೆಯ ಮಗುವನ್ನೇ ಸಿಂಹಾಸನದ ಮೇಲೆ ಕೂರಿಸಿದ ಮತ್ತು ಆರ್ಥಿಕ ಸಹಾಯ ದ್ರವ್ಯ ಒಪ್ಪಂದವೊಂದಕ್ಕೆ ಸಹಿ ಹಾಕುವಂತೆ ಹೈದರಾಬಾದ್‌ನ ನಿಜಾಮನನ್ನು ಒತ್ತಾಯಿಸಿದ. ಈ ಒಪ್ಪಂದ ಪ್ರಕಾರ ಹೈದರಾಬಾದಿನ ನಿಜಾಮನು ಫ್ರೆಂಚ್ ಸೈನ್ಯದಳಗಳ ಪಾಲನೆ ಪೋಷಣೆಗಾಗಿ ಕೊರಮಂಡಲ್ ಕರಾವಳಿಯ ನಾಲ್ಕು ಸಂಪದ್ಭರಿತ ಜಿಲ್ಲೆಗಳನ್ನು ಫ್ರೆಂಚರಿಗೆ ವಹಿಸಿಕೊಡಬೇಕಾಯಿತು(ಡಿಡ್‌ವಾಲ್,೧೯೮೫:೨೧೬). ದಕ್ಷಿಣ ಭಾರತದ ಪ್ರವೇಶ ಮಾರ್ಗ ಎಂದು ಹೆಸರುವಾಸಿಯಾಗಿದ್ದ ತಿರುಚನಾಪಳ್ಳಿಯ ಪ್ರಬಲ ದುರ್ಗವಷ್ಟೆ ಇನ್ನೂ ಬ್ರಿಟಿಶರ ಆಶ್ರಿತನಾಗಿದ್ದ ಮಹಮ್ಮದ್ ಆಲಿಯ ವಶದಲ್ಲಿದ್ದಿತು. ಈ ದುರ್ಗವನ್ನು ವಶಪಡಿಸಿಕೊಳ್ಳಲು ಡೂಪ್ಲೆ ಮಾಡಿದ ಯತ್ನಗಳೆಲ್ಲ ವಿಫಲವಾದವು. ಈ ದುರ್ಗದ ಮೇಲೆ ನಡೆಸಲಾದ ಮುತ್ತಿಗೆಯೊಂದರಲ್ಲಿ ಫ್ರೆಂಚರ ಆಶ್ರಿತನಾಗಿದ್ದ ಚಂದಾ ಸಾಹೇಬನು ಕೊಲ್ಲಲ್ಪಟ್ಟ. ಬ್ಯುಸ್ಸೀಯ ಬಳಿ ದಳಗಳ ಪಾಲನೆಪೋಷಣೆಗೆ ಸಾಲುವಷ್ಟು ಹಣವಿರಲಿಲ್ಲ. ಈ ಮಧ್ಯೆ ಸೈನಿಕ ಕಾರ್ಯಾಚರಣೆಗಳ ದೆಸೆಯಿಂದಾಗಿ ಭಾರತೀಯ ಸರಕುಗಳು ಫ್ರಾನ್ಸಿಗೆ ಹೋಗುವುದು ಬಹುಮಟ್ಟಿಗೆ ಸಂಪೂರ್ಣವಾಗಿ ನಿಂತಿದ್ದಿತು. ಭಾರತವು ಫ್ರೆಂಚರಿಗೆ ಆದಾಯದ ಆಕರವಾಗುವ ಬದಲು ನಷ್ಟದ ಆಕರವಾಗಿ ಬಿಟ್ಟಿದ್ದಿತು. ಕಂಪನಿಯ ಷೇರ್‌ಹೋಲ್ಡರುಗಳು ಹೋರಾಟ ನಿಲ್ಲಿಸಬೇಕೆಂದು ಆಗ್ರಹಿಸತೊಡಗಿದರು. ಬ್ರಿಟಿಶರೊಂದಿಗೆ ಹೋರಾಟ ನಿಲ್ಲಿಸುವುದೂ ಭಾರತದಲ್ಲಿ ತಾನು ಅವರಿಗೆ ನೀಡಿದ್ದ ರಿಯಾಯಿತಿಗಳೂ ಯುರೋಪಿನಲ್ಲಿ ಎರಡು ದೇಶಗಳ ನಡುವೆ ಶಾಂತಿ ಉಳಿಸಿಕೊಳ್ಳಲು ನೆರವಾಗುವುವೆಂದು ಫ್ರೆಂಚ್ ಸರಕಾರ ಆಶಿಸಿದ್ದಿತು. ಈ ಗುರಿ ಸಾಧಿಸುವಾಗ ಕಂಪನಿಯ ಡೈರೆಕ್ಟರುಗಳಲ್ಲೊಬ್ಬನಾದ ಗೋಡೇಯನ್ನು ಭಾರತಕ್ಕೆ ಕಳುಹಿಸಲಾಯಿತು. ಅವನು ಬ್ರಿಟಿಶರ ಕೇಳಿಕೆಗಳಿಗೆಲ್ಲ ಒಪ್ಪಿಗೆ ನೀಡುವ ಒಪ್ಪಂದವೊಂದಕ್ಕೆ ಸಹಿ ಹಾಕಿದ. ಅದರ ಪ್ರಕಾರ ಕರ್ನಾಟಿಕ್ ಪ್ರಾಂತ್ಯವನ್ನು ಮಹಮ್ಮದ್ ಆಲಿ(೧೭೫೪-೧೯೭೫)ಗೆ ಕೊಡಲಾಯಿತು. ಫ್ರೆಂಚರು ಉತ್ತರ ಸರ್ಕಾರ್ ಪ್ರಾಂತ್ಯಗಳ ಮೇಲೆ ತಮ್ಮ ಹತೋಟಿಯನ್ನು ಬಿಟ್ಟುಕೊಟ್ಟರು. ಡೂಪ್ಲೆಯನ್ನು ಫ್ರಾನ್ಸಿಗೆ ಹಿಂದಕ್ಕೆ ಕರೆಸಿಕೊಳ್ಳಲಾಯಿತು. ಅನಂತರ ಫ್ರೆಂಚ್ ಸರಕಾರವು ಭಾರತದಲ್ಲಿ ಫ್ರೆಂಚರ ಎಲ್ಲ ಪರಾಭವಗಳಿಗೂ ಡೂಪ್ಲೆ ಹಾಗೂ ಲಾಬೂರ್ದೊನ್ನೆಗಳೇ ಕಾರಣರೆಂದು ಘೋಷಿಸಿತು. ಲಾಬೂರ್ದೊನ್ನೆಯ ಹಲವಾರು ವರ್ಷ ಕಾರಾಗೃಹದಲ್ಲಿ ಕಳೆದ ಡೂಪ್ಲೆಯು ಆರ್ಥಿಕವಾಗಿ ದಟ್ಟದಾರಿದ್ರ್ಯದವಾಗಿ ಸ್ಥಿತಿಗಳಿದು ೧೭೬೩ರಲ್ಲಿ ಫ್ರಾನ್ಸಿನಲ್ಲಿ ತೀರಿಹೋದ (ಶ್ರೀಧರನ್೧೯೮೪:೫೦೯).

ಒಟ್ಟಾರೆಯಾಗಿ ೧೭೫೬ರಲ್ಲಿ ಇಂಗ್ಲಿಶರು ಹಾಗೂ ಫ್ರೆಂಚರ ನಡುವೆ ಆರಂಭ ಯುರೋಪ್‌ನಲ್ಲಿ ಏಳು ವರ್ಷಗಳ ಕಾಲ ನಡೆದ ಯುದ್ಧ ಆಗ ಇಂಗ್ಲಿಶರು ಬಂಗಾಳದ ಮೇಲೆ ಹಿಡಿತ ಸಾಧಿಸಲು

ಪ್ರಯತ್ನಿಸಿದರು. ಆದರೆ ಫ್ರೆಂಚ್ ಸರಕಾರವು ಇಂಗ್ಲಿಶರನ್ನು ಭಾರತದಿಂದ ಓಡಿಸುವ ಉದ್ದೇಶದಿಂದ ಕೌಂಟ್ ಡಿ ಲ್ಯಾಲೆಯ ನೇತೃತ್ವದಲ್ಲಿ ಒಂದು ಬಲಿಷ್ಠ ಸೈನ್ಯವನ್ನು ಕಳುಹಿಸಿತು. ಆದರೆ ಫ್ರೆಂಚ್ ಸೈನ್ಯಕ್ಕೆ ಕರ್ನಾಟಕದಲ್ಲಿ ಜಯ ಸಿಗಲಿಲ್ಲ. ಇಂಗ್ಲಿಶರು ರಾಜಮಹೇಂದ್ರಿ ಹಾಗೂ ಮಚಲಿಪಟ್ಟಣಂಗಳಂಥ ಫ್ರೆಂಚರ ಪ್ರದೇಶಗಳನ್ನು ವಶಪಡಿಸಿಕೊಂಡು ೧೭೫೯ರಲ್ಲಿ ನಿಜಾಮ್ ಸವಾಬತ್‌ನೊಂದಿಗೆ ಹೈದರಾಬಾದ್‌ನಲ್ಲಿ ಒಂದು ಒಪ್ಪಂದ ಮಾಡಿಕೊಂಡರು. ಇಷ್ಟೇ ಅಲ್ಲದೆ, ಫ್ರೆಂಚರ ಬದಲಾಗಿ ಇಂಗ್ಲಿಶರು ನಿಜಾಮರ ರಕ್ಷಕರಾದರು. ಐತಿಹಾಸಿಕ ಘಟನೆಯಾದ ಮೂರನೇ ಕರ್ನಾಟಿಕ್ ಯುದ್ಧವೂ ೨೨ ಜನವರಿ ೧೭೬೦ರಲ್ಲಿ ವಾಂಡಿವಾಷ್‌ನಲ್ಲಿ ನಡೆಯಿತು. ಜನರಲ್ ಐರ್‌ಕೂಟ್‌ರ ಸೈನ್ಯವು ಲ್ಯಾಲಿಯ ಫ್ರೆಂಚರ ಸೈನ್ಯವನ್ನು ಮಣ್ಣುಮುಕ್ಕಿಸಿತು. ಫ್ರೆಂಚರ ಯಾವ ಪ್ರದೇಶಗಳೂ ಅವರಿಗೆ ದಕ್ಕಲಿಲ್ಲ. ೧೭೬೦ರ ಮೇನಲ್ಲಿ ಪಾಂಡಿಚೆರಿಯ ಮೇಲೆ ಆಕ್ರಮಣವಾದಾಗ ಫ್ರೆಂಚರು ಯಾವುದೇ ಷರತ್ತುಗಳಿಲ್ಲದೆ ಬ್ರಿಟಿಶರಿಗೆ ಸಂಪೂರ್ಣ ಶರಣಾಗತಿಯಾದರು. ಲ್ಯಾಲಿಯನ್ನು ಸೆರೆ ಹಿಡಿದು, ಏಳು ವರ್ಷಗಳ ನಂತರ ಫ್ರಾನ್ಸ್‌ಗೆ ಹಿಂತಿರುಗಿಸಲು ಅವಕಾಶ ನೀಡಲಾಯಿತು.

ವಿಜಯನಗರೋತ್ತರ ಕಾಲದ ಅನೇಕ ಸಂಸ್ಥಾನಗಳು ಹಾಗೂ ಪಾಳೆಯಗಾರರೊಂದಿಗೆ ವ್ಯಾಪಾರ ಹಾಗೂ ವಾಣಿಜ್ಯಕ್ಕೆ ಸಂಬಂಧಿಸಿದ ಒಪ್ಪಂದಗಳಿಗಿಂತ ಯುದ್ಧ ಸ್ವರೂಪದ ಬದುಕನ್ನು ಫ್ರೆಂಚರು ಹೆಚ್ಚಾಗಿ ಕಳೆಯಬೇಕಾಯಿತು.

**೬.೪. ಸ್ಥಳೀಯ ನಾಯಕರು ಮತ್ತು ಬ್ರಿಟಿಶರ ಆರ್ಥಿಕ ಸಂಬಂಧಗಳು**

ಇಂಗ್ಲೆಂಡಿನ ರಾಣಿ ೧೬೦೦ರ ಡಿಸೆಂಬರ್ ೩೧ರಂದು ರಾಯಲ್ ಚಾರ್ಟರ್ ಅನ್ನು ಹೊರಡಿಸಿದ್ದರ ಪರಿಣಾಮವಾಗಿ ಇಂಗ್ಲಿಶ್ ಈಸ್ಟ್ ಇಂಡಿಯಾ ಕಂಪನಿ ಆರಂಭವಾಯಿತು. ಅದು ೧೬೦೮ರಲ್ಲಿ ತನ್ನ ಮೊದಲ ಕಾರ್ಖಾನೆಯನ್ನು ಆರಂಭಿಸಿದ್ದು ಸೂರತ್‌ನಲ್ಲಿ. ಕಂಪನಿಯು ಕ್ಯಾಪ್ಟನ್ ಹಾಕಿನ್ಸ್‌ನನ್ನು ಚಕ್ರವರ್ತಿ ಜಹಾಂಗೀರನ ಆಸ್ಥಾನಕ್ಕೆ ಕೆಲವು ಸಹಾಯಗಳನ್ನು ಪಡೆಯಲು ಕಳುಹಿಸಿತು. ಮೊದಲು ಅವನನ್ನು ಸ್ನೇಹದಿಂದ ಬರಮಾಡಿಕೊಳ್ಳಲಾಯಿತಾದರೂ, ಪೋರ್ಚುಗೀಸರ ಸಂಚಿನಿಂದ ಕೊನೆಗೆ ಆಗ್ರಾದಿಂದ ಅವನನ್ನು ಹೊರಗಟ್ಟಿದರು. ಇದರಿಂದ ಇಂಗ್ಲಿಶರು ಮೊಗಲರಿಂದ ಸಹಾಯ ಪಡೆಯಬೇಕಾದರೆ ಪೋರ್ಚುಗೀಸರೊಂದಿಗಿನ ಬಾಂಧವ್ಯ ಅಗತ್ಯವಾದದ್ದು ಎಂಬ ಸತ್ಯವನ್ನು ಅರಿತುಕೊಂಡಿದ್ದರು. ೧೬೧೧ರಲ್ಲಿ ಸೂರತ್‌ನ ಬಳಿ ಪೋರ್ಚುಗೀಸರ ನೌಕಾಪಡೆಯು ಸೋಲನ್ನನುಭವಿಸಿದ್ದರಿಂದ ಜಹಾಂಗೀರನು ಇಂಗ್ಲಿಶರಿಗೆ ೧೬೧೩ರಲ್ಲಿ ಸೂರತ್‌ನ ಬಳಿ ಒಂದು ಶಾಶ್ವತ ಕಾರ್ಖಾನೆಯನ್ನು ಸ್ಥಾಪಿಸಲು ಅನುಮತಿ ನೀಡಿದ. ಅವರು ಆಗ್ರಾ, ಅಹಮದಾಬಾದ್ ಬ್ರೂಚ್ ಮತ್ತು ಮಚಲೀಪಟ್ಟಣಂಗಳಲ್ಲಿ ಸಹ ಕಾರ್ಖಾನೆಗಳನ್ನು ಸ್ಥಾಪಿಸಿದ್ದರು.

೧೬೧೫ರಲ್ಲಿ ಸರ್ ಥಾಮಸ್ ರೋ ಎಂಬ ರಾಯಭಾರಿ ಮೊಗಲರ ಆಸ್ಥಾನಕ್ಕೆ ಭೇಟಿ ನೀಡಿ, ಮೊಗಲ್ ಸಾಮ್ರಾಜ್ಯದ ಎಲ್ಲ ಕಡೆ ಕಾರ್ಖಾನೆಗಳನ್ನು ಆರಂಭಿಸಲು ಹಾಗೂ ವ್ಯಾಪಾರ ನಡೆಸಲು ಅನುವಾಗುವಂತೆ ಫರ್ಮಾನನ್ನು ಪಡೆಯಲು ಯಶಸ್ವಿಯಾದ. ಇಂಗ್ಲಿಶರ ಈ ಯಶಸ್ಸನ್ನು ಕಂಡು ಪೋರ್ಚುಗೀಸರಿಗೆ ಸಿಟ್ಟು ಬಂದಿತು(ಶಿರೋಡ್ಕರ್ ೧೯೯೨:೨೨).

೧೬೨೧ರಲ್ಲಿ ನಡೆದ ಯುದ್ಧದಲ್ಲಿ ಪೋರ್ಚುಗೀಸರು ನೌಕಾಪಡೆಯನ್ನು ಸೋಲಿಸುವುದರೊಂದಿಗೆ ಇಂಗ್ಲಿಶರ ಪ್ರಾಬಲ್ಯಕ್ಕೆ ಸಮರ್ಥನೆ ಸಿಕ್ಕಿದಂತಾಯಿತು. ೧೬೩೩ರಲ್ಲಿ ಮೊಗಲರು ಪೋರ್ಚುಗೀಸರ ರಾಜಕುಮಾರಿಯ ಮದುವೆಯ ಸಂದರ್ಭದಲ್ಲಿ ವರದಕ್ಷಿಣೆಯ ರೂಪವಾಗಿ ಅವರು ಬಾಂಬೆ ದ್ವೀಪವನ್ನು ಎರಡನೇ ಚಾರ್ಲ್ಸ್‌ಗೆ ನೀಡಿದರು. ಕೊನೆಗೆ ಪೋರ್ಚುಗೀಸರ ಗೋವಾ, ಡಿಯು ಮತ್ತು ಡಾಮನ್‌ಗಳ ಹೊರತಾಗಿ ಭಾರತದ ಎಲ್ಲ ನೆಲೆಗಳನ್ನು ಕಳೆದುಕೊಂಡರು. ೧೬೩೯ರಲ್ಲಿ ಅವರು ಸ್ಥಳೀಯ ರಾಜನಿಂದ ಮದ್ರಾಸನ್ನು ಗುತ್ತಿಗೆಗೆ ಪಡೆದರು. ಆ ರಾಜನು ಇಂಗ್ಲಿಶರಿಗೆ ಈ ಸ್ಥಳದಲ್ಲಿ ಕೋಟೆಯನ್ನು ಭದ್ರಪಡಿಸುವ, ಆಡಳಿತ ನಡೆಸುವ ಹಾಗೂ ನಾಣ್ಯಗಳನ್ನು ತಯಾರಿಸಲು ಅನುಮತಿ ನೀಡಿದ. ಇದಕ್ಕೆ ಪ್ರತಿಯಾಗಿ ಅವರು ಬಂದರಿನಲ್ಲಿ ಸಂಗ್ರಹವಾದ ತೆರಿಗೆಯಲ್ಲಿ ಅರ್ಧದಷ್ಟು ರಾಜನಿಗೆ ನೀಡಬೇಕಾಗಿತ್ತು. ಇಂಗ್ಲಿಶರು ಅಲ್ಲಿ ಸೆಂಟ್ ಜಾರ್ಜ್ ಎಂಬ ಕೋಟೆಯನ್ನು ಕಟ್ಟಿದರು(ಹಮದ್‌ಖಾನ್ ೧೯೮೩,:೧೨೫). ಈ ರೀತಿಯಾಗಿ ಯುರೋಪಿನಲ್ಲಾದ ರಾಜಕೀಯ ಒಪ್ಪಂದಗಳಿಂದಾಗಿ ಭಾರತದ ವಸಾಹತು ಪ್ರದೇಶಗಳನ್ನು ಫ್ರಾನ್ಸ್ ಮತ್ತು ಇಂಗ್ಲೆಂಡ್ ಬದಲಾಯಿಸಿಕೊಳ್ಳುವ ಒಪ್ಪಂದಗಳಿಂದ ಬ್ರಿಟಿಶರು ಭದ್ರವಾದ ವಸಾಹತು ನೆಲೆಯಾಗಿ ಭಾರತವನ್ನು ಮಾಡಿಕೊಂಡರು.

೧೭ನೇ ಶತಮಾನದಲ್ಲಿ ಮೊದಲಿಗೆ ಬಂದರು ಪ್ರದೇಶಗಳನ್ನು ತಮ್ಮ ಹಿಡಿತದಲ್ಲಿಟ್ಟುಕೊಳ್ಳಲು ಮುಂದಾಗಿದ್ದರು. ಅದರಲ್ಲಿ ಸ್ಥಳೀಯ ಸಂಸ್ಥಾನವಾದ ಕೆಳದಿಯು ಬ್ರಿಟಿಶರೊಂದಿಗೆ ವ್ಯಾಪಾರ ಮಾಡಲು ಅಷ್ಟೇನು ಆಸಕ್ತಿ ಹೊಂದಿರಲಿಲ್ಲ. ಕೆಳದಿಯ ರಾಜರೊಂದಿಗೆ ಉತ್ತಮವಾದ ಸಂಬಂಧ ಹೊಂದಿದ್ದರೂ ವೈಷಮ್ಯವೇನು ಇರಲಿಲ್ಲ. ಹದಿನೇಳನೇ ಶತಮಾನದಲ್ಲಿ ಕೆಳದಿ ರಾಜ್ಯದಲ್ಲಿ ದೊರೆಯುತ್ತಿದ್ದ ಮೆಣಸಿನ ಬಗ್ಗೆ ಅವರು ತಿಳಿದುಕೊಂಡರು. ಅಂತಾರಾಷ್ಟ್ರೀಯ ಮಾರುಕಟ್ಟೆಯಲ್ಲಿ ಅದಕ್ಕೆ ಬಹಳ ಬೇಡಿಕೆಯಿರುವುದರಿಂದ ಕೆಳದಿ ರಾಜ್ಯದ ಜೊತೆ ಸ್ವಲ್ಪಮಟ್ಟಿಗೆ ಸಂಬಂಧ ಬೆಳೆಸಲು ಆರಂಭಿಸಿದರು. ಇದಕ್ಕಾಗಿ ಅವರು ಭಟ್ಕಳದಲ್ಲಿ ಚಿಕ್ಕ ವ್ಯಾಪಾರ ಕೇಂದ್ರವನ್ನು ಆರಂಭಿಸಿದರು. ಈ ಸಂದರ್ಭದಲ್ಲಿ ಕೆಳದಿಯ ಅರಸನಾಗಿದ್ದ ವೆಂಕಟಪ್ಪನಾಯಕನು ಅವರೊಂದಿಗೆ ಸಂಪರ್ಕವಿಟ್ಟುಕೊಳ್ಳುವ ಪ್ರಯತ್ನಮಾಡಿದನು(ಫಾಸ್ಟರ್‌ವಿಲಿಯಂ೧೯೦೬:೬೧-೭೦). ಇದೇ ಸಂದರ್ಭದಲ್ಲಿ ಇಂಗ್ಲಿಶರ ದಂಡನಾಯಕನು ಡ್ರೇಗನ್ ಎಂಬ ಹಡಗನ್ನು ಭಟ್ಕಳಕ್ಕೆ ತಂದು ನಿಲ್ಲಿಸಿ ಮೆಣಸನ್ನು ಕೊಳ್ಳಲು ನಿರ್ಧರಿಸಿದನು. ಆದರೆ ಆತನಿಗೆ ಮೆಣಸನ್ನು ಮಾರಲು ಸ್ಥಳೀಯರು ನಿರಾಕರಿಸಿದರು ಎಂದು ದಾಖಲೆಯೊಂದು ತಿಳಿಸುತ್ತದೆ(ಫಾಸ್ಟರ್ ವಿಲಿಯಂ೧೯೦೬:೧). ವೆಂಕಟಪ್ಪನಾಯಕನು ಇಂಗ್ಲೀಶರೊಂದಿಗೆ ಸ್ನೇಹಸಂಬಂಧ ಬೆಳೆದ ನಂತರ ತನಗೆ ಎರಡು ಹಡಗುಗಳನ್ನು ನೀಡಿದರೆ ಅದಕ್ಕೆ ಪರ್ಯಾಯವಾಗಿ ಮೆಣಸನ್ನು ಕೊಡುವುದಾಗಿ ತಿಳಿಸಿದರು. ಅದರಂತೆಯೇ ಇಕ್ಕೇರಿಗೆ ಆಂಗ್ಲರ ಪ್ರತಿನಿಧಿಯೊಬ್ಬ ಹೋಗಿ ಭಟ್ಕಳದಲ್ಲಿ ಮೆಣಸನ್ನು ಕೊಳ್ಳಲು ಅನುಮತಿ ಪಡೆದನೆಂದು ಕ್ರಿ.ಶ.೧೬೯೧ರ ಇಂಗ್ಲಿಶರ ದಾಖಲೆಯೊಂದರಲ್ಲಿ ತಿಳಿಸಲಾಗಿದೆ(ಶಾಸ್ತ್ರಿ೧೯೭೨:೨೦). ಪೋರ್ಚುಗೀಸರ ಏಕಸ್ವಾಮ್ಯದ ನಡುವೆಯೂ ವೆಂಕಟಪ್ಪನಾಯಕನು ಇಂಗ್ಲಿಶರಿಗೆ ಭಟ್ಕಳಕ್ಕೆ ಆಹ್ವಾನ ನೀಡಲು ಕಾರಣವೆಂದರೆ ಆತ ಪೋರ್ಚುಗೀಸರ

ನಡವಳಿಕೆಯಿಂದ ಅಸಂತುಷ್ಟವಾಗಿದ್ದನು ಎಂದು ತಿಳಿಯುತ್ತದೆ. ಆದರೆ ಪೋರ್ಚುಗೀಸರಿಗೆ ಕೆಳದಿ ನಾಯಕರು ಇಂಗ್ಲಿಶರ ಜೊತೆ ಸಂಬಂಧ ಬೆಳೆಸುವುದು ಇಷ್ಟವಿರಲಿಲ್ಲ. ಆದ್ದರಿಂದ ಪೋರ್ಚುಗೀಸರು ಕೆಲವು ಒಪ್ಪಂದಗಳನ್ನು ಮಾಡಿಕೊಂಡರು. ಈ ರೀತಿಯ ಒಪ್ಪಂದಗಳ ನಡುವೆಯೂ ಇಂಗ್ಲಿಶರು ವೆಂಕಟಪ್ಪನಾಯಕನೊಂದಿಗೆ ಸಂಬಂಧ ಬಲ ಪಡಿಸಿಕೊಂಡರು.

ಇಂಗ್ಲಿಶರು ಕೆಳದಿ ರಾಜ್ಯದ ಮೆಣಸಿಗೆ ಪೋರ್ಚುಗೀಸರು ಕೊಡುವ ಹಣಕ್ಕಿಂತಲೂ ಜಾಸ್ತಿ ಕೊಡುವುದಾಗಿ ತಿಳಿಸಿದ್ದರು. ಅಲ್ಲಿನ ವರ್ತಕರಿಗೆ ತಾಮ್ರ, ಸೀಸ, ಇತರ ವಿದೇಶಿ ವಸ್ತುಗಳನ್ನು ಒದಗಿಸವುದಾಗಿ ತಿಳಿಸಿದ್ದರು. ಇದರಿಂದ ಕೋಪಗೊಂಡ ಪೋರ್ಚುಗೀಸರು ಇಂಗ್ಲಿಶರ ಹಡಗುಗಳಿಗೆ ಕರಾವಳಿ ಬಂದರುಗಳಿಗೆ ಪ್ರವೇಶ ನಿಷೇಧಿಸಿದರು. ಆದರೂ ವೀರಭದ್ರ ನಾಯಕನು ಅವರನ್ನು ಆತ್ಮೀಯವಾಗಿ ಬರಮಾಡಿಕೊಂಡು ಅವರಿಗೆ ಒಂದು ಸಣ್ಣ ಹಡಗು ತುಂಬುವಷ್ಟು ಮೆಣಸನ್ನು ಕೊಡುವುದಾಗಿ ತಿಳಿಸಿದನು. ಆದರೆ ಕಡಲುಗಳ್ಳರ ಭೀತಿಯಿಂದ ಹಾಗೂ ಪೋರ್ಚುಗೀಸರ ವಿರೋಧದಿಂದ ಮೆಣಸು ಅವರಿಗೆ ಸುಲಭವಾಗಿ ಸಿಗುತ್ತಿರಲಿಲ್ಲ. ಇದರಿಂದಾಗಿ ಅವರು ಕೆಳದಿಯ ನಾಯಕರೊಂದಿಗೆ ಒಪ್ಪಂದ ಮಾಡಿಕೊಳ್ಳಲು ನಿರ್ಧರಿಸಿ ತಮ್ಮ ಪ್ರತಿನಿಧಿಗಳನ್ನು ಕೆಳದಿಗೆ ಕಳುಹಿಸಿದರು. ಥಾಮಸ್ ಶಾಬಿನ್, ಪೀಟರ್ ಮಂಡಿ ಹಾಗೂ ಇತರರು ವೀರಭದ್ರನಾಯಕನನ್ನು ಭೇಟಿ ಮಾಡಲು ಇಕ್ಕೇರಿಗೆ ಬಂದರು. ಅಲ್ಲಿ ಅವರಿಗೆ ದೊರೆತಂತಹ ಆತ್ಮೀಯತೆ ಹಾಗೂ ಸತ್ಕಾರಗಳನ್ನು ಪೀಟರ್ ಮಂಡಿಯು ತನ್ನ ಪ್ರವಾಸ ಕಥನಗಳಲ್ಲಿ ದಾಖಲಿಸಿದ್ದಾನೆ.

ಕೆಳದಿ ನಾಯಕರು ಅನೇಕ ಒಪ್ಪಂದ ಮಾಡಿಕೊಳ್ಳುವುದರ ಮೂಲಕ ಶಿವಪ್ಪನಾಯಕನು ಮೆಣಸಿನ ವ್ಯಾಪಾರವನ್ನು ಉತ್ತೇಜಿಸಿದನು. ಅಂತಿಮವಾಗಿ ಹೈದರಾಲಿ ಕೆಳದಿಯನ್ನು ವಶಪಡಿಸಿಕೊಂಡ ನಂತರ ಸಂಪೂರ್ಣವಾಗಿ ಮೈಸೂರು ಸಂಸ್ಥಾನಕ್ಕೆ ಅಧಿಕಾರ ಹಸ್ತಾಂತರ ಆಗುವುದರ ಜೊತೆಗೆ ನಾಲ್ಕು ಮಹತ್ತರ ಯುದ್ಧಗಳನ್ನು ಹೈದರ್ ಮತ್ತು ಟಿಪ್ಪು ಸುಲ್ತಾನ್ ಮಾಡುವುದರ ಮೂಲಕ ಮೈಸೂರು ಸಂಸ್ಥಾನ ಬ್ರಿಟಿಶರ ಅಧೀನಕ್ಕೆ ಒಳಪಟ್ಟ ಸಂಸ್ಥಾನವಾಗಿ ರಚನೆಯಾಗುತ್ತದೆ.

ದಕ್ಷಿಣ ಭಾರತದಲ್ಲಿ ಬ್ರಿಟಿಶರ ಅಧಿಕಾರ ಸ್ಥಾಪನೆಗೆ ಮೈಸೂರು ಸಂಸ್ಥಾನ ಪ್ರಬಲ ಪ್ರತಿಭಟನೆ ತೋರಿತು. ದಕ್ಷಿಣ ಭಾರತದ ಮಧ್ಯದಲ್ಲಿ ಎತ್ತರವಾದ ಪ್ರಸ್ಥಭೂಮಿಯಲ್ಲಿದ್ದ ಈ ಸಂಸ್ಥಾನವು ಎರಡೂ ಕಡೆಗಳಲ್ಲಿ ಪೂರ್ವ ಹಾಗೂ ಪಶ್ಚಿಮ ಘಟ್ಟಗಳನ್ನು ದಕ್ಷಿಣದಲ್ಲಿ ಕಾವೇರಿ ನದಿಯನ್ನೂ ಹೊಂದಿದ್ದು, ಶತ್ರು ಸೈನ್ಯಗಳಿಗೆ ಭೇದಿಸಿಕೊಂಡು ಬರಲು ದುಸ್ಸಾಧ್ಯವಾಯಿತು. ಮೊಗಲರಿಗೂ ಮರಾಠರಿಗೂ ನಡುವೆ ದೀರ್ಘಕಾಲ ಯುದ್ಧ ನಡೆಯುತ್ತಿದ್ದುದು ಮೈಸೂರಿಗೆ ತನ್ನ ಸ್ಥಾನವನ್ನು ದೃಢಪಡಿಸಿಕೊಳ್ಳಲು ಸಾಧ್ಯ ಮಾಡಿಕೊಟ್ಟಿತ್ತು ಅದು ಮುಖ್ಯ ಕದನಗಳ ಕ್ಷೇತ್ರದಿಂದ ದೂರವಿತ್ತು. ಈ ಪ್ರದೇಶದಲ್ಲಿ ದೊಡ್ಡ ಬೆಟ್ಟಗುಡ್ಡಗಳಿಂದ ಹರಿಯುತ್ತಿದ್ದ ಅಸಂಖ್ಯಾತ ನದಿಗಳೂ ಕಾವೇರಿಯ ಸಮೃದ್ಧ ಜಲಸಂಪತ್ತೂ, ಇವುಗಳ ಜೊತೆಗೆ ಅಣೆಕಟ್ಟುಗಳ ಹಾಗೂ ಜಲಾಶಯಗಳ ಸಂಕೀರ್ಣ ಜಾಲಬಂಧವೂ, ಮೈಸೂರಿನ ರೈತರಿಗೆ ಸಿರಿವಂತಿಕೆಗಳಿಗೆ ಅವಕಾಶ ಮಾಡಿಕೊಟ್ಟಿದ್ದವು. ಇಲ್ಲಿ ಭೂಕಂದಾಯ ಹೆಚ್ಚು ಕಮ್ಮಿ ಸಾಮಾನ್ಯ ಮಟ್ಟದಲ್ಲಿತ್ತು, ಕೈಕಸುಬು ತಯಾರಿಕೆ ಚೆನ್ನಾಗಿ ವಿಕಾಸಗೊಂಡಿತ್ತು.

ರಾಜ್ಯದಲ್ಲಿ ಅನೇಕ ನಗರಗಳಲ್ಲಿ ವಸ್ತ್ರ ತಯಾರಾಗುತ್ತಿತ್ತು. ಆದರೆ ಕಬ್ಬಿಣದ ಸಲಾಕಿಗಳು ಇದರ ಮುಖ್ಯ ರಫ್ತಿನ ಸರಕಾಗಿತ್ತು ಅದು ಭಾರತದಾದ್ಯಂತ ಮಾರಾಟವಾಗುತ್ತಿತ್ತು. ಕಬ್ಬಿಣವನ್ನು ಪ್ರಧಾನವಾಗಿ ಬೆಟ್ಟಗಳಿಂದ ಹರಿದುಬರುತ್ತಿದ್ದ ಹೊಳೆಗಳ ಮರಳಿನಿಂದ ಪಡೆದುಕೊಳ್ಳಲಾಗುತ್ತಿತ್ತು. ಈ ಹೊಳೆಗಳು ಕಬ್ಬಿಣದ ಅದಿರನ್ನು ಪ್ರಸ್ಥಭೂಮಿಗೆ ಪ್ರವಾಹದೊಂದಿಗೆ ತಂದುಹಾಕುತ್ತಿದ್ದವು. ಕಾಡುಗಳಿಂದ ಸಮೃದ್ಧವಾಗಿ ಕಟ್ಟಿಗೆ ದೊರಕುತ್ತಿದ್ದುದು ಈ ಕಬ್ಬಿಣದ ಅದಿರುಗಳನ್ನು ಪರಿಷ್ಕೃತ ಭಟ್ಟಿಗಳಲ್ಲಿ ಹಾಕಿ ಕರಗಿಸುವುದನ್ನು ಸಾಧ್ಯ ಮಾಡಿಕೊಟ್ಟಿತ್ತು. ಅನಂತರ ಅದನ್ನು ಸಣ್ಣಪುಟ್ಟ ಕುಲುಮೆಗಳನ್ನು ಮತ್ತೆ ಮತ್ತೆ ಸಂಸ್ಕರಿಸುವ ಮೂಲಕ ಕಬ್ಬಿಣ ಹಾಗೂ ಉಕ್ಕುಗಳನ್ನು ತಯಾರಿಸಲಾಗುತ್ತಿತ್ತು. ಈ ಕೆಲಸಗಳನ್ನು ಹಳ್ಳಿಗಳ ಜನರು ಕೆಲವು ಋತುಗಳಲ್ಲಷ್ಟೇ ಕೈಗೊಳ್ಳುತ್ತಿದ್ದರು. ಉಳಿದ ಕಾಲಗಳಲ್ಲಿ ಅವರು ತಮ್ಮ ಸ್ವಂತ ಭೂಮಿ ಉಳುತ್ತಿದ್ದರು. ಇಲ್ಲವೇ ಕೂಲಿ ಬೇಸಾಯಗಾರರಾಗಿ ಕೆಲಸ ಮಾಡುತ್ತಿದ್ದರು. ಗಾಜಿನ ಬಳೆಗಳನ್ನು ಮಾಡುತ್ತಿದ್ದ ಗಾಜುಗಾರರು, ಬಟ್ಟೆಗಳಿಗೆ ಬಣ್ಣ ಹಾಕುವವರು, ಪುಸ್ತಕಗಳಿಗೆ ಕಟ್ಟು ಹಾಕುವವರು, ಕಾಲುವೆ ತೋಡುವವರು, ಉಪ್ಪು ಉತ್ಪಾದಿಸುವವರು ಇವರು ಇತರ ಪ್ರಧಾನ ಕೈಕಸುಬುಗಳನ್ನು ಹೊಂದಿರುವ ಸಂಸ್ಥಾನವನ್ನು ವಶಪಡಿಸಿಕೊಂಡರೆ ಕಂಪನಿಯ ಆದಾಯ ಹಾಗೂ ಕಚ್ಚಾವಸ್ತು ಹೇರಳವಾಗಿ ಸಿಗುತ್ತದೆ ಎಂಬ ಬಯಕೆ ಬ್ರಿಟಿಶರಿಗೆ ಕಾಡುತ್ತಿತ್ತು.

ಈ ಎಲ್ಲ ಹೊಸ ಮಾರ್ಪಾಡುಗಳ ಫಲವಾಗಿ ಮೈಸೂರಿನ ಸಂಪದ್ಭರಿತ ನೈಸರ್ಗಿಕ ಆಕರಗಳ ಫಲವಾಗಿ ಹೈದರಾಲಿಯು ಕೆಲವೇ ವರ್ಷಗಳಲ್ಲಿ ಬೇರೆಲ್ಲ ಭಾರತೀಯ ರಾಜ್ಯಗಳಲ್ಲಿ ಇದ್ದದ್ದಕ್ಕಿಂತ ಹೆಚ್ಚಿನ ಪ್ರಬಲವಾದ ಸೈನ್ಯವನ್ನು ಸ್ಥಾಪಿಸುವುದರಲ್ಲಿ ಯಶಸ್ವಿಯಾದ. ೧೭೭೯ರಲ್ಲಿ ಹೈದರ್ ಚಿತ್ರದುರ್ಗದ ಕೋಟೆಯನ್ನು ವಶಪಡಿಸಿಕೊಂಡನು. ಚಿತ್ರದುರ್ಗ ಪ್ರದೇಶದ ಬುಡಕಟ್ಟು ಜನರು ಸೈನಿಕ ವ್ಯವಸ್ಥೆಯಲ್ಲಿ ವಿಶೇಷ ಪರಿಣತಿ ಹೊಂದಿದ್ದು, ಬೇಡ ಪಡೆಯೊಂದು ಹೈದರನ ಸೈನ್ಯ ಸೇರಿತ್ತು. ಚಿತ್ರದುರ್ಗ ನಾಯಕರ ಕೊನೆಯ ನಾಯಕರ ವಂಶಸ್ಥ ದೊಡ್ಡ ಮದಕರಿನಾಯಕ ಹೈದರನ ಸೈನ್ಯದ ೪೦೦೦ ಸೈನಿಕರ ಮುಖ್ಯಸ್ಥನಾಗಿ ನೇಮಕವಾಗಿ ತಿರುಚನಾಪಳ್ಳಿ, ಚೋಡಪ್ಪೆ, ವೆಲ್ಲೂರು ಪ್ರದೇಶಗಳನ್ನು ಗೆದ್ದನು. ನಂತರ ೧೭೯೯ರ ನಾಲ್ಕನೇ ಮೈಸೂರು ಯುದ್ಧದಲ್ಲಿ ಟಿಪ್ಪು ಸೋತ ನಂತರ ದಿವಾನ್ ಪೂರ್ಣಯ್ಯ ಹಾಗೂ ದೊಡ್ಡ ಮದಕರಿನಾಯಕನು ಮದ್ರಾಸಿನ ಸೆಂಟ್ ಜಾರ್ಜ್, ಪೋರ್ಟ್‌ಗೆ ಪತ್ರ ಬರೆಯುವುದರ ಮೂಲಕ ಅವರು ಮಾಸಿಕ ವೇತನ ಪಡೆಯುತ್ತಿದ್ದ ಅಂಶ ತಿಳಿದುಬರುತ್ತದೆ. ಅದರಲ್ಲಿ

| | | | | |
|---|---|---|---|---|
| ದೊಡ್ಡ ಮದಕರಿನಾಯಕ | – | ೧೦೯೦ | – | ವರಹ |
| ಮಗ ಜಂಪಣ್ಣನಾಯಕ | – | ೩೯೦ | – | ವರಹ |
| ಮಗ ಕಾಟಪ್ಪ | – | ೧೯೦ | – | ವರಹ |
| ಮಗ ಬೊಮ್ಮರಾಜ್ | – | ೫೯೦ | – | ವರಹ |
| ಮಗ ರಾಮಪ್ಪ | – | ೫೯೦ | – | ವರಹ |
| ಸಬಾರಿ ಭರಮಪ್ಪ | – | ೫೯೦ | – | ವರಹ |

ವೇತನ ಪಡೆಯುತ್ತಿದ್ದ ಅಂಶದಿಂದ ಚಿತ್ರದುರ್ಗ ನಾಯಕರು ಸಹ ಬ್ರಿಟಿಶ್ ಈಸ್ಟ್ ಇಂಡಿಯಾ ಕಂಪನಿಯೊಂದಿಗೆಸಂಬಂಧ ಹೊಂದಿದ್ದ ಅಂಶ ಗುರುತಿಸಬಹುದು(ದೇಶಪಾಂಡೆ,೧೯೭೯:೨೦೭,೨೧೬) ಹೈದರ್ ೧೮ನೇ ಶತಮಾನದಲ್ಲಿ ಬ್ರಿಟಿಶ್ ಈಸ್ಟ್ ಇಂಡಿಯಾ ಕಂಪನಿಗೆ ಶತ್ರುತ್ವ ಭಾವನೆ ತೋರಿಸಲು ಸ್ಥಳೀಯ ಪಾಳೆಯಗಾರರ ಶಕ್ತಿಯನ್ನು ಕುಂದಿಸಿ ವಿಶಾಲ ಮೈಸೂರು ಸಂಸ್ಥಾನವನ್ನಾಗಿ ರಚನೆ ಮಾಡುವಲ್ಲಿ ಯಶಸ್ವಿಯಾದನು.

ಹೈದರಾಲಿ ಮರಾಠರು ಮತ್ತು ಇಂಗ್ಲಿಶರ ನಡುವಿನ ಯುದ್ಧವು ದೇಶೀಯ ಸಮುದ್ರ ಮೀನುಗಾರ ವ್ಯಾಪಾರಿಗಳ ಕಡೆಗಣಿಸುವಿಕೆಗೆ ಕಾರಣವಾಯಿತು. ತೇಗದ ವ್ಯಾಪಾರದಲ್ಲಿ ಹೈದರಾಲಿಯು ಅಂದು ಚಾಲ್ತಿಯಿದ್ದ ನಿಯಮಗಳಿಗಿಂತ ವಿಭಿನ್ನವಾದ ನಿಯಮಗಳನ್ನು ತಂದನು. ಸಮುದ್ರ ತೀರದ ವ್ಯಾಪಾರಿಗಳು ಹಾಗೂ ಅಂತರ್‌ರಾಜ್ಯ ವ್ಯಾಪಾರಿಗಳು ಮರದ ದಿಮ್ಮಿಗಳನ್ನು ಸಂಗ್ರಹಿಸುವಲ್ಲಿ ಮತ್ತು ವರ್ಗಾವಣೆ ಮಾಡುವಲ್ಲಿ ಒಟ್ಟಿಗೆ ಕೆಲಸ ಮಾಡುತ್ತಿದ್ದರು. ಅದಕ್ಕೆ ಬದಲಾಗಿ ೧೭೭೬ರಲ್ಲಿ ಹೈದರಾಲಿಯು ಈ ಕೆಲಸವನ್ನು ನಿರ್ವಹಿಸಲು ಏಕೈಕ ವ್ಯಾಪಾರಿಯೊಡನೆ ಮರ ಸಾಗಾಣಿಕೆಗೆ ಒಪ್ಪಂದ ಮಾಡಿಕೊಂಡನು. ೧೭೭೯ರಲ್ಲಿ ಹೈದರಾಲಿಯು ಮರ್ದೋಕ್ ಬ್ರೌನ್ ಕಂಪನಿಗೆ ಮಂಗಳೂರು, ಕಾರವಾರ, ಅಂಡಮಾನ್ ಮತ್ತು ನಿಕೋಬಾರ್ ದ್ವೀಪಗಳಲ್ಲಿ ಕೈಗಾರಿಕೆಗಳನ್ನು ಸ್ಥಾಪಿಸಲು ಅವಕಾಶ ನೀಡಿದನು. ಟೆಕ್ಸೇರ, ಮೈಗೂಲ್, ವ್ಯಾಕ್ನರ್, ವ್ಯಾನ್ಸೀರ್ಬೆಕ್ ಮತ್ತು ವಾರ್ನೆಟ್ ಕಂಪನಿಗಳು ಕಾರವಾರ ಮತ್ತು ಮಂಗಳೂರಿನಿಂದ ಮಲಬಾರ್ ಮತ್ತು ಗೋವಾ ಬಂದರುಗಳಿಗೆ ನಿರಂತರವಾಗಿ ಸರಕಗಮನಿಸಬೇಕು ವಸಾಹತು ಹಡಗುಗಳ ಮೂಲಕ ಕೊಂಡೊಯ್ಯುತ್ತಿತ್ತು. ೧೭೮೧ರಲ್ಲಿ ಅಕ್ಕಿ, ಕಾಳುಗಳು, ಹೊಗೆಸೊಪ್ಪು, ಮೆಣಸಿನ ಕಾಯಿಗಳನ್ನು ಉದ್ಯಾವರ, ಮಂಜೇಶ್ವರ ಮತ್ತು ಕಲ್ಲಿಕೋಟೆಗಳಿಂದ ಸಾಗಿಸುತ್ತಿದ್ದ ಪೋರ್ಚುಗೀಸರ ಏಳು ಗೋವಾ ಹಡಗುಗಳನ್ನು ವಶಪಡಿಸಿಕೊಳ್ಳಲಾಯಿತು. ಪೋರ್ಚುಗೀಸರು ಪ್ರತಿಭಟಿಸಿದ್ದರಾದರೂ ಏನೂ ಪ್ರಯೋಜನವಾಗಲಿಲ್ಲ. ೧೭೮೧ರ ನಂತರ ಪರವಾನಿಗೆ ಇದ್ದರೂ ಪೋರ್ಚುಗೀಸರು ಕಾರವಾರದ ದಕ್ಷಿಣವನ್ನು ಸಮೀಪಿಸಲು ಹೆದರುತ್ತಿದ್ದರು. ಆದರೆ ೧೭೮೨ರಲ್ಲಿ ಇವರಿಬ್ಬರ ನಡುವೆ ಮಾತುಕತೆಯಾಗಿ ಹೈದರ್ ಮತ್ತು ಪೋರ್ಚುಗೀಸರ ನಡುವೆ ಮರುಮೈತ್ರಿ ಉಂಟಾಯಿತು(ಶ್ಯಾಮ್‌ಭಟ್ ೧೯೩೬:೧೭೫).

ಫ್ರಾನ್ಸ್ ಮತ್ತು ಇಂಗ್ಲೆಂಡಿನ ಮಧ್ಯೆ ೧೭೭೮ರಲ್ಲಿ ಯುದ್ಧ ಘೋಷಣೆಯಾದಾಗ ಅದರ ಪ್ರತಿಬಿಂಬಗಳು ಭಾರತದ ಪಶ್ಚಿಮ ಕರಾವಳಿಯ ಪರಿಣಾಮ ಬೀರಿತು. ಹೈದರಾಲಿಯು ಈ ಸಂದರ್ಭದ ಸದುಪಯೋಗ ಪಡೆದು ಮಂಗಳೂರು ಬಂದರಿನ ಮೂಲಕ ಬಿರುಸಿನ ವ್ಯಾಪಾರ ವ್ಯವಹಾರಕ್ಕೆ ಚಾಲನೆ ನೀಡಿದನು. ಈ ಸಮಯದಲ್ಲಿ ಹೈದರಾಲಿಯ ಕಡೆ ಇದ್ದ ವ್ಯಾಪಾರಿಗಳು ಮತ್ತು ರಾಷ್ಟ್ರಗಳು ಫ್ರಾನ್ಸ್‌ನ ಪರ ವಾಲಿದರು. ವಿವಿಧೆಡೆಗಳಲ್ಲಿ ಇದ್ದ ಹೈದರಾಲಿಯ ಹಡಗುಗಳನ್ನು ಇಂಗ್ಲಿಶ ಈಸ್ಟ್ ಇಂಡಿಯಾ ಕಂಪನಿ ದಾಳಿ ನಡೆಸಿ ಮುಟ್ಟುಗೋಲು ಹಾಕುವ ಹೊಸ ಪ್ರಯತ್ನವನ್ನು ನಡೆಸಿತು. ಇದರ ಬೆಳವಣಿಗೆಯ ಪರಿಣಾಮವೆಂದರೆ ಏಷ್ಯಾದ ವ್ಯಾಪಾರ ವ್ಯವಹಾರದ ಸ್ಥಿತಿಗತಿಯು ಯುರೋಪಿಯನ್ ದೇಶಗಳ ರಾಜಕೀಯ ಸ್ಥಿತಿಗತಿಯ ಮೇಲೆ ನಿಂತಿದೆ ಎಂದು ಗೊತ್ತಾಗುತ್ತದೆ.

ಹೈದರಾಲಿ ಮತ್ತು ಈಸ್ಟ್ ಇಂಡಿಯಾ ಕಂಪನಿಯು ವಾಣಿಜ್ಯದ ಹಿನ್ನೆಲೆಯಿಂದ ಪರಸ್ಪರ ಸಹಕರಿಸುವ ಅನಿವಾರ್ಯತೆ ಉಂಟಾಯಿತು. ಎಂದು ತಿಳಿದುಬರುತ್ತದೆ. ಹೈದರಾಲಿಯು ಈಸ್ಟ್ ಇಂಡಿಯಾ ಕಂಪನಿಯ ಅನಿವಾರ್ಯತೆಯ ಸಂದರ್ಭವನ್ನು ಸಂಪೂರ್ಣವಾಗಿ ಉಪಯೋಗಿಸಿಕೊಂಡು ತನ್ನ ರಾಜಕೀಯ ಕರ್ತವ್ಯಗಳನ್ನು ಯಶಸ್ವಿಯಾಗಿ ನಿರ್ವಹಿಸುತ್ತಾನೆ. ಮಂಗಳೂರನ್ನು ಬ್ರಿಟಿಶರು ಕೈವಶಪಡಿಸಿಕೊಂಡಾಗ ತೀವ್ರ ರೀತಿಯಲ್ಲಿ ಪ್ರತಿಕ್ರಿಯಿಸಿ ಮತ್ತೆ ತನ್ನ ವಶಕ್ಕೆ ಪಡೆದುಕೊಂಡನು. ಆದರೂ ಸಹ ಪುನಃ ಇಂಗ್ಲಿಶರೊಂದಿಗೆ ವಾಣಿಜ್ಯಾತ್ಮಕ ಒಪ್ಪಂದವನ್ನು ನಡೆಸಿರುವಂತಹದ್ದು ಒಂದು ಗಮನಾರ್ಹ ಸಂಗತಿಯಾಗಿದೆ. ಅದೇ ವೇಳೆಗೆ ಪೋರ್ಚುಗೀಸರೊಂದಿಗೆ ಹೈದರಾಲಿಯ ನಿರ್ವಹಣೆ ಸಾಮರಸ್ಯದಿಂದ ಕೂಡಿತ್ತು.

ಹೈದರನು ಇಂಗ್ಲಿಶರೊಂದಿಗೆ ಇಟ್ಟುಕೊಂಡಿದ್ದ ಸಂಬಂಧಗಳು ಅತ್ಯಂತ ಜಟಿಲವೂ ಗೊಂದಲಮಯವೂ ಆಗಿದ್ದವು. ಅವನು ಬೆಳಕಿಗೆ ಬಂದದ್ದು ಕರ್ನಾಟಿಕ್ ಯುದ್ಧಗಳಲ್ಲಿ. ಅವರ ಮಿತ್ರನಾಗಿ ಇತಿಹಾಸದಲ್ಲಿ ಮರೆಯಾಗಿ ಹೋದದ್ದು ಎರಡನೆಯ ಮೈಸೂರು ಯುದ್ಧದಲ್ಲಿ ಅವರ ವೈರಿಯಾಗಿ, ಅವರನ್ನು ನಾಶ ಮಾಡಲು ಪ್ರಯತ್ನಿಸುತ್ತಾ. ಈ ಎರಡೂ ಅತಿರೇಕಗಳ ನಡುವೆ ಅನೇಕ ಬಣ್ಣ ಬಣ್ಣದ ಹುನ್ನಾರುಗಳು ಕಾಣಿಸಿಕೊಂಡು ಹದಿನೆಂಟನೆಯ ಶತಮಾನದ ವಿಶ್ವಾಸಘಾತುಕ ರಾಜಕಾರಣದ ಪ್ರವೃತ್ತಿಗಳನ್ನು ಪ್ರದರ್ಶಿಸಿರುವುದು ಇಬ್ಬರೂ ದಕ್ಷಿಣ ಭಾರತದಲ್ಲಿ ಪ್ರಭುತ್ವವನ್ನು ಸ್ಥಾಪಿಸಲು ಸ್ಪರ್ಧಿಸಿದರು. ರಾಜಕೀಯ ಪ್ರಭುತ್ವವು ಇಬ್ಬರಿಗೂ ಹೊಸದಾಗಿತ್ತು. ಆದರೂ ಮುಂದಿನ ಪೀಳಿಗೆಯ ಮೇಲೆ ಮುದ್ರೆಯನ್ನು ಒತ್ತುವಂತಹ ಅಪರೂಪದ ಸಾಮರ್ಥ್ಯಗಳನ್ನು ಇಬ್ಬರೂ ಹೊಂದಿದ್ದರು. ಆದರೆ ಅದು ಎರಡು ಭಿನ್ನವಾದ ಹಿತಗಳ ನಡುವೆ ನಡೆದ ಸಂಘರ್ಷ. ಒಂದು ಭಾರತೀಯ, ಇನ್ನೊಂದು ಯುರೋಪಿಯನ್, ಒಂದು ಕ್ಷೀಣಿಸಿದ ಶಕ್ತಿಗಳ ಅವಶೇಷಗಳ ನಡುವಿನಿಂದ ಮೇಲೆದ್ದು ಬಂದದ್ದು; ಇನ್ನೊಂದು ಸಮುದ್ರದಾಚೆನಿಂದ ಬಂದ, ಬಲವಾದ ರಾಷ್ಟ್ರೀಯ ವಿಚಾರಗಳಿಂದ. ಸುಧಾರಿತ ಯುದ್ಧ ವಿಧಾನ, ರಾಜಕಾರಣದ ಜಾಣತನದ ತಂತ್ರಗಾರಿಕೆಗಳಿಂದ ಒಂದು ಸುಧಾರಿತ ಸಮಾಜದ ಮಧ್ಯದಿಂದ ಹರಿದು ಬಂದದ್ದು, ಆದರೇನು ಈಸ್ಟ್ ಇಂಡಿಯಾ ಕಂಪನಿಯ ಕೇಂದ್ರ ಕಛೇರಿಯಿದ್ದ ಲಂಡನ್ನಿನ ಲೀಡನ್ ಹಾಲ್ ರಸ್ತೆಯು ನಡುಗಿ ತಲ್ಲಣಗೊಳ್ಳುವಂತೆ ಮಾಡಿದ ಕೀರ್ತಿಯು ಹೈದರನಿಗೆ ಸಲ್ಲುತ್ತದೆ(ಬಾಶಮ್ ೧೯೬೪:೬೩).

ಹೈದರ್‌ನೊಂದಿಗೆ ಇಂಗ್ಲಿಶರ ವಿರಸ ಬೆಳೆಯಲು ಇದ್ದ ಕಾರಣಗಳು ಹಲವು ತೆರನಾದವು. ಅವುಗಳಲ್ಲಿ ಮುಖ್ಯವಾದವು ಇವು; ಮೈಸೂರು ಆಯಕಟ್ಟಿನ ಸ್ಥಳ; ದಕ್ಷಿಣದಲ್ಲಿ ಮರಾಠರು ವಿಸ್ತಾರಗೊಳ್ಳುತ್ತಿದ್ದುದು; ಕರ್ನಾಟಕದ ನವಾಬನ ದುರಾಸೆ ಮೈಸೂರಿಗೂ ಮದ್ರಾಸಿಗೂ ನಡುವೆ ಇದ್ದ ಗಡಿ ವಿವಾದಗಳು. ಹೈದರನು ಫ್ರೆಂಚರೊಂದಿಗೆ ಮಧುರವಾದ ಸಂಬಂಧಗಳನ್ನು ಇಟ್ಟುಕೊಂಡಿದ್ದುದು ಮತ್ತು ಅವನದೇ ವಿಶಿಷ್ಟ ಸಾಮರ್ಥ್ಯಗಳು ಅವು ಇತರರಿಂದ ಅವನನ್ನು ಬೇರೆಯೇ ಆಗಿ ಮಾಡಿದ್ದುವು. ಸಮೃದ್ಧ ಸಂಪನ್ಮೂಲಗಳಿಂದ ತುಂಬಿದ ಮೈಸೂರು ರಾಜ್ಯವು ನಟ್ಟನಡುವೆ ಇದ್ದು, ಎಲ್ಲ ಕಡೆಯಿಂದಲೂ ಇತರರ ಕೆಂಗಣ್ಣು ಅದರ ಮೇಲೆ ಬೀಳುತ್ತಿತ್ತು.

ನಿಜಾಮ, ಮರಾಠ, ಇಂಗ್ಲಿಶರು ಎಲ್ಲರೂ ಈ ಪ್ರದೇಶದ ಪ್ರಭುತ್ವವನ್ನು ಗಳಿಸಲು ಹಾತೊರೆಯುತ್ತಿದ್ದರು. ಹೈದರನು ಅವರೆಲ್ಲರನ್ನೂ ಎದುರಿಸಬೇಕಾಗಿತ್ತು. ಎರಡನೆಯದಾಗಿ ಮೈಸೂರು ಬಹಳ ಹಿಂದಿನಿಂದಲೂ, ಷಾಹಜಿ ಮತ್ತು ಶಿವಾಜಿಯವರ ಕಾಲದಿಂದಲೂ ಮರಾಠರ ಬೇಟೆಯ ಪ್ರದೇಶವಾಗಿತ್ತು. ಮೂರನೆಯದಾಗಿ ಕರ್ನಾಟಕ ಪ್ರಾಂತ್ಯದ ನವಾಬ ಮಹಮ್ಮದ್ ಆಲಿಯು ದುಷ್ಟತನದ ಮೂಲಕ ನೆಲೆಯಾಗಿದ್ದನು. ಹೈದರ್‌ನ ಮೇಲೆ ಇಂಗ್ಲಿಶರನ್ನು ಯುದ್ಧಕ್ಕೆ ಎಳೆಯಲು ಯಾವುದೇ ಒಂದು ಅವಕಾಶವನ್ನು ಅವನು ಬಿಡುತ್ತಿರಲಿಲ್ಲ. ಅವನ ಸೈನ್ಯ ಶಕ್ತಿಯು ಅವನ ದುರಾಸೆಗೆ ಸಮನಾಗುವಷ್ಟಿರಲಿಲ್ಲ. ಹಾಗಾಗಿ ಕುಟಿಲ ತಂತ್ರಗಾರಿಕೆಯಿಂದ, ದುಷ್ಟ ಯೋಜನೆಗಳಿಂದ, ಕುತಂತ್ರದಿಂದ ಆ ಕೊರತೆಯನ್ನು ತುಂಬಿಕೊಳ್ಳಲು ಬಯಸುತ್ತಿದ್ದನು.

ನಾಲ್ಕನೆಯದಾಗಿ ಹಲವಾರು ಗಡಿ ವಿವಾದಗಳು ಇಂಗ್ಲಿಶರೊಂದಿಗೆ ಹೈದರನಿಗಿದ್ದ ಸಂಬಂಧಗಳಿಗೆ ಹುಳಿಹಿಂಡಿದ್ದವು. ಪೂರ್ವ ಮತ್ತು ಪಶ್ಚಿಮ ಕರಾವಳಿಗಳಲ್ಲಿ ಇಂಗ್ಲಿಶ್ ವಸಾಹತುಗಳು ಒಂದು ರೀತಿಯಲ್ಲಿ ಮೈಸೂರನ್ನು ಸುತ್ತುವರಿದಿದ್ದವು ಎಂದೇ ಹೇಳಬಹುದು. ಹೈದರನು ಮಲಬಾರನ್ನು ಗೆದ್ದು ಅವರ ತಲಚೇರಿಯ ಫ್ಯಾಕ್ಟರಿಯ ಸನಿಹಕ್ಕೆ ಬಂದನು. ಅಲ್ಲಿ ಅವರು ಹೈದರನ ವಿರುದ್ಧವಾಗಿ ನಾಯಕರು ಬಂಡಾಯವೇಳುವಂತೆ ಪ್ರಚೋದಿಸಿದರು. ಪಶ್ಚಿಮ ಕರಾವಳಿಯು ಅವರ ವಶವಾದದ್ದು ಇಂಗ್ಲಿಶರಿಗೆ ಭಾರೀ ಹಿನ್ನಡೆಯಾಯಿತು. ಏಕೆಂದರೆ ಅಲ್ಲಿಂದ ಅವರು ಒಳನಾಡಿನ ಸಂಬಾರ ಪದಾರ್ಥಗಳ ಸಮಗ್ರ ವ್ಯಾಪಾರವನ್ನು ನಿರ್ವಹಿಸುತ್ತಿದ್ದರು. ಅಲ್ಲದೇ ಕರಾವಳಿಯನ್ನು ಗೆದ್ದುಕೊಂಡದ್ದು ಹೈದರನು ಅಲ್ಲಿ ತನ್ನ ನೌಕಾ ಬಲವನ್ನು ಕಟ್ಟಲು ಸಹಾಯವಾಯಿತು. ಅದೂ ಅವರಿಗೆ ಭಾರೀ ತಲೆನೋವು ಉಂಟುಮಾಡಿತು. ಅಲ್ಲಿಂದ ಹೈದರ್‌ನು ತನ್ನ ಮಿತ್ರರಾದ ಫ್ರೆಂಚರೊಂದಿಗೆ ನೇರವಾಗಿ ಸಂಪರ್ಕ ಪಡೆಯಲು ದೂರದೂರದ ಪ್ರದೇಶಗಳ ಸಂಬಂಧ ಬೆಳೆಸಲು ಅನುಕೂಲವಾಯಿತು. ಇನ್ನು ಪೂರ್ವದಲ್ಲಿ, ಸೇನಾ ತುಕಡಿಗಳು ಮಾಯವಾಗುವುದು, ದನಕರುಗಳನ್ನು ಅಪಹರಿಸುವುದು, ಗಡಿ ಪ್ರದೇಶಗಳ ಮೇಲೆ ದಾಳಿ, ಪಾಳೆಯಗಾರರ ಕಿರುಕುಳ ಇವೆಲ್ಲವೂ ಹೈದರನ ಉದ್ದೇಶವನ್ನು ಇಂಗ್ಲಿಶರಿಗೆ ನಿರಂತರವಾಗಿ ಮನವರಿಕೆ ಮಾಡಿಕೊಡುತ್ತಿದ್ದವು. ಇವುಗಳನ್ನೇ ನೆಪವಾಗಿ ಬಳಸಿಕೊಂಡು ನವಾಬರು ಇಂಗ್ಲಿಶರನ್ನು ಹೈದರ್‌ನ ಮೇಲೆ ಎತ್ತಿಕಟ್ಟುತ್ತಿದ್ದನು(ಬಾಶಮ್೧೯೬೪:೮೨-೯೪).

೧೭೬೧ರಲ್ಲಿ ಪಾಂಡಿಚೆರಿಯ ಪತನವಾದಾಗಿನಿಂದ ೧೭೬೭ರಲ್ಲಿ ಮೈಸೂರು ಯುದ್ಧ ಘಟಿಸುವವರೆಗೆ ಕರ್ನಾಟಕ ಪ್ರಾಂತ್ಯದಲ್ಲಿ ಶಾಂತಿ ನೆಲೆಸಿತ್ತು. ಉತ್ತರ ಭಾರತದ ಹಲವು ಪ್ರದೇಶಗಳನ್ನು ಮೊಗಲರು ಕಂಪನಿಗೆ ಮಂಜೂರು ಮಾಡಿದ್ದು, ಮಾಧವರಾಯನು ಹೈದರನ ವಿರುದ್ಧವಾಗಿ ನಿಜಾಮನೊಂದಿಗೆ ಮಾಡಿಕೊಂಡ ರಹಸ್ಯ ಮೈತ್ರಿ, ಹೈದರನು ಬಿದನೂರನ್ನೂ ಮಲಬಾರನ್ನೂ ಗೆದ್ದರೂ ನಿಜಾಮನು ಆರ್ಕಾಟಿನ ಸನ್ನದನ್ನು ಹೈದರನಿಗೆ ನೀಡಿದ್ದು ಇದು ಮೊದಲನೇ ಆಂಗ್ಲೋ ಮೈಸೂರು ಯುದ್ಧಕ್ಕೆ ಕಾರಣವಾಯಿತು. ಅಂತಿಮವಾಗಿ ಹೈದರನು ಅವರು ರಚಿಸಿಕೊಂಡಿದ್ದ ಮೈತ್ರಿಕೂಟದ ವಿರುದ್ಧ ಏಕಾಂಗಿಯಾಗಿ ಅವನು ಅವರೆಲ್ಲರನ್ನೂ ದಿಕ್ಕುಗೆಡಿಸಿದನು(ಅಗರವಾಲ್, ಸಿಂಗ್೧೯೬೩:೬೮,೭೩).

ಸೋತ ಬ್ರಿಟಿಶರು ಹೈದರ್‌ನೊಂದಿಗೆ ಏಪ್ರಿಲ್-೪, ೧೭೬೯ರಂದು ಮದ್ರಾಸ್ ಒಪ್ಪಂದ ಮಾಡಿಕೊಂಡರು. ಅದರಂತೆ ೧ನೇ ಆಂಗ್ಲೋ-ಮೈಸೂರು ಯುದ್ಧ ಅಂತ್ಯಗೊಂಡಿತು. ಅದರ ಕರಾರುಗಳು ಇಂತಿವೆ.

೧. ಗೆದ್ದ ಪ್ರದೇಶಗಳನ್ನು ಪರಸ್ಪರ ಪುನಃ ಮರಳಿಕೊಡುವುದು.

೨. ಯುದ್ಧ ಕೈದಿಗಳ ವಿನಿಮಯ ಮಾಡಿಕೊಳ್ಳುವುದು.

೩. ಬ್ರಿಟಿಶರು ಹೈದರನಿಗೆ ಯುದ್ಧ ವೆಚ್ಚ ಕೊಡುವುದು.

೪. ಹೈದರನು ಕರೂರು ಜಿಲ್ಲೆಯನ್ನು ಆರ್ಕಾಟಿನ ನವಾಬನಿಗೆ ಕೊಡುವುದು.

೫. ಮರಾಠರು ಮೈಸೂರಿನ ಮೇಲೆ ದಾಳಿ ಮಾಡಿದರೆ ಬ್ರಿಟಿಶರು ಅವನ ಸಹಾಯಕ್ಕೆ ಧಾವಿಸುವುದು.

ಹೀಗೆ ಭಾರತದ ಮಣ್ಣಿನ ಮೇಲೆ ಅಜೇಯರಾಗಿದ್ದ 'ಬ್ರಿಟಿಶರನ್ನು ಸೋಲಿಸಿದ ಮೊದಲ ದೇಶಿಯ ರಾಜ' ಎಂಬ ಕೀರ್ತಿಗೆ ಹೈದರಾಲಿ ಪಾತ್ರನಾದನು.

೧೭೮೦-೮೪ರ ಕಾಲದಲ್ಲಿ ಎರಡನೇ ಆಂಗ್ಲೋ ಮೈಸೂರು ಯುದ್ಧ ಮಾಡುತ್ತಿದ್ದಾಗ ಹೈದರನು ಚಿತ್ತೂರು ಬಳಿಯ ನರಸಿಂಗರಾಯನ ಪೇಟೆಯಲ್ಲಿ ಡಿಸೆಂಬರ್ ೭, ೧೭೮೨ರಂದು ಹೋರಾಡುತ್ತಲೇ ನಿಧನನಾದನು. ನಂತರ ಅವನ ಮಗ ಟಿಪ್ಪು ಸುಲ್ತಾನ್ ಯುದ್ಧ ಮುಂದುವರಿಸಿ ಅಂತಿಮವಾಗಿ ಸ್ಥಳೀಯ ಪಾಳೆಯಗಾರರ ಮೋಸದಿಂದ ಸೋಲನ್ನು ಕಂಡನು. ೧೭೮೪ ಮಾರ್ಚ್ ೧೧ರಂದು 'ಮಂಗಳೂರು ಒಪ್ಪಂದ' ಮೂಲಕ ಯುದ್ಧ ಕೊನೆಗೊಂಡಿತು(ಷೇಕ್‌ಅಲಿ,೫,೨೦೧೮, :೧೮೩,-೧೯೨).

ಟಿಪ್ಪು ಸುಲ್ತಾನನ ಇಡೀ ಆಳ್ವಿಕೆಯಲ್ಲಿ ಇಂಗ್ಲಿಶರೊಂದಿಗೆ ಅವನು ಹೊಂದಿದ್ದ ಅಹಿತಕರ ಸಂಬಂಧವೇ ಪ್ರಧಾನವಾಗಿದೆ. ಅವನು ಆಳಿದ್ದು ಹದಿನೇಳು ವರ್ಷ. ಆ ಅವಧಿಯಲ್ಲಿ ಇಂಗ್ಲಿಶರೊಂದಿಗೆ ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೊ ಸಂಘರ್ಷವಿರದ ಒಂದೇ ಒಂದು ವರ್ಷವೂ ಇರಲಿಲ್ಲ. ಮೊದಲ ಎರಡು ವರ್ಷಗಳು ಅವರ ವಿರುದ್ಧ ತನ್ನ ತಂದೆಯು ಪ್ರಾರಂಭಿಸಿದ್ದ ಯುದ್ಧಾಚರಣೆಯನ್ನು ಮುಂದುವರಿಸಿ ಕೊನೆಗೆ ಮಂಗಳೂರು ಒಪ್ಪಂದದೊಂದಿಗೆ ಅದನ್ನು ಯಶಸ್ವಿಯಾಗಿ ಮುಗಿಸುವುದರಲ್ಲಿ ಕಳೆದು ಐದು ವರ್ಷಗಳು ಇನ್ನೂ ಕಳೆದಿರಲಿಲ್ಲ. ಅಷ್ಟರಲ್ಲಿ ಮತ್ತೆ ೧೭೮೯ರಲ್ಲಿ ಯುದ್ಧವು ಕೈಗಟ್ಟಿತು. ಅದು ಟಿಪ್ಪುವಿನ ಪಾಲಿಗೆ ತುಂಬಾ ಹಾನಿಕಾರಕವಾಯಿತು. ಯುದ್ಧದಲ್ಲಿ ಸೋತು, ಅರ್ಧದಷ್ಟು ರಾಜ್ಯವನ್ನೇ ಕಳೆದುಕೊಳ್ಳಬೇಕಾಯಿತು. ಈ ಆಘಾತವು ಎಷ್ಟು ಗಂಭೀರವಾಗಿದ್ದಿತೆಂದರೆ, ಮುಂದಿನ ಐದಾರು ವರ್ಷಗಳ ಕಾಲ ಮತ್ತೆ ಮತ್ತೆ ಯುದ್ಧದ ಕಾರ್ಮೋಡಗಳು ಕವಿದು ಅವನ ಅಸ್ತಿತ್ವಕ್ಕೆ ಸಂಚಕಾರ ಬರುವಂತಾಯಿತು. ಕೊನೆಗೆ ೧೭೯೯ರಲ್ಲಿ ಅವನ ದುರಂತ ಪತನ ಸಂಭವಿಸಿತು.

ಮಂಗಳೂರು ಒಪ್ಪಂದದಿಂದ ಟಿಪ್ಪುವಿಗೂ ಇಂಗ್ಲಿಶರಿಗೂ ಇದ್ದ ಸಂಬಂಧಗಳು ಸುಧಾರಿಸುತ್ತವೆ ಎಂದು ನಿರೀಕ್ಷಿಸುವುದೇ ಸಾಧ್ಯವಿರಲಿಲ್ಲ. ಅದು ಹೀನಾಯಕರವಾದ ಸಂಧಿ ಎಂದು ಹೇಸ್ಟಿಂಗ್ಸ್ ಅದನ್ನು ದೂಷಿಸಿದನು. ಟಿಪ್ಪು ಸುಲ್ತಾನನ ವಿರುದ್ಧವಾಗಿ ಬಹು ಸಮರ್ಥವಾದ ವಿರೋಧಿ

ಒಕ್ಕೂಟವನ್ನು ರೂಪಿಸಿದುದನ್ನು ನೋಡುತ್ತೇವೆ. ಅದು ಟಿಪ್ಪುವಿಗೆ ಗಂಡಾಂತರಕಾರಿಯಾಯಿತು. ಅವನ ಪತನಕ್ಕಾಗಿ ಇಂಗ್ಲಿಶರು ಅವನ ಮೂವರು ಶತ್ರುಗಳ ಏಕಮುಖ ಪ್ರಯತ್ನವನ್ನು ಸಂಯೋಜಿಸವುದರಲ್ಲಿ ಸಮರ್ಥರಾದರು. ೧೭೮೯ರಿಂದ ರಾಜಕೀಯ ಆಗಸದಲ್ಲಿ ಮತ್ತೆ ಯುದ್ಧದ ದಟ್ಟ ಕಾರ್ಮೋಡಗಳು ಕವಿದದ್ದನ್ನು ನೋಡುತ್ತೇವೆ. ಪುಣೆ ಮತ್ತು ಹೈದರಾಬಾದ್ ಆ ಸ್ಥಾನಗಳಲ್ಲಿ ಇಂಗ್ಲಿಶರು ನಡೆಸಿದ್ದ ಒಳಸಂಚು ಅದಕ್ಕೆ ಕಾರಣ. ಯುದ್ಧವು ಆರಂಭವಾಗಲು ತತ್‌ಕ್ಷಣದ ನೆರವು ತಿರುವಾಂಕೂರಿನಿಂದ ಬಂದಿತು. ಭಾರತ ಪರ್ಯಾಯದ್ವೀಪದ ದಕ್ಷಿಣದ ತುತ್ತತುದಿಯ ಒಂದು ಸಣ್ಣ ರಾಜ್ಯ ತಿರುವಾಂಕೂರು ಡಚ್ಚರ ಮೈತ್ರಿಸಂಬಂಧ ಅದಕ್ಕಿದ್ದಿತು(ಲಾರೆನ್ಸ ೧೯೯೨:೫೮).

ಹೈದರನ ಕಾಲದಿಂದಲೇ ತಿರುವಾಂಕೂರಿನೊಂದಿಗೆ ಮೈಸೂರಿನ ಸಂಬಂಧ ಬಿಗಿಯಾಗಿತ್ತು. ಹೈದರನು ತನ್ನನ್ನು ಆಕ್ರಮಿಸಬಹುದೆಂಬ ಭೀತಿಯಿಂದ ಅಲ್ಲಿನ ರಾಜ ರಾಮವರ್ಮನು ಗಡಿ ಪ್ರದೇಶದಲ್ಲಿದ್ದ ತನ್ನ ಸೇನೆಯನ್ನು ಬಲಪಡಿಸಿದ್ದನು. ಅವನು ಇಂಗ್ಲಿಶರ ನೆರವು ಕೋರಿದನು. ದಂಗೆಕೋರ ನಾಯಕರಿಗೆ ಆಶ್ರಯ ನೀಡಿದನು. ಇದರಿಂದ ಹೈದರನ ಆಗ್ರಹಕ್ಕೆ ತುತ್ತಾಗಿದ್ದನು. ಸಾಲದ್ದಕ್ಕೆ ಎರಡನೆಯ ಮೈಸೂರು ಯುದ್ಧದಲ್ಲಿ ರಾಮವರ್ಮನು ಇಂಗ್ಲಿಶರಿಗೆ ಬೆಂಬಲ ನೀಡಿದ್ದನು. ಟಿಪ್ಪುವು ಕರ್ನಾಟಕ್‌ದ ಮೇಲೆ ಯುದ್ಧಕ್ಕೆ ಬರುವ ಉದ್ದೇಶ ಹೊಂದಿದ್ದಾನೆ ಎಂದು ನೆಪವನ್ನು ಕೊಟ್ಟು ೧೭೮೩ರಲ್ಲಿ ರಾಮವರ್ಮನು ಅವರಿಂದ ಎರಡು ಬೆಟಾಲಿಯನ್ ಸೇನೆಯನ್ನು ತರಿಸಿಕೊಂಡನು, ಇನ್ನು ಹೆಚ್ಚಿನ ನೆರವು ಕಳುಹಿಸುವ ಭರವಸೆಯನ್ನು ಅವರಿಂದ ಪಡೆದನು. ಮಲಬಾರ್ ನಾಯಕರನ್ನು ಟಿಪ್ಪುವಿನ ವಿರುದ್ಧ ದಂಗೆಯೇಳುವಂತೆ ಪ್ರಚೋದಿಸಿದ್ದೇ ಅಲ್ಲದೇ, ಅವನ ಆಶ್ರಿತನಾಗಿದ್ದ ಕೋಳೂರು ನಾಯಕನ ರಾಜ್ಯವು ತನಗೆ ಸೇರಬೇಕು ಎಂದು ವ್ಯಾಜ್ಯ ಹೂಡಿದನು(ಷೇಕ್‌ಅಲಿ೨೦೧೮ :೪೪೧-೪೪೨).

ರಾಜ ರಾಮವರ್ಮನ ಈ ಪಿತೂರಿಯಿಂದ ೩ನೇ ಆಂಗ್ಲೋ ಮೈಸೂರು ಯುದ್ಧ ಘಟಿಸಿತು. ಈ ಯುದ್ಧದಲ್ಲಿ ಬ್ರಿಟಿಶರ ಮೈತ್ರಿ ಪಡೆಗೆ ಟಿಪ್ಪು ಸೋಲಬೇಕಾಯಿತು. ಸೋತ ಟಿಪ್ಪು ಮಾರ್ಚ್ ೨೨ ೧೭೯೨ರಂದು ಶ್ರೀರಂಗಪಟ್ಟಣ ಒಪ್ಪಂದಕ್ಕೆ ಸಹಿ ಹಾಕಿದನು. ಅದರಂತೆ:

೧. ಟಿಪ್ಪು ತನ್ನ ಅರ್ಧರಾಜ್ಯವನ್ನು ಬ್ರಿಟಿಶರಿಗೆ ಬಿಟ್ಟುಕೊಟ್ಟನ್ನು ಯುದ್ಧ ವೆಚ್ಚವಾಗಿ ೩ ಕೋಟಿ ರೂ. ಕೊಡಬೇಕಾಯಿತು. ಅವನಲ್ಲಿ ಅಷ್ಟು ಹಣವಿಲ್ಲದೆ ತನ್ನ ಇಬ್ಬರು ಮಕ್ಕಳಾದ ಅಬ್ದುಲ್ ಕಾರಿಬ್ ಮತ್ತು ಮುಜಾಉದ್ದೀನ್‌ರನ್ನು ಬ್ರಿಟಿಶರಿಗೆ ಒತ್ತೆ ಇಟ್ಟನು.

೨. ಟಿಪ್ಪುವಿನ ರಾಜ್ಯದ ಮಲಬಾರ್, ಕೊಡಗು, ದಿಂಡಿಗಲ್ ಮತ್ತು ಬಾರಮಹಲ್‌ಗಳನ್ನು ಬ್ರಿಟಿಶರು, ಕೃಷ್ಣ ಮತ್ತು ತುಂಗಭದ್ರಾ ನದಿಗಳ ನಡುವಿನ ಪ್ರದೇಶವನ್ನು ಮರಾಠರೂ ಮತ್ತು ಬಳ್ಳಾರಿ ಕಡಪ ಜಿಲ್ಲೆಗಳನ್ನು ನಿಜಾಮರೂ ಹಂಚಿಕೊಂಡರು.

೩. ಬ್ರಿಟಿಶರ ಯುದ್ಧ ಕೈದಿಗಳನ್ನು ಬಿಡುಗಡೆ ಮಾಡಲು ಟಿಪ್ಪು ಒಪ್ಪಿಕೊಂಡನು.

೪. ಬ್ರಿಟಿಶರು ಕೊಡಗು ರಾಜನ ಮೇಲೆ ಪರಮಾಧಿಕಾರ ಪಡೆದರು. ಟಿಪ್ಪು ಕೊಡಗು ರಾಜನಿಗೆ ಸ್ವಾತಂತ್ರ್ಯ ನೀಡುವುದು.

೫. ಈ ಒಪ್ಪಂದದಿಂದ ಟಿಪ್ಪುವಿಗೆ ಭಾರಿ ನಷ್ಟವಾಯಿತಲ್ಲದೆ ಅವನ ಘನತೆ, ಪ್ರತಿಷ್ಠೆ, ಸ್ವಾಭಿಮಾನಕ್ಕೆ ಭಾರಿ ಪೆಟ್ಟಾಯಿತು.

ಟಿಪ್ಪುವನ್ನು ಸುಲಭವಾಗಿ ಸೋಲಿಸಲು ಸಾಧ್ಯವಿದ್ದರೂ ಅವನೊಡನೆ ಒಪ್ಪಂದ ಮಾಡಿಕೊಂಡ ಕಾರನ್‌ವಾಲೀಸ್‌ನ ಕ್ರಮವನ್ನು ಹಲವು ಲೇಖಕರು ಖಂಡಿಸಿದ್ದಾರೆ(ಲಾರೆನ್ಸ್ ೧೯೯೨:೮೬).

ನಾಲ್ಕನೇ ಆಂಗ್ಲೋ ಮೈಸೂರು ಯುದ್ಧವು ಭಾರತದ ಚರಿತ್ರೆಯಲ್ಲಿ ಹೊಸ ಬದಲಾವಣೆಗೆ ಕಾರಣವಾಯಿತು. ೧೭೯೯ರಲ್ಲಿ ಟಿಪ್ಪು ಬ್ರಿಟಿಶರ ವಿರುದ್ಧ ಜೂನ್ ೨೨ರ ವೇಳೆಗೆ ಯುದ್ಧ ಮುಗಿದು ಟಿಪ್ಪು ಬ್ರಿಟಿಶರ ವಿರುದ್ಧ ಹೋರಾಡುತ್ತಾನೆ. ಟಿಪ್ಪು ಯುದ್ಧಭೂಮಿಯಲ್ಲಿ ಮರಣ ಹೊಂದಿದನು. ಅಂತಿಮವಾಗಿ ಮೈಸೂರು ರಾಜ್ಯವನ್ನು ೪ ಭಾಗಗಳಾಗಿ ಹಂಚಲಾಯಿತು. ಅದರಲ್ಲಿ ಒಂದು ಭಾಗ ಸಹಾಯಕ ಸೈನ್ಯ ಪದ್ಧತಿಗೆ ಸಹಿ ಮಾಡಿದ ೩ನೇ ಕೃಷ್ಣರಾಜ ಒಡೆಯರಿಗೆ ನೀಡಲಾಯಿತು(ಉದಯ ೨೦೧೬:೧೦೦-೧೦೫).

ಟಿಪ್ಪುಸುಲ್ತಾನನ ಆಳ್ವಿಕೆಯ ಸಂದರ್ಭದಲ್ಲಿ ಬ್ರಿಟಿಶ್ ವ್ಯಾಪಾರಸ್ಥರು ಸ್ವತಂತ್ರವಾಗಿ ವ್ಯಾಪಾರ ನಡೆಸುವಂತಿರಲಿಲ್ಲ. ಟಿಪ್ಪು ಬ್ರಿಟಿಶರೊಂದಿಗೆ ಹೊಂದಿದ್ದ ವ್ಯಾಪಾರವನ್ನು ಸಂಪೂರ್ಣವಾಗಿ ನಿಷೇಧಿಸಿ ಸರಕಾರಿ ವಾಣಿಜ್ಯ ಇಲಾಖೆಯನ್ನು ರಾಜ್ಯದ ಆಂತರಿಕ ಮತ್ತು ವಿದೇಶಿ ವ್ಯಾಪಾರದ ಅಭಿವೃದ್ಧಿಗಾಗಿ ಸ್ಥಾಪಿಸಿ ಅದರ ಕಾರ್ಯನಿರ್ವಹಣೆಗೆ ಪೂರ್ಣಾಧಿಕಾರದ ಪ್ರತಿನಿಧಿಮಂಡಳಿಯನ್ನು ನೇಮಿಸಿದನು. ಪ್ರಮುಖ ನಗರಕೇಂದ್ರಗಳಲ್ಲಿ ಸರಕಾರಿ ಸ್ವಾಮ್ಯಕ್ಕೊಳಪಟ್ಟ ಅಂಗಡಿಗಳನ್ನು ತೆರೆದು ಗ್ರಾಹಕರ ಅನುಕೂಲಕ್ಕೆ ಸರಕುಗಳನ್ನು ಚಿಲ್ಲರೆಯಾಗಿ ಮಾರಾಟ ಮಾಡುವ ವ್ಯವಸ್ಥೆಯನ್ನು ಜಾರಿಗೊಳಿಸಿದನು. ಈ ಅಂಗಡಿಗಳು ಸಾರ್ವಜನಿಕರಿಂದ ಠೇವಣಿಗಳನ್ನು ಸ್ವೀಕರಿಸುವುದರ ಜೊತೆಗೆ ಸರಕಾರಕ್ಕೆ ಸಲ್ಲಿಸಬೇಕಾದ ತೆರಿಗೆಯನ್ನು ಸಲ್ಲಿಸುತ್ತಿದ್ದವು. ಗುಜರಾತ್ ರಾಜ್ಯದ ಮುಂಧ್ರ ಮತ್ತು ಮಾಂಡಲಿ ನಗರಗಳಲ್ಲಿ ಸಿಂಧ್‌ನಲ್ಲಿರುವ ಕರಾಚಿ, ಪೂರ್ವ ಏಷ್ಯಾದ ಜೆಡ್ಡಾ ಮತ್ತು ಇತರ ಮುಖ್ಯ ನಗರಗಳಲ್ಲಿ ವ್ಯಾಪಾರ ಕೇಂದ್ರಗಳನ್ನು ಸ್ಥಾಪಿಸಿ ವಿದೇಶಿ ವ್ಯಾಪಾರಕ್ಕೆ ಪ್ರೋತ್ಸಾಹ ನೀಡಿದನು. ಟಿಪ್ಪುವಿನ ಆಳ್ವಿಕೆಯ ಕಾಲದಲ್ಲಿ ತಂಬಾಕು, ಕಬ್ಬಿಣ, ಮೆಣಸು ಮತ್ತು ಶ್ರೀಗಂಧದ ಮರಗಳು ಇವು ಸರಕಾರಿ ಸ್ವಾಮ್ಯಕ್ಕೊಳಪಟ್ಟ ವಸ್ತುಗಳಾಗಿದ್ದವು. ಇವುಗಳನ್ನು ಸಾರ್ವಜನಿಕರಿಂದ ಸರಕಾರ ಮಾತ್ರ ಖರೀದಿಸಬೇಕಿತ್ತು. ಟಿಪ್ಪುವಿನ ಈ ನೀತಿ ಬ್ರಿಟಿಶ್ ವರ್ತಕರಲ್ಲಿ ಅಸಮಾಧಾನವನ್ನುಂಟು ಮಾಡಿತು. ಬ್ರಿಟಿಶ್ ವ್ಯಾಪಾರವನ್ನು ಮೈಸೂರು ರಾಜ್ಯದಲ್ಲಿ ಕುಂಠಿತಗೊಳಿಸುವುದು ಹಾಗೂ ಆ ಮೂಲಕ ಆರ್ಥಿಕವಾಗಿ ಅವರಿಗೆ ಹಿನ್ನಡೆಯುಂಟಾಗುವಂತೆ ಮಾಡುವುದು ಟಿಪ್ಪುವಿನ ಉದ್ದೇಶವಾಗಿತ್ತು. ಟಿಪ್ಪುವಿನ ಈ ಪ್ರಯತ್ನಗಳು ಬ್ರಿಟಿಶರಿಗೆ ತಾತ್ಕಾಲಿಕವಾಗಿ ಕೆಲವೊಂದು ಸಮಸ್ಯೆಗಳನ್ನು ಉಂಟು ಮಾಡಿದರೂ, ಅದರಿಂದ ಹೊರಬರಲು ಅವರೇನೂ ಹೆಚ್ಚು ಸಮಯ ಕಾಯಬೇಕಾಗಿರಲಿಲ್ಲ (ರೈ ೨೦೦೭:೨೫-೨೬). ಟಿಪ್ಪುವಿನ ನಂತರ ರಾಣಿ ಲಕ್ಷ್ಮಮ್ಮಣ್ಣಿ ಆಕೆಯ ಪ್ರತಿನಿಧಿ ತಿರುಮಲರಾವ್‌ರು ಮೈಸೂರು ಒಡೆಯರ ಆಳ್ವಿಕೆಯನ್ನು ಪುನರ್ ಸ್ಥಾಪನೆ ಮಾಡಲು ೧ ಕೋಟಿ ರೂ. ನೀಡುವುದಾಗಿ ಬ್ರಿಟಿಶರಿಗೆ ಪತ್ರ ಬರೆದಿದ್ದರು.

**೧೭೬೨ನೇ ಇಸವಿ ಅಕ್ಟೋಬರ್ ೨೮ರಂದು ಮೈಸೂರಿನ ಒಡೆಯರ್ ರಾಜವಂಶದ ಮಹಾರಾಣಿ ಲಕ್ಷ್ಮಮ್ಮಣ್ಣಿಯವರಿಗೂ ಮತ್ತು ಇಂಗ್ಲಿಶರಿಗೂ ನಡೆದ ಕರಾರಿನ ಪ್ರತಿ ರಾಣಿಯು ಮಾಡಿಕೊಂಡ ಕರಾರಿನ ಒಪ್ಪಂದಗಳು ಈ ಕೆಳಗಿನಂತಿವೆ.**

| | ಮಹಾರಾಣಿಯವರ ಸವಾಲ್ | ಇಂಗ್ಲಿಶರ ಜವಾಬು |
|---|---|---|
| ೧. | ಹೈದರ್ ನಾಯಕನು ನಮ್ಮ ಯಜಮಾನರ ರಾಜ್ಯವನ್ನು ಅನ್ಯಾಯವಾಗಿ ಆಕ್ರಮಿಸಿ ಕೊಂಡು ನಮ್ಮ ಯಜಮಾನರು ಮತ್ತು ನಮ್ಮ ಎರಡು ಮಕ್ಕಳನ್ನು ಸಂಹಾರ ಮಾಡಿಬಿಟ್ಟು ಅವರ ಸಂಸಾರವನ್ನು ಸೆರೆಯಲ್ಲಿ ಹಾಕಿಬಿಟ್ಟನು. ಈ ರೀತಿಯಲ್ಲಿ ಇವನು ದ್ರೋಹ ಮಾಡಿದ್ದಾನೆ. ಹೈದರನು ಚಾಕರನಾಗಿದ್ದನೆಂದು ಕುಂಪಣಿ ಯವರು ಚೆನ್ನಾಗಿ ತಿಳಿದಿದ್ದಾರೆ. ಆದ ಕಾರಣ ಈ ದ್ರೋಹಿಯನ್ನು ಜಯಿಸಿ ನಮ್ಮ ರಾಜ್ಯಗಳನ್ನು ನಮಗೆ ಕೊಡಿಸಬೇಕೆಂದು ಇಂಗ್ಲಿಶ್ ಜನಗಳನ್ನು ನಾವು ಬೇಡಿಕೊಳ್ಳುತ್ತೇವೆ. | ಹೈದರನ ಮಹೀಶೂರ ದೊರೆಗಳ ಚಾಕರನಾಗಿದ್ದುಕೊಂಡು ರಾಜ್ಯವನ್ನು ಅಪಹರಿಸಿಕೊಂಡು ದೊರೆಗಳಿಗೂ ಅವರ ಮನೆತನಕ್ಕೂ ಹಿಂಸೆಯನ್ನು ಮಾಡಿದನೆಂಬುವುದನ್ನು ಕುಂಪಣಿಯವರು ತಿಳಿದುಕೊಂಡಿದ್ದಾರೆ. ಇಂಗ್ಲಿಶರು ಮಹಿಶೂರ ರಾಜ್ಯಕ್ಕೆ ಫೌಜನ್ನು ಕಳುಹಿಸಿ ಹೈದರನನ್ನು ಸೋಲಿಸಿದ ನಂತರ ರಾಜಮನೆತನದವರನ್ನು ರಾಜಸ್ಥಾನದಲ್ಲಿ ಇಡುವರು. ಇಂಗ್ಲಿಶ್ ಜನಗಳು ಅಂತರಂಗವಾಗಿ ಕೆಳಗೆ ಕಂಡ ಪ್ರಕಾರ ಸಲಹಾ ಕೊಡುತ್ತಾರೆ. |
| ೨. | ಕುಂಪಣಿಯವರು ಕೊಯಮತ್ತೂರು ಮತ್ತು ಇತರ ದೇಶಗಳನ್ನು ತೆಗೆದುಕೊಂಡು ನಮ್ಮ ಸ್ವಂತ ಅಮಲ್‌ದಾರರನ್ನು ಮತ್ತು ಕಿಲ್ಲೇದಾರರನ್ನು ಆ ರಾಜ್ಯದಲ್ಲಿ ನೇಮಿಸಿದ ಕ್ಷಣವೇ ಕುಂಪಣಿಯವರಿಗೆ ಮೂರು ಲಕ್ಷ ವರಹಗಳನ್ನು ನಾವು ಕೊಡುತ್ತೇವೆ. | ನಾವು ಇದಕ್ಕೆ ಒಪ್ಪಿಕೊಳ್ಳುತ್ತೇವೆ. |
| ೩. | ಇಂಗ್ಲಿಶ್ ಜನಗಳು ಕಣಿವೆ ಮೇಲಕ್ಕೆ ತಮ್ಮ ಸೈನ್ಯಗಳನ್ನು ತೆಗೆದುಕೊಂಡು ಬಂದು ಹರದನಹಳ್ಳಿ ವಿಜಯಪುರಗಳನ್ನು ತೆಗೆದುಕೊಂಡ ತರುವಾಯ ನಾವು ಒಂದು ಲಕ್ಷ ವರಹಗಳನ್ನು ಕೊಡುತ್ತೇವೆ. | ನಾವು ಇದಕ್ಕೆ ಒಪ್ಪಿಕೊಂಡೆವು. |
| ೪. | ಇಂಗ್ಲಿಶ್ ಜನಗಳು ಮಹಿಶೂರ ಕೋಟೆಯನ್ನು ತೆಗೆದುಕೊಂಡು ಅದನ್ನು ನನಗೆ ಅಥವಾ ನನ್ನ ಕಡೇ ಅಧಿಕಾರಿಗಳಿಗೆ ಬಿಡಿಸಿಕೊಟ್ಟನಂತರ ಮತ್ತೊಂದು ಲಕ್ಷ ವರಹಗಳನ್ನು ನಾನು ಕೊಡುತ್ತೇನೆ. | ನಾವು ಇದಕ್ಕೆ ಒಪ್ಪಿಕೊಂಡೆವು. |
| ೫. | ಕುಂಪಿಣಿಯವರು ಶ್ರೀರಂಗಪಟ್ಟಣವನ್ನು ತೆಗೆದುಕೊಂಡು ಅದನ್ನು ನನ್ನ ವಶಕ್ಕೆ | ನಾವು ಇದಕ್ಕೆ ಒಪ್ಪಿಕೊಂಡೆವು |

| | | |
|---|---|---|
| | ಕೊಟ್ಟ ಕೂಡಲೆ ನಾನು ಐದು ಲಕ್ಷ ವರಹಗಳನ್ನು ಕೊಟ್ಟು ಹಾಗೆಯೇ ಹತ್ತು ಲಕ್ಷ ವರಹಗಳವರೆಗೂ ಕೊಡುತ್ತಾ ಇರುವೆನು. | |
| ೬. | ನಾನಾಗಲಿ ಅಥವಾ ನನ್ನ ಹಕ್ಕುದಾರರಾಗಲೀ ಶ್ರೀರಂಗಪಟ್ಟಣದಲ್ಲಿ ರಾಜ್ಯಮಾಡಲ್ಪಟ್ಟಾಗ ನಾನು ಕುಂಪಣಿಯವರಿಗೆ ತಿಂಗಳು ಕಟ್ಟಲೆ ಶಿಸ್ತಿನ ಪ್ರಕಾರ ವರ್ಷಂಪ್ರತಿ ಐದು ಲಕ್ಷ ವರಹಗಳನ್ನು ಪೆಷಕಷ್‌ನ್ನು ಕೊಡುತ್ತೇನೆ ಇದೂ ಅಲ್ಲದೆ ಇಂಗ್ಲಿಶ್ ಜನಗಳು ಅಪೇಕ್ಷಿಸತಕ್ಕ ವರ್ಷಂಪ್ರತಿ ಒಂದು ಲಕ್ಷ ವರಹ ಉತ್ಪತ್ತಿಯಾಗುವ ದೇಶವನ್ನು ಇಂಗ್ಲಿಶ್ ಜನಗಳಿಗೆ ಬಿಟ್ಟುಕೊಡುತ್ತೇನೆ. | ರಾಜ್ಯವನ್ನು ಕಾಪಾಡಿಕೊಂಡು ಈ ಕೆಲಸಕ್ಕಾಗಿ ಸರಿಯಾದ ಸೈನ್ಯವನ್ನು ಇಡುವುದಕ್ಕೆ ನಾವು ಒಪ್ಪಿಕೊಂಡೆವು. |
| ೭. | ಮೇಲ್ಕಂಡಂತೆ ನಾನು ನಡೆದುಕೊಂಡರೆ ನನ್ನ ರಾಜ್ಯವನ್ನು ಕಾಪಾಡಿಕೊಳ್ಳುವುದಕ್ಕೂ ಮತ್ತು ಈ ಕೆಲಸಕ್ಕಾಗಿ ಇಂಗ್ಲಿಶ್ ಜನಗಳು ಸಿಪಾಯಿಗಳನ್ನು ಸೋಲ್ಜರುಗಳನ್ನು ಮತ್ತು ಅಧಿಕಾರಿಗಳನ್ನು ಅವಶ್ಯಕವಾದ ಮದ್ದು ಗುಂಡುಗಳನ್ನು ತಂಜಾವೂರು ಮಹಾರಾಜನಿಗೆ ಯಾವ ರೀತಿ ನಡೆಸಿಕೊಂಡು ಬರುತ್ತಾರೋ ಅದೇ ಮೇರೆಗೆ ಇಂಗ್ಲಿಶ್ ಜನಗಳು ಸರಬರಾಜು ಮಾಡುವುದಕ್ಕೆ ಬದ್ಧರಾಗಬೇಕು. | ಹೆಚ್ಚಾದ ಮೊಬಲಗನ್ನು ಕೊಡುವ ಹಾಗೆ ಮಹೀಶೂರ ಸಂಸ್ಥಾನದವರು ವಾಗ್ದಾನ ಮಾಡಬೇಕು. |
| ೮. | ಮಹೀಶೂರ ರಾಜ್ಯದ ದವಲತ್ತಿಗೂ ಪೆಷ್‌ಕಷಿಗೂ ಚೌತಾಯಿಗೂ ಕುಂಪಣಿಯವರು ಯಾವ ಹಕ್ಕನ್ನೂ ಮಾಡಕೂಡದು. ರಾಣೀ ಸಾಹೇಬರೇನೇ ಅಮಲ್‌ದಾರ್ ಕಿಲ್ಲೆದಾರ್ ಮುಂತಾದವರನ್ನು ನೇಮಿಸುವರು ಮತ್ತು ಕುಂಪಣಿ ಸಿಪಾಯಿ ಸೋಲ್ಜರುಗಳು ಈ ಅಧಿಕಾರಿಗಳನ್ನು ಕಾಪಾಡಿಕೊಳ್ಳಬೇಕು. ಪಾಳ್ಯಗಾರರ ವಿಷಯಗಳಲ್ಲಿ ಕುಂಪಣಿಯವರು ಪ್ರವೇಶಿಸಕೂಡದು. | ಮೊಗಲಾಯಿಗೆ ಕೊಡಲ್ಪಡುವ ಪೆಷ್‌ಕಷ್ ಮತ್ತು ಮರಾಠಿಯವರಿಗೆ ಕೊಡಲ್ಪಡುವ ಚೌತಾಯಿಯನ್ನು ಕುಂಪಣಿ ಖಜಾನೆಯಲ್ಲಿ ಇಡಲ್ಪಡಬೇಕು. ಮೊಗಲಾಯಿಯವರಿಗೂ ಮರಾಠಿಯವರಿಗೂ ಈ ವಿಷಯವಾಗಿ ಕುಂಪಣಿಯವರೇ ಏರ್ಪಾಡು ಮಾಡಿಕೊಳ್ಳುತ್ತಾರೆ. ಮೊಗಲಾಯಿಯವರೂ ಮರಾಠಿಯವರೂ ಸ್ನೇಹಭಾವದಿಂದ ಪೆಷ್‌ಕಷ್ ಚೌತಾಯಿಗಳನ್ನು ಬಿಟ್ಟುಕೊಟ್ಟರೆ ಈ ಹಣವನ್ನು ಕುಂಪಣಿಯವರು ಬೇರೆ ಫಂಡು ಮಾಡಿಕೊಂಡು ಇದನ್ನು ಕಲಹ |

ಶಮನಕ್ಕಾಗಿ ಇಡಬೇಕಾಗಿರುವ ಹೆಚ್ಚು ದಂಡಿನ ಬಲವಾದ ಖರ್ಚಿಗೂ, ಕೋಟೆಗಳನ್ನು ಕಟ್ಟುವುದಕ್ಕೂ ಮತ್ತಿತರ ಕಾಮಗಾರಿಗಳಿಗೂ ಉಪಯೋಗಿಸಿಕೊಳ್ಳುತ್ತಾರೆ. ಆದ ಕಾರಣ ರಾಜ್ಯಸಂರಕ್ಷಣೆಗಾಗಿ ಈ ಹಣವನ್ನಿಟ್ಟು ಕೊಳ್ಳುತ್ತೇವೆ. ಅಮಲ್‌ದಾರರು ಮುಂತಾದವರನ್ನು ನೇಮಿಸುವ ವಿಷಯದಲ್ಲಿ ಕುಂಪಣಿಯವರು ಪ್ರವೇಶಿಸುವುದಿಲ್ಲ ಮತ್ತು ಅವರನ್ನು ಸಂರಕ್ಷಣೆ ಮಾಡುತ್ತೇವೆ. ಒಪ್ಪಿಕೊಂಡ ಪ್ರಕಾರ ವರ್ಷಾವಧಿ ಪೆಷ್‌ಕಷನ್ನು ಕ್ರಮವಾಗಿ ಕೊಡಬೇಕು. ಕುಂಪಣಿ ಸಿಪಾಯಿಗಳೂ ಸೋಲ್ಜರುಗಳನ್ನು ಯಾವ ಕೋಟೆಗಳಲ್ಲಿ ಇಡಲ್ಪಟ್ಟಾಗ್ಯೂ ರಾಣೀಸಾಹೇಬರು ೧೨ ತಿಂಗಳ ಸರಬರಾಜನ್ನು ಕೊಡಬೇಕು. ಇದಕ್ಕೆ ತಪ್ಪಿದರೆ ಈ ಸರಬರಾಜಿಗಾಗಿ ಕುಂಪಣಿಯವರೇ ಖುದ್ದು ಹಣವನ್ನು ಜಮಾಯಿಸಿಕೊಳ್ಳುವರು.

೯. ಯುದ್ಧದಲ್ಲಿ ತೆಗೆದುಕೊಳ್ಳಲ್ಪಡುವ ಕೋಟೆಗಳಲ್ಲಿ ಅಥವಾ ಇತರ ಸ್ಥಳಗಳಲ್ಲಿ ಹೈದರನಾಯಕ ನಿಂದಾಗಲಿ ಅಥವಾ ಅವನ ಕಡೆಯವರಿಂದಾ ಗಲಿ ಇಡಲ್ಪಟ್ಟ ಆಭರಣಗಳು, ಆನೆಗಳು ಕುದುರೆಗಳು ಹಣಗಳು ಮತ್ತು ಮದ್ದುಗುಂಡು ಗಳು ಯಾವುದಾದರೂ ಸಿಕ್ಕಿದರೆ ಅವುಗಳನ್ನು ರಾಣಿಸಾಹೇಬರಿಗೆ ಕೊಟ್ಟುಬಿಡಬೇಕು.

ಇಂಗ್ಲೆಂಡಿನಲ್ಲಿ ಈಚೆಗೆ ತೀರ್ಮಾನ ಮಾಡಿರುವ ಮೇರೆ ಯುದ್ಧದಲ್ಲಿ ತೆಗೆದುಕೊಳ್ಳಲ್ಪಡುವ ಕೋಟೆ ಮುಂತಾದ ವುಗಳಲ್ಲಿ ಸಿಗುವ ವಿಶಿಷ್ಟವೂ ಸಿಪಾಯಿ ಸೋಲ್ಜರುಗಳ ಸೊತ್ತಾಗಿದೆ. ಅದಕ್ಕೆ ಬದಲಾಗಿ ಇನಾಂ ಮೌಲ್ಯವನ್ನು ಅವರಿಗೆ ಕೊಡುವ ಹಾಗೆ ವಾಗ್ದಾನ ಮಾಡಿದರೆ ಅವರನ್ನು ಲೂಟಿ ಮಾಡದ ಹಾಗೆ ಅಡ್ಡಿಮಾಡಬಹುದು. ಹೀಗೆ ಅಪೇಕ್ಷೆಯಿದ್ದಲ್ಲಿ ಲೂಟಿ ಮಾಡದ ಹಾಗೆ ಮಿಲಿಟರಿಯವರಿಗೆ ಕುಂಪಣಿಯವರು ಸಲಹಾ ಕೊಡುತ್ತಾರೆ.

| | |
|---|---|
| ೧೦. ಹೈದರನಾಗಲಿ ಅಥವಾ ಅವನ ಮುಖ್ಯ ಹುದ್ದೇದಾರನಾಗಲಿ ಯುದ್ಧದಲ್ಲಿ ಜೀವಸಹಿತ ಹಿಡಿಯಲ್ಪಟ್ಟರೆ ಅವರನ್ನು ರಾಣಿಸಾಹೇಬರಿಗೆ ಒಪ್ಪಿಸಿಕೊಡಬೇಕು. | ಕುಂಪಣಿಯವರು ಹೈದರನೊಡನೆ ಯುದ್ಧ ಮಾಡುವುದರಿಂದ ಇದಕ್ಕೆ ಒಪ್ಪಿಕೊಳ್ಳಲಾರರು. ಆದರೆ ಈ ವಿಷಯದಲ್ಲಿ ಮಹೀಶೂರು ಸಂಸ್ಥಾನದ ಹಕ್ಕನ್ನು ಆಲೋಚಿಸುವರು. |
| ೧೧. ಶ್ರೀರಂಗಪಟ್ಟಣವು ರಂಗನಾಥ ಸ್ವಾಮಿಯವರ ವಾಸ್ಥಾನವಾದುದರಿಂದ ತೊಂದರೆ ಕಾಲಗಳಲ್ಲಿ ವಿನಹ ಇತರ ಕಾಲಗಳಲ್ಲಿ ಯಾವ ಸೈನ್ಯವನ್ನು ಕುಂಪಣಿಯವರು ಆ ಸ್ಥಳದಲ್ಲಿ ಇಡಕೂಡದು | ಯಾವ ಕೋಟೆಯ ಸೈನ್ಯಾಕ್ರಮಣಕ್ಕೆ ಯೋಗ್ಯವಾಗಿದೆ. ಯಾವುದು ನಾಶಕ್ಕೆ ಯೋಗ್ಯವಾಗಿದೆ ಯಾವುದು ಸಂರಕ್ಷಣೆ ಮಾಡಲ್ಪಡಬೇಕು ಇವುಗಳು ಕುಂಪಣಿಯವರು ಆಲೋಚಿಸಿ ಇನ್ನು ಮೇಲೆ ನಿಷ್ಕರ್ಷೆ ಮಾಡುವರು. |
| ೧೨. ರೆವೆನ್ಯೂ ಸೇನೆ ಪೋಲೀಸ್ ಪಾಳ್ಯಗಾರರ ಗೊತ್ತು ಮಾಡುವಿಕೆ ಇವುಗಳಲ್ಲಿ ಕುಂಪಣಿಯವರು ಪ್ರವೇಶಿಸಕೂಡದು. | ಇದಕ್ಕೆ ನಾವು ಒಪ್ಪಿಕೊಂಡೆವು. |
| ೧೩. ಹೈದರ್ ನಾಯಕನನ್ನು ಸೈನ್ಯವನ್ನು ಜಯಿಸದೆ ಹೋದರೆ ಅಥವಾ ಅವನಲ್ಲಿ ಸಂಧಿ ಮಾಡಿಕೊಂಡರೆ ಕುಂಪಣಿಯವರು ನಮಗೆ ಮತ್ತು ನಮ್ಮ ಮನೆತನಕ್ಕೆ ನಿರಂತರವಾಗಿ ಸರಬರಾಜು ಮಾಡಿ ನಮ್ಮನ್ನು ಕಾಪಾಡಿಕೊಳ್ಳಬೇಕು ಇದಲ್ಲದೆ ನಮ್ಮಿಂದ ಅಡ್ವಾನ್ಸಾಗಿ ಕೊಡಲ್ಪಡುವ ಹಣಗಳು ವಾಪಸು ಮಾಡಲ್ಪಡಬೇಕು. | ನಾವು ಇದಕ್ಕೆ ಒಪ್ಪಿಕೊಂಡೆವು. |
| ೧೪. ನಾನಾಗಲಿ ನನ್ನ ಹಕ್ಕುದಾರರಾಗಲಿ ನಮ್ಮ ರಾಜ್ಯ ಸ್ವಾಧೀನದಲ್ಲಿ ಇಡಲ್ಪಟ್ಟರೆ ಸಂಸ್ಥಾನದ ಮುಖ್ಯಾಧಿಕಾರವು ನಮ್ಮದೇ ಎಂದು ಇಂಗ್ಲೆಂಡ್ ದೇಶದ ದೊರೆಗಳಿಂದ ಕುಂಪಣಿಯವರು ನಮಗೆ ಒಂದು ಸನ್ನದು ತರಿಸಿಕೊಡಬೇಕು. ರೀತಿಗೆ ಬಂಗಾಳಾದಿಂದ ಒಂದು ಸನ್ನದನ್ನು ತರಿಸಿಕೊಡುವುದಕ್ಕೆ ಅವರು ತಕ್ಕ ಏರ್ಪಾಡು | ಘನವಾದ ಕುಂಪಣಿಯವರು ಸರ್ವಾಧಿಕಾರವನ್ನು ಜನರ್ ಕೂಟಿ ಸಾಹೇಬರಿಗೆ ಕೊಟ್ಟಿರುವುದರಿಂದ ಅವರು ಏನು ಖರಾರು ಮಾಡಿದಾಗ್ಯೂ ನಾವು ಬದ್ಧರಾಗುವೆವು. ಮತ್ತು ನೀವು ಅಪೇಕ್ಷಿಸುವ |
| | ಮಾಡುತ್ತಾರೆ. ಅಂಥ ಏರ್ಪಾಡುಗಳನ್ನು ಅಂಗೀಕಾರ ಮಾಡುವ ಹಾಗೆ ಇಂಗ್ಲೆಂಡಿನಿಂದ ಕುಂಪಣಿಯವರು ಅಧಿಕಾರವನ್ನು ಹೊಂದುತ್ತಾರೆ. ತಂಜಾವೂರ ರಾಜರಿಗೆ ತರಿಸಿಕೊಡಲ್ಪಟ್ಟ ಸನ್ನದಿನ ಹಾಗೆ ಒಂದು |

ಸನ್ನದು ಮಹೀಶೂರ ರಾಣಿಯವರಿಗೂ ತರಿಸಿಕೊಡಲ್ಪಡುತ್ತದೆ. ಜನರಲ್ ಕೂಟ್ ಸಾಹೇಬರಿಗೆ ಕೊಡಲ್ಪಟ್ಟ ಅಧಿಕಾರವು ಕುಂಪಣಿ ಗವರ್ನರಿಗೆ ಈಚೆಗೆ ವರ್ಗಾಯಿಸಲ್ಪಟ್ಟದ್ದರಿಂದ ಅವರೂ ಇದಕ್ಕೆ ಒಪ್ಪಿಕೊಳ್ಳುತ್ತಾರೆ. ಕೆಲವು ದಖನ್ ಸುಭೇದಾರರು ಕುಂಪಣಿ ಸ್ನೇಹಿತರಾಗಿ ಇರುವುದರಿಂದ ಕೆಲವು ರಾಜ್ಯಗಳನ್ನು ತಮ್ಮ ಸ್ವಂತದ್ದೆಂಬುದಾಗಿ ಕೇಳುತ್ತಾರೆ. ಮರಾಠಿಯವರೂ ಹೀಗೆ ಹೇಳುತ್ತಾರೆ. ಆದಕಾರಣ ಅವರ ಸ್ವಂತದ್ದನ್ನು ಬಿಡಿಸಿಕೊಳ್ಳುವುದಕ್ಕೆ ಅವರು ಬಾಧ್ಯರಾಗಿ ಇದ್ದರೆ ಕುಂಪಣಿಯವರು ಅವರ ಸಂಗಡ ತಮ್ಮ ಸ್ವಂತ ಏರ್ಪಾಡನ್ನು ಮಾಡುವುದಕ್ಕೆ ಸ್ವತಂತ್ರರಾಗಿ ಇದ್ದಾರೆ. ಬಾಕಿ ರಾಜ್ಯವು ರಾಣಿಯವರ ಆಳ್ವಿಕೆಗೆ ನಿಸ್ಸಂದೇಹವಾಗಿ ಬಿಡಲ್ಪಡುವುದು.

೧೫. ಈಗ ಮಹೀಶೂರ ದೇಶವು ನಿರಂತರವಾದ ಯುದ್ದದಿಂದ ದುರ್ಭಿಕ್ಷ ಸ್ಥಿತಿಯಲ್ಲಿ ಇರುವುದ ಇರುವುದರಿಂದ ವರ್ಷಪ್ರತಿ ಐದು ಲಕ್ಷ ವರಹಗಳಿಗೆ ಹೆಚ್ಚಾಗಿ ಪೆಷ್‌ಕಷನ್ನು ನಾವು ಕುಂಪಣಿಯವರಿಗೆ ಕೊಡಲಾರವು ಆದರೆ ಈಗ ಹೈದರನ ಸ್ವಾಧೀನದಲ್ಲಿ ಇರುವ ಸಮಸ್ತ ರಾಜ್ಯಗಳನ್ನು ನಮಗೆ ಬಿಡಿಸಿಕೊಟ್ಟರೆ ಇದಕ್ಕಿಂತ ಹೆಚ್ಚಾಗಿ ೨೩ ಲಕ್ಷ ವರಹಗಳನ್ನು ಕೊಡುತ್ತೇವೆ. ಇದರ ಜೊತೆಗೆ ಕುಂಪಣಿಯವರು ಅಪೇಕ್ಷಿಸುವ ಭಾಗದಲ್ಲಿ ೫ ಲಕ್ಷ ವರಹ ಹುಟ್ಟುವಳಿಯಿರುವ ಭೂಮಿಯನ್ನು ಕುಂಪಣಿಗೆ ಜಹಗೀರು ಕೊಡುತ್ತೇವೆ. ಆ ಪಕ್ಷದಲ್ಲಿ ಸಮಸ್ತ ರಾಜ್ಯಗಳನ್ನು ಕುಂಪಣಿಯವರು ಕಾಪಾಡಿಕೊಳ್ಳಬೇಕು.

ಮಹೀಶೂರ ಸಂಸ್ಥಾನದ ಪೆಷ್‌ಕಷ್ ಚೌತಾಯಿಗಳು ಯಾವ ರೀತಿಯಲ್ಲಿ ನಡೆಯಲ್ಪಡುವುವೋ ಹಾಗೆಯೇ ಮರಾಠಿಯವರಿಗೂ ಮೊಗಲಾಯಿಯವರಿಗೂ ಆದೇಶಗಳ ಮೇಲೆ ಬರಬೇಕಾಗುವ ಪೆಷ್‌ಕಷ್ ಚೌತಾಯಿಗಳು ಕುಂಪಣಿಯವರಿಗೆ ಕೊಡಲ್ಪಡುತ್ತದೆ. ಕುಂಪಣೀ ದಂಡುಗಳು ಇಡಲ್ಪಡುವ ಕೋಟೆ ಮುಂತಾದ ಜಾಗಗಳಲ್ಲಿ ೧೨ ತಿಂಗಳ ಸರಬರಾಜು ಸಾಮಾನುಗಳು ಸಿದ್ಧವಾಗಿ ಇಡಲ್ಪಡಬೇಕು. ಈ ಬಲಗಳಿಗೆ ರಾಣೀಸಾಹೇಬರು ಒಪ್ಪಿಕೊಂಡರೆ. ಹೈದರನ ರಾಜ್ಯಗಳನ್ನು ರಾಣೀಸಾಹೇಬರಿಗೆ ಅಥವ ಅವರ ಹಕ್ಕುದಾರರಿಗೆ ಕೊಡುತ್ತೇವೆಂದು ಕುಂಪಣಿಯವರು ವಾಗ್ದಾನ ಮಾಡುತ್ತಾರೆ.

| | | |
|---|---|---|
| ೧೬. | ನಿಜಾಂ ಮತ್ತು ಮರಾಠಿಯವರಿಗೆ ನ್ಯಾಯವಾಗಿ ಬರತಕ್ಕ ರಾಜ್ಯಗಳನ್ನು ವಾಪಸು ಕೊಡುವುದಕ್ಕೆ ನಾನು ಒಪ್ಪಿಕೊಳ್ಳುತ್ತೇನೆ. ಆದರೆ ಹೈದರನು ಸೋತುಹೋದ ನಂತರ ಯುದ್ಧಕ್ಕಾಗಿ ಅಡ್ವಾನ್ಸ್ ಕೊಡುವ ಹಣವನ್ನು ದೌಮಷಾಯ ಪ್ರಕಾರ ನನಗೆ ವಾಪಸು ಕೊಡಿಸಿಕೊಟ್ಟು ನ್ಯಾಯವಾಗಿ ಅವರಿಗೆ ಸೇರದಂಥಾ ರಾಜ್ಯ ಗಳನ್ನು ಅವರಿಗೆ ಕೊಡಕೂಡದೆಂದು ನಾನು ಕೇಳಿಕೊಳ್ಳುತ್ತೇನೆ. ಪೆಷ್‌ಕಷ್ ಚೌತಾಯಿ ವಿಷಯದಲ್ಲಿ ಕುಂಪಣಿಯವರ ತಿಳುವಳಿಕೆ ಪ್ರಕಾರ ರಾಣೀಸಾಹೇಬರು ಆ ರೀತಿಯಲ್ಲಿ ಮಾತ್ರವೇ ಮಾಡುವರು. | ನಂಜಾಂ ಮತ್ತು ಮರಾಠಿಯವರ ದೇಶಗಳನ್ನು ಅವರಿಗೆ ಗೊತ್ತು ಮಾಡಿ ಕೊಡುವ ಕಾಲದಲ್ಲಿ ಆದೇಶಗಳ ಉತ್ಪತ್ತಿಗೆ ಅನುಗುಣವಾದ ಮೊಬಲಗನ್ನು ಕುಂಪಣಿ ಯವರು ರಾಣಿ ಸಾಹೇಬರಿಗೆ ವಾಪಸು ಕೊಡಿಸುವರು. |
| ೧೭. | ಮುರಾರಿರಾಯನು ೩೦ ಲಕ್ಷ ರೂಪಾಯಿ ಗಳನ್ನು ರಾಣೀ ಸಾಹೇಬರಿಗೆ ಪೂರ್ವದಲ್ಲಿಯೇ ಕೊಡಬೇಕಾಗಿ ಇರುವುದರಿಂದಲೂ ಇದಲ್ಲದೆ ಮೋಸ ಮಾಡಿ ಇರುವುದರಿಂದಲೂ ಗುತ್ತಿ ಸಂಸ್ಥಾನವನ್ನು ಮುರಾರಿರಾಯರ ವಾರಸುದಾ ರರಿಗೆ ಕೊಡಕೂಡದೆಂದು ರಾಣೀಸಾಹೇಬರು ಕೇಳಿಕೊಳ್ಳುತ್ತಾರೆ. | ಗುತ್ತಿ ಸಂಸ್ಥಾನವನ್ನು ಮುರಾರಿರಾಯನ ವಾರಸುದಾರರಿಗೆ ವಾಪಸು ಕೊಡುವುದಕ್ಕೂ ಅಥವ ಕೊಡದೆ ಇರುವುದಕ್ಕೂ ಕುಂಪಣಿ ಯವರು ಸಂಪೂರ್ಣ ಸ್ವತಂತ್ರರಾಗಿದ್ದಾರೆ. |
| | | ದಕ್ಷಿಣದಿಕ್ಕು ರೆಸಿಡೆಂಟ್ ಜಾ ಸುಲಿವಾನ್ |

ಎಂದು ರುಜುವಿದೆ(ಕುಮುದಿನಿ:೨೦೦೭:ಅನುಬಂಧ)

ಬ್ರಿಟಿಶರೊಂದಿಗೆ ಮೈಸೂರು ಒಡೆಯರ ಕುಟುಂಬ ತೋರಿದ ನಿಷ್ಠೆ ರಾಜವಂಶದ ಆಡಳಿತದ ಉಳಿದ ಅವಧಿಯಲ್ಲೂ ಬದಲಾಗಲಿಲ್ಲ. ಸಹಕಾರಿ ಒಪ್ಪಂದಕ್ಕೆ ಸಹಿ ಹಾಕಿದ ಕೆಲವು ದಿನಗಳ ನಂತರ ಲಕ್ಷ್ಮಮ್ಮಣ್ಣಿ ಮತ್ತೆ ಅವರ ಅತ್ತೆ ದೇವಜಮ್ಮಣ್ಣಿ ಗವರ್ನರ್ ಜನರಲ್‌ಗೆ ಕೃತಜ್ಞತಾಪತ್ರ ಬರೆಯುತ್ತಾರೆ. "ನಮ್ಮ ಮಕ್ಕಳಿಗೆ ಮೈಸೂರು, ನಗರ ಮತ್ತು ಚಿತ್ರದುರ್ಗವನ್ನು ದಯಪಾಲಿಸಿರುವುದು ಮತ್ತು ಪೂರ್ಣಯ್ಯನವರನ್ನು ದಿವಾನರನ್ನಾಗಿ ನೇಮಿಸಿರುವುದು ನಮಗೆ ಸಂತಸವನ್ನುಂಟುಮಾಡಿದೆ. ನಮ್ಮ ಸರಕಾರ ಅಧಿಕಾರ ವಂಚಿತವಾಗಿ ನಲವತ್ತು ವರುಷಗಳಾಗಿತ್ತು. ಈಗ ನಮ್ಮ ಮಕ್ಕಳಿಗೆ ಸರಕಾರದಲ್ಲಿರುವ ಅವಕಾಶವನ್ನು ನೀಡುವ ಕೃಪೆ ತೋರಿದ್ದೀರಿ ಮತ್ತು ದಿವಾನರಾಗಿ ಪೂರ್ಣಯ್ಯನವರನ್ನು ನೇಮಿಸಿದ್ದೀರಿ. ಸೂರ್ಯ ಚಂದ್ರರಿರುವವರೆಗೂ ನಾವು ನಿಮಗೆ ಎದುರಾಡುವುದಿಲ್ಲ. ಯಾವಾಗಲೂ ನಾವು ನಿಮ್ಮ ರಕ್ಷಣೆಯಲ್ಲಿರುತ್ತೀವಿ. ಅಜ್ಞಾ ಪಾಲಕರಾಗಿರುತ್ತೇವೆ. ನೀವು ನಮಗೆ ಮಾಡಿದ ಈ ಸಹಾಯದ ನೆನಪು ಮುಂದಿನ ಎಲ್ಲ ತಲೆಮಾರಿನವರಲ್ಲೂ ಇರುತ್ತದೆ. ನಿಮ್ಮ ಸರಕಾರದ ಮೇಲಿನ ನಮ್ಮ ಅವಲಂಬನೆಯನ್ನು ನಮ್ಮ ವಂಶಾವಳಿಯಲ್ಲಾದರೂ ಮರೆಯುದಿಲ್ಲ(ಸಾಕಿ, ಸಂ.೨.೨೦೦೪:೩೪).

ಮೈಸೂರು ಮತ್ತು ಕರ್ನಾಟಕದಲ್ಲಿ ಗೆರಿಲ್ಲಾ ಯುದ್ಧದ ಲಕ್ಷಣಗಳು ೧೮೩೧ರಲ್ಲಿ ಕಾಣಿಸಿಕೊಂಡಾಗ ಮದ್ರಾಸಿನ ಗವರ್ನರ್ ಲಷಿಂಗ್ಟನ್‌ಗೆ ರಾಜ ಪತ್ರ ಬರೆಯುತ್ತಾರೆ. 'ನಿಮ್ಮ ದೃಢ ನಿಶ್ಚಯ ಮತ್ತು ಕಾರುಣ್ಯದಿಂದ ನನಗೆ ಅತ್ಯಂತ ಉನ್ನತ ಪದವಿ ಸಿಕ್ಕಿದೆ. ನಾನು ಹುಟ್ಟಿದ ಶ್ರೀರಂಗಪಟ್ಟಣದ ಮುಖ್ಯಸ್ಥನಾಗುವ ಅವಕಾಶ ಲಭಿಸಿದೆ. ದಯಮಯನಾದ ದೇವರು ನಿಮ್ಮ ಪ್ರೀತಿ ಕರುಣೆಯ ನೆರಳನ್ನು ನಮ್ಮ ಮೇಲೆ ಸದಾ ಇರುವಂತೆ ನೋಡಿಕೊಳ್ಳಲು, ನಿಮ್ಮ ನಿರ್ದೇಶನದ ಪ್ರಕಾರವೇ ಶ್ರೀರಂಗಪಟ್ಟಣದ ವ್ಯವಹಾರಗಳು ವ್ಯವಸ್ಥಿತವಾಗಿ ನಡೆಯುತ್ತಿವೆ. ನನ್ನನ್ನು ಬೆಳೆಸಿ ಪೋಷಿಸಿ ರಕ್ಷಿಸುತ್ತಿರುವವರು ನೀವು ನನ್ನಾಸೆಗಳು ಈಡೇರಲು ನಿಮ್ಮ ಕರುಣೆಯನ್ನು ನಿರೀಕ್ಷಿಸುವೆ. ನೀವು ನಮ್ಮೊಡನೆ ತೋರಿದ ಕೃಪೆಗಳಲ್ಲಿ ಹಾಲಿ ರೆಸಿಡೆಂಟರ ನೇಮಕ ಪ್ರಮುಖವಾದುದು. ಅತ್ಯಂತ ಅರ್ಹರಾದ ಈ ರೆಸಿಡೆಂಟರು ತಮ್ಮ ನ್ಯಾಯಪರತೆಯ ಸಲಹೆಗಳಿಂದ ನಮ್ಮ ಸರಕಾರದ ವ್ಯವಹಾರಗಳನ್ನು ಸರಿಯಾದ ದಿಕ್ಕಿನಲ್ಲಿ ಕೊಂಡೊಯ್ಯುತ್ತಾರೆ. ನನ್ನ ವ್ಯವಹಾರದ ನಿರ್ವಹಣೆಯಲ್ಲಿ ಮತ್ತು ನನ್ನ ಏಳಿಗೆಯಲ್ಲಿ ರೆಸಿಡೆಂಟರು ವಹಿಸುವ ಪಾತ್ರವನ್ನು ಲೇಖನಿಯಿಂದಾಗಲೀ ಮಾತಿನಿಂದಾಗಲೀ ವರ್ಣಿಸುವುದು ಅಸಾಧ್ಯ ನಿಮಗೆ ಸರಿಯಾದ ರೀತಿಯಿಂದ ಧನ್ಯವಾದಗಳನ್ನೇಳುವುದೂ ನನಗೆ ಶಕ್ಯವಿಲ್ಲ. ಮತ್ತಿನೇನು ಹೇಳಲಿ.

ಅದೇ ವರ್ಷ ಆರ್ಥಿಕ ಮತ್ತು ರಾಜಕೀಯ ಅಸ್ಥಿರತೆಯ ನೆಪವೊಡ್ಡಿ ಬ್ರಿಟಿಶರು ಮೈಸೂರಿನ ಆಡಳಿತವನ್ನು ತಮ್ಮ ಕೈಗೆ ತೆಗೆದುಕೊಂಡರು. ಬ್ರಿಟಿಶ್ ಸರಕಾರದ ಈ ನಿರ್ಧಾರವನ್ನು ಕೇಳಿ ಬೇಸರಗೊಂಡ ರಾಜ ಕ್ಷೀಣ ಅಳುವಿನ ಅಸಹನೆ ತೋರಿದ ರಾಜನ ಪ್ರತಿಕ್ರಿಯೆಯನ್ನು ಪೋರ್ಟ್ ಸೇಂಟ್ ಜಾರ್ಜ್‌ಗೆ ಬರೆದ ಪತ್ರದಲ್ಲಿ ರೆಸಿಡೆಂಟ್ ಕ್ಯಾರಾಮೇಯರ್ ವಿವರಿಸುತ್ತಾ "ನಿನ್ನೆ ಸಂಜೆ ರಾಜನ ಜೊತೆ ಚರ್ಚೆ ನಡೆಸಿದೆ. ರಾಜನ ಸುತ್ತ ಅವನ ಕುಟುಂಬದವರಿದ್ದರು. ಮಾನಸಿಕವಾಗಿ ಜರ್ಜರಿತವಾಗಿದ್ದರು. ಸಂಧಾನ ನಡೆಸಲು ರಾಜ ತನ್ನ ಸಹಾಯ ಕೇಳಿದ. ಸಾಮ್ರಾಜ್ಯದ್ಯಂತ ರಾಜನ ವ್ಯಕ್ತಿತ್ವಕ್ಕೆ ಅಪಮಾನವುಂಟಾಗುವುದನ್ನು ತಡೆಯುವುದು ಆತನ ಪ್ರಮುಖ ಉದ್ದೇಶವಾಗಿತ್ತು. ಇಡೀ ಮೈಸೂರು ಸಂಸ್ಥಾನವನ್ನು ನೇರ ಆಡಳಿತಕ್ಕೆ ಒಳಪಡಿಸುವ ಗವರ್ನರ್ ಜನರಲ್‌ನ ನಿರ್ಧಾರದಲ್ಲಿ ಸ್ವಲ್ಪ ಬದಲಾವಣೆ ಮಾಡಬೇಕೆನ್ನುವುದು ರಾಜನ ಕೋರಿಕೆಯಾಗಿತ್ತು. ಮೈಸೂರಿನ ಎಂಟು ಗ್ರಾಮಗಳನ್ನು ಬಿಟ್ಟುಕೊಟ್ಟರೆ ಸಾಕು ನಾನು "ರಾಜ"ನಾಗಿಯೇ ಉಳಿಯುತ್ತೇನೆ ಎಂಬುದಾತನ ಕೋರಿಕೆ(ಸಾಕಿ, ಸಂ.೨,೨೦೦೪:೩೪-೩೫).

ಹೀಗೆ ಮೈಸೂರು ಭಾರತ ಸ್ವತಂತ್ರ್ಯವಾಗುವರೆಗೂ ಬ್ರಿಟಿಶರ ನೇರ ಆಡಳಿತಕ್ಕೆ ಹಾಗೂ ಅವರ ಅಧಿಕಾರಿಗಳಿಂದ ನಿಯಂತ್ರಿಸುವ ರಾಜಕೀಯ ಕುತಂತ್ರಗಳು ನಡೆದಿವೆ.

ಬ್ರಿಟಿಶ್ ಆಳ್ವಿಕೆಯಲ್ಲಿ ಹತ್ತಿ ಉದ್ಯಮವು ಪಡೆದುಕೊಂಡ ಪ್ರೋತ್ಸಾಹ ಅನೇಕ ಕಾರ್ಖಾನೆಗಳ ಹುಟ್ಟಿಗೆ ಕಾರಣವಾಯಿತು. ಇದು ವ್ಯಾಪಾರದ ಮೇಲೂ ಉತ್ತಮ ಪರಿಣಾಮಗಳನ್ನು ಬೀರಿತು. ಹತ್ತಿ ವ್ಯಾಪಾರ ಲಾಭದಾಯಕವಾಗಿ ಕಂಡುಬಂತು. ಇತರೆ ವಾಣಿಜ್ಯ ಬೆಳೆಗಳಾದ ಕಾಫಿ, ಏಲಕ್ಕಿ, ರಬ್ಬರ್ ಮುಂತಾದವುಗಳ ವ್ಯಾಪಾರವೂ ಚುರುಕಿನಿಂದ ಕೂಡಿತ್ತು. ಕೈಗಾರಿಕಾ ಕ್ಷೇತ್ರದಲ್ಲಾದ

ಬದಲಾವಣೆಗಳು, ರಸ್ತೆ ಮತ್ತು ರೈಲು ಮಾರ್ಗದ ನಿರ್ಮಾಣ ವ್ಯಾಪಾರದ ಮೇಲೆ ಪರಿಣಾಮವನ್ನು ಬೀರಿತು. ಇವುಗಳ ನಿರ್ಮಾಣಕ್ಕೆ ಬೇಕಾದ ರೈಲು ಇಂಜಿನುಗಳು, ಯಂತ್ರೋಪಕರಣಗಳು, ಉಕ್ಕು ಮೊದಲಾದವುಗಳನ್ನು ಆಮದು ಮಾಡಿಕೊಳ್ಳಲಾಗುತ್ತಿತ್ತು. ಗಂಧದ ಎಣ್ಣೆ, ರೇಷ್ಮೆ, ಗಂಧದ ಸಾಬೂನು ಮತ್ತು ರಾಸಾಯನಿಕ ವಸ್ತುಗಳನ್ನು ಮೈಸೂರು ಪ್ರದೇಶದಿಂದಲೂ, ಹಂಚು, ಗೋಡಂಬಿ, ಭತ್ತ, ಮೀನು ಮುಂತಾದವು ಮಂಗಳೂರಿನಿಂದಲೂ, ಹತ್ತಿ, ಹದ ಮಾಡಿದ ಚರ್ಮ, ಎಣ್ಣೆ ಕಾಳುಗಳು ಮುಂಬಯಿ ಕರ್ನಾಟಕದ ಪ್ರಾಂತದಿಂದಲೂ, ಕಬ್ಬಿಣದ ಅದಿರು ಉತ್ತರ ಕನ್ನಡ ಜಿಲ್ಲೆಯಿಂದಲೂ ರಫ್ತಾಗುತ್ತಿದ್ದವು.

ಹೊಸದಾಗಿ ನಿರ್ಮಾಣಗೊಂಡ ರಸ್ತೆಗಳು, ದುರಸ್ತಿಗೊಂಡ ಹಳೆಯ ರಸ್ತೆಗಳು ಹಾಗೂ ರೈಲು ಮಾರ್ಗದ ನಿರ್ಮಾಣ ವ್ಯಾಪಾರ ಚಟುವಟಿಕೆಗಳು ಚುರುಕುಗೊಳ್ಳುವಂತೆ ಮಾಡಿದವು. ಬೆಂಗಳೂರು, ಮೈಸೂರು, ಅರಸಿಕೆರೆ, ದಾವಣಗೆರೆ, ಬಳ್ಳಾರಿ, ಹುಬ್ಬಳ್ಳಿ, ಗದಗ, ರಾಯಚೂರು, ಬಾಗಲಕೋಟೆ, ಗುಲ್ಬರ್ಗ, ವಿಜಾಪುರ, ಬೆಳಗಾವಿ ಮುಂತಾದ ಪ್ರಮುಖ ವ್ಯಾಪಾರ ಕೇಂದ್ರಗಳಿಗೆ ರೈಲು ಸಂಪರ್ಕವನ್ನು ಕಲ್ಪಿಸಲಾಗಿತ್ತು. ಇದರಿಂದಾಗಿ ಮುಂಬಯಿ ಮತ್ತು ಮದರಾಸು ನಗರಗಳಿಗೂ ರೈಲು ಸಂಪರ್ಕ ಬೆಳೆಯುವಂತಾಯಿತು. ವ್ಯಾಪಾರದ ವಸ್ತುಗಳು ಅತ್ಯಂತ ಕಡಿಮೆ ಅವಧಿಯಲ್ಲಿ ಮಾರುಕಟ್ಟೆಗೆ ಹೋಗುವಂತಾಯಿತು. ಪಶ್ಚಿಮ ಘಟ್ಟಗಳಲ್ಲಿ ಹಾದುಹೋಗುವ ಹೊಸದಾಗಿ ನಿರ್ಮಾಣಗೊಂಡ ಘಟ್ಟರಸ್ತೆಗಳು ಮೈಸೂರು ಮತ್ತು ಕೊಡಗು ಪ್ರದೇಶಗಳನ್ನು ಕರಾವಳಿಯ ಜಿಲ್ಲೆಗಳೊಂದಿಗೆ ಜೋಡಿಸಿದವು. ಹೀಗಾಗಿ ಬಂದರು ಪಟ್ಟಣಗಳು ಅಭಿವೃದ್ಧಿಯನ್ನು ಹೊಂದುವಂತಾಯಿತು. ಅವೆಲ್ಲವೂ ಬಿರುಸಿನ ವ್ಯಾಪಾರ ಚಟುವಟಿಕೆಯ ಕೇಂದ್ರಗಳಾದವು. ಅನೇಕ ವರ್ತಕ ಸಮುದಾಯಗಳು ನಗರ ಪ್ರದೇಶಗಳಲ್ಲಿಯೇ ನೆಲೆ ನಿಂತು ವ್ಯಾಪಾರ ಮತ್ತು ವಾಣಿಜ್ಯದಲ್ಲಿ ತೊಡಗಿಕೊಂಡವು. ಈ ಸಮುದಾಯಗಳು ನಗರಪ್ರದೇಶಗಳಿಗೆ ಮೂಲಭೂತ ಸೌಕರ್ಯಗಳಾದ ಸಾರಿಗೆ ಮತ್ತು ಸಂಪರ್ಕ, ಮಾರುಕಟ್ಟೆಗಳು ಮುಂತಾದವುಗಳನ್ನು ಒದಗಿಸುವುದರಲ್ಲಿ ಬ್ರಿಟಿಶ್ ಸರಕಾರಕ್ಕೆ ನೆರವಾದವು. ಅದೇ ರೀತಿ ತಮ್ಮ ವ್ಯಾಪಾರ ಮತ್ತು ಹಣಕಾಸಿನ ಚಟುವಟಿಕೆಗಳಿಗೆ ಸಂಬಂಧಿಸಿದ ಸಂಸ್ಥೆಗಳನ್ನು ರಚಿಸಿಕೊಂಡವು(ರೈ ೨೦೦೭:೨೬-೨೭).

೧೮ನೇ ಶತಮಾನದ ಉತ್ತರಾರ್ಧ ಹಾಗೂ ೧೯ನೇ ಶತಮಾನದ ಪೂರ್ವಾರ್ಧದಲ್ಲಿ ಬ್ರಿಟನ್ನಿನಲ್ಲಿ ನಡೆದ ಔದ್ಯಮಿಕ ಕ್ರಾಂತಿಯಿಂದಾಗಿ ಆ ದೇಶದ ಅರ್ಥವ್ಯವಸ್ಥೆ ಹಾಗೂ ಆರ್ಥಿಕ ಸಿದ್ಧಾಂತಗಳಲ್ಲಿ ಬಹಳಷ್ಟು ಮಾರ್ಪಾಟುಗಳಾದವು. ಹತ್ತಿಬಟ್ಟೆ ವ್ಯಾಪಾರನೀತಿಯೂ ಇದರ ಪ್ರಭಾವದಿಂದ ಹೊರತಾಗಿರಲಿಲ್ಲ. ಇಂಗ್ಲೆಂಡಿಗೆ ಭಾರತೀಯ ಹತ್ತಿಬಟ್ಟೆಗಳ ಆಮದನ್ನು ನಿಷೇಧಿಸುವಂತೆ ಮತ್ತು ಇಂಗ್ಲೆಂಡಿನ ಹತ್ತಿಬಟ್ಟೆ ಉತ್ಪನ್ನಗಳನ್ನು ಭಾರತದಾದ್ಯಂತ ವ್ಯಾಪಕವಾಗಿಸುವಂತೆ ಎಲ್ಲ ಪ್ರಾಂತ್ಯಗಳಿಗೂ ಸೂಚನೆಗಳನ್ನು ಕಳುಹಿಸಲಾಯಿತು. ಬ್ರಿಟನ್ನಿನ ಉತ್ಪನ್ನಗಳನ್ನು ಭಾರತದ ಜನರ ಮೇಲೆ ಹೇಗೆ ಹೇರಬಹುದೆಂಬ ಬಗೆಗೆ ಹೌಸ್ ಆಫ್ ಕಾಮನ್ಸ್ ಸಾಕಷ್ಟು ಚರ್ಚೆ ನಡೆಸಿ ವಾರನ್ ಹೇಸ್ಟಿಂಗ್ಸ್, ಸರ್ ಥಾಮಸ್ ಮನ್ರೊ, ಸರ್ ಜಾನ್ ಮಾಲ್ಕಂ ಮುಂತಾದವರ ಅಭಿಪ್ರಾಯವನ್ನೂ ಕೇಳಿತು. "ವ್ಯಾಪಾರದ

ಸರಕುಗಳು ಜನರ ಅಗತ್ಯ ಮತ್ತು ವೈಭೋಗಕ್ಕಾಗಿ ಇವೆ. ಭಾರತದ ಬಡ ಜನರಿಗೆ ಅಗತ್ಯಗಳೇ ಇಲ್ಲ ಎನ್ನಲಾಗುತ್ತಿದೆ. ವಾಸ, ಆಹಾರ ಹಾಗೂ ಸ್ವಲ್ಪಮಟ್ಟಿನ ಉಡುಪುಗಳಿಗಷ್ಟೇ ಅವರ ಬೇಡಿಕೆಗಳು ಸೀಮಿತವಾಗಿದ್ದು, ಇವೆಲ್ಲವನ್ನೂ ಅವರ ಹಳ್ಳಿಗಳೇ ಪೂರೈಸುತ್ತವೆ" ಎಂಬ ವಾರನ್‌ಹೇಸ್ಟಿಂಗ್ಸ್‌ನ ಮಾತುಗಳು ಬ್ರಿಟನ್ನಿನ ಉತ್ಪನ್ನಗಳಿಗೆ ಸಾಮಾನ್ಯ ಭಾರತೀಯ ಮಾರುಕಟ್ಟೆ ಸ್ಪಂದಿಸಲಾರದು ಎನ್ನುವುದನ್ನು ಸೂಚಿಸಿದ್ದವು. ಜಾನ್ ಮಾಲ್ಕಂ, "ಭಾರತೀಯರಿಗೆ ಯುರೋಪಿನ ವಸ್ತುಗಳ ಅಗತ್ಯವಿದ್ದರೂ ಅವುಗಳನ್ನು ಕೊಳ್ಳುವ ಆರ್ಥಿಕ ಶಕ್ತಿಯಿಲ್ಲ" ಎಂದು ಅಭಿಪ್ರಾಯ ಪಟ್ಟಿದ್ದನು. ಭಾರತೀಯ ಶಾಲೊಂದನ್ನು ೭ ವರ್ಷಗಳ ಕಾಲ ಬಳಸಿಯೂ ಅದರಲ್ಲಿ ಹೆಚ್ಚು ವ್ಯತ್ಯಾಸವಾಗದಿರುವುದನ್ನು ಗಮನಿಸಿ ಅದರ ಬಾಳಿಕೆಯ ಬಗ್ಗೆ ಅಭಿಮಾನ ಪಟ್ಟ ಸರ್ ಥಾಮಸ್ ಮನ್ರೊ, ಭಾರತೀಯ ಉತ್ಪನ್ನಗಳ ಶ್ರೇಷ್ಠ ಗುಣಮಟ್ಟದ ಬಗ್ಗೆ ಒಳ್ಳೆಯ ಅಭಿಪ್ರಾಯವನ್ನು ವ್ಯಕ್ತಪಡಿಸಿ ಬ್ರಿಟಿಶ್ ಜವುಳಿಗಳ ಮಾರಾಟವನ್ನು ಬೆಂಬಲಿಸಲಿಲ್ಲ(ರೊಮೇಶ್ ದತ್ತ್,ಸಂ ೧,:೧೮೩-೧೮೬). ಹೀಗಿದ್ದರೂ ಕಂಪನಿ ಸರಕಾರ ವ್ಯಾಪಾರದ ರೆಸಿಡೆಂಟ್‌ಗಳ ಮುಖಾಂತರ ಬ್ರಿಟಿಶ್ ಕಾರ್ಖಾನೆಗಳಲ್ಲಿ ತಯಾರಾದ ಜವಳಿಯನ್ನು ಭಾರತಕ್ಕೆ ದಾಟಿಸಲು ಪ್ರಯತ್ನಿಸಿ ಯಶಸ್ವಿಯಾಯಿತು. ಹೆನ್ರಿ ಸೈಂಟ್ ಜಾರ್ಜ್ ಟಾಕರ್ ಎಂಬ ಕಂಪನಿ ಸರಕಾರದ ಅಧಿಕಾರಿ, ನಿವೃತ್ತಿ ಬಳಿಕ ಕಂಪನಿಯ ನಿರ್ದೇಶಕನಾದಾತ, ಕಂಪನಿ ಸರಕಾರದ ಈ ವ್ಯಾಪಾರ ನೀತಿಯ ವ್ಯಾಪ್ತಿ ಹಾಗೂ ಪರಿಣಾಮದ ಬಗ್ಗೆ ಬರೆಯುತ್ತ "ಭಾರತವನ್ನು ಉತ್ಪಾದಕ ಮಟ್ಟದಿಂದ ಕೃಷಿದೇಶವಾಗಿ ಹಿಂದೂಡಲಾಗಿದೆ" ಎಂದಿದ್ದಾನೆ (ಮೆಮೋರಿಯಲ್ಸ್ ಆಫ್ ದಿ ಇಂಡಿಯನ್ ಗವರ್ನಮೆಂಟ್, ಸಿಲೆಕ್ಷನ್ ಫ್ರಮ್ ದ ಪೇಪರ್ಸ್ ಆಫ್ ಹೆನ್ರಿ ಸೈಂಟ್ ಜಾರ್ಜ್ ಟಕರ್, ಪು.೪೦೧) ಈ ರೀತಿಯಲ್ಲಿ ಬ್ರಿಟನ್ನಿನ ಹತ್ತಿ ಬಟ್ಟೆಗಳಿಗೆ ಭಾರತದಲ್ಲಿ ಮಾರುಕಟ್ಟೆಗಳು ಸೃಷ್ಟಿಯಾಗಿ, ಕನಿಷ್ಠ ಬೆಲೆಗೆ ಮತ್ತು ಬೇಡಿಕೆ ಸಲ್ಲಿಸಿಕ್ಕಿಂತಲೂ ಕಮ್ಮಿಗೆ ಬ್ರಿಟನ್ನಿನ ಹತ್ತಿಬಟ್ಟೆಗಳು ಮಾರಾಟ ವಾಗತೊಡಗಿದವು(ಸೆಲೆಕ್ಟ್ ಕಮಿಟಿ ರಿಪೋರ್ಟ್೧೮೭೩, :೧೧).

ಇದರ ಪರಿಣಾಮವಾಗಿ ಭಾರತದ ಹತ್ತಿಬಟ್ಟೆಗಳು ಬ್ರಿಟಿಶ್ ಮಾರುಕಟ್ಟೆಗಳಿಂದ ಮಾಯವಾಗತೊಡಗಿದವು. ಬ್ರಿಟನ್ನಿನ ಹತ್ತಿಬಟ್ಟೆಗಳನ್ನು ಭಾರತಕ್ಕೆ ಭರದಿಂದ ಆಮದು ಮಾಡಲಾಗುತ್ತಿದ್ದ ಕುರಿತು ೧೮೪೫ರಲ್ಲಿ ಬ್ರಿಟನ್ನಿನ ವಿದೇಶಿ ವಾಣಿಜ್ಯ ವಕ್ತಾರನು "ಈ ಹತ್ತಿಬಟ್ಟೆಗಳನ್ನು ಇಂಗ್ಲೆಂಡಿನಲ್ಲಿ ಅತಿ ಕಡಿಮೆ ದರದಲ್ಲಿ ತಯಾರಿಸಲಾಗುತ್ತಿದೆ. ಅಲ್ಲಿ ಹೆಚ್ಚಿನ ಪ್ರಮಾಣದಲ್ಲಿ ತಯಾರಾಗುತ್ತಿರುವ ಇವುಗಳಿಗೆ ಮಾರುಕಟ್ಟೆಯನ್ನು ಹುಡುಕುವುದೇ ಪ್ರಯಾಸಕರವಾಗಿದ್ದು, ಆಮದಿನ ಪ್ರಮಾಣ ಹೀಗೆ ಹೆಚ್ಚುತ್ತಿರಲೆಂದೇ ಆಶಿಸಲಾಗಿದೆ. ಬರುತ್ತಿದ್ದ ಲಾಭ ಅತಿ ಕಡಿಮೆಯಾದರೂ, ಯಾವುದೇ ಪ್ರೋತ್ಸಾಹವನ್ನು ಕಡಿಮೆ ಮಾಡಿಲ್ಲ" ಎಂದು ಟಿಪ್ಪಣಿಸಿದ್ದಾನೆ(ಸೆಲೆಕ್ಟ್ ಕಮಿಟಿ ರಿಪೋರ್ಟ್೧೮೭೩, :೨೧೦).

ದಕ್ಷಿಣ ಕನ್ನಡದಲ್ಲಿ ಇಂಗ್ಲೆಂಡಿನ ಬಣ್ಣದ ಹಾಗೂ ಮುದ್ರಿತ ಚಿತ್ತಾರವುಳ್ಳ ಅಗ್ಗದ ಹತ್ತಿ ಬಟ್ಟೆಗಳು ಹಾಗೂ ನೀಳವಾದ ಬಟ್ಟೆಗಳಿಗೆ ಬೇಡಿಕೆ ಹೆಚ್ಚಿತು. ಆಗ ಕೆನರಾದಲ್ಲಿ ಜಿಲ್ಲಾ ಮ್ಯಾಜಿಸ್ಟ್ರೇಟ್ ಆಗಿದ್ದ ಐ. ಬ್ಯಾಬಿಂಗ್ಟನ್ನನು ಸರಕಾರದ ಕಾರ್ಯದರ್ಶಿಗೆ ೧೮೨೮ರಲ್ಲಿ ಬರೆದ ಪತ್ರವು ಬ್ರಿಟನ್ನಿನ ಉತ್ಪನ್ನಗಳು ಕೆನರಾವನ್ನು ಪ್ರವೇಶಿಸಿದ್ದರ ಬಗೆಗೆ ಬೆಳಕು ಚೆಲ್ಲುತ್ತದೆ: "ಕರಾವಳಿಯ ಕೆಲವು ಅಂಗಡಿಗಳಲ್ಲಿ ಬ್ರಿಟನ್ನಿನ ಹತ್ತಿಬಟ್ಟೆಗಳು ಹೆಚ್ಚಿನ ಬೆಲೆಗೆ ಸ್ವಲ್ಪ ಪ್ರಮಾಣದಲ್ಲಿ

ಮಾರಾಟವಾಗುತ್ತಿವೆಯಾದರೂ ಎಲ್ಲ ವರ್ಗದವರಿಂದ ಉಪಯೋಗಿಸಲ್ಪಡುತ್ತಿಲ್ಲ. ಪೇದೆಗಳು ಮತ್ತು ಸರಕಾರದ ಮೇಲ್ವರ್ಗದ ಗುಮಾಸ್ತರು, ಯುರೋಪಿನ ಅಧಿಕಾರಿಗಳೊಂದಿಗೆ ಸರ್ಕೀಟಿಗೆ ಹೋಗುವ ಸಂದರ್ಭಗಳಿಗೋಸ್ಕರ ಉದ್ದನೆಯ ಬಟ್ಟೆಗಳನ್ನು ಕೊಳ್ಳಲು ಉತ್ಸುಕರಾಗಿದ್ದಾರೆ ಮತ್ತು ಬಟ್ಟೆ ಪಡೆಯುವ ಯಾವುದೇ ಅವಕಾಶಗಳನ್ನು ಅತಿ ಸಂತೋಷದಿಂದ ಉಪಯೋಗಿಸಿಕೊಳ್ಳುತ್ತಾರೆ. ಈ ಪ್ರಾಂತ್ಯದಲ್ಲಿ ಬ್ರಿಟಿಶ್ ಉತ್ಪನ್ನಗಳಿಗೆ ಹೆಚ್ಚುತ್ತಿರುವ ಬೇಡಿಕೆಯನ್ನು ಇನ್ನಷ್ಟು ಉತ್ತೇಜಿಸಲು ಮತ್ತು ಜನರ ಆರೋಗ್ಯವನ್ನು ಸುಧಾರಿಸಲು ಹಾಗೂ ಜನರ ಅವಶ್ಯಕತೆಗಳನ್ನು ಹೆಚ್ಚಿಸಲು(ಸರಕಾರಕ್ಕೆ ಯಾವುದೇ ಹೊರೆ ಬೀಳದಂತೆ) ಮದ್ರಾಸಿನ ಆಮದು ಗೋದಾಮಿನ ಅಧಿಕಾರಿಯು ಮೊದಲ ಸರಕು ಹಡಗಿನಲ್ಲಿ ಸಾಮಾನ್ಯ ಇಂಗ್ಲಿಶ್ ಲಾಂಗ್‌ಕ್ಲೋತ್‌ನ ಅನೇಕ ಬೇಲ್‌ಗಳನ್ನು ಕಳುಹಿಸುವಂತೆ ತಿಳಿಸುವುದು. ಅವುಗಳ ಜೊತೆಗೇ, ಮಾರಾಟದ ಬೆಲೆಗಳ ಪಟ್ಟಿಯನ್ನು ಕಳುಹಿಸುವುದು. ಇಲ್ಲಿನ ಕೆಲವೊಂದು ಆಸಕ್ತ ಶ್ರೀಮಂತ ವರ್ಗದವರಿಗಾಗಿ, ಸ್ವಲ್ಪ ಪ್ರಮಾಣದಲ್ಲಿ ಉತ್ತಮ ಗುಣಮಟ್ಟದ ಬಟ್ಟೆಯನ್ನು ಜೊತೆಗೇ ಕಳುಹಿಸುವುದು( ಬ್ಯಾಬಿಂಗ್ಟನ್, ದ ಪ್ರಿನ್ಸಿಪಲ್ ಕಲೆಕ್ಟರ್ ಆ್ಯಂಡ್ ಮ್ಯಾಜಿಸ್ಟ್ರೇಟ್ ಆಫ್ ಕೆನರಾ ಟು ದ ಸೆಕ್ರೆಟರಿ ಟು ಗವರ್ನಮೆಂಟ್, ಟೆರಿಟೋರಿಯಲ್ ಡಿಪಾರ್ಟ್ಮೆಂಟ್, ಪೋರ್ಟ್ ಸೈಂಟ್ ಜಾರ್ಜ್, ದಿ.೨೪.೧.೧೮೨೮, ಕಮರ್ಶಿಯಲ್ ಕನ್ಸಲ್ಟೇಶನ್, ೨೨.೬.೧೮೨೮, ಸಂ.೫೦, ಪು.೧೩೧, ೧೩೩), ಎಂದೆಲ್ಲ ಪತ್ರದ ಒಕ್ಕಣೆ ಆಗಿತ್ತು. ಆತನ ಇದೇ ಪತ್ರದಲ್ಲಿ ಕೆನರಾದ ಜನರಿಗೆಂದು ಸಾಮಾನ್ಯ ಗುಣಮಟ್ಟದ ಮತ್ತು ಅಗ್ಗದ ಬೆಲೆಯ ಬ್ರಿಟಿಶ್ ನೀಳ ಬಟ್ಟೆ ಹಾಗೂ ಗೌರವಾನ್ವಿತ ವರ್ಗದ ಜನರಿಗಾಗಿ ಉಣ್ಣೆಯ ಬಟ್ಟೆಗಳನ್ನು ಕಳುಹಿಸುವಂತೆಯೂ ಆತ ಕೇಳಿಕೊಂಡಿದ್ದು, ಇಲ್ಲಿನ ಜನರ ಆರೋಗ್ಯದ ಬಗೆಗಿನ ಮಾನವೀಯ ಕಾಳಜಿಯೂ ಇದಕ್ಕೆ ಕಾರಣವೆಂದು ಆತ ಪತ್ರದಲ್ಲಿ ಸ್ಪಷ್ಟಪಡಿಸಿದ್ದಾನೆ. ಇಲ್ಲಿನ ಜನರು ಕನಿಷ್ಠ ಉಡುಪು ತೊಡುವವರಾಗಿದ್ದು, ಹಗಲು ಮತ್ತು ರಾತ್ರಿ ಹವಾಮಾನದಲ್ಲಾಗುವ ವೈಪರೀತ್ಯಗಳಿಂದಾಗಿ ಕೆಲವೊಮ್ಮೆ ಮರಣಾಂತಿಕವೂ ಆಗಬಹುದಾದ ಸಾಂಕ್ರಾಮಿಕ ಜ್ವರಕ್ಕೆ ತುತ್ತಾಗುತ್ತಾರೆ. ಅದಕ್ಕೆ ಪರಿಹಾರವಾಗಿ ಮೇಲೆ ಉಲ್ಲೇಖಿಸಿದ ಮಾದರಿಯ ಬಟ್ಟೆಗಳನ್ನು ಪೂರೈಸಬೇಕೆಂಬುದು ಆತನ ನಿಲುವು(ಅದೇ, ಕಮರ್ಶಿಯಲ್ ಕನ್ಸಲ್ಟೇಶನ್, ೧೦.೧೦.೧೮೨೮, ಸಂ.೨೧, ಪು.೮೨೫), ಆದರೆ ಇಲ್ಲಿ ಆತ ಹೇಳುವ ಹಗಲಿನ ವಿಪರೀತ ಸೆಕೆ ಮತ್ತು ರಾತ್ರಿಯ ವಿಪರೀತ ಚಳಿ ದಕ್ಷಿಣ ಕನ್ನಡ ಜಿಲ್ಲೆಯ ಕರಾವಳಿಯಲ್ಲಿರಲಿಲ್ಲ. ಬದಲು ಘಟ್ಟದ ಬುಡದ ಪ್ರದೇಶಗಳಲ್ಲಿ ಈ ವಾತಾವರಣವಿದ್ದು, ಆತ ಉಲ್ಲೇಖಿಸಿದ ಸಾಂಕ್ರಾಮಿಕ ಜ್ವರ– ಮಲೇರಿಯಾ ಅಲ್ಲಿನ ಜನರನ್ನು ಪೀಡಿಸುತ್ತಿತ್ತು.

ಆ ದಶಕಗಳಲ್ಲಿ ಅತಿ ಹೆಚ್ಚು ಪ್ರಾದೇಶಿಕ ಬೇಡಿಕೆಯಿದ್ದ ಬ್ರಿಟೀಶ್ ಬಟ್ಟೆಗಳು ಉತ್ತಮ ಗುಣಮಟ್ಟದ ತಾಮ್ರವರ್ಣ, ಹಳದಿ, ದಟ್ಟ ಹಸಿರು ಮತ್ತು ದಟ್ಟ ನೀಲಿಯ ಬಟ್ಟೆಗಳು ಮತ್ತು ಬಿಳಿ ಮತ್ತು ಕೆಂಪು ಉಣ್ಣೆಯ ಕಂಬಳಿಗಳು(ಇಂದಿಗೂ ಕೆಲವು ಸರಕಾರಿ ಆಸ್ಪತ್ರೆಗಳಲ್ಲಿ ಕಾಣುವ ಈ ಬಿಳಿ–ಕೆಂಪು(ಕಂಬಳಿ) ವರ್ಣ ಸಂಯೋಜನೆ ಇದರ ಬಳುವಳಿಯೆ?), ಮೇಲೆ ಉಲ್ಲೇಖಿಸಿದ ಪತ್ರದನ್ವಯ ಕೆನರಾದಲ್ಲಿ ಹಂಚಲೆಂದು ಕಲೆಕ್ಟರನ ಬೇಡಿಕೆಯಂತೆ ಬ್ರಿಟನ್ನಿನಿಂದ ಬ್ರಿಟಿಶ್ ನೀಳ

ಹತ್ತಿಬಟ್ಟೆ ಮತ್ತು ಉಲ್ಲನ್ ಬಟ್ಟೆಗಳನ್ನು ಮದ್ರಾಸಿನ ಕಮರ್ಷಿಯಲ್ ಸೂಪರಿಂಟೆಂಡೆಂಟರಿಗೆ ಕಳುಹಿಸಲಾಯಿತು. ಸಾದಾ ನೀಳಬಟ್ಟೆಗಳನ್ನು ಸರಕಾರಿ ನೌಕರರಿಗೂ ಹಂಚಲಾಗಿದ್ದು, ಅವರಿಗೆ ಹಣ ಪಾವತಿ ಮಾಡಲು ಅನುಕೂಲವಾಗುವಂತೆ ೬ ಸಮಾನ ಕಂತುಗಳಲ್ಲಿ ಸಂಬಳದಿಂದ ಕಡಿತಗೊಳಿಸುವ ಕಲೆಕ್ಟರನ ಸಲಹೆಯನ್ನು ಪುರಸ್ಕರಿಸಲಾಗಿತ್ತು. ಹೀಗೆ ಬ್ರಿಟಿಶ್ ಹತ್ತಿ ಉತ್ಪನ್ನಗಳು ಕೆನರಾದಂತಹ ಒಂದು ಸಣ್ಣ ಪ್ರದೇಶವನ್ನೂ ಆಡಳಿತ ನೀತಿಗನುಗುಣವಾಗಿಯೇ ಪ್ರವೇಶಿಸಿದುವು. ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ಬಂದರು ಒಂದು ವಿತರಣಾಕೇಂದ್ರವೂ ಆಗಿದ್ದು, ಇಲ್ಲಿಗೆ ಮದ್ರಾಸಿನಿಂದ, ಮುಂಬೈಯಿಂದ ಆಮದಿಸಲಾದ ನೀಳಬಟ್ಟೆಗಳು, ನೆಲಮಾರ್ಗವಾಗಿ ಕೊಡಗು, ಮೈಸೂರು ಮತ್ತು ಬೆಂಗಳೂರನ್ನು ತಲುಪುತ್ತಿದ್ದುವು.

ಒಟ್ಟಾರೆಯಾಗಿ ಬ್ರಿಟಿಶರು ಭಾರತಕ್ಕೆ ಬಂದ ಉದ್ದೇಶ ವ್ಯಾಪಾರ ಹಾಗೂ ಧರ್ಮ ಪ್ರಚಾರದ ಉದ್ದೇಶವನ್ನು ಹೊಂದಿದ್ದರು. ಆದರೆ ಇವರು ಈ ಹಿಂದೆ ಬಂದ ಕಂಪನಿಗಳ ಹಾಗೇ ಕರಾವಳಿ ಪ್ರದೇಶಗಳಲ್ಲಿ ಅಷ್ಟೇ ಅಲ್ಲದೆ ಮಧ್ಯ ಭಾರತದಲ್ಲಿ ತಮ್ಮ ನೆಲೆಗಳನ್ನು ಕಂಡುಕೊಂಡರು. ಆದರೆ ಇವರ ಆರ್ಥಿಕ ಧೋರಣೆಗಳಿಂದ ಭಾರತ ಹಾಗೂ ಕರ್ನಾಟಕದ ಅನೇಕ ಪ್ರದೇಶಗಳು ಸೂರೆಗೆ ಒಳಗಾದವು. ಹಾಗೆಯೇ ಸಾಮಾಜಿಕ ಸ್ಥಾನಮಾನಗಳಿಂದ ತತ್ತರಿಸಿದ ಅನೇಕ ಸಮುದಾಯಗಳಿಗೆ ಅಧಿಕಾರ ಹಾಗೂ ಗೌರವಗಳು ದೊರಕುವಂತೆ ಮಾಡಿದರು. ಮುಖ್ಯವಾಗಿ ಇವರು ಭಾರತವನ್ನು ವಸಾಹತು ನೆಲೆಯನ್ನಾಗಿ ಮಾಡಿಕೊಂಡಾಗಿನಿಂದ ಕೃಷಿಯ ವಾಣಿಜ್ಯೀಕರಣ ಬೆಳೆಗಳನ್ನು ಬೆಳೆಯಲಾರಂಭಿಸಿದರು. ಸಾಂಪ್ರದಾಯಿಕ ಕೃಷಿಪದ್ಧತಿಗೆ ಇವರ ಕಾಲದಿಂದ ಮುಕ್ತಿ ನೀಡಿದಂತಾಗಿದೆ. ಅದೇ ರೀತಿ ಶಿಕ್ಷಣಕ್ಷೇತ್ರದಲ್ಲಿ ಇವರ ಸಾಧನೆಯನ್ನು ಸ್ಮರಿಸಬಹುದು. ವಿಜಯನಗರೋತ್ತರ ಕಾಲದಲ್ಲಿ ಅನೇಕ ಕಂಪನಿಗಳು, ವಿದೇಶಿ ವಿನಿಮಯ ವ್ಯವಸ್ಥೆ ಮುಂದುವರಿದಿದ್ದು, ಕೆಲವು ಕಂಪನಿಗಳು ಕೇವಲ ಕರಾವಳಿ ಪ್ರದೇಶದ ಸಂಸ್ಥಾನಗಳೊಂದಿಗೆ ತಮ್ಮ ವ್ಯಾವಹಾರಿಕ ಜೀವನ ನಡೆಸಿದ್ದಾರೆ. ಆದರೆ ಬ್ರಿಟಿಶರು ಉತ್ತರ ಮತ್ತು ದಕ್ಷಿಣ ಭಾರತದ ಅನೇಕ ಸಂಸ್ಥಾನಗಳೊಂದಿಗೆ ನಿರಂತರ ಯುದ್ಧ, ಒಪ್ಪಂದ ಹಾಗೂ ಸ್ನೇಹತ್ವದ ಸಂಬಂಧಗಳನ್ನು ಹೊಂದಿದ್ದರು ಎಂಬುದಕ್ಕೆ ಈ ಮೇಲಿನ ಎಲ್ಲ ಅಧ್ಯಯನಗಳೇ ಕಾರಣ.

ೃ ಸ್ಥಾನಕಳೆದುಕೊಂಡರು. ವ್ಯಾಪಾರ ಮತ್ತು ವಾಣಿಜ್ಯೋದ್ಯಮ ನೆಲೆ ಕಂಡುಕೊಂಡ ಹೊಸವರ್ತಕ ಸಮುದಾಯಗಳು ವ್ಯಾಪಾರ ವಾಣಿಜ್ಯದಲ್ಲಿ ನೆಲೆ ಕಂಡುಕೊಂಡರು.

ವಿಜಯನಗರ ಕಾಲಾವಧಿಯಲ್ಲಿ ಅಮರನಾಯಕ ಹುದ್ದೆ ಆರಂಭವಾಗಿದೆ. ವಿಜಯನಗರೋತ್ತರ ಕಾಲದಲ್ಲಿ ಈ ನಾಯಕರೆಲ್ಲ ತಮ್ಮ ಸ್ಥಾನದಲ್ಲಿ ಸಾರ್ವಭೌಮ ಸ್ವತಂತ್ರವನ್ನು ಘೋಷಿಸಿಕೊಂಡರು

# ಅಧ್ಯಾಯ – ಏಳು

# ಸಮಾರೋಪ

ಚರಿತ್ರೆ ಬರವಣಿಗೆಯ ಕ್ರಮಗಳು ಬದಲಾದಂತೆ ಚರಿತ್ರೆಯ ರಚನೆಯ ಸ್ವರೂಪವು ಬದಲಾಗುತ್ತದೆ. ಹಾಗಾಗಿ ರಾಜ ಪ್ರಭುತ್ವಕೇಂದ್ರಿತ ಅಧ್ಯಯನಗಳ ಸ್ವರೂಪ ಬದಲಾಗಿ ಸಮಾಜ ಸಂಸ್ಕೃತಿಯನ್ನೊಳಗೊಂಡ ಆರ್ಥಿಕ ಚರಿತ್ರೆಯ ರಚನೆಯು ಹುಟ್ಟಿಕೊಂಡಿದೆ.ಪ್ರಾಚೀನ ಕಾಲದಿಂದ ಭಾರತದ ಆರ್ಥಿಕತೆ ಮತ್ತು ವಾಣಿಜ್ಯವನ್ನು ಕುರಿತಂತೆ ಅಂದಿನ ಪ್ರಭುತ್ವಗಳು ಪ್ರೋತ್ಸಾಹವನ್ನು ನೀಡಿರುವುದು ಕಂಡುಬರುತ್ತದೆ. ಮಧ್ಯಕಾಲೀನ ಭಾರತದ ಚರಿತ್ರೆಯಲ್ಲಿ ವಿಜಯನಗರ ಮತ್ತು ನಿಜಯನಗರೋತ್ತರ ಕಾಲದ ದಕ್ಷಿಣ ಭಾರತದ ಚರಿತ್ರೆಯು ಗಮನಾರ್ಹವಾಗಿದೆ. ಯುರೋಪಿಯನ್ನರಾದ ಪೋರ್ಚಗೀಸರು ಕರ್ನಾಟಕದ ಕರಾವಳಿಯಲ್ಲಿ ಈ ವೇಳೆಗೆ ತಮ್ಮ ನೆಲೆಯನ್ನು ಕಂಡುಕೊಂಡಿದ್ದರು. ಪೋರ್ಚಗೀಸರು ಕರ್ನಾಟಕದ ಕರಾವಳಿಯಲ್ಲಿ ವ್ಯಾಪಾರ ವಾಣಿಜ್ಯದ ಮೇಲೆ ತಮ್ಮ ನಿಯಂತ್ರಣವನ್ನು ಸಾಧಿಸಿದರು. ಪೋರ್ಚುಗೀಸರ ಆಗಮನದಿಂದ ಕರ್ನಾಟಕದ ಕರಾವಳಿಯಲ್ಲಿ ಅನೇಕ ಸಾಂಸ್ಕೃತಿಕ ಅನನ್ಯತೆಗಳನ್ನು ಉಂಟುಮಾಡಿತ್ತು. ಪೋರ್ಚುಗೀಸರು ವ್ಯಾಪಾರದ ಉದ್ದೇಶದಿಂದ ಭಾರತಕ್ಕೆ ಬಂದರು ಭಾರತದಲ್ಲಿ ದೊರೆಯುವ ಸಂಬಾರ ಪದಾರ್ಥಗಳ ಕಡೆ ಗಮನಹರಿಸಿ ತಮ್ಮದೇ ನೀಲಿಜಲ ನೀತಿಗಳನ್ನು ರೂಪಿಸುವ ಮೂಲಕ ಸಂಪೂರ್ಣ ವ್ಯಾಪಾರದ ನಿಯಂತ್ರಣವನ್ನು ಸಾಧಿಸುವಂತೆ ಮಾಡಿದರು. ಇದರಿಂದ ಇದುವರೆಗೂ ವ್ಯಾಪರ–ವಾಣಿಜ್ಯದಲ್ಲಿ ನೆಲೆ ಕಂಡುಕೊಂಡ ಸಮುದಾಯಗಳು ತಮ್ಮ ಸ್ಥಾನಕಳೆದುಕೊಂಡರು. ವ್ಯಾಪಾರ ಮತ್ತು ವಾಣಿಜ್ಯೋದ್ಯಮ ನೆಲೆ ಕಂಡುಕೊಂಡ ಹೊಸವರ್ತಕ ಸಮುದಾಯಗಳು ವ್ಯಾಪಾರ ವಾಣಿಜ್ಯದಲ್ಲಿ ನೆಲೆ ಕಂಡುಕೊಂಡರು.

ವಿಜಯನಗರ ಕಾಲಾವಧಿಯಲ್ಲಿ ಅಮರನಾಯಕ ಹುದ್ದೆ ಆರಂಭವಾಗಿದೆ. ವಿಜಯನಗರೋತ್ತರ ಕಾಲದಲ್ಲಿ ಈ ನಾಯಕರೆಲ್ಲ ತಮ್ಮ ಸ್ಥಾನದಲ್ಲಿ ಸಾರ್ವಭೌಮ ಸ್ವತಂತ್ರವನ್ನು ಘೋಷಿಸಿಕೊಂಡರು ಈ ಮೂಲಕ ಕೃಷಿ, ನೀರಾವರಿ, ಸರಕುಗಳ ಉತ್ಪಾದನೆ ಹೆಚ್ಚಾಗಿ ಅವರು ಆಡಳಿತ ನಿರ್ವಹಣೆಗೆ ಸೈನಿಕರನ್ನು ನೇಮಿಸಿಕೊಂಡರು. ಹೆಚ್ಚು ಹುದ್ದೆಗಳು ಸೃಷ್ಠಿಯಾದವು ಈ ಹುದ್ದೆಗಳ ಸೃಷ್ಠಿಯಿಂದ

ಸಮಾಜದಲ್ಲಿ ಹಲವಾರು ಬದಲಾವಣೆಗಳಿಂದ ಕುಶಲಕಸುಬುಗಳು ಹೆಚ್ಚಾಗಿ ಬರಬೇಕಾದರೆ ಅದಕ್ಕೆ ಅಗತ್ಯವಾದ ಸೌಲಭ್ಯಗಳು ಅವಶ್ಯಕವಾಗಿದ್ದು. ಈ ಸೌಲಭ್ಯಗಳು ವಿಜಯನಗರೋತ್ತರ ಕಾಲದ ಎಲ್ಲ ನಾಯಕ ಮನೆತನಗಳಲ್ಲಿಯೂ ಸೃಷ್ಠಿಯಾದವು ಹೊಸದೊಂದು ಸೈನ್ಯ ಸಂಘಟನೆ ಬಂದಾಗ ಆ ಸೈನ್ಯಕ್ಕೆ ಬೇಕಾದ ಯುದ್ಧೋಪಕರಣಗಳು, ವಸ್ತ್ರಗಳು ಅಗತ್ಯವಾಗಿದ್ದು ಇವುಗಳ ಹೆಚ್ಚುವರಿ ಉತ್ಪಾದನೆಯನ್ನು ವಿಜಯನಗರೋತ್ತರ ಕಾಲದಲ್ಲಿ ಗುರುತಿಸಬಹುದಾಗಿದೆ. ಅಮರ ನಾಯಕರಾಗಿದ್ದವರು ಸ್ಥಳೀಯ ಮಟ್ಟದಲ್ಲಿ ಸಂಸ್ಥಾನಗಳನ್ನು ಸ್ಥಾಪಿಸುವ ಮೂಲಕ ಭಾಷೆ ಸಂಸ್ಕೃತಿ ಅಲ್ಲಿನ ಕಾಡು ಭೂಮಿಯನ್ನು ಕೃಷಿಯೋಗ್ಯ ಭೂಮಿಯನ್ನಾಗಿ ಪರಿವರ್ತಿಸಿ ಬುಡಕಟ್ಟು ಸಂಸ್ಕೃತಿಗಳನ್ನು ಹೊಂದಿದ ಮನೆತನಗಳು ಅಸ್ತಿತ್ವಕ್ಕೆ ಬಂದವು. ತಮ್ಮ ಸ್ಥಾನವನ್ನು ಭದ್ರಪಡಿಸಿಕೊಳ್ಳುವುದಕ್ಕೆ ತಮ್ಮದೇಯಾದ ನೀತಿಗಳನ್ನು ಅಳವಡಿಸಿಕೊಂಡರು. ಈ ಮೂಲಕ ವಿಜಯನಗರೋತ್ತರ ಕಾಲದಲ್ಲಿ ಕಂಡುಬಂದ ಒಂದು ಮುಖ್ಯ ರಾಜಕೀಯ ಆರ್ಥಿಕ ಸ್ಥಿತ್ಯಂತರವೆಂದು ಹೇಳಬಹುದು.

ವಿಜಯನಗರೋತ್ತರ ೧೫೬೫ರ ರಕ್ಕಸ ತಂಗಡಗಿ ಯುದ್ಧದ ನಂತರ ರಾಜಕೀಯ ಅಧಿಕಾರದ ಹಸ್ತಾಂತರದ ಜೊತೆ ಸಮಾಜಿಕ ಆರ್ಥಿಕ ಬದಲಾವಣೆಯು ಕಂಡು ಬರುತ್ತದೆ. ವಿಜಯನಗರದ ಪ್ರಭುತ್ವ ಕೇಂದ್ರಿತದಿಂದ ನಡೆಯುವ ವ್ಯಾಪಾರವು ಕೆಳದಿ ನಾಯಕರು ಬಿಜಾಪುರದ ಸುಲ್ತಾನರು ಮೈಸೂರು ಒಡೆಯರ ಮೂಲಕ ಗುರುತಿಸಿಕೊಳ್ಳುತ್ತದೆ. ವಿಜಯನಗರದ ಅವನತಿಯಿಂದ ಕರಾವಳಿಯ ವ್ಯಾಪಾರದಲ್ಲಿ ಪೋರ್ಚುಗೀಸರ ವ್ಯಾಪಾರವು ಕ್ಷೀಣಿಸಿದ್ದರಿಂದ ಪುನಃ ಸ್ಥಳೀಯ ಕರಾವಳಿ ಸಂಸ್ಥಾನಗಳಲ್ಲಿ ಸಮುದ್ರದ ವ್ಯಾಪಾರವು ನಿಯಂತ್ರಿಸಲ್ಪಟ್ಟಿತ್ತು. ಈ ಮನೆತನಗಳೊಂದಿಗೆ ನಂತರ ಬಂದ ಪೋರ್ಚುಗೀಸರು ಡಚ್ಚರು, ಬ್ರಿಟಿಶರು ಮತ್ತು ಫ್ರೆಂಚರು ಕರಾವಳಿಯ ವ್ಯಾಪಾರ–ವಾಣಿಜ್ಯದಲ್ಲಿ ಗುರುತಿಸಿಕೊಂಡರು. ಆಹಾರದ ಬೆಳೆಗಳ ಮೂಲಕ ಗುರುತಿಸಿಕೊಂಡ ಭಾರತವನ್ನು ವಾಣಿಜ್ಯ ಬೆಳೆಗಳ ಮೂಲಕವೇ ಮುಂದುವರೆಯುಂತಹ ಸನ್ನಿವೇಶವನ್ನು ಯುರೋಪಿಯನ್ನರು ಉಂಟುಮಾಡಿದರು. ಸ್ಥಳೀಯ ಸಂಸ್ಥಾನಗಳೊಂದಿಗೆ ಆರ್ಥಿಕ ಸಂಬಂಧಗಳನ್ನು ಇಟ್ಟುಕೊಳ್ಳುವ ಮೂಲಕ ವಾಣಿಜ್ಯ ಬೆಳೆಗಳಿಗೆ ಪ್ರೋತ್ಸಾಹವನ್ನು ನೀಡಿ ಸೂಕ್ತ ನಿರ್ದೇಶನಗಳನ್ನು ನೀಡುತ್ತಾ ಹೆಚ್ಚು ವಾಣಿಜ್ಯ ಬೆಳೆಗಳನ್ನು ಬೆಳೆದರು ಇದರಿಂದ ಭಾರತವು ವಾಣಿಜ್ಯೋದ್ಯಮದತ್ತ ಮುಖ ಮಾಡಿದ ಸನ್ನಿವೇಶ ಕಂಡುಬರುತ್ತದೆ.

ವಿಜಯನಗರೋತ್ತರ ಕಾಲದಲ್ಲಿ ಊಳಿಗಮಾನ್ಯ ವ್ಯವಸ್ಥೆಯಲ್ಲಿ ಬ್ರಹ್ಮದೇಯ ಮತ್ತು ದೇವದಾಯ ಮತ್ತು ಮಠಗಳು ಆರ್ಥಿಕ ಕೇಂದ್ರಗಳಾಗಿ ಬೆಳವಣಿಗೆಯನ್ನು ಹೊಂದಿದವು. ವಿಜಯನಗರೋತ್ತರ ಕಾಲಾವಧಿಯಲ್ಲಿ ಮಠಗಳು ಎಲ್ಲ ಸ್ಥಳೀಯ ಸಂಸ್ಥಾನಗಳೊಂದಿಗೆ ಮಠಗಳು ಗುರುತಿಸಿಕೊಳ್ಳುತ್ತವೆ. ಚಿತ್ರದುರ್ಗ, ಕೆಳದಿ, ಯಲಹಂಕ, ಮೈಸೂರು ಸಂಸ್ಥಾನಗಳ ಕಾಲದಲ್ಲಿ ಹೆಚ್ಚು ಮಠಗಳು ಪ್ರಾಬಲ್ಯಕ್ಕೆ ಬಂದು ಹೆಚ್ಚು ಹೆಚ್ಚು ಭೂಹಿಡುವಳಿಗಳನ್ನು ಹೊಂದಿ ಆರ್ಥಿಕವಾಗಿ ಬಲಿಷ್ಠವಾದವು. ಈ ಕಾಲಘಟ್ಟದಲ್ಲಿ ವ್ಯಾಪಾರದಲ್ಲಿ ಒಂದು ಕಡೆಯಿಂದ ಇನ್ನೊಂದು ಕಡೆ ಒಂದು ಈ ಮಠಗಳಲ್ಲಿ ನೆಲೆಸುವಂತಹ ಸಂದರ್ಭದಲ್ಲಿ ಮಠಗಳು ಸರಕು ವಿಸ್ತರಣೆಯ ಕೇಂದ್ರಗಳಾಗಿ ವಿಸ್ತರಿಸಲ್ಪಡುತ್ತವೆ.

ಇದರಿಂದ ಆದಾಯ ಹೆಚ್ಚಾಗಿ ಆರ್ಥಿಕ ಕೇಂದ್ರಗಳಾಗಿ ಬೆಳವಣಿಗೆ ಆಗುತ್ತವೆ. ಈ ಕಾಲಘಟ್ಟದಲ್ಲಿ ಬರವಣಿಗೆಯ ಮಾಧ್ಯಮವು ಕಡತಗಳ ಮೂಲಕ ಗುರುತಿಸಿಕೊಳ್ಳುತ್ತದೆ. ೧೬ನೇ ಶತಮಾನದ ಮಧ್ಯಭಾಗದಲ್ಲಿ ವಿಜಯನಗರ ಸಾಮಂತರರಾದ ಕೆಳದಿ ನಾಯಕರು ಕರಾವಳಿಯ ಎಲ್ಲ ಬಂದರುಗಳನ್ನು ತಮ್ಮ ನಿಯಂತ್ರಣಕ್ಕೆ ಪಡೆದುಕೊಂಡರು. ಇದರಿಂದ ಯುರೋಪಿಯನ್ನರು ಕರಾವಳಿ ಸಂಸ್ಥಾನವಾದ ಕೆಳದಿಯೊಂದಿಗೆ ಆರ್ಥಿಕ ರಾಜಕಾರಣದ ಸಂಬಂಧವನ್ನಿರಿಸಿಕೊಳ್ಳುವುದು ಅನಿವಾರ್ಯವಾಗಿತ್ತು. ವಿಜಯನಗರವು ೧೫೬೫ರ ಯುದ್ಧದಿಂದ ಅವನತಿಯಾದ್ದರಿಂದ ವ್ಯಾಪಾರವು ಸ್ಥಳೀಯ ಸಂಸ್ಥಾನಗಳಲ್ಲಿ ನಿಯಂತ್ರಿಸಲ್ಪಟ್ಟಿತ್ತು. ಯುರೋಪಿಯನ್ನರು ಕರಾವಳಿಯ ವಿದೇಶಿಯ ವ್ಯಾಪಾರ ಆರಂಭಿಸಲು ಅಲ್ಲಿನ ಸ್ಥಳೀಯ ಮನೆತನಗಳೊಂದಿಗೆ ರಾಜಕೀಯ ಆರ್ಥಿಕ ಸಂಬಂಧ ಹೊಂದಿದ್ದರು. ಕರಾವಳಿ ಭಾಗದಲ್ಲಿ ಹೆಚ್ಚಿನ ಕರಿಮೆಣಸು ದೊರೆಯುತ್ತಿದ್ದು ಈ ಮೆಣಸಿಗೆ ಯುರೋಪಿನಲ್ಲಿ ಬಾರಿಬೇಡಿಕೆ ಇದ್ದಿದ್ದರಿಂದ ಯುರೋಪಿಯನ್ನರಾದ ಪೋರ್ಚುಗೀಸ, ಡಚ್, ಫ್ರೆಂಚ್ ಮತ್ತು ಇಂಗ್ಲಿಶ್ ಕಂಪನಿಗಳು ಇಲ್ಲಿನ ವ್ಯಾಪಾರ ವಾಣಿಜ್ಯದಲ್ಲಿ ಪರಸ್ಪರ ಸಂಘರ್ಷದಲ್ಲಿ ತೊಡಗಿದರು. ಇದರಿಂದ ಕರಾವಳಿ ಭಾಗದಲ್ಲಿ ಯುರೋಪಿಯನ್ನರು ಮತ್ತು ಸ್ಥಳೀಯ ವ್ಯಾಪಾರಿ ಸಮುದಾಯಗಳೊಂದಿಗೆ ಸಂಘರ್ಷಗಳು ನಡೆದಿರುವುದು ಕಂಡು ಬರುತ್ತದೆ. ವಿಜಯನಗರ ಮತ್ತು ವಿಜಯನಗರೋತ್ತರ ಕಾಲದಲ್ಲಿ ಕಂಡುಬಂದ ಒಂದು ಮುಖ್ಯ ಸ್ಥಿತ್ಯಂತರವಾಗಿದೆ. ಇದರಿಂದ ಸ್ಥಳೀಯ ನಾಯಕರುಗಳನ್ನು ಯುರೋಪಿಯನ್ನರು ಅವಲಂಭಿಸುವಂತಾಯಿತು. ೧೭ನೇ ಶತವಮಾನದಲ್ಲಿ ಕಂಡುಬಂದ ಒಂದು ಮುಖ್ಯ ಬದಲಾವಣೆಯೆಂದರೆ ಕೃಷಿ ಭೂಮಿಯ ವಿಸ್ತರಣೆಯಾಗಿದೆ. ಸ್ಥಳೀಯ ನಾಯಕ ಮನೆತನಗಳು ಸಂಸ್ಥಾನದ ಆದಾಯವನ್ನು ಹೆಚ್ಚಿಸುವುದಕ್ಕೆ ಅಲ್ಲಿನ ಅರಣ್ಯ ಪ್ರದೇಶಗಳನ್ನು ಕೃಷಿಯೋಗ್ಯ ಭೂಮಿಯಾಗಿ ಪರಿವರ್ತಿಸಿ ಕೃಷಿಗೆ ಒಳಪಡಿಸಿ ಕೆರೆ ಕಾಲುವೆಗಳನ್ನು ನಿರ್ಮಿಸಿ ನೀರಾವರಿಗೆ ಅವಕಾಶ ಮಾಡಿಕೊಡುತ್ತಿದ್ದರು. ಇದರಿಂದ ಸಂಸ್ಥಾನಗಳ ಆದಾಯವು ಹೆಚ್ಚಾಗಿ ಕೃಷಿಭೂಮಿಯು ವಿಸ್ತರಿಸಪಡುತಿತ್ತು. ಕೃಷಿಭೂಮಿಯ ವಿಸ್ತರಣೆಯಿಂದ ಹಲವಾರು ಕೃಷಿ ಉತ್ಪನ್ನಗಳು ಅಧಿಕಗೊಂಡು ಕೃಷಿಯೇತರ ಚಟುವಟಿಕೆಗಳು ವಿಜಯನಗರೋತ್ತರ ಕಾಲದಲ್ಲಿ ಹೆಚ್ಚಾಗಿ ಕಂಡು ಬರುತ್ತದೆ. ಕೃಷಿ ಉತ್ಪನ್ನಗಳು ಹೆಚ್ಚಾದ ಕಾರಣ ಸ್ಥಳೀಯ ಹಂತದಲ್ಲಿ ಸಂತೆಗಳು ನಿರ್ಮಾಣವಾದವು ಸಂತೆಗಳ ಜೊತೆಗೆ ಪೇಟೆ-ಪಟ್ಟಣಗಳು ಈ ಕಾಲಘಟ್ಟದಲ್ಲಿ ಬಹುಬೇಗ ನಗರ ಕೇಂದ್ರಗಳಾಗಿ ವಿಸ್ತರಿಸಲ್ಪಟ್ಟಿವೆ.

ವಿಜಯನಗರೋತ್ತರ ಕಾಲದಲ್ಲಿ ಕೃಷಿ ಭೂಮಿಯ ವಿಸ್ತರಣೆಯ ಜೊತೆ ಅಲ್ಲಿನ ಸಾಮಾನ್ಯ ಜನರ ಜೀವನ ಪರಿಸ್ಥಿತಿಯನ್ನು ಕಟ್ಟಿಕೊಡುವ ಪ್ರಯತ್ನಮಾಡಲಾಗಿದೆ. ಕೃಷಿ ಭೂಮಿಯಲ್ಲಿ ಸಾಮಾನ್ಯ ಜನರು ಭಾಗವಹಿಸುತ್ತಿದ್ದರು. ಇವರ ಜೀವನ ಸ್ಥಿತಿಯ ಪ್ರಾಚೀನ ಕಾಲದಿಂದಲೂ ಗುರುತಿಸಿಕೊಂಡಂತೆ ವಿಜಯನಗರೋತ್ತರ ಕಾಲದಲ್ಲಿಯು ಗುರುತಿಸಿ ಕೊಳ್ಳುವವರಾಗಿದ್ದರು. ಪ್ರಭುತ್ವ ಕೇಂದ್ರಿತ ಅಧ್ಯಯನದಲ್ಲಿ ಸಾಮಾನ್ಯ ಜನರ ಜೀವನ ಸ್ಥಿತಿಯು ಯಾವಾಗಲೂ ಇಂದಿರುತ್ತದೆ. ಭೂಮಾಲೀಕ ಮಧ್ಯವರ್ತಿ ಸಮುದಾಯಗಳು ಸಾಮಾನ್ಯ ಜನರನ್ನು ಶೋಷಿಸುವ ಮೂಲಕ ಆರ್ಥಿಕವಾಗಿ ಸಾಮಾನ್ಯ ಜನರು ಹಿಂದುಳಿದಿರುತ್ತಿದ್ದರು. ಈ ಕಾಲಘಟ್ಟದ ಕೊನೆಯಲ್ಲಿ ಕರ್ನಾಟಕ

ವಸಾಹತು ಪ್ರಕ್ರಿಯೆಗೆ ಒಳಪಡುವ ವೇಳೆಗೆ ಪ್ರಬಲವರ್ತಕ ಸಮುದಾಯವಾಗಿ ಗುರುತಿಸಿಕೊಂಡವರು. ಜಮೀನ್ದಾರರಾಗಿ ಕಂಪನಿಯ ಅಧಿಕಾರಿಗಳಾಗಿ ಗುರುತಿಸಿಕೊಂಡರು. ಈ ವರ್ಗವು ಕಂಪನಿ ಮತ್ತು ಸಾಮಾನ್ಯ ಜನರ ಮಧ್ಯವರ್ತಿವರ್ಗವಾಗಿದ್ದು ಸಾಮಾನ್ಯ ಕಿರುಕುಳಗಳು ಹೆಚ್ಚಾದವು ಇದರಿಂದ ರೈತ ಮತ್ತು ಸರ್ಕಾರದ ಮಧ್ಯೆಯು ಯಾವುದೇ ಸಂಬಂಧವಿಲ್ಲದ್ದರಿಂದ ರೈತರ ಶೋಷಣೆಯು ಈ ಕಾಲಘಟ್ಟದಲ್ಲಿ ಹೆಚ್ಚಾಗಿತ್ತು.

ವಿಜಯನಗರೋತ್ತರ ಕಾಲದಲ್ಲಿ ದಕ್ಷಿಣ ಭಾರತದ ಆರ್ಥಿಕ ಇತಿಹಾಸದಲ್ಲಿ ಮುಖ್ಯವಾಗಿ ಗುರುತಿಸಿಕೊಂಡ ಕೆಳದಿಯ ಶಿವಪ್ಪನಾಯಕ ಜಾರಿಗೊಳಿಸಿದ ತೆರಿಗೆ ಪದ್ದತಿಯು ಮುಖ್ಯವಾಗಿದ್ದು ವಿಜಯನಗರದ ಅರಸರ ಅಧೀನದಲ್ಲಿದ್ದ ಇವರು ವಿಜಯನಗರದ ಅರಸರ ಅನುಸರಸಿದ ತೆರಿಗೆ ಪದ್ದತಿಯನ್ನು ಅಳವಡಿಸಿಕೊಳ್ಳುವುದರ ಜೊತೆ ತಮ್ಮದೇ ಆದ ಕಂದಾಯ ನಿಗದಿ ಮತ್ತು ಕಂದಾಯ ವಸೂಲಿಯೆ ವಿದಾನವನ್ನು ಜಾರಿಗೊಳಿಸುವ ಮೂಲಕ ರಾಜ್ಯದ ಆದಾಯವನ್ನು ಹೆಚ್ಚಿಸುವಂತೆ ಮಾಡಿದರು. ಅಂದು ಬೇಡಿಕೆಯಲ್ಲಿದ್ದ ತೆಂಗಿನ ಬೆಳೆಯನ್ನು ಗಮನದಲ್ಲಿಟ್ಟುಕೊಂಡು ಭೂಮಿಯನ್ನು ವರ್ಗೀಕರಿಸಿ ವಿಂಗಡಿಸಿ ೧೦೦೦ ತೆಂಗಿನ ಅಥವಾ ಅಡಿಕೆ ಮರಗಳಿಗೆ ಎಷ್ಟು ಪ್ರಮಾಣದಲ್ಲಿ ಕಂದಾಯವನ್ನು ನಿಗಧಿಪಡಿಸಬೇಕೆಂದು ನಿರ್ಧರಿಸಿ ಹೊಸ ರೂಪದ ಕಂದಾಯ ವ್ಯವಸ್ಥೆ ಇದೇ ಶಿವಪ್ಪ ನಾಯಕ ಜಾರಿಗೊಳಿಸಿದ ಸಿಸ್ತಾ. ಇದು ಆ ಕಾಲಘಟ್ಟದ ಒಂದು ಪ್ರಮುಖ ಕಂದಾಯ ಸಂಗ್ರಹಣೆ ಮತ್ತು ನಿಗಧಿಯ ರೂಪವಾಗಿ ಕಂಡು ಬರುತ್ತದೆ. ಇದೇ ಮಾದರಿಯನ್ನು ಮೈಸೂರಿನ ಚಿಕ್ಕದೇವರಾಜ ಒಡೆಯರು ರೂಪಿಸಿದರು. ತೆಂಗಿನ ಮತ್ತು ಅಡಿಕೆ ಮರಗಳಿಗೆ ಇದೇ ವಿಧಾನವನ್ನು ಅನುಸರಿಸಿದರು.

ವಿಜಯನಗರೋತ್ತರ ಕಾಲದ ವ್ಯಾಪಾರ-ವಾಣಿಜ್ಯದಲ್ಲಿಯೇ ಮುಖ್ಯವಾಗಿ ಗುರುತಿಸಿಕೊಂಡ ಕಾಲ. ಸ್ಥಳೀಯ ಹಂತದಲ್ಲೂ ಸಂತೆಗಳಲ್ಲಿ ನಡೆಯುವ ವ್ಯಾಪಾರವು ವಿಶ್ವ ಮಾರುಕಟ್ಟೆಯ ಸ್ವರೂಪ ಪಡೆದಿದ್ದು ಈ ಕಾಲದಲ್ಲಿ. ಭಾರತದಲ್ಲಿ ಬೆಳೆಯುವ ಸಂಬಾರ ಪದಾರ್ಥಗಳಿಗೆ ಯುರೋಪಿನಲ್ಲಿ ಅಪಾರ ಬೇಡಿಕೆಯಿದ್ದರಿಂದ ಭಾರತವನ್ನು ಒಂದು ಮಾರುಕಟ್ಟೆಯನ್ನಾಗಿ ರೂಪಿಸಿದರು. ಇದರಿಂದ ಭಾರತವು ವಿಶ್ವಮಟ್ಟದ ವ್ಯಾಪಾರ ವಾಣಿಜ್ಯದಲ್ಲಿ ಗುರುತಿಸಿಕೊಂಡಿತ್ತು. ಆರಂಭದಲ್ಲಿ ಗೃಹ ಕೈಗಾರಿಕೆಗಳ ಅಭಿವೃದ್ಧಿಯನ್ನು ಉನ್ನತ ಹಂತಕ್ಕೇರಿಸಿದ ಕಾಲವಾಗಿತ್ತು. ನಂತರ ಬೃಹತ್ ಕೈಗಾರಿಕೆಗಳು ಅಭಿವೃದ್ಧಿಯಾಗಿದ್ದರಿಂದ ಆ ಕೈಗಾರಿಕೆಗಳನ್ನೇ ನಂಬಿದ್ದ ಜನಾಂಗಗಳು ಹಲವಾರು ವೃತ್ತಿಪಲ್ಲಟಗಳಿಗೆ ಒಳಪಡುತ್ತಾರೆ. ವಿಜಯನಗರೋತ್ತರ ಕಾಲದಲ್ಲಿ ಸಾಮಾಜಿಕ, ಆರ್ಥಿಕ ಸ್ಥಿತ್ಯಂತರಗಳು ಉಂಟಾಗಿದ್ದರಿಂದ ಸಮಾಜದಲ್ಲಿ ಮತ್ತು ವ್ಯಾಪಾರ ವಾಣಿಜ್ಯದಲ್ಲಿ ಹಲವಾರು ಹೊಸನಗರ ಕೇಂದ್ರಗಳು ಹುಟ್ಟಿಕೊಂಡವು. ಈ ನಗರಗಳು ಬ್ರಿಟಿಶರ ಕಾಲದಲ್ಲಿ ನಗರೀಕರಣ ಪ್ರಕ್ರಿಯೆಗೆ ಒಳಪಟ್ಟು ಬಹುಬೇಗ ಬೃಹತ್ ನಗರಕೇಂದ್ರಗಳಾಗಿ ಗುರುತಿಸಿಕೊಂಡವು. ಮೈಸೂರು ಒಡೆಯರು ಕೃಷಿ ಆರ್ಥಿಕತೆಯನ್ನು ವಿಸ್ತರಿಸುವುದರ ಜೊತೆಗೆ ವ್ಯಾಪಾರ ವಾಣಿಜ್ಯಕ್ಕೆ ವಿಶೇಷವಾದ ಪ್ರೋತ್ಸಾಹವನ್ನು ನೀಡಿದ್ದರು. ಚಿಕ್ಕದೇವರಾಜ ಒಡೆಯರ ಕಾಲಾವಧಿಯ ಆರ್ಥಿಕತೆಯ ವಿಸ್ತರಣೆಯ ಹಂತವೆಂದು

ಗುರುತಸಬಹುದಾಗಿದೆ. ವ್ಯಾಪಾರ-ವಾಣಿಜ್ಯಕ್ಕೆ ವಿಶೇಷವಾದ ಪ್ರೋತ್ಸಾಹವನ್ನು ನೀಡಿದ್ದರು. ಇವರು ಮೊಗಲರ ಅಧೀನದಲ್ಲಿದ್ದ ಬೆಂಗಳೂರು ಪ್ರದೇಶವನ್ನು ಮೂರು ಲಕ್ಷ ರೂಪಾಯಿಗಳಿಗೆ ಕೊಂಡು ಬೆಂಗಳೂರು ಒಂದು ವಿಶ್ವಮಟ್ಟದ ವ್ಯಾಪಾರ ಕೇಂದ್ರವಾಗಿ ಗುರುತಿಸಿಕೊಳ್ಳುವಂತೆ ಮಾಡಿದರು. ಬೆಂಗಳೂರು, ಬಿಜಾಪುರ, ಗುಲ್ಬರ್ಗ ರಾಯಚೂರು, ಶ್ರೀರಂಗಪಟ್ಟಣ ಇವರ ಕಾಲದಲ್ಲಿ ಪ್ರಮುಖ ನಗರಕೇಂದ್ರಗಳಾಗಿ ಅಭಿವೃದ್ಧಿಯಾಗಿವೆ. ಚಿಕ್ಕದೇವರಾಜ ಒಡೆಯರು ಮಾಗಲ್ ಮಾದರಿಯ ಕಂದಾಯ ವ್ಯವಸ್ಥೆಯನ್ನು ಮೈಸೂರು ಸಂಸ್ಥಾನದಲ್ಲಿ ಜಾರಿಗೊಳಿಸಿದರು. ಇದರಿಂದ ಕಂದಾಯವನ್ನು ಸಂಸ್ಥಾನದಲ್ಲಿ ವಿಧಿಸಿ ರಾಜ್ಯಕ್ಕೆ ಹೆಚ್ಚಿನ ಆದಾಯ ಬರುವಂತೆ ಮಾಡಿದರು ಹೀಗೆ ವಿಜಯನಗರೋತ್ತರ ಕಾಲದ ಮೈಸೂರು ಸಂಸ್ಥಾನವು ಮುಂದೇ ಒಂದು ಮಾದರಿ ಸಂಸ್ಥಾನವಾಗಿ ಬೆಳವಣಿಗೆ ಹೊಂದಲು ಆರ್ಥಿಕತೆ ಮತ್ತು ವಾಣಿಜ್ಯದಲ್ಲಾದ ಬೆಳವಣಿಗೆಯೇ ಮುಖ್ಯ ಕಾರಣವೆಂದು ಹೇಳಬಹುದು.

ಯುರೋಪಿಯನ್ನರ ಆಗಮಿಸಿದ ಕಾಲವಾಗಿದ್ದರಿಂದ ಭಾರತದಲ್ಲಿ ವಾಣಿಜ್ಯೋದ್ಯಮ ಮತ್ತು ಸಂಘರ್ಷವನ್ನು ಉಂಟುಮಾಡಿದ ಕಾಲವಾಗಿತ್ತು. ಪೋರ್ಚುಗೀಸರು ಭಾರತಕ್ಕೆ ಬಂದಾಗ ಭಾರತದಲ್ಲಿ ಅನ್ಯಧರ್ಮ ಮತ್ತು ಸಂಸ್ಕೃತಿಯನ್ನೊಳಗೊಂಡ ಹೊಸದೊಂದು ಸಮಾಜ ಅಸ್ತಿತ್ವಕ್ಕೆ ಬಂದಿತ್ತು. ಈ ಬದಲಾವಣೆ ಹೊಂದಿಕೊಳ್ಳುವ ಸಂದರ್ಭದಲ್ಲಿ ಹಲವಾರು ಧರ್ಮಗಳನ್ನೊಳಗೊಂಡಂತೆ ಸಂಘರ್ಷಗಳು ಕಂಡುಬಂದವು ಈ ಸಂಘರ್ಷಗಳೆಂದು ಪೋರ್ಚುಗೀಸರು ಕ್ರಿಶ್ಚಿಯನ್ ಧರ್ಮ ಮತ್ತು ಸಂಸ್ಕೃತಿಗಳನ್ನು ಬಲತ್ಕಾರದಿಂದ ಕರಾವಳಿ ಭಾಗದ ಮೇಲಿದ್ದರಿಂದ ಕರವಳಿಯು ಆರಂಭದಿಂದಲೂ ಅನ್ಯಧರ್ಮ ಮತ್ತು ಸಂಸ್ಕೃತಿಯನ್ನೊಳಗೊಂಡ ನಾಡಾಗಿ ಗುರುತಿಸಿಕೊಂಡಿತ್ತು. ಈ ಅನನ್ಯತೆಯ ಭಾವವು ಸಮಾಜದ ಬದಲಾಣೆಗೆ ಮಾತ್ರವಾಗಿರದೆ ಅಂದಿನ ವ್ಯಾಪಾರ-ವಾಣಿಜ್ಯದ ಮೇಲೆಯೂ ಅದರ ಪ್ರಭಾವವನ್ನು ಕಂಡುಬರುತ್ತದೆ. ಭಾರತದಲ್ಲಿ ಆರ್ಥಿಕತೆ ಮತ್ತು ವಾಣಿಜ್ಯದ ಮೇಲೆ ಈ ಕಾಲಘಟ್ಟ ಮಹತ್ವದ ಬದಲಾವಣೆಯನ್ನು ತಂದಿತ್ತು. ಅಂದು ಬೇಡಿಕೆಯಲ್ಲಿದ್ದ ಭಾರತದ ಮಸಾಲೆ ಪದಾರ್ಥಕ್ಕೆ ತಕ್ಕಡಿ ಇಡಿದು ಬಂದವರು ಇಲ್ಲಯೇ ಸಾಮ್ರಾಜ್ಯಶಾಹಿ ಪ್ರಕ್ರಿಯೆಗೆ ಒಳಪಡಿಸಿ ಭಾರತವನ್ನು ಒಂದು ವಸಾಹತು ಕೇಂದ್ರವನ್ನಾಗಿ ರೂಪಿಸಿದರು. ವಿಜಯನಗರೋತ್ತರ ಕಾಲಾವಧಿಯಲ್ಲಿ ಯುರೋಪಿಯನ್ನರ ಕಂಪನಿಗಳು ಸ್ಥಳೀಯ ನಾಯಕರೊಂದಿಗೆ ಸಂಬಂಧವನ್ನು ಹೊಂದುವುದು ಬಹುಮುಖ್ಯವಾದ ಆರ್ಥಿಕ ರಾಜಕಾರಣದ ಉದ್ದೇಶದಿಂದ ಕೂಡಿಕೊಂಡಿದ್ದವು. ಈ ಉದ್ದೇಶಗಳನ್ನು ಇಡೇರಿಸಲು ಯುರೋಪಿಯನ್ನ ಕಂಪನಿಗಳು ರಾಜಕೀಯ ಅತಂತ್ರಸ್ಥಿತಿಯನ್ನು ಬಳಸಿಕೊಂಡು ಮಿತ್ರುವಿನ ಶತೃ ಮಿತ್ರರಾಗಿಸಿಕೊಂಡು ಅಂದಿನ ರಾಜಕೀಯ ಪರಿಸ್ಥಿತಿಯನ್ನು ಬಳಸಿಕೊಂಡರು. ಭಾರತದ ನೆಲದಲ್ಲಿ ತಮ್ಮ ಸ್ಥಾನವನ್ನು ಕಂಡುಕೊಂಡರು. ಈ ನೆಲೆಯ ಮೂಲಕ ಭಾರತದಲ್ಲಿ ಬಂಡವಾಳಶಾಹಿ ನೇತೃತ್ವದ ಮೂಲಕ ವಸಾಹತುಶಾಹಿ ಪ್ರಕ್ರಿಯೇ ಭಾರತವನ್ನು ಒಳಪಡಿಸಿಕೊಂಡರು. ಇದರಿಂದ ಭಾರತದಲ್ಲಿ ಯುರೋಪಿಯನ್ನರಾದ ಪೋರ್ಚುಗೀಸರು, ಡಚ್ಚರು, ಫ್ರೆಂಚರು ಮತ್ತು ಇಂಗ್ಲಿಶರು ತಮ್ಮ ಸ್ಥಾನವನ್ನು ಕಂಡುಕೊಂಡರು ಆದರೆ ಬ್ರಿಟಿಶರು ಭಾರತವನ್ನು ಒಂದು ವಸಾಹತು ಕೇಂದ್ರವನ್ನಾಗಿ ರೂಪಿಸಿದರು. ಈ ವಸಾಹತು ಪ್ರಕ್ರಿಯೆಗೆ ಭಾರತ ಒಳಪಟ್ಟಿದ್ದರಿಂದ ಭಾರತದ

ಆರ್ಥಿಕತೆಯೂ ವಸಾಹತು ಆರ್ಥಿಕತೆಯೊಂದಿಗೆ ಮುಖಮಾಡುವಂತಾಯಿತು. ಇದರಿಂದ ಭಾರತವು ಹಲವಾರು ಬದಲಾವಣೆಗಳ ಮೂಲಕ ತನ್ನ ಸ್ಥಾನವನ್ನು ಹೊಂದಲಾರಂಭಿಸಿತು. ವಿಜಯನಗರೋತ್ತರ ಕಾಲದ ಆರ್ಥಿಕತೆಯು ೧೭೬೩ರ ವರೆಗಿನ ವ್ಯಾಪಾರ-ವಾಣಿಜ್ಯದ ಸ್ವರೂಪದಲ್ಲಿ ಒಂದು ಬಗೆಯ ಬದಲಾವಣೆಯನ್ನು ಗುರುತಿಸಿಕೊಂಡರೇ ನಂತರದಲ್ಲಿ ಮೈಸೂರು ಸಂಸ್ಥಾನದ ಹೈದರ್ ಮತ್ತು ಟಿಪ್ಪು ನೇತೃತ್ವದಲ್ಲಿ ವಿದೇಶಿಯ ವ್ಯಾಪಾರವು ಇನ್ನೊಂದು ಬಗೆಯಲ್ಲಿ ಗುರುತಿಸಿಕೊಳ್ಳುತ್ತದೆ. ಯುರೋಪಿಯನ್ನರನ್ನು ಯುರೋಪಿಯನ್ನರ ಸಹಾಯ ಪಡೆದು ಸೋಲಿಸಬೇಕೆಂಬುದು ಹೈದರ್ ಮತ್ತು ಟಿಪ್ಪುವಿನ ಬಯಕೆಯಾಗಿದ್ದು ವ್ಯಾಪಾರದಲ್ಲಿ ಮತ್ತು ರಾಜಕೀಯದಲ್ಲಿ ಪ್ರಬಲ ಪ್ರತಿಸ್ಪರ್ಧೆಯನ್ನು ಒಡ್ಡುತ್ತಿದ್ದ ಬ್ರಿಟಿಶರನ್ನು ಭಾರತದಿಂದ ಓಡಿಸಬೇಕೆಂದು ಬ್ರಿಟಿಶರ ವ್ಯಾಪಾರದ ಸ್ಪರ್ಧಿಗಳಾಗಿದ್ದ ಫ್ರೆಂಚರನ್ನು ಸಹಾಯಕ್ಕೆ ಕರೆತಂದನು. ಯುರೋಪಿಯನ್ ಯುದ್ಧ ತಂತ್ರಗಳನ್ನು ಚನ್ನಾಗಿ ಬಲ್ಲ ಫ್ರೆಂಚರನ್ನು ಬಳಸಿಕೊಂಡು ಬ್ರಿಟಿಶರನ್ನು ಕರಾವಳಿ ಭಾಗದಿಂದ ಹೊರಹಾಕಬೇಕೆಂಬ ಪ್ರಯತ್ನವನ್ನು ಪಟ್ಟನು ಆದರೆ ಈ ಪ್ರಯತ್ನ ಹೈದರ್ ಮತ್ತು ಟಿಪ್ಪು ಸುಲ್ತಾನ್‌ನಿಗೆ ಕೈ ಹಿಡಿಯಲ್ಲಿಲ್ಲ. ಟಿಪ್ಪು ಸುಲ್ತಾನ್ ಮೈಸೂರು ಸಂಸ್ಥಾನದ ವ್ಯಾಪಾರ-ವಾಣಿಜ್ಯ ಅಭಿವೃದ್ಧಿಗೊಳಿಸುವಂತೆ ಮಾಡಿದನು. ಸರ್ಕಾರದ ನೇತೃತ್ವದಲ್ಲಿಯೇ ವಾಣಿಜ್ಯ ಇಲಾಖೆಯನ್ನು ಸ್ಥಾಪಿಸುವ ಮೂಲಕ ವ್ಯಾಪಾರಿಗಳಿಗೆ ಆಗುವ ತೊಂದರೆಗಳನ್ನು ನಿವಾರಿಸುವಂತೆ ಮಾಡಿದನು. ಹಾಗಾಗಿ ಈ ಕಾಲಘಟ್ಟದಲ್ಲಿ ಅಂತರ್‌ರಾಜ್ಯ ವರ್ತಕ ಸಮುದಾಯಗಳ ವಲಸೆಯ ಪ್ರಮಾಣ ಹೆಚ್ಚಾಗಿರುವುದನ್ನು ಕಂಡು ಬರುತ್ತದೆ. ಹೈದರ್ ಮತ್ತು ಟಿಪ್ಪು ಆಳ್ವಿಕೆಯ ಕಾಲದಲ್ಲಿ ಮೈಸೂರು ಸಂಸ್ಥಾನದಲ್ಲಿ ಬೃಹತ್ ಕೈಗಾರಿಕೆಗಳು ಅಸ್ತಿತ್ವಕ್ಕೆ ಬಂದವು ಒಟ್ಟಾರೆಯಾಗಿ ವಿಜಯನಗರೋತ್ತರ ಕಾಲಾವಧಿಯು ವ್ಯಾಪಾರ-ವಾಣಿಜ್ಯದಲ್ಲಿ ಭಾರತವು ಒಂದು. ಅಂತರ್ ರಾಷ್ಟ್ರೀಯ ಮಾರುಕಟ್ಟೆಯ ಪ್ರದೇಶವಾಗಿ ಗುರುತಿಸಿಕೊಂಡಿತ್ತು. ೧೭ ಮತ್ತು ೧೮ನೇ ಶತಮಾನವು ಸಮಾಜ, ಸಂಸ್ಕೃತಿ, ಧರ್ಮ, ಆರ್ಥಿಕತೆ ರಾಜಕೀಯ ಹೀಗೆ ಎಲ್ಲ ಕ್ಷೇತ್ರಗಳ ಮೇಲೆ ಪರಿಣಾಮವನ್ನು ಮೀರಿದ ಹಂತವೆಂದು ಗುರುತಿಸಬಹುದಾಗಿದೆ. ಹೀಗೆ ವಿಜಯನಗರೋತ್ತರ ಕಾಲದ ವ್ಯಾಪಾರ-ವಾಣಿಜ್ಯದಲ್ಲಿ ಮುಖ್ಯ ಬದಲಾವಣೆಯ ಹಂತವಾಗಿದೆ.

**ಅಧ್ಯಯನದ ಫಲಿತಗಳು**

ವಿಜಯನಗರೋತ್ತರ ಕಾಲದ ಆರ್ಥಿಕತೆ ಮತ್ತು ವಾಣಿಜ್ಯ ಎಂಬ ವಿಷಯವು ಕ್ರಿ.ಶ.೧೫೬೫ರಿಂದ ೧೮೦೦ರವರೆಗಿನ ನಡೆದ ಚಾರಿತ್ರಿಕ ಅಧ್ಯಯನವಾಗಿದೆ. ವಿಜಯನಗರದ ಸಾಮಂತ ಪ್ರಭುತ್ವಗಳು ತಮ್ಮ ರಾಜಕೀಯ ಸ್ಥಿರತೆಯನ್ನು ಕಂಡುಕೊಂಡ ಆ ರಾಜಕೀಯ ಸನ್ನಿವೇಶವು ಪ್ರಭುತ್ವದ ಭದ್ರತೆಗೆ ರೂಪಿಸಿದ ಆರ್ಥಿಕತೆಯು ಮುಖ್ಯವಾಗುತ್ತದೆ. ಈ ಕೆಳಕಂಡ ಅಂಶಗಳನ್ನು ಗುರುತಿಸಬಹುದು.

❖ ವಿಜಯನಗರೋತ್ತರ ಕಾಲದಲ್ಲಿ ನೆಲೆ ಕಂಡುಕೊಂಡ ಸಾಮಂತ ಪ್ರಭುತ್ವಗಳ ರಾಜಕೀಯ, ನಾಯಕ ಮನೆತನಗಳು ಏಳಿಗೆ ಆಗಲು ಆ ಕಾಲದ ವ್ಯಾಪಾರ ವಾಣಿಜ್ಯಕ್ಕೆ ಪೂರಕವಾದ ಪರಿಸರವನ್ನು ನಿರ್ಮಾಣ ಮಾಡಿತ್ತು. ವಿಜಯನಗರ ಸಾಮ್ರಾಜ್ಯದ ಸಾಮಂತ ಪ್ರಭುತ್ವಗಳ

ರಾಜಕೀಯ ಅಧಿಕಾರದಲ್ಲಿ ಪ್ರಸ್ತುತ ಕರ್ನಾಟಕದ ಸಾಮಂತರು ಸಾರ್ವಭೌಮರಾದರು. ಆದರೆ ತಮಿಳುನಾಡಿನ ನಾಯಕ ಮನೆತನಗಳಾದ ಜಂಜಿ, ಮಧುರೈ, ತಂಜಾವೂರು ನಾಯಕರ ನೇತೃತ್ವದಲ್ಲಿ ಮಲಬಾರ್ ಕರಾವಳಿಯ ವ್ಯಾಪಾರವನ್ನು ವಿಜಯನಗರದ ಅರಸರು ಕ್ರಿ.ಶ. ೧೫೫೦ರವರೆಗೂ ತಮ್ಮ ನಿಯಂತ್ರಣದಲ್ಲಿ ಮುಂದುವರೆಸಿದ ಹಂತವನ್ನು ಗುರುತಿಸಲಾಗಿದೆ.

- ❖ ವಿಜಯನಗರದ ಭೂಹಿಡುವಳಿದಾರರಾಗಿ ಗುರುತಿಸಿಕೊಂಡ ಪಾಳೆಯಗಾರರು ೧೮೦೦ರ ನಂತರ ಪಿಂಚಣಿದಾರರಾದರು.. ಆದರೆ ಉತ್ತರ ಕರ್ನಾಟಕದ ರಾಜಕೀಯ ಸ್ವರೂಪದಲ್ಲಿ ಆದಿಲ್‌ಷಾಹಿಗಳ ಕಾಲದಲ್ಲಿ ದೇಸಾಯಿ ಮತ್ತು ದೇಸಿಗತ್ತಿಗಳು ಕಂದಾಯ ಅಧಿಕಾರಿಗಳಾಗಿ ಭೂಮಾಲೀಕತ್ವದ ಅಧಿಕಾರ ಪಡೆದು ವಸಾಹತು ಕರ್ನಾಟಕದಲ್ಲಿ ಹೇಗೆ ಗುರುತಿಸಿಕೊಂಡಿದ್ದಾರೆ ಎಂಬ ವಿಚಾರವನ್ನು ತಿಳಿದುಕೊಳ್ಳಲಾಗಿದೆ.
- ❖ ವಿಜಯನಗರೋತ್ತರ ಕಾಲವು ವಾಣಿಜ್ಯೋಧ್ಯಮದ ಕಾಲವಾಗಿದ್ದು, ಕೃಷಿ ಪ್ರಧಾನ ವೃತ್ತಿಯೊಂದಿಗೆ ನಿರಂತರವಾಗಿ ಮುಂದುವರೆದ ಹಂತವೆಂದು ಗುರುತಿಸಲಾಗಿದೆ. ಯುರೋಪಿಯನ್ನರು ಪರಿಚಯಿಸಿದ ಆರ್ಥಿಕ ಬೆಳೆಗಳ ಮೂಲಕ ಸ್ಥಳೀಯ ಸಾಂಪ್ರದಾಯಿಕ ಬೆಳೆಗಳು ಬದಲಾದ ಕೃಷಿ ವ್ಯವಸ್ಥೆಯನ್ನು ರೂಪಿಸಿದ ಅಂಶವನ್ನು ತಿಳಿಯಲಾಗಿದೆ.
- ❖ ದಕ್ಷಿಣ ಭಾರತದಲ್ಲಿ ರಚನೆಯಾಗಿದ್ದ ಮಾರುಕಟ್ಟೆಯಲ್ಲಿ ಪ್ರಮುಖವಾಗಿ ಸಾಂಪ್ರದಾಯಿಕ ವಿನಿಮಯ ಪದ್ಧತಿ ಪ್ರಾಚೀನ ಕಾಲದಲ್ಲಿ ಇತ್ತು. ನಂತರ ಕೃಷಿಯ ವಾಣಿಜ್ಯೀಕರಣದಿಂದಾಗಿ ರೂಪಿತವಾದ ಹೊಸ ಮಾರುಕಟ್ಟೆ ವ್ಯವಸ್ಥೆ ಹಾಗೂ ವಾಣಿಜ್ಯ ಬೆಳೆಗಳ ಮಾದರಿಯನ್ನು ತೌಲನಿಕವಾಗಿ ನೋಡಲಾಗಿದೆ.
- ❖ ಕ್ರಿ.ಶ. ೧೬-೧೮ನೇ ಶತಮಾನದಲ್ಲಿ ದಕ್ಷಿಣ ಭಾರತದಲ್ಲಿ ಕಂಡುಬರುವ ಗ್ರಾಮೀಣ ಸಂಸ್ಕೃತಿ ಮತ್ತು ನಗರ ಹಾಗೂ ಪಾಶ್ಚಿಮಾತ್ಯ ಸಂಸ್ಕೃತಿಗಳಲ್ಲಿ ಪಾಶ್ಚಿಮಾತ್ಯ ಸಂಸ್ಕೃತಿಗಳ ಪ್ರಭಾವದಿಂದಾಗಿ ರಚನೆಗೊಂಡ ಹೊಸ ಬದಲಾವಣೆಯ ಸಾಮಾಜಿಕ ಮತ್ತು ಆರ್ಥಿಕ ಕಂಡುಕೊಳ್ಳಲಾಗಿದೆ.
- ❖ ಪ್ರಾಚೀನ ಕಾಲದಿಂದಲೂ ವ್ಯಾಪಾರ ವಾಣಿಜ್ಯದಲ್ಲಿ ಗುರುತಿಸಿಕೊಂಡ ವರ್ತಕ ಸಮುದಾಯಗಳು ವಿಜಯನಗರೋತ್ತರ ಕಾಲದಲ್ಲಿ ಸಂಘರ್ಷದ ಬದುಕನ್ನು ಕಂಡುಕೊಂಡವು ವಲಸೆ ಬಂದ ಹೊಸ ವರ್ತಕ ಸಮುದಾಯಗಳೊಂದಿಗೆ ಹೊಸ ವ್ಯಾಪಾರದ ಸ್ವರೂಪ ಹುಟ್ಟಿಕೊಂಡಿತ್ತು. ಎಂಬುದನ್ನು ಕಂಡುಕೊಳ್ಳಲಾಗಿದೆ.
- ❖ ವಿಜಯನಗರೋತ್ತರ ಕಾಲದಲ್ಲಿ ಗಿರಣಿ ಕೈಗಾರಿಕೆಗಳ ಮೂಲಕ ಜಾಗತೀಕ ಮಾರುಕಟ್ಟೆಗೆ ಭಾರತವು ಪರಿಚಯಿಸಲ್ಪಟ್ಟ ಸನ್ನಿವೇಶವನ್ನು ಗೃಹ ಕೈಗಾರಿಕಾ ಚಟುವಟಿಕೆಗಳು ಗ್ರಾಮೀಣ ಮತ್ತು ನಗರ ಆರ್ಥಿಕತೆಗೆ ಪೂರಕವಾಗಿದ್ದವು. ಎಂಬುದು ಅಧ್ಯಯನದಿಂದ ಕಂಡುಬರುವ ಪ್ರಮುಖ ಅಂಶವಾಗಿವೆ.

- ಕರ್ನಾಟಕದ ಕರಾವಳಿಗೆ ಈ ಕಾಲಘಟ್ಟವು ಅನ್ಯ ಸಂಸ್ಕೃತಿಯ ಅನನ್ಯತೆಯನ್ನು ಒಳಗೊಂಡ ಕಾಲವಾಗಿದೆ. ವ್ಯಾಪಾರ-ವಾಣಿಜ್ಯದಿಂದ ಕರ್ನಾಟಕದ ಕರಾವಳಿಗೆ ಹಲವಾರು ಧರ್ಮ ಸಂಸ್ಕೃತಿಗಳನ್ನೊಳಗೊಂಡ ವ್ಯಾಪಾರಿ ಸಮುದಾಯಗಳು ಆಗಮಿಸಿದ್ದರಿಂದ ಪರಸ್ಪರ ಅನನ್ಯತೆಯ ಸಂಬಂಧ ಬೆಳೆಯಿತು.
- ವಿದೇಶಿಯ ವ್ಯಾಪಾರವನ್ನು ಒಳಗೊಂಡಂತೆ ಸ್ಥಳೀಯ ಮಟ್ಟದಿಂದ ಮಹಿಳೆಯರು ಗೃಹ ಕೈಗಾರಿಕೆಗಳ ಮೂಲಕ ಆರ್ಥಿಕತೆಯ ಒಂದು ಭಾಗವಾಗಿ ದುಡಿಯುತ್ತಿದ್ದರು. ಇವರ ಸಂಪತ್ತು ಕುಟುಂಬದ ಆದಾಯವಾಗಿತ್ತು. ಕರ್ನಾಟಕದ ಕರಾವಳಿಯಲ್ಲಿಯೂ ವಿದೇಶಿಯ ವಿದೇಶಿ ವ್ಯಾಪಾರಿ ಸಂಘದಲ್ಲಿ ಮಹಿಳಾ ಪ್ರತಿನಿಧಿಕರಣವನ್ನು ಕುರಿತು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.
- ವಿಜಯನಗರ ಮತ್ತು ವಿಜಯನಗರೋತ್ತರ ಕಾಲವು ಧಾರ್ಮಿಕ ಸಂಘರ್ಷದ ಕಾಲವಾಗಿದ್ದು, ಇದರೊಂದಿಗೆ ಗುರುತಿಸಿಕೊಂಡಿರುವ ಮಠವು ದಾಸೋಹ ಪರಂಪರೆಯಿಂದ ನಿರ್ಮಾಣಗೊಂಡಿದ್ದವು. ಆದರೆ ೧೬ನೇ ಶತಮಾನದ ನಂತರ ಅವು ಗ್ರಾಮ ಮತ್ತು ನಗರಗಳ ಸೇರಿಸುವ ಧಾರ್ಮಿಕ ಕೊಂಡಿಯಂತಿದವು. ಮಠಗಳು ಭೂ ಮಾಲೀಕರ ಸ್ಥಾನವನ್ನು ಪ್ರತಿನಿಧಿಸುತ್ತಾ ಅವುಗಳ ವ್ಯಾಪಾರ, ವಾಣಿಜ್ಯ, ಶಿಕ್ಷಣ ಮುಂತಾದ ಧಾರ್ಮಿಕ ಕಾರ್ಯಗಳನ್ನು ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.
- ಪ್ರಾಚೀನ ಕಾಲದಿಂದಲೂ ಅನೇಕ ರಸ್ತೆ ಸಂಪರ್ಕ ಮಾರ್ಗಗಳು ರಚನೆಯಾಗಿದ್ದು ವಿಜಯನಗರೋತ್ತರ ಕಾಲದ ಅನೇಕ ಪಾಳೆಯಗಾರರು ಆಡಳಿತ ಕೇಂದ್ರಗಳನ್ನು ಸ್ಥಳೀಯವಾಗಿ ನಿರ್ಮಾಣ ಮಾಡಿದ್ದರಿಂದ ಬೃಹತ್ ಪ್ರಮಾಣದ ಸಾರಿಗೆ ಸಂಪರ್ಕ ಮಾರ್ಗಗಳು ರಚನೆಯಾಗಿವು.
- ವಿಜಯನಗರೋತ್ತರ ಕಾಲದ ಕೃಷಿ ಪದ್ದತಿಯು ಅಲ್ಲಿನ ಭೌಗೋಳಿಕತೆಯ ಹಿನ್ನೆಲೆಯಲ್ಲಿ ವೈವಿಧ್ಯತೆಯನ್ನು ಹೊಂದಿತ್ತು. ಕರಾವಳಿ ಪ್ರದೇಶ ಭತ್ತ, ಸಾಂಬಾರು ಪದಾರ್ಥಗಳ ಬೆಳೆಗೆ ಗುರುತಿಸಿಕೊಂಡಿದ್ದರೆ, ಬಯಲು ಸೀಮೆ ರಾಗಿ, ಜೋಳ, ಆಹಾರ ಬೆಳೆಯಲ್ಲಿ ಗುರುತಿಸಿಕೊಂಡಿದೆ. ಅಂದರೆ ಆರ್ಥಿಕತೆಗೆ ಪೂರಕವಾಗಿ ಗುರುತಿಸಿಕೊಂಡ ಬೆಳೆಗಳಲ್ಲಿ ಭೌಗೋಳಿಕತೆಯ ಭಿನ್ನತೆಯನ್ನು ಗುರುತಿಸಬಹುದು.
- ಭಾರತಕ್ಕೆ ಬಂದ ಯುರೋಪಿಯನ್ನರು ಕರ್ನಾಟಕದಲ್ಲಿ ತಮ್ಮ ಆಳ್ವಿಕೆಯನ್ನು ಆರಂಭಿಸಿದ್ದು, ಈಗಾಗಲೇ ಪ್ರಾಚೀನ ಕಾಲದಿಂದಲೂ ಗುರುತಿಸಿಕೊಂಡ ವ್ಯಾಪಾರಿ ಕೇಂದ್ರಗಳನ್ನಾಗಿ ಮಾಡಿಕೊಂಡಿದ್ದು. ತಮ್ಮ ಆಡಳಿತ ಕೇಂದ್ರಗಳನ್ನು ಸ್ಥಾಪಿಸಿದ್ದು, ಬಳ್ಳಾರಿ, ಹುಬ್ಬಳ್ಳಿ, ಧಾರವಾಡ, ಬೆಂಗಳೂರು ಇವು ಆ ವೇಳೆಗೆ ದೊಡ್ಡ ವ್ಯಾಪಾರಿ ಕೇಂದ್ರಗಳನ್ನು ಹೊಂದಿದ್ದರಿಂದ ಅವರ ಆಳ್ವಿಕೆಯಲ್ಲೂ ಇವು ಆಡಳಿತ ಕೇಂದ್ರಗಳಾಗಿ ಮುಂದುವರೆದವು.
- ಪ್ರಬಲರಾಗಿ ಗುರುತಿಸಿಕೊಂಡಿದ್ದ ವರ್ತಕ ಸಮುದಾಯವಾದ ಪಂಚಮ ಬಣಜಿಗರು ವಿಜಯನಗರೋತ್ತರ ಕಾಲದಲ್ಲಿ ವೃತ್ತಿ ಪಲ್ಲಟಗೊಂಡು ಗ್ರಾಮ ಪಟ್ಟಣದಿಂದ ನಗರಕೇಂದ್ರಕ್ಕೆ ವಲಸೆಹೋಗಿ ವೃದ್ಧಿಸಿಕೊಂಡು ಅಭಿವೃದ್ಧಿಯಾಗಿರುವುದು ಕಂಡು ಬರುತ್ತದೆ.

